## ವಿಷಯ ಸೂಚಿ

## ಫ್ರ್ಯಾಂಕ್ಲಿನ್ನನ ಜೀವನದ ಮುಖ್ಯ ಸಂಗತಿಗಳು

ಆತ್ಮಚರಿತೆಯು ೧೭೫೭ ನೆಯ ಇಸವಿಯ ವರೆಗೆ ಮಾತ್ರ ಬರೆಯಲ್ಪಟ್ಟು ಅಪೂರ್ಣವಾಗಿ ನಿಂತಿದೆ. ಹಲವು ಮುಖ್ಯಾಂಶಗಳು ಅದರಲ್ಲಿ ಲಿಖಿತವಾಗದೆ ಬಿಟ್ಟಿರುವುದರಿಂದ ಬೆಂಜಮಿನ್‌ನ ಜೀವನದ ಮುಖ್ಯ ಸಂಗತಿಗಳನ್ನು ಇಲ್ಲಿ ನಮೂದಿಸಿದೆ.

೧೭೦೬ ಬಾಸ್ಟನಿನಲ್ಲಿ ಹುಟ್ಟಿದನು.

೧೭೧೪ ಎಂಟನೆಯ ವಯಸ್ಸಿನಲ್ಲಿ ವ್ಯಾಕರಣ ಶಾಲೆಯನ್ನು (Grammar School) ಸೇರಿದನು.

೧೭೧೬ ಕೊಬ್ಬು ಮೋಂಬತ್ತಿ ಉದ್ಯೋಗದಲ್ಲಿ ತಂದೆಯ ಸಹಾಯಕನಾಗಿ ನಿಲ್ಲುತ್ತಾನೆ.

೧೭೧೮ ಅಣ್ಣ ಜೇಮ್ಸನ ಛಾಪಖಾನೆಯಲ್ಲಿ ಕಲಿಯಲು ಸೇರುತ್ತಾನೆ.

೧೭೨೧ ಪದಗಳನ್ನು ರಚಿಸಿ, ಅಚ್ಚಾದ ಪ್ರತಿಗಳನ್ನು ರಸ್ತೆಗಳಲ್ಲಿ ಮಾರುತ್ತಾನೆ. 'ನ್ಯೂ ಇಂಗ್ಲೆಂಡ್ ಕುರಾಂಟ್' ಪತ್ರಿಕೆಗೆ ಗೋಪ್ಯವಾಗಿ ಬರೆಯುತ್ತಾನೆ; ಪತ್ರಿಕೆಗೆ ಹಂಗಾಮಿ ಸಂಪಾದಕನಾಗುತ್ತಾನೆ. ಸ್ವತಂತ್ರ ವಿಚಾರಿಯೂ ಶಾಕಾಹಾರಿಯೂ ಆಗುತ್ತಾನೆ.

೧೭೨೩ ಫಿಲಡೆಲ್ಫಿಯಾಕ್ಕೆ ಹೋಗಿ ಕೈಮರನ ಪ್ರಿಂಟಿಂಗ್ ಪ್ರೆಸ್ಸಿನಲ್ಲಿ ಕೆಲಸಕ್ಕೆ ಸೇರುತ್ತಾನೆ. ಶಾಕಾಹಾರ ಪದ್ಧತಿಯನ್ನು ಬಿಡುತ್ತಾನೆ.

೧೭೨೪ ಗವರ್ನರ್ ಕೈತ್‌ನ ಪ್ರೇರಣೆಯಿಂದ ಸ್ವತಂತ್ರನಾಗಲು ಇಚ್ಛಿಸಿ ಮೊಳೆಗಳನ್ನು (types) ಕೊಳ್ಳಲು ಇಂಗ್ಲೆಂಡಿಗೆ ಹೋಗುತ್ತಾನೆ. ಅಲ್ಲಿ ಮುದ್ರಣದ ಕೆಲಸಕ್ಕೆ ಸೇರುತ್ತಾನೆ. "ಸ್ವಾತಂತ್ರ್ಯ, ಆವಶ್ಯಕತೆ, ಸುಖದುಃಖ—ಈ ವಿಷಯವಾದ ಪ್ರಬಂಧ"ವನ್ನು ಪ್ರಕಟಿಸುತ್ತಾನೆ.

೧೭೨೬ ಫಿಲಡೆಲ್ಫಿಯಾಕ್ಕೆ ಹಿಂದಿರುಗಿ, ಒಂದು ಸ್ಟೋರಿನಲ್ಲಿ ಗುಮಾಸ್ತನಾಗಿ ಕೆಲಸಮಾಡಿ, ಕೈಮರನ ಮುದ್ರಣ ಕಚೇರಿಯ ಮ್ಯಾನೇಜರನಾಗುತ್ತಾನೆ.

೧೭೨೭ "ಜಂಟೊ" ಸಂಘವನ್ನು ಸ್ಥಾಪಿಸುತ್ತಾನೆ.

೧೭೨೮ ಹ್ಯೂಮೆರ್ಡಿತ್‌ನನ್ನು ಸೇರಿಸಿಕೊಂಡು ಮುದ್ರಣ ಕಚೇರಿಯನ್ನು ತೆರೆಯುತ್ತಾನೆ.

೧೭೨೯ ಪೆನ್ಸಿಲ್‌ವೇನಿಯ ಗೆಜೆಟ್ಟಿನ ಸಂಪಾದಕನೂ ಮಾಲಿಕನೂ ಆಗುತ್ತಾನೆ. “ಕಾಗದದ ಹಣದ ರೀತಿ ಮತ್ತು ಆವಶ್ಯಕತೆ”ಯನ್ನು ಕುರಿತು ಪ್ರಬಂಧವನ್ನು ಬರೆದು, ಹೆಸರಿಲ್ಲದೆ ಅಚ್ಚುಮಾಡುತ್ತಾನೆ. ಲೇಖನ ಸಾಮಗ್ರಿಯ ಅಂಗಡಿ ತೆರೆಯುತ್ತಾನೆ.

೧೭೩೦ ಡೆ ಬೋರಾ ರೀಡ ಳನ್ನು ಮದುವೆಯಾಗುತ್ತಾನೆ.

೧೭೩೧ ಫಿಲಡೆಲ್ಫಿಯಾ ಪುಸ್ತಕ ಭಂಡಾರವನ್ನು ಸ್ಥಾಪಿಸುತ್ತಾನೆ.

೧೭೩೨ ರಿಚರ್ಡ್ ಸಾಂಡರ್ಸ್ ಎಂಬ ಕಾವ್ಯನಾಮದಿಂದ “ಬಡ ರಿಚರ್ಡನ ಪಂಚಾಂಗ” (Poor Richard's Almanack) ದ ಮೊದಲನೆಯ ಸಂಚಿಕೆಯನ್ನು ಪ್ರಕಟಿಸುತ್ತಾನೆ—ಈ ಪತ್ರಿಕೆ ೨೫ ವರ್ಷಗಳ ಕಾಲ ನಡೆಯಿತು. ಅದರಲ್ಲಿ ಅವನ ಲೋಕಾನುಭವ ಸೂಕ್ತಿಗಳೂ ಚಮತ್ಕಾರೋಕ್ತಿಗಳೂ ಪ್ರಕಟವಾದವು. ಬೇರೆ ಬೇರೆ ಸಂಸ್ಕೃತಿಗಳ ವಿಚಿತ್ರವಾದ ಎಳೆಗಳಿಂದಕೂಡಿದ ಆ ಕಾಲದ ಅಮೆರಿಕನ್ ಶೀಲವನ್ನು ಸಂಘಟಿಸುವುದರಲ್ಲಿಯೂ ರೂಪಿಸುವುದರಲ್ಲಿಯೂ ಪತ್ರಿಕೆ ಪ್ರಮುಖ ಪಾತ್ರವನ್ನು ವಹಿಸಿತು.

೧೭೩೩ ಫ್ರೆಂಚ್, ಇಟಾಲಿಯನ್, ಸ್ಪ್ಯಾನಿಷ್ ಮತ್ತು ಲ್ಯಾಟಿನ್ ಭಾಷೆಗಳನ್ನು ಕಲಿಯಲು ತೊಡಗಿದನು.

೧೭೩೬ ಜನರಲ್ ಅಸೆಂಬ್ಲಿಯ ಕಾರಕೂನನಾಗಿ ಆರಿಸಲ್ಪಟ್ಟನು. ಫಿಲಡೆಲ್ಫಿಯಾದ ಯೂನಿಯನ್ ಫಯರ್ ಕಂಪೆನಿಯನ್ನು ಸ್ಥಾಪಿಸಿದನು.

೧೭೩೭ ಅಸೆಂಬ್ಲಿಗೆ ಚುನಾಯಿತನಾದನು. ಡೆಪ್ಯುಟಿ ಪೋಸ್ಟ್ ಮಾಸ್ಟರ್ ಜನರಲ್ ಆಗಿ ನೇಮಿತನಾದನು. ನಗರ ಪೋಲೀಸ್ ಸಿಬ್ಬಂದಿಯ ಯೋಜನೆಯನ್ನು ರಚಿಸಿದನು.

೧೭೪೨ ತೆರೆದ ಸ್ಟೋವ್‌ನ್ನು ಅಥವಾ “ಫ್ರ್ಯಾಂಕ್ಲಿನ್ ಸ್ಟೋವ್”ನ್ನು ಕಂಡು ಹಿಡಿದನು.

೧೭೪೩ ಅಕಾಡೆಮಿಯ ಅಥವಾ ವಿದ್ವಾಂಸರ ಸಭೆಯ ಯೋಜನೆಯನು ಸೂಚಿಸುತ್ತಾನೆ. ೧೭೪೯ ರಲ್ಲಿ ಅದು ಅಂಗೀಕೃತವಾಗಿ, ಮುಂದೆ ಪೆನ್ಸಿಲ್ವೇನಿಯ ವಿಶ್ವವಿದ್ಯಾಲಯವಾಗಿ ರೂಪಗೊಳ್ಳುತ್ತದೆ.

೧೭೪೪ ಅಮೆರಿಕದ ತತ್ತ್ವಶಾಸ್ತ್ರ ಸಂಘವನ್ನು ಸ್ಥಾಪಿಸುತ್ತಾನೆ.

೧೭೪೬ ಶಿಸ್ತಿನಿಂದ ಕೂಡಿದ ರಕ್ಷಣೆಯ ಅಗತ್ಯವನ್ನು ಕುರಿತು "ಮುಚ್ಚುಮರೆಯಿಲ್ಲದ ಸತ್ಯ" ಎಂಬ ಕಿರುಹೊತ್ತಗೆಯನ್ನು ಪ್ರಕಟಿಸಿ, ಮಿಲಿಟರಿ ಕಂಪೆನಿಯೊಂದನ್ನು ರಚಿಸುತ್ತಾನೆ. ವಿದ್ಯುತ್ಪ್ರಯೋಗಗಳನ್ನು ನಡಸುತ್ತಾನೆ.

೧೭೪೮ ಮುದ್ರಣ ವ್ಯವಹಾರವನ್ನು ಮಾರುತ್ತಾನೆ; ಶಾಂತಿನಿಯೋಗದ ಸದಸ್ಯನಾಗಿಯೂ, ಕಾಮನ್ ಕೌನ್ಸಿಲಿನ ಸದಸ್ಯನಾಗಿಯೂ ಅಸೆಂಬ್ಲಿಯ ಸದಸ್ಯನಾಗಿಯೂ ಚುನಾಯಿತನಾಗುತ್ತಾನೆ.

೧೭೪೯ ಇಂಡಿಯನರೊಡನೆ ವ್ಯಾಪಾರದ ಕಮಿಷನರಾಗಿ ನೇಮಿತನಾಗುತ್ತಾನೆ.

೧೭೫೧ ಆಸ್ಪತ್ರೆಯ ಸ್ಥಾಪನೆಯೊಂದರಲ್ಲಿ ನೆರವಾಗುತ್ತಾನೆ.

೧೭೫೨ ಗಾಳಿ ಪಟದ ಪ್ರಯೋಗದಿಂದ, ಮಿಂಚುವುದು ವಿದ್ಯುತ್ ವಿಸರ್ಜನೆಯೆಂದು ಕಂಡುಹಿಡಿಯುತ್ತಾನೆ.

೧೭೫೩ ಇದನ್ನು ಕಂಡುಹಿಡಿದದ್ದಕ್ಕಾಗಿ ಕೋಪ್ಲೆ ಪದಕ ದೊರೆಯುತ್ತದೆ; ಮತ್ತು ರಾಯಲ್ ಸೊಸೈಟಿಯ ಸದಸ್ಯನಾಗಿ ಆರಿಸಲ್ಪಡುತ್ತಾನೆ. ಯೇಲ್ ಮತ್ತು ಹಾರ್ವರ್ಡ್ ವಿಶ್ವವಿದ್ಯಾಲಯಗಳಿಂದ ಎಂ.ಎ. ಡಿಗ್ರಿಯನ್ನು ಹೊಂದುತ್ತಾನೆ. ಜಂಟಿ ಪೋಸ್ಟ್ ಮಾಸ್ಟರ್ ಜನರಲ್ ಆಗಿ ನೇಮಿತನಾಗುತ್ತಾನೆ.

೧೭೫೪ ಆಲ್ಬನಿಯ ವಸಾಹತು-ಕಾಂಗ್ರೆಸ್ಸಿಗೆ ಪೆನ್ಸಿಲ್ವೇನಿಯಾದಿಂದ ಒಬ್ಬ ಕಮಿಷನರಾಗಿ ನೇಮಿತನಾಗುತ್ತಾನೆ. ವಸಾಹತುಗಳ ಸಂಘಟನೆಗೆ ಒಂದು ಯೋಜನೆಯನ್ನು ರೂಪಿಸುತ್ತಾನೆ.

೧೭೫೫ ಬ್ರಡ್ಡಾಕನ ಸೈನ್ಯಕ್ಕೆ ಸರಬರಾಜನ್ನು ಒದಗಿಸಲು ಸ್ವಂತ ಆಸ್ತಿಯನ್ನು ಆಧಾರ ಮಾಡುತ್ತಾನೆ. ರಾಜವಿಷಯದ ಧಾಳಿಗೆ ಸಹಾಯಕವಾಗಿ ಅಸೆಂಬ್ಲಿಯಿಂದ ಸಹಾಯದ್ರವ್ಯವನ್ನು ಹೊಂದುತ್ತಾನೆ. ಸ್ವಯಂಸೇವಕ ಸೈನ್ಯದ ಸ್ಥಾಪನೆಗಾಗಿ ಒಂದು ಮಸೂದೆಯನ್ನು ಮಂಜೂರು ಮಾಡಿಸುತ್ತಾನೆ. ಕರ್ನಲ್ ಆಗಿ ನೇಮಿತನಾಗಿ ಯುದ್ಧಕ್ಷೇತ್ರವನ್ನು ಸೇರುತ್ತಾನೆ.

೧೭೫೭ ಫಿಲಡೆಲ್ಫಿಯಾದ ರಸ್ತೆಗಳಿಗೆ ನೆಲಗಟ್ಟು ಮಾಡಲು ಅಸೆಂಬ್ಲಿಯಲ್ಲಿ ಒಂದು ಮಸೂದೆಯನ್ನು ತರುತ್ತಾನೆ. "ಸಂಪತ್ತಿನ ಮಾರ್ಗ"

ಎಂಬ ಪ್ರಸಿದ್ಧ ಪುಸ್ತಕವನ್ನು ಪ್ರಕಟಿಸುತ್ತಾನೆ. ಮಾಲಿಕತನದ ವಿರುದ್ಧವಾಗಿ ಅಸೆಂಬ್ಲಿಯ ಹಕ್ಕುದಾರಿಯನ್ನು ಎತ್ತಿಹಿಡಿದು ವಾದಿಸಲು ಇಂಗ್ಲೆಂಡಿಗೆ ಹೋಗುತ್ತಾನೆ. ಪೆನ್ಸಿಲ್ವೇನಿಯಾದ ಏಜಂಟನಾಗಿ ಕೆಲಸ ಮಾಡುತ್ತಾನೆ. ಇಂಗ್ಲೆಂಡಿನ ವಿಜ್ಞಾನಿಗಳ, ಸಾಹಿತಿಗಳ ಸ್ನೇಹವನ್ನು ಸಂಪಾದಿಸುತ್ತಾನೆ.

(ಇಲ್ಲಿಗೆ ಆತ್ಮಕಥೆ ನಿಲ್ಲುತ್ತದೆ.)

೧೭೬೦ ಭೂಮಾಲಿಕರು ಸಾರ್ವಜನಿಕ ಆದಾಯಕ್ಕೆ ದತ್ತಾಂಶವನ್ನು ಕೊಡಬೇಕಾಗಿ ಪ್ರಿವಿ ಕೌನ್ಸಿಲಿನಿಂದ ರಾಜ ನಿರ್ಣಯವನ್ನು ಪಡೆಯುತ್ತಾನೆ.

೧೭೬೨ ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದಿಂದ D.C.L. ಪದವಿಯನ್ನು ಪಡೆಯುತ್ತಾನೆ. ಅಮೆರಿಕಕ್ಕೆ ಹಿಂದಿರುಗುತ್ತಾನೆ.

೧೭೬೩ ಪೋಸ್ಟು ಆಫೀಸುಗಳ ತನಿಖೆಗಾಗಿ ಉತ್ತರದ ವಸಾಹತುಗಳಲ್ಲಿ ೫ ತಿಂಗಳ ಕಾಲ ಸಂಚಾರಮಾಡುತ್ತಾನೆ.

೧೭೬೪ ಪೆನ್ ಪಂಗಡದ ಒಳಕಲಹದಿಂದ ಅಸೆಂಬ್ಲಿಯ ಪುನರ್ಚುನಾವಣೆಯಲ್ಲಿ ಪರಾಜಯವಾಯಿತು. ಪೆನ್ಸಿಲ್ವೇನಿಯಾದ ಏಜೆಂಟನಾಗಿ ಇಂಗ್ಲೆಂಡಿಗೆ ಹೋದನು.

೧೭೬೫ ಸ್ಟಾಂಪು ಆಕ್ಟು ಮಂಜೂರಾಗದಂತೆ ಪ್ರಯತ್ನಿಸಿದನು.

೧೭೬೬ ಸ್ಟಾಂಪು ಆಕ್ಟಿನ ಮಂಜೂರಾತಿಯ ಸಂಬಂಧದಲ್ಲಿ ಹೌಸ್ ಆಫ್ ಕಾಮನ್ಸ್ ಸಭೆಯ ಮುಂದೆ ವಿಚಾರಣೆ ಮಾಡಲ್ಪಟ್ಟನು. ಮಸ್ಸಾಚ್ಯುಸೆಟ್ಸ್, ನ್ಯೂಜೆರ್ಸಿ ಮತ್ತು ಜಾರ್ಜಿಯಾ ಇವುಗಳ ಏಜೆಂಟನಾಗಿ ನೇಮಿತನಾದನು. ಗಾಟಿಂಗೆನ್ ವಿಶ್ವವಿದ್ಯಾನಿಲಯಕ್ಕೆ ಭೇಟಿಕೊಟ್ಟನು.

೧೮೬೭ ಫ್ರಾನ್ಸಿನಲ್ಲಿ ಸಂಚಾರ. ರಾಜ ಭೇಟಿ.

೧೭೬೯ ಹಾರ್ವರ್ಡ್ ಕಾಲೇಜಿಗೆ ಒಂದು ದೂರದರ್ಶಕ ಯಂತ್ರವನ್ನು ಸಂಪಾದಿಸುತ್ತಾನೆ

೧೭೭೨ ಫ್ರೆಂಚ್ ಅಕಾಡೆಮಿಯ ಸದಸ್ಯನಾಗಿ ನೇಮಿತನಾಗುತ್ತಾನೆ.

೧೭೭೪ ಪೋಸ್ಟ್ ಮಾಸ್ಟರ್ ಹುದ್ದೆಯಿಂದ ವಜಾ ಆದನು. ಅಮೆರಿಕಾಕ್ಕೆ ಬರುವಂತೆ ಥಾಮಸ್ ಪೆಯ್ನ್‌ನ್ನು ಪ್ರೇರಿಸಿದನು.

೧೭೭೫ ಅಮೆರಿಕಾಕ್ಕೆ ಹಿಂದಿರುಗಿದನು. ಎರಡನೆಯ ಯೂರೋಪು ಕಾಂಗ್ರೆಸ್ಸಿಗೆ ಪ್ರತಿನಿಧಿಯಾಗಿ ಚುನಾಯಿತನಾದನು. ರಹಸ್ಯ ವ್ಯವಹಾರ ಸಮಿತಿಯ ಸದಸ್ಯನಾದನು. ಕೆನಡಾದ ಸಹಕಾರವನ್ನು ಹೊಂದಲು ನೇಮಕವಾದ ಕಮಿಷನರುಗಳಲ್ಲಿ ಒಬ್ಬನಾದನು.

೧೭೭೬ ಸ್ವಾತಂತ್ರ್ಯ ಘೋಷಣೆಯ ಪತ್ರವನ್ನು ರೂಪಿಸುವ ಸಮಿತಿಯ ಸದಸ್ಯನಾದನು. ಪೆನ್ಸಿಲ್ವೇನಿಯಾದ ವಿಧಾನಸಮಿತಿಯ ಅಧ್ಯಕ್ಷನಾಗಿ ಚುನಾಯಿತನಾದನು. ವಸಾಹತುಗಳ ಏಜಂಟನಾಗಿ ಫ್ರಾನ್ಸಿಗೆ ಹೋದನು.

೧೭೭೮ ರಕ್ಷಣೆಯ, ಸೌಹಾರ್ದದ ಮತ್ತು ವ್ಯಾಪಾರದ ಒಪ್ಪಂದಗಳನ್ನು ಪೂರೈಸಿದನು. ರಾಜ ಭೇಟಿ.

೧೭೭೯ ಪೂರ್ಣಾಧಿಕಾರದ ರಾಯಭಾರಿಯಾಗಿ ಫ್ರಾನ್ಸಿಗೆ ನೇಮಿತನಾದನು.

೧೭೮೦ ಪಾಲ್ ಜೋನ್ಸ್‌ನನ್ನು ಮಿತ್ರರ ಸೇನಾಧಿಕಾರಿಯನ್ನಾಗಿ ನೇಮಿಸಿದನು.

೧೭೮೨ ಶಾಂತಿಯ ಪೂರ್ವಭಾವಿ ಕರಾರಿಗೆ ಸಹಿ ಹಾಕಿದನು.

೧೭೮೩ ಶಾಂತಿಯ ಒಪ್ಪಂದಕ್ಕೆ ಸಹಿ ಹಾಕಿದನು.

೧೭೮೫ ಅಮೆರಿಕಾಕ್ಕೆ ಹಿಂದಿರುಗಿದನು. ಪೆನ್ಸಿಲ್ವೇನಿಯದ ಅಧ್ಯಕ್ಷನಾಗಿ ಚುನಾಯಿತನಾದನು. ೧೭೮೬ ರಲ್ಲಿ ಪುನಃ ಚುನಾಯಿತನಾದನು.

೧೭೮೭ ಅಧ್ಯಕ್ಷನಾಗಿ ಪುನಃ ಚುನಾಯಿತನಾದನು. ಸಂಯುಕ್ತ ರಾಜ್ಯಾಂಗವನ್ನು ರೂಪಿಸುವ ಸಭೆಗೆ ಪ್ರತಿನಿಧಿಯಾಗಿ ಹೋದನು.

೧೭೮೮ ಸಾರ್ವಜನಿಕ ಜೀವನದಿಂದ ನಿವೃತ್ತನಾದನು.

೧೭೯೦ ಏಪ್ರಿಲ್ ೧೭ ರಲ್ಲಿ ಮೃತಿ ಹೊಂದಿದನು. ಫಿಲಡೆಲ್ಫಿಯಾದಲ್ಲಿ ಐದನೆಯ ಮತ್ತು ಆರ್ಚ್ ರಸ್ತೆಗಳಲ್ಲಿರುವ ಚರ್ಚ್ ಕ್ಷೇತ್ರದಲ್ಲಿ ಆವನ ಗೋರಿಯಿದೆ.

---

# ಫ್ರ್ಯಾಂಕ್ಲಿನ್ನನ ಆತ್ಮಕಥೆಯ ಕರಡು ಕಲ್ಪನೆ

ನನ್ನ ಬರಹ. ಮಿಸೆಸ್ ಡುಗುಡ್ಡಳ ಪತ್ರಗಳು. ನನ್ನ ಸೋದರನ ಹಾಗೂ ನನ್ನ ನಡುವೆ ತಲೆದೋರಿದ ಭಿನ್ನಾಭಿಪ್ರಾಯ (ಅವನ ಮನೋಭಾವ ಮತ್ತು ನನ್ನದು); ಮುಖ್ಯವಾಗಿ ಅದರ ಕಾರಣ. ಅವನ ವರ್ತಮಾನಪತ್ರ. ಅವನು ಸಹಿಸಬೇಕಾದ ಕಟ್ಟಳೆ. ನನ್ನ ವಿಚಾರಣೆ. ಅಸೆಂಬ್ಲಿಯ ಮತದಾನ. ಅದನ್ನು ತಪ್ಪಿಸಿಕೊಳ್ಳುವ ಅವನ ರೀತಿ. ಅದರಿಂದಾಗಿ ನಾನು ಸ್ವತಂತ್ರನಾದುದು. ಮಿಕ್ಕ ಮುದ್ರಕರೊಡನೆ ಕೆಲಸಕ್ಕೆ ಸೇರಲು ನಾನು ನಡೆಸಿದ ಪ್ರಯತ್ನಗಳು. ಅವನು ನನ್ನನ್ನು ತಡೆಯುತ್ತಾನೆ. ನಾವು ತಂದೆಯವರ ಎದುರಿನಲ್ಲಿ ಆಗಾಗ ವಾದ ಹೂಡುವುದು. ಕೊನೆಯ ಒಡಕು. ಬೋಸ್ಟನ್ ಬಿಡುವುದಕ್ಕೆ ನನ್ನ ಪ್ರಚೋದನೆಗಳು. ಒಂದು ನಿರ್ಧಾರಕ್ಕೆ ಬರುವ ರೀತಿ. ನಾನು ಅವನನ್ನು ತೊರೆದು ನ್ಯೂಯಾರ್ಕಿಗೆ ಹೋಗುವುದು (ಮಾಂಸಾಹಾರಕ್ಕೆ ಮರಳುವುದು); ಮತ್ತೆ ಪೆನ್ಸಿಲ್‌ವೇನಿಯಾಕ್ಕೆ. ಎಂಬಾಯ್ (Amboy) ಕೊಲ್ಲಿಯಲ್ಲಿ ಪಯಣ, ಮತ್ತು ಅದರ ಪ್ರಸಂಗಗಳು. ಆ ಮಾರ್ಗ. ಡಾ। ಬ್ರೌನ್‌ನ ಸಂದರ್ಶನ. ಅವನ ಗುಣ. ಅವನ ಮಹಾ ಕಾರ್ಯ. ಬರ್ಲಿಂಗ್‌ಟನ್ನಿನಲ್ಲಿ. ಯೋಗ್ಯ ಸ್ತ್ರೀ. ನದಿಯಲ್ಲಿ. ನಾನು ಫಿಲಡೆಲ್ಫಿಯಾವನ್ನು ತಲಪುವುದು. ಮೊದಲ ಊಟ ಮತ್ತು ಮೊದಲ ನಿದ್ದೆ. ಹಣ ಮರೆತದ್ದು. ಉದ್ಯೋಗ. ವಸತಿ. ನನ್ನ ಭಾವೀ ಪತ್ನಿಯೊಡನೆ ಮೊದಲ ಬಾರಿಗೆ ಮಾತುಕತೆ. ಜೆ. ರಾಲ್ಫನೊಡನೆ. ಕೈಮರನೊಡನೆ. ಅವರ ಸ್ವಭಾವಗಳು. ಆಸ್ಬೋರ್ನ್. ವಾಟ್‌ಸನ್. ನನ್ನತ್ತ ಗವರ್ನರನ ದೃಷ್ಟಿ ಬೀಳುವುದು. ಆ ಪ್ರಸಂಗ ಮತ್ತು ಪದ್ಧತಿ. ಅವನ ಸ್ವಭಾವ. ತಳವೂರಿ ನೆಲೆಸಲು ನೀಡುವ ಆಶ್ವಾಸನೆಗಳು. ನಾನು ಬೋಸ್ಟನ್ನಿಗೆ ಹಿಂದಿರುಗುವುದು. ಸಮುದ್ರಯಾನ ಮತ್ತು ಅಪಘಾತಗಳು. ಸ್ವಾಗತ. ಈ ವಿಚಾರಕ್ಕೆ ತಂದೆಯವರ ಪ್ರತಿರೋಧ. ನ್ಯೂಯಾರ್ಕಿಗೆ ಮತ್ತು ಫಿಲಡೆಲ್ಫಿಯಾಕ್ಕೆ ನಾನು ಮರಳುವುದು. ಗವರ್ನರ ಬರ್ನೆಟ್. ಜೆ. ಕೊಲಿನ್ಸ್. ವರ್ನನ್‌ನಿಗೆ ಹಣ. ಗವರ್ನರನ ಮೋಸ. ಉದ್ಯೋಗ ದೊರೆಯದೆ ಹೆಚ್ಚಾಗಿ ನನ್ನ ಸಾಲದಲ್ಲೇ ಕೊಲಿನ್ಸನು ಬಾರ್ಬಡೊಸ್‌ಕ್ಕೆ ಹೋಗುವುದು. ರಾಲ್ಫ್ ಮತ್ತು ನಾನು ಇಂಗ್ಲೆಂಡಿಗೆ ಹೋಗುವುದು. ಗವರ್ನರನ

ಪತ್ರಗಳ ನಿರಾಸೆ. ಅವನ ಗೆಳೆಯ ಕರ್ನಲ್ ಫ್ರೆಂಚ್. ಕಾರ್ನ್‌ವಾಲಿಸ್‌ನ ಪತ್ರಗಳು. ಕ್ಯಾಬಿನ್. ಡೆನ್‌ಹ್ಯಾಮ್. ಹ್ಯಾಮಿಲ್ಟನ್. ಇಂಗ್ಲೆಂಡಿಗೆ ಮುಟ್ಟುವುದು. ಉದ್ಯೋಗ ಸಿಗುವುದು. ರಾಲ್ಫನಿಗಿಲ್ಲ. ಅವನು ನನಗೊಂದು ಖರ್ಚಿನ ಬಾಬು. ಇಂಗ್ಲೆಂಡಿನಲ್ಲಿ ಸಾಹಸಗಳು. ಒಂದು ಲಘು ಪುಸ್ತಕ ಬರೆಯುವುದು ಮತ್ತು ೧೦೦ ಪ್ರತಿಗಳನ್ನು ಮುದ್ರಿಸುವುದು. ಯೋಜನೆಗಳು. ಲಯನ್ಸ್. ಡಾ। ಪೆಂಬರ್ಟನ್. ನನ್ನ ಸತತ ವ್ಯವಸಾಯ. ಆದರೂ ರಾಲ್ಫನಿಂದಾಗಿ ಬಡತನ. ನನ್ನ ಮನೆ ಮಾಲೀಕಳು. ಅವಳ ಸ್ವಭಾವ. ವೈಗೇಟ್. ವಿಲ್ಕ್ಸ್. ಸಿಬ್ಬರ್. ನಾಟಕಗಳು. ನಾನು ಎರವಲು ತಂದ ಪುಸ್ತಕಗಳು. ನಾನು ಕೇಳಿದ ಧರ್ಮೋಪದೇಶಕರು. ರೆಡ್ಮೇಯ್ನ್. ವಾಟ್ಸ್‌ನಲ್ಲಿ. ಮಿತಪಾನ. ದೆವ್ವ. ಜನರ ಮಧ್ಯದಲ್ಲಿ ಗುಣ ಮತ್ತು ವರ್ಚಸ್ಸು. ಫಿಲಡೆಲ್ಫಿಯಾಕ್ಕೆ ಮರಳುವುದಕ್ಕೆ ಮತ್ತು ಅವನ ಕಾರಕೂನನಾಗುವುದಕ್ಕೆ ಮಿ। ಡೆನ್‌ಹ್ಯಾಮನಿಂದ ಒತ್ತಾಯ. ನಮ್ಮ ಸಮುದ್ರಯಾತ್ರೆ ಮತ್ತು ತಲಪುವಿಕೆ. ಬರವಣಿಗೆಯಲ್ಲಿ ನನ್ನ ಗೊತ್ತುವಳಿಗಳು. ನನ್ನ ಅಸ್ವಸ್ಥತೆ.ಅವನ ಸಾವು. ಡಿ. ಆರ್. ವಿವಾಹವಾಗಿರುವುದು ತಿಳಿಯಿತು. ಪುನಃ ಕೈಮರ್‌ನೊಡನೆ ಕೆಲಸಕ್ಕೆ ಹೋಗುವುದು. ಕರಾರುಗಳು. ಅವನು ನನ್ನನ್ನು ದುರುಪಯೋಗ ಪಡಿಸುವುದು. ನನ್ನ ಅಸಮಾಧಾನ. ಡಿಕೌನ ವಚನ. ಬರ್ಲಿಂಗ್‌ಟನ್ನಿನಲ್ಲಿ ನನ್ನ ಮಿತ್ರರು. ಪಾಲಿನಲ್ಲಿ ವ್ಯವಹಾರಕ್ಕೆ ತೊಡಗಲು ಎಚ್. ಮೆರ್‌ಡಿತ್‌ನೊಡನೆ ಒಪ್ಪಂದ. ಹಾಗೆ ನಡೆಯುವುದು. ಅಸೆಂಬ್ಲಿಯಲ್ಲಿ ಯಶಸ್ಸು. ಹ್ಯಾಮಿಲ್ಟನ್ನನ ಗೆಳೆತನ. ಸಿವೆಲ್ಲನ ಇತಿಹಾಸ. ಗೆಜೆಟ್. ಕಾಗದದ ಹಣ. ವೆಬ್. ಬಿಡುವಿಲ್ಲದ ಬರಹಗಾರ. ಬ್ರಿಯಂಟ್ನೆಲ್. ಗೊಡ್ಫ್ರೇ. ಅವನ ಸ್ವಭಾವ. ನಮ್ಮ ವಿರುದ್ಧ ಕಟ್ಟಳೆ. ಕೋಲ್ಮನ್ ಮತ್ತು ಗ್ರೇಸ್—ನನ್ನ ಗೆಳೆಯರ ಸಹಾಯ ಸೌಕರ್ಯ. ವ್ಯವಹಾರವನ್ನು ಮುಂದುವರಿಸುವುದು ಮತ್ತು ಕರೊಲಿನಾಕ್ಕೆ ಎಂ. ಹೋಗುವುದು. ಕಾಗದದ ಹಣವನ್ನು ಕುರಿತು ಲಘು ಪುಸ್ತಕ. ಕೈಮರನ ಗೆಜೆಟು. ಜುಂಟೊ ಸಾಲ ; ಅದರ ಯೋಜನೆ. ವಿವಾಹ. ವಾಚನಾಲಯದ ಸ್ಥಾಪನೆ. ಯೋಜನೆಯನ್ನು ಕಾರ್ಯಗತಮಾಡುವ ರೀತಿ. ಅದರ ಕಲ್ಪನೆ ಮತ್ತು ಉಪಯೋಗ. ಮಕ್ಕಳು. ಪಂಚಾಂಗ. ಅದರಿಂದ ನಾನು ಪಡೆದ ಉಪಯೋಗ. ಮಹಾ ಕಾರ್ಯಪಟುತ್ವ. ಸತ್ತತ ಅಭ್ಯಾಸ. ನನ್ನ ಸತತ ವ್ಯವಸಾಯದ ಮೇಲೆ ತಂದೆಯವರ ಸೂಚನೆ ಮತ್ತು ಸಲಹೆ. ಕರೋಲಿನಾದ ಪಾಲುಗಾರಿಕೆ, ಫ್ರೆಂಚ್ ಮತ್ತು ಜರ್ಮನ್ ಕಲಿಯುವುದು. ಹತ್ತು ವರುಷಗಳನಂತರ ಬೋಸ್ಟನಿಗೆ

ಪ್ರಯಾಣ. ನನ್ನ ಸೋದರನ ಪ್ರೇಮ. ಅವನ ಮರಣ ಮತ್ತು ನನ್ನ ಪಾಲಿಗೆ ಅವನ ಮಗನನ್ನು ಬಿಡುವುದು. ಸೌಶೀಲ್ಯದಕಲೆ. ಸಂದರ್ಭ. ಪಟ್ಟಣದ ಗಸ್ತಿಯನ್ನು ವ್ಯವಸ್ಥೆಗೊಳಿಸುವುದು. ಅಂಚೆ ಮನೆ. ಸ್ಪೋಟ್ಸ್‌ವುಡ್. ಬ್ರೆಡ್ ಫೋರ್ಡನ ವರ್ತನೆ. ಅಸೆಂಬ್ಲಿಯ ಕಾರಕೂನ. ಒಬ್ಬ ಮಗನ ವಿಯೋಗ. ಉಪ-ಜಂಟೋಗಳ ಯೋಜನೆ. ಸಂದರ್ಭಾನುಸಾರ ಪತ್ರಿಕೆಗಳಲ್ಲಿ ಬರೆಯುವುದು. ವ್ಯವಹಾರದಲ್ಲಿ ಯಶಸ್ಸು. ಅಗ್ನಿ ಕಂಪನಿಗಳು. ಇಂಜಿನುಗಳು. ೧೭೪೩ ರಲ್ಲಿ ಇನ್ನೊಮ್ಮೆ ಬೋಸ್ಟನಿಗೆ ಹೋಗುವುದು. ಡಾ। ಸ್ಪೆನ್ಸ್‌ನ ಭೇಟಿ. ವ್ಹೈಟ್‌ಫೀಲ್ಡ್. ಅವನೊಡನೆ ನನ್ನ ಸಂಬಂಧ. ನನಗೆ ಅವನು ನೀಡಿದ ಔದಾರ್ಯ. ನನ್ನ ಚುನಾವಣೆ. ಚರ್ಚಿನ ಭಿನ್ನಾಭಿಪ್ರಾಯಗಳು. ಅವುಗಳಲ್ಲಿ ನನ್ನ ಪಾತ್ರ. ಒಂದು ಕಾಲೇಜನ್ನು ಸ್ಥಾಪಿಸಲು ಸೂಚನೆ. ಆಗ ಕಾರ್ಯಗತವಾಗುವುದಿಲ್ಲ. ತತ್ವಜ್ಞಾನ ಮಂಡಲವೊಂದನ್ನು ಮಂಡಿಸುವುದು ಹಾಗೂ ಸ್ಥಾಪಿಸುವುದು. ಯುದ್ಧ. ವಿದ್ಯುತ್ತು. ಅದರ ಬಗ್ಗೆ ನನ್ನ ಪ್ರಥಮ ಜ್ಞಾನ. ಡಿ. ಹಾಲ್‌ನೊಡನೆ ಪಾಲುಗಾರಿಕೆ, ಇತ್ಯಾದಿ. ರಕ್ಷಣೆಯ ಕುರಿತು ಅಸೆಂಬ್ಲಿಯಲ್ಲಿ ವಿವಾದ. ಅದಕ್ಕೆ ಯೋಜನೆ. ಕೇವಲ ಸತ್ಯ. ಅದರ ಜಯ. ಹತ್ತು ಸಾವಿರ ಜನರನ್ನು ದೊರಕಿಸಿಕೊಂಡು ಶಿಸ್ತಿನ ಶಿಕ್ಷಣ ಕೊಟ್ಟದ್ದು. ಲಾಟರಿಗಳು. ಬ್ಯಾಟರಿ ಕಟ್ಟಿದ್ದು. ನ್ಯೂಕ್ಯಾಸಲ್. ಕೌನ್ಸಿಲಿನಲ್ಲಿ ನನ್ನ ಪ್ರಭಾವ. ಬಣ್ಣಗಳು, ಸಾಧನಗಳು ಮತ್ತು ಆದರ್ಶವಾಕ್ಯಗಳು. ಹೆಣ್ಣುಮಕ್ಕಳ ಸೈನಿಕ ಗಸ್ತು. ಕಾಮನ್ ಕೌನ್ಸಿಲಿನಿಂದ ಆರಿಸಿದ ಕ್ರೈಸ್ತಮಿತ್ರ ಸಂಘದ ಸದಸ್ಯರು. ಶಾಂತಿ ಆಯೋಗದಲ್ಲಿ ಸೇರಿಸಲ್ಪಡುವುದು. ಲೋಗನ್ನನು ನನ್ನ ಬಗ್ಗೆ ತೋರಿಸಿದ ಪ್ರೇಮ. ಅವನ ಪುಸ್ತಕ ಭಂಡಾರ. ಪೋಸ್ಟ್-ಮಾಸ್ಟರ್ ಜನರಲ್ ಆಗಿ ನೇಮಕ. ಅಸೆಂಬ್ಲಿ ಸದಸ್ಯನಾಗಿ ಆರಿಸಲ್ಪಟ್ಟದ್ದು. ಕಾರ್ಲೈಲ್ ಮತ್ತು ಈಸ್ಟನ್‌ಗಳಲ್ಲಿ ಇಂಡಿಯನ್ನರನ್ನು ನೋಡಿಕೊಳ್ಳುವ ಕಮಿಷನರ್. ಯೋಜನೆ ಹಾಗೂ ಪಂಡಿತ ಸಭೆಯ ಸ್ಥಾಪನೆ. ಅದನ್ನು ಕುರಿತು ಲಘುಪುಸ್ತಕ. ಬೋಸ್ಟನಿಗೆ ಪಯಣ. ಆಲ್ಬನಿಯಲ್ಲಿ. ವಸಾಹತುಗಳನ್ನುಒಂದುಗೂಡಿಸುವ ಆಲೋಚನೆ. ಅದರ ನಕಲು. ಅದರ ಬಗ್ಗೆ ಸೂಚನೆಗಳು. ಅದರ ಪರಾಜಯ, ಮತ್ತು ರೀತಿ. ೧೭೫೪ ರಲ್ಲಿ ಬೋಸ್ಟನಿಗೆ ಪ್ರಯಾಣ. ನಮ್ಮ ಅಸೆಂಬ್ಲಿಯಲ್ಲಿ ಅದರ ಬಗ್ಗೆ ವಾದ–ವಿವಾದಗಳು. ಅವುಗಳಲ್ಲಿ ನನ್ನ ಪಾತ್ರ. ಹೊಸ ಗವರ್ನರ್. ಅವನೊಡನೆ ಚರ್ಚೆ. ಅವನ ಸ್ವಭಾವ ಮತ್ತು ಅವನು ನನಗೆ ಹೇಳಿದ ಮಾತುಗಳು. ಆಲ್ಡರ್‌ಮನ್ ಎಂದು ನೇಮಕ ಹೊಂದುವುದು.

ಆಸ್ಪತ್ರೆಯ ಯೋಜನೆ. ಅದರಲ್ಲಿ ನನ್ನ ಭಾಗ. ಅದರ ಜಯ. ಪೆಟ್ಟಿಗೆಗಳು. ಟ್ರೆಜರಿಯ ಕಮಿಷನರನೆಂದು ನೇಮಿಸಲ್ಪಟ್ಟದ್ದು. ಗಡಿನಾಡ ಪ್ರದೇಶಗಳನ್ನು ರಕ್ಷಿಸಲು ನನ್ನ ಆಯೋಗ. ಜನರನ್ನು ಕೂಡಿಸುವುದು ಮತ್ತು ಕೋಟೆ-ಕೊತ್ತಳಗಳನ್ನು ನಿರ್ಮಿಸುವುದು. ನನ್ನ-ಭರತಿ ನಡೆಸುವ ಸೈನಿಕ ಕಾಯಿದೆ. ಕರ್ನಲನಾಗಿ ನೇಮಕ. ನನ್ನ ಅಧಿಕಾರಿಗಳ ಕವಾಯತು. ಮಾಲೀಕನಿಗೆ ಅಪರಾಧ. ಬೋಸ್ಟನ ರಾಯಭಾರಿಗಳಿಗೆ ಸಹಾಯ. ಶರ್ಲೆ ಮೊದಲಾದವರೊಡನೆ ಪಯಣ. ಬ್ರಡ್ಡೊಕನ ಭೇಟಿ. ಅವನಿಗೆ ಸಹಾಯ. ಅವನ ಸೈನ್ಯದ ಅಧಿಕಾರಿಗಳಿಗೆ ಮೇವು ವ್ಯವಸ್ಥೆ ಮಾಡಿ ಸಿದ್ಧಗೊಳಿಸಿದ್ದು. ಅವರು ನನಗೆ ತೋರಿಸಿದ ಸವಲತ್ತುಗಳು ಮತ್ತು ನನ್ನ ಸ್ವಭಾವ. ನನ್ನ ವಿದ್ಯುಚ್ಛಕ್ತಿ ಪ್ರಯೋಗಗಳ ಯಶಸ್ಸು. ನನಗೆ ಕಳುಹಿಸಲಾದ ಪದಕ. ರಾಯಲ್ ಸೊಸೈಟಿಯಲ್ಲಿ ಹಾಜರಿ, ಮತ್ತು ಅಧ್ಯಕ್ಷರ ಭಾಷಣ. ಡೆನ್ನಿಯ ಆಗಮನ ಮತ್ತು ನನ್ನ ಪ್ರಣಯ. ಅವನ ಸ್ವಭಾವ. ವಸತಿ ಕಾರ್ಯದಲ್ಲಿ ಸೈನ್ಯಕ್ಕೆ ನಾನು ಸಲ್ಲಿಸಿದ ಸೇವೆ. ಒಡೆಯರ ಕಂದಾಯದ ಬಗ್ಗೆ ವಾದ-ವಿವಾದಗಳು ಮುಂದುವರಿಯುವುದು. ಪಟ್ಟಣದ ರಸ್ತೆಗಳನ್ನು ಸಿಮೆಂಟಿನಿಂದ ಕಟ್ಟುವ ಯೋಜನೆ. ನನ್ನನ್ನು ಇಂಗ್ಲೆಂಡಿಗೆ ಕಳುಹಿಸಿದುದು. ಅಲ್ಲಿಯ ಗೊತ್ತುವಳಿಗಳು. ಕೆನಡಾ ಡಿಲೆಂಡಾ ಎಸ್ಟ್. ನನ್ನ ಹಸ್ತಪುಸ್ತಕ. ಅದರ ಪರಿಣಾಮಕ್ಕೆ ಸ್ವಾಗತ ಮತ್ತು ದಾಳಿಯ ಕುರಿತು ನನ್ನಿಂದ ನಿರ್ಮಿಸಲಾದ ಯೋಜನೆಗಳು. ಮಿಸೆಸ್. ಎಸ್. ಎಂ. ಸ್ಮಾಲ್, ಸರ್ ಜಾನ್ ಪಿ. ಮಿಸ್ಟರ್ ವುಡ್, ಸಾರ್ಜಂಟ್ ಸ್ಟ್ರಹಾನ್ ಮತ್ತು ಇತರರ ಪರಿಚಯ ಮಾಡಿಕೊಂಡದ್ದು ಹಾಗೂ ಅವರು ನನಗೆ ಸಲ್ಲಿಸಿದ ಸೇವೆ. ಅವರ ಸ್ವಭಾವಗಳು. ಎಡಿನ್‌ಬರೊ, ಸೇಂಟ್ ಅಂಡ್ರ್ಯೂಸ್‌ನಿಂದ-ಡಾಕ್ಟರೇಟ್ ಪಡೆದದ್ದು. ಆಕ್ಸಫರ್ಡ್‌ನಿಂದ ಡಾಕ್ಟರೇಟ್ ಪದವಿ. ಸ್ಕಾಟ್ಲೆಂಡಿಗೆ ಪ್ರಯಾಣ. ಲಾರ್ಡ ಲೀಸ್ಟರ್. ಮಿ/ ಪ್ರಾಟ್. ಡಿ. ಗ್ರೇ. ಜಾಕ್ಸನ್. ಇಂಗ್ಲೆಂಡಿನ ಸ್ಥಿತಿಗತಿಗಳು ವಿಳಂಬಗಳು. ಹಾಲಂಡ್ ಮತ್ತು ಫ್ಲಾಂಡರ್ಸಗಳಿಗೆ ಗಣ್ಯವಾದ ಪ್ರಯಾಣ. ಮೇರಿಲ್ಯಾಂಡಿನಿಂದ ಏಜನ್ಸಿ. ಮಗನಿಗೆ ಉದ್ಯೋಗ ನಾನು ಹಿಂದಿರುಗುವುದು. ಭತ್ತೆ ಮತ್ತು ಉಪಕಾರಸ್ಮರಣೆ. ಬೋಸ್ಟನ್‌ಗೆ ಪ್ರಯಾಣ. ಗವರ್ನರ್ ಜಾನ್‌ಪೆನ್. ಅವನ ಬಗ್ಗೆ ನನ್ನ ವರ್ತನೆ. ಪೆಕ್ಸಟನ್ ಕೊಲೆಗಳು. ನನ್ನ ಹಸ್ತಪುಸ್ತಕ. ದಂಗೆಕೋರರು ಫಿಲಡೆಲ್ಫಿಯಾಕ್ಕೆ ಸಾಗುವುದು. ಗವರ್ನರರು ನನ್ನ ಮನೆಗೆ ಬರುವುದು. ನನ್ನ ಗುಣ. ದಂಗೆ ಎದ್ದ

ಲ್ಲಿಗೆ ಕಳುಹಿಸಲ್ಪಡುವುದು. ಅವರನ್ನು ಹಿಂದಿರುಗಿಸುವುದು. ಅಲ್ಪ ಉಪಕಾರ ಸ್ಮರಣೆ. ವಾದ-ವಿವಾದಗಳು ಮತ್ತೆ ತಲೆದೋರುವುದು. ನಿರಂಕುಶವಾದ ಸರಕಾರದ ಆಡಳಿತೆಯಲ್ಲಿ ಇನ್ನು ಮುಂದೆ ಇರಕೂಡದೆಂಬ ನಿರ್ಧಾರಗಳು. ಮತ್ತೊಂದು ಹಸ್ತಪುಸ್ತಕ. ಸಮಾಧಾನದ ವಿಚಾರಗಳು. ಬಿನ್ನವತ್ತಳೆಯೊಂದಿಗೆ ಇನ್ನೊಮ್ಮೆ ಇಂಗ್ಲೆಂಡಿಗೆ ಕಳುಹಿಸಲ್ಪಟ್ಟದ್ದು. ಅಲ್ಲಿ ನಡೆದ ಮಾತುಕತೆಗಳು. ಲಾರ್ಡ ಎಚ್. ಅವನ ಸ್ವಭಾವ. ನ್ಯೂ ಜೆರಸಿ, ಜಾರ್ಜಿಯಾ, ಮಸಾಚುಸೆಟ್ಸ್‌ಗಳಿಂದ ನಿಯೋಗಗಳು. ೧೭೬೭ರಲ್ಲಿ ಜರ್ಮನಿಗೆ ಪ್ರಯಾಣ. ಅಲ್ಲಿ ದೊರೆತ ಮಾನಮರ್ಯಾದೆಗಳು. ಗೊಟ್ಟಿಂಗೆನ್ ಆಚರಣೆಗಳು. ೧೭೬೭ರಲ್ಲಿ ಫ್ರಾನ್ಸಿನಲ್ಲಿಯೂ ಹಾಗೇ. ೧೭೬೯ ರಲ್ಲಿ ಹಾಗೇ. ಅಲ್ಲಿಯ ಅಕ್ಯಾಡೆಮಿಯಲ್ಲಿ ಸತ್ಕಾರ. ಅರಸನ ಮತ್ತು ತರುಣಿಯರ, ಮ್ಯಾಡಂ ವಿಕ್ಟೋರಿಯಾಳ ಹಾಗೂ ಮಿಸೆಸ್ ಲ್ಯಾಮುಗ್‌ನನ್ ಇವರ ಪರಿಚಯ. ಡಕ್ ಡಿ. ಚೌಲ್ನೆಸ್, ಎಂ. ಬೌಮಾಂಟ್, ಲಿ ರಾಯ್, ಡಿ'ಅಲಿಬಾರ್ಡ್, ನೊಲ್ಲೆಟ್. ಪತ್ರಿಕೆಗಳನ್ನು ನೋಡುವುದು. ಹಾಲಂಡ್. ನನ್ನ ಪತ್ರಿಕೆಗಳನ್ನು ಪುನರ್ಮುದ್ರಿಸುವುದು ಹಾಗೂ ಅನೇಕ ಹೊಸ ಪತ್ರಿಕೆಗಳನ್ನು ಹೆಚ್ಚಿಸುವುದು. ಅನೇಕ ಬರೆಹಗಾರರಿಂದ ನನಗೆ ಕಾಣಿಕೆಯಾಗಿ ಬಂದ ಗ್ರಂಥಗಳು. ಫ್ರೆಂಚ್ ಭಾಷೆಗೆ ನನ್ನ ಪುಸ್ತಕ ಭಾಷಾಂತರಿಸಲ್ಪಡುವುದು. ವಿದ್ಯುತ್ ಗಾಳಿಪಟ (Lightning kite). ವಿವಿಧ ಸಂಶೋಧನೆಗಳು. ಆ ಅಭ್ಯಾಸವನ್ನು ನಡೆಸುವ ನನ್ನ ಪದ್ಧತಿ. ಡೆನ್ಮಾರ್ಕಿನ ಅರಸನು ನನ್ನನ್ನು ಮೇಜವಾನಿಗೆ ಆಮಂತ್ರಿಸುವುದು. ನನ್ನ ತಂದೆಯವರ ಗಾದೆಯನ್ನು ಜ್ಞಾಪಿಸಿಕೊಳ್ಳುವುದು. ಸ್ಟ್ಯಾಂಪ್ ಆಕ್ಟ್. ಅದಕ್ಕೆ ನನ್ನ ವಿರೋಧ. ಜೆ. ಹ್ಯೂನ ಶಿಫಾರಸುಗಳು. ಅದರ ತಿದ್ದುಪಾಟು. ಪಾರ್ಲಿಮೆಂಟಿನಲ್ಲಿ ಪರೀಕ್ಷೆ. ಅದು ನನಗೆ ತಂದ ಖ್ಯಾತಿ. ಮಂತ್ರಿಮಂಡಳದ ಆಚ್ಚುಮೆಚ್ಚು-ಚಾರ್ಲಸ್ ಟೌನ್‌ಸೆಂಡನ ಕಾಯಿದೆ. ಅದಕ್ಕೆ ವಿರೋಧ. ಸ್ಟೋವ್‌ಗಳು ಮತ್ತು ಚಿಮಣಿ ಪ್ಲೇಟುಗಳು ಆರ್ಮೋನಿಕ. ರಾಯಭಾರಿಗಳ ಪರಿಚಯ. ರಶಿಯನ್ ಹೇಳಿಕೆ. ಪತ್ರಿಕೆಗಳಲ್ಲಿ ಬರೆಯುವುದು. ಜರ್ಮನಿಯಿಂದ ಗಾಜುಗಳು. ನೊವಾ ಸ್ಕಾಷಿಯಾದಲ್ಲಿನ ಭೂಮಿಯ ಕೊಡುಗೆ. ಅಸ್ವಸ್ಥತೆ. ಅಮೇರಿಕಾದ ಪತ್ರಗಳನ್ನು ಇಲ್ಲಿಗೆ ತಿರುಗಿಸಿದ್ದು. ಪರಿಣಾಮಗಳು. ಇನ್ಸುರೆನ್ಸ್ ಕಚೇರಿ. ನನ್ನ ಸ್ವಭಾವ. ಕೈಕೆಳಗಿನವರೊಡನೆ ಸಭ್ಯತೆಯಿಂದ ಇರಲು ನನಗೇನೂ ತೊಂದರೆ ಎನಿಸದಿದ್ದದ್ದು; ಉಚ್ಚ ಅಧಿಕಾರಿಗಳೊಡನೆ ನಮ್ರತೆಯಿಂದ ವರ್ತಿಸುವುದು, ಇತ್ಯಾದಿ; ಇತ್ಯಾದಿ. ಶಾಶ್ವತ

ಚಲನೆಯ ನಕಲಿ. ಜೆರಸಿ ಅಸೆಂಬ್ಲಿಯ ಕುರಿತು ಬರೆಯುವುದು. ಹಚಿನ್ ಸನ್ನರ ಪತ್ರಗಳು. ಟೆಂಪಲ್. ಮುಖ್ಯ ನ್ಯಾಯಸ್ಥಾನದಲ್ಲಿ ಖಟ್ಲೆ. ಪ್ರಿವ್ಹಿ ಕೌನ್ಸಿಲಿನ ಮುಂದೆ ನಿಂದೆ. ಲಾರ್ಡ್ ಹಿಲ್ಸಬರೋ ಅವರ ಸ್ವಭಾವ ಮತ್ತು ಶೀಲ. ಲಾರ್ಡ್ ಡಾರ್ಟಮೌತ್. ಯುದ್ಧವನ್ನು ತಪ್ಪಿಸುವುದಕ್ಕಾಗಿ ಮಾತುಕತೆಗಳು. ಅಮೆರಿಕಾಕ್ಕೇ ಮರಳುವುದು. ಸೇಂಟ್ ಆಸಫ್‌ದ ಬಿಷಪರು. ಕಾಂಗ್ರೆಸು. ಅಸೆಂಬ್ಲಿ. ರಕ್ಷಣಾ ಸಮಿತಿ. ಶೆವೊ-ಡಿ-ಫ್ರೈಸ್. ಬೋಸ್ಟನ್ ಕ್ಯಾಂಪಿಗೆ ಕಳುಹಿಸಲ್ಪಟ್ಟದ್ದು. ಕೆನಡಾಕ್ಕೆ, ಲಾರ್ಡ ಹೋವ್ ಅವನಲ್ಲಿಗೆ. ಫ್ರಾನ್ಸಿಗೆ. ಒಪ್ಪಂದ, ಇತ್ಯಾದಿ.

# ಬೆಂಜಮಿನ್ ಫ್ರ್ಯಾಂಕ್ಲಿನ್
# ಆತ್ಮಕಥೆ

ಸೇಂಟ್ ಆಸೇಫನ ಬಿಷಪನಲ್ಲಿ
ಟ್ವೈಫೋರ್ಡ್, ೧೭೭೧

ಪ್ರೀತಿಯ ಮಗನೆ,

ನನ್ನ ಪೂರ್ವಜರ ಕುರಿತಾದ ಯಾವುದೇ ಚಿಕ್ಕ ಉಪಕಥೆಯನ್ನು ದೊರಕಿಸುವುದರಲ್ಲಿ ನನಗೆ ಎಂದಿನಿಂದಲೂ ಇಷ್ಟವಿತ್ತು. ಇಂಗ್ಲೆಂಡಿನಲ್ಲಿ ನೀನು ನನ್ನ ಸಂಗಡ ಇದ್ದಾಗ ನಾನು ನಮ್ಮ ಸಂಬಂಧಿಕರಲ್ಲಿ ಉಳಿದವರೊಡನೆ ನಡೆಸಿದ ವಿಚಾರಣೆಗಳೂ, ಆ ನಿಮಿತ್ತ ನಾನು ಕೈಕೊಂಡ ಪ್ರಯಾಣವೂ ನಿನಗೆ ನೆನಪಿರಬಹುದು. ನನ್ನ ಜೀವನದ ಪರಿಸ್ಥಿತಿಯನ್ನು ತಿಳಿದುಕೊಳ್ಳಲು ನಿನಗೂ ಸಂತೋಷವಾದೀತೆಂದೂ ನನ್ನ ಈಗಿನ ಹಳ್ಳಿಯ ವಾಸದಲ್ಲಿ ಒಂದು ವಾರದ ಅವ್ಯಾಹತ ವಿರಾಮವನ್ನು ಆನಂದದಿಂದ ಕಳೆಯಬಹುದೆಂದೂ ಬಗೆದು ನಾನು ಅವುಗಳನ್ನು ಬರೆಯಲು ಹೊರಟಿರುವೆ. ನಿನಗಿನ್ನೂ ಅವು ತಿಳಿದಿರಲಿಕ್ಕಿಲ್ಲ. ಪ್ರಸ್ತುತ ಬೇರೆ ಕೆಲವು ಪ್ರಚೋದನೆಗಳೂ ಇವೆ. ನಾನು ಹುಟ್ಟಿ ಬೆಳೆದ ಬಡತನ ಮತ್ತು ನೆಲೆಯಿಲ್ಲದ ಜೀವನದಿಂದ ಒಂದು ಬಗೆಯ ಸಂಪತ್ತಿನ ಸ್ಥಾನಕ್ಕೇರಿ ಮತ್ತು ಜಗತ್ತಿನಲ್ಲಿ ಒಂದು ದರ್ಜೆಯ ಖ್ಯಾತಿಗೇರಿ, ಹಾಗೂ ಇಷ್ಟೊಂದು ದೂರ ಬಾಳಿನಲ್ಲಿ ಆನಂದವನ್ನು ಅನುಭವಿಸಿ ಹಿತಕರವಾದ ಸಾಧನಗಳ ಉಪಯೋಗವನ್ನು ಪಡೆದು, ದೇವರ ದಯೆಯಿಂದ ಅವುಗಳೆಲ್ಲ ಅಷ್ಟೊಂದು ಯಶಸ್ವಿಯಾಗಿರುವುದರಿಂದ ಅವುಗಳಲ್ಲಿ ಕೆಲವೊಂದು ಸಂಗತಿಗಳು ತಮ್ಮ ಆಚರಣೆಗೆ ಯೋಗ್ಯವಾದುವೆಂದು ನನ್ನ ವಂಶಜರು ಬಗೆದು ಅವುಗಳನ್ನು ತಿಳಿದುಕೊಳ್ಳಲು, ಅನುಕರಿಸಲು, ಇಚ್ಛಿಸಬಹುದು;

ಆ ಅತ್ಯಾನಂದದ ಕುರಿತು ನಾನು ಆಲೋಚಿಸುವಾಗ ಒಂದು ವೇಳೆ ನನ್ನ ಇಚ್ಛೆಗೆ ಬಿಟ್ಟುಕೊಟ್ಟುದಾದರೆ ಇನ್ನೊಮ್ಮೆ ನನಗೆ ಆದಿಯಿಂದ ಅದೇ ಮೊದಲಿನ ಜೀವನವನ್ನು ಬಾಳಲು ಯಾವ ಅಭ್ಯಂತರವೂ ಇಲ್ಲವೆಂದು ಹೇಳುತ್ತೇನೆ. ಗ್ರಂಥಕರ್ತರಿಗೆ ತಮ್ಮ ಪುಸ್ತಕದ ಎರಡನೆಯ ಆವೃತ್ತಿಯಲ್ಲಿ ಮೊದಲನೆಯದರಲ್ಲಿನ ಕೆಲವೊಂದು ಲೋಪ-ದೋಷಗಳನ್ನು ಸರಿಪಡಿಸುವ

ಸೌಲಭ್ಯವಿರುವಂತೆ ನನಗೂ ಜೀವನದಲ್ಲಿರಲಿ. ಲೋಪ–ದೋಷಗಳನ್ನು ಸರಿಪಡಿಸುವುದಲ್ಲದೆ ನಾನು ಅದರಲ್ಲಿನ ಕೆಲವೊಂದು ದುಷ್ಟ ಅಪಘಾತಗಳ ಮತ್ತು ಘಟನೆಗಳ ಬದಲಿಗೆ ಹೆಚ್ಚು ಇಷ್ಟವಾದವುಗಳನ್ನು ಸೇರಿಸಬಹುದು. ಒಂದು ಪಕ್ಷಕ್ಕೆ ಈ ಸೌಲಭ್ಯವನ್ನು ನಿರಾಕರಿಸಿದರೂ ನಾನು ಆ ನೀಡಿಕೆಯನ್ನು ಮಾತ್ರ ಸ್ವೀಕರಿಸುವೆನು. ಅಂಥ ಪುನರಾವರ್ತನೆಯು ಅಸಾಧ್ಯವಾಗಿರುವುದರಿಂದ, ಇನ್ನೊಮ್ಮೆ ಒಬ್ಬನು ತನ್ನ ಜೀವನವನ್ನು ಬಾಳುವುದಕ್ಕೆ ತೀರ ಸರಿಸಮಾನವಾದುದೆಂದರೆ ಆ ಜೀವನವನ್ನು ಸ್ಮರಿಸಿಕೊಳ್ಳುವುದೆಂದು ಅನಿಸುತ್ತದೆ. ಅಂತೇ ಆ ಸ್ಮರಣೆಯನ್ನು ಆದಷ್ಟು ಶಾಶ್ವತವಾಗಿಡುವುದೆಂದರೆ ಅದನ್ನು ಬರೆದಿಡುವುದು.

ಈ ಮೂಲಕ ನಾನು ಕೂಡಾ ತಮ್ಮನ್ನೂ ಹಾಗೂ ತಮ್ಮ ಹಿಂದಿನ ಕೃತ್ಯಗಳನ್ನೂ ಕುರಿತು ಮಾತನಾಡುವ ಮುದುಕರ ನೈಸರ್ಗಿಕವಾದ ಪ್ರವೃತ್ತಿಯಲ್ಲಿ ತೊಡಗಿದಂತಾಗುವುದು. ಆದರೆ ಬೇರೆಯವರಿಗೆ ಬೇಸರ ಹುಟ್ಟುವಂತೆ ನಾನು ಅದಕ್ಕೆ ತೊಡಗುವುದಿಲ್ಲ. ಯಾಕಂದರೆ ಅವರು ವಯಸ್ಸಿನ ಕಾರಣದಿಂದ ನನ್ನತ್ತ ಕಿವಿಗೊಡುವ ಕೃಪೆಮಾಡಿ ನನಗೆ ಋಣಿಯಾಗಿರಬಹುದು. ಅಲ್ಲದೆ ಇದನ್ನು ಯಾರಾದರೂ ಬೇಕಿದ್ದರೆ ಓದಬಹುದು ಸಾಕಾದರೆ ಬಿಡಬಹುದು. ಕೊನೆಯದಾಗಿ (ನನ್ನ ಆ ನಿರಾಕರಣೆಯನ್ನು ಯಾರೂ ನಂಬಲಾರರಾದ್ದರಿಂದ ನಾನು ಅದನ್ನು ಮನಗಂಡು ಒಪ್ಪಬಹುದು), ಬಹುಶಃ ನಾನು ಸಾಕಷ್ಟು ನನ್ನ ಅಭಿಮಾನವನ್ನು ತೃಪ್ತಿಪಡಿಸುವೆನೆನ್ನಬೇಕು. ಹೀಗಿದ್ದರೂ ಕೂಡಾ ನಾನು ಎಂದೂ "ಅಭಿಮಾನವಿಲ್ಲದೆ ನಾನು ಹೇಳುವೆ" ಮೊದಲಾದ ಪೀಠಿಕಾ ಪದಗಳನ್ನು ಕೇಳಲಿಲ್ಲ ಅಥವಾ ನೋಡಲೂ ಇಲ್ಲ. ಆದರೆ ಒಂದು ಬಗೆಯ ಅಭಿಮಾನದ ಛಾಯೆ ಕೂಡಲೆ ಬೆನ್ನು ಹತ್ತಿತು. ತಮ್ಮಲ್ಲಿ ಅದರ ಎಷ್ಟೇ ಅಂಶವಿದ್ದರೂ ಅನೇಕ ಜನರು ಬೇರೆಯವರಲ್ಲಿದ್ದ ಅಭಿಮಾನವನ್ನು ನಿಂದಿಸುತ್ತಾರೆ. ಆದರೆ ಎಲ್ಲೆಲ್ಲಿ ನನಗೆ ಅದರ ಸಹವಾಸವಾಗುತ್ತದೋ ಅಲ್ಲಿ ನಾನು ಅದಕ್ಕೆ ಯೋಗ್ಯವಾದ ಸ್ಥಾನವನ್ನು ಕೊಡುತ್ತೇನೆ. ಸಾರಾಸಾರವಾಗಿ ನಿರ್ಧರಿಸಿದರೆ ಅದು ಕೆಲವೊಮ್ಮೆ ಅದರ ಒಡೆಯನಿಗೆ ಮತ್ತು ತಮ್ಮ ಕಾರ್ಯರಂಗದೊಳಗಿರುವ ಬೇರೆ ಹಲವರಿಗೆ ಫಲದಾಯಕವಾಗಿರುತ್ತದೆ. ಆದ್ದರಿಂದ, ಅನೇಕ ಸಂದರ್ಭಗಳಲ್ಲಿ ಮಾನವನು ತನ್ನ ಮಿಕ್ಕ ಜೀವನದ ಅನುಕೂಲತೆಗಳ ಪೈಕಿ ಅಭಿಮಾನದ ಬಗ್ಗೆಯೂ ಪರಮಾತ್ಮನಿಗೆ ಧನ್ಯವಾದ ಸಲ್ಲಿಸಿದರೆ ಅದೇನು ಸಂಪೂರ್ಣ ತಪ್ಪಾಗದು.

ಈಗ ದೇವರಿಗೆ ವಂದನೆ ಸಲ್ಲಿಸುವುದರ ಕುರಿತು ನಾನು ಹೇಳು ತ್ತೇನೆ. ಆಗಲೆ ತಿಳಿಸಿದ ನನ್ನ ಹಿಂದಿನ ಜೀವನದ ಆನಂದಕ್ಕೆ ಅವನ ಕರುಣೆಯ ಬಗ್ಗೆ ನಾನು ಋಣಿ. ನಾನು ಬಳಸಿದ ಸಾಧನಗಳಲ್ಲಿ ನನ್ನನ್ನು ನಡೆಸಿ ಅವುಗಳಿಗೆ ಜಯವನ್ನು ದೊರಕಿಸಿ ಕೊಟ್ಟಿರುತ್ತಾನೆ. ನಾನು ಪ್ರಮಾಣ ಮೀರಿ ನಂಬಕೂಡದಾಗಿದ್ದರೂ ನನ್ನ ಈ ನಂಬುಗೆ ಸಂತೋಷವನ್ನು ಸತತ ಮುಂದುವರಿಸುವಂತೆ ಅಥವಾ ದುಷ್ಟ ವಿಪತ್ತನ್ನು ದಹಿಸಲು ಸಹಕರಿಸುವ ಹಾಗೆ ಆ ದಯಾಘನನು ಇನ್ನೂ ನನ್ನ ಮೇಲೆ ಕೃಪೆಸೋರುತ್ತಾನೆಂದು ಆಶಿಸಲು ಇಂಬುಗೊಡುವುದು. ಆ ವಿಪರೀತ ಅವಸ್ಥೆಯನ್ನು ನಾನು ಮಿಕ್ಕವರಂತೆ ಅನುಭವಿಸಬಹುದು. ಯಾಕೆಂದರೆ ಅವರಿಗೆ ನನ್ನ ಭಾವೀ ಸಂಪತ್ತಿನ ರೂಪರೇಷೆಗಳು ಗೊತ್ತಿವೆ ಮತ್ತು ಕೇವಲ ಅವನ ಶಕ್ತಿಯಿಂದಷ್ಟೇ ನಮ್ಮ ದುಃಖ ಕಾಲದಲ್ಲಿ ಕೂಡಾ ಅನು ಗ್ರಹಿಸಲಿಕ್ಕೆ ಸಾಧ್ಯವಿದೆ.

ನನ್ನ ಕಕ್ಕಂದಿರಲ್ಲಿ ಒಬ್ಬರು (ಇವರಿಗೆ ಇದೇ ಬಗೆಯಲ್ಲಿ ವಂಶದ ಉಪಕಥೆಗಳನ್ನು ಸಂಗ್ರಹಿಸುವ ಕುತೂಹಲವಿತ್ತು) ಒಮ್ಮೆ ನನ್ನ ಕೈಗೆ ಕೊಟ್ಟ ಟಿಪ್ಪಣಿಯು ನಮ್ಮ ಪೂರ್ವಜರ ಕುರಿತಾದ ಅನೇಕ ವಿಷಯಗಳನ್ನು ನನಗೆ ದೊರಕಿಸಿಕೊಟ್ಟಿತು. ನಮ್ಮ ವಂಶವು ನೋರ್ಥಾಂಪ್ಟನ್‌ಷಯರಿನ ಎಕ್ಟನ್ ಗ್ರಾಮದಲ್ಲಿ ಮುನ್ನೂರು ವರುಷಗಳ ಪರ್ಯಂತ ವಾಸವಾಗಿ ತ್ತೆಂದು ಈ ಟಿಪ್ಪಣಿಗಳಿಂದ ನಾನು ಅರಿತುಕೊಂಡೆನು. ಆದರೆ ಎಷ್ಟು ಹೆಚ್ಚು ಕಾಲಾವಧಿಯವರೆಗೆ ಎಂಬುದು ಮಾತ್ರ ಅವನಿಗೆ ತಿಳಿದಿರಲಿಲ್ಲ (ಬಹುಶಃ ರಾಜ್ಯದ ಆದ್ಯಂತವೆಲ್ಲ ಮಿಕ್ಕವರೆಲ್ಲ ಅಡ್ಡ ಹೆಸರನ್ನು ಸ್ವೀಕರಿಸುವ ಕಾಲಕ್ಕೆ ಇವರೂ ಫ್ರ್ಯಾಂಕ್ಲಿನ್ ಎಂಬ ಹೆಸರನ್ನು ಇಟ್ಟುಕೊಂಡರಷ್ಟೆ; ಅಂದಿನಿಂದ ಎಂದು ಕಾಣುತ್ತದೆ. ಈ ಹೆಸರು ಮೊದಲಿಗೆ ಒಂದು ವರ್ಗದ ಜನರ ಹೆಸರಾ ಗಿತ್ತು.) ಸುಮಾರು ಮೂವತ್ತು ಎಕರೆಯ ವತನದ ಸ್ಥಳದಲ್ಲಿ ಪಂಚಾಳರ ಉದ್ಯೋಗವನ್ನು ಕೂಡ ಮಾಡಿಕೊಂಡು ಬಂದಿದ್ದರು. ಇದು ಅವನ ಕಾಲದ ತನಕ ಆ ವಂಶದಲ್ಲಿ ನಡೆದು ಬಂದಿತ್ತು. ಹಿರಿಯ ಮಗನು ಯಾವಾಗಲೂ ಅದೇ ಉದ್ಯೋಗವನ್ನು ನಡೆಸಿಕೊಂಡು ಬರುತ್ತಿದ್ದನು. ಈ ಬಗೆಯ ಪದ್ಧತಿ ಯನ್ನು ಅವನ ಹಾಗೂ ನನ್ನ ತಂದೆಯವರು ತಮ್ಮ ಹಿರಿಯ ಮಕ್ಕಳಿಗೆ ಅನ್ವಯಿಸಿದ್ದರು. ಎಕ್ಟನಿನಲ್ಲಿಯ ದಾಖಲೆಗಳನ್ನು ನಾನು ಹುಡುಕಾಡಿ ದಾಗ ಕೇವಲ ೧೫೫೫ ರಿಂದ ಅವನ ಜನನ, ಮದುವೆ ಮತ್ತು ದಫನಗಳ ಪುರಾವೆಯು ನನಗೆ ದೊರಕಿತ್ತು. ಆ ಪಾದ್ರಿಯ ಪ್ರದೇಶದಲ್ಲಿ ಅದಕ್ಕೂ

ಮೊದಲಿನ ಯಾವ ಕಾಲದ ದಾಖಲೆಗಳನ್ನೂ ಇಡಲಾಗಲಿಲ್ಲ. ಆ ದಾಖಲೆಯಿಂದ ನಾನು ಐದು ತಲೆಮಾರಿನ ಹಿಂದಿನ ಕಿರಿಯ ಮಗನ ಕಿರಿಯ ಮಗನೆಂದು ಅರಿತುಕೊಂಡೆನು. ನನ್ನ ಅಜ್ಜ ಥೋಮಸರು ೧೫೯೮ ರಲ್ಲಿ ಜನ್ಮವೆತ್ತಿ ಎಕ್ಟನಿನಲ್ಲಿ ವಾಸವಾಗಿದ್ದು ಇನ್ನು ಮುಂದೆ ಉದ್ಯೋಗ ನಡೆಸಿಕೊಂಡು ಹೋಗದಷ್ಟು ತೀರ ಮುದುಕರಾದಾಗ ಜಾನ್ ಎಂಬ ಅವರ ಮಗನ ಸಂಗಡ ವಾಸಿಸುವುದಕ್ಕಾಗಿ ಆಕ್ಸಫರ್ಡನಲ್ಲಿರುವ ಬಾಂಬುರಿಯಲ್ಲಿ ಬಣ್ಣದ ಕೆಲಸ ಮಾಡುವ ಅವನಲ್ಲಿಗೆ ಹೋದರು. ಇವರೊಡನೆ (ಜಾನ್) ನನ್ನ ತಂದೆಯುವರು ಶಿಷ್ಯತನದ ಕಾಲವನ್ನು ಕಳೆದಿದ್ದಾರೆ. ಅಲ್ಲಿ ನನ್ನ ಅಜ್ಜ ದೈವಾಧೀನನಾಗಿ ಹೂಳಲ್ಪಟ್ಟಿದ್ದಾನೆ. ನಾವು ಅವನ ಗೋರಿಗಲ್ಲನ್ನು ೧೭೫೮ ರಲ್ಲಿ ನೋಡಿದ್ದೇವೆ. ಅವನ ಹಿರಿಯ ಮಗ ಥೋಮಸ್ ಎಕ್ಟನಿನ ಮನೆಯಲ್ಲಿ ವಾಸವಾಗಿದ್ದನು. ಅಂತೆಯೇ ಹೊಲಗಳ ಜೊತೆಗೆ ಅದನ್ನು ತನ್ನಒಬ್ಬಳೇ ಮಗಳಿಗೆ ಬಿಟ್ಟುಕೊಟ್ಟು ಹೋದನು. ಅವಳು ಅದನ್ನು ವೆಲ್ಲಿಂಗಬರೋದ ತನ್ನ ಗಂಡ ಫಿಷರ್ ಎಂಬವನ ಕೂಡ ಈಗ ಅಲ್ಲಿಯ ವತನದ ಜಮೀನಿನ ಒಡೆಯನಾಗಿರುವ ಮಿ| ಐಸ್ಟೆಡ್‌ನಿಗೆ ಮಾರಿದಳು· ನನ್ನ ಅಜ್ಜನಿಗೆ ದೊಡ್ಡವರಾದ ನಾಲ್ಕು ಜನ ಮಗಂದಿರು ಇದ್ದರು: ಥೋಮಸ್, ಜಾನ್, ಬೆಂಜಮಿನ್ ಮತ್ತು ಜೊಸೈಯ. ಇಷ್ಟೊಂದು ಕಾಲದ ನಂತರ ಕೂಡ ನಾನು ನನ್ನ ಕಾಗದ-ಪತ್ರಗಳ ಮುಖಾಂತರ ಅವರ ಬಗ್ಗೆ ನನಗೆ ತಿಳಿದಿರುವ ವೃತ್ತಾಂತವನ್ನು ನಿನಗೆ ಒದಗಿಸುವೆನು. ಅಂತೇ ಇವುಗಳು ನನ್ನ ಅನುಪಸ್ಥಿತಿಯಲ್ಲಿ ಒಂದುವೇಳೆ ಕಳೆದು ಹೋಗದಿದ್ದರೆ ನೀನು ಅವುಗಳಲ್ಲಿ ಇನ್ನೂ ಹೆಚ್ಚಿನ ಅನೇಕ ಸಂಗತಿಗಳನ್ನು ದೊರಕಿಸುವಿ.

ನನ್ನ ತಂದೆಯು ಕೈ ಕೆಳಗೆ ಥೋಮಸನು ಪಂಚಾಳನ ಉದ್ಯೋಗವನ್ನು ಅವಲಂಬಿಸಿಕೊಂಡು ಬೆಳೆದನು. ಆದರೆ ಅವನು ಬುದ್ಧಿವಂತನಿದ್ದ ಮೂಲಕ (ನನ್ನಎಲ್ಲ ಸೋದರರ ಹಾಗೆ). ಒಬ್ಬ ಶ್ರೀಮಂತ ಪಾಮರ್‌ನಿಂದ ಕಲಿಯುವುದಕ್ಕೇ ಪ್ರೋತ್ಸಾಹ ಪಡೆದನು. ಪಾಮರನು ಆಗ ಆ ಪ್ರದೇಶದಲ್ಲಿನ ಪ್ರಮುಖ ಕುಲೀನನಾಗಿದ್ದನು. ಕೋರ್ಟು ಕಚೇರಿಗಳ ಕಾಗದ ಪತ್ರಗಳನ್ನು ಬರೆಯುವ ಕೆಲಸದಲ್ಲಿ (ದೇಶಪಾಂಡೆ) ಅವನು ನುರಿತವನಾಗಿದ್ದು ಆ ಜಿಲ್ಲೆಯಲ್ಲಿ ಒಬ್ಬ ಪ್ರತಿಷ್ಠಿತ ವ್ಯಕ್ತಿಯೆನಿಸಿದ್ದನು. ಅಂತೇ ಜಿಲ್ಲೆಯ ಅಥವಾ ನೋರ್ಥ್‌ಹ್ಯಾಂಪ್ಟನ್‌ಷಯರ್ ಪೇಟೆಯ ಮತ್ತು ಅವನ ಸ್ವಗ್ರಾಮದ ಅನೇಕ ಸಂಗತಿಗಳು ಅವನಿಗೆ ಸಂಬಂಧಿಸಿದ್ದವು. ಅಲ್ಲದೆ

ಅವನಿಗೆ ಹೆಚ್ಚಿನ ಮರ್ಯಾದೆಯಿದ್ದಿತು ಮತ್ತು ಆಗಿನ ಲಾರ್ಡ್ ಹಾಲಿಫಾಕ್ಸ ನಿಂದ ಆಶ್ರಯಹೊಂದಿದ್ದನು. ಹಳೆಯಲೆಕ್ಕದ ಪದ್ಧತಿಯಂತೆ ಅವನು ೯ನೇ ಜನವರಿ ೧೭೦೨ ರಲ್ಲಿ ಅಂದರೆ–ನಾನು ಹುಟ್ಟುವುದಕ್ಕಿಂತ ನಾಲ್ಕು ದಿವಸ ಗಳ ಮೊದಲು ತೀರಿಕೊಂಡನು. ಅವನ ಜೀವನ ಹಾಗೂ ಸ್ವಭಾವವನ್ನು ಕುರಿತು ನಾವು ಕೆಲವು ಮುದುಕರ ಕಡೆಯಿಂದ ಎಕ್ಟನಿನಲ್ಲಿ ಪಡೆದ ವೃತ್ತಾಂತವು ನನ್ನ ಜೀವನಕ್ಕೆ, ನಿನಗೆ ಗೊತ್ತಿರುವ ಪ್ರಕಾರ— ಹೋಲು ವುದರಿಂದ ನಿನಗೆ ಅದೊಂದು ಅದ್ಭುತದಂತೆ ಕಂಡಿದ್ದು ನನ್ನ ಜ್ಞಾಪಕ ದಲ್ಲಿದೆ. "ಅವರು ಅದೇ ದಿವಸ ಸತ್ತು ಹೋಗಿದ್ದರೆ ಅವರು ಪುನರ್ಜನ್ಮ ಪಡೆದರೆಂದು ತಿಳಿಯಬಹುದಾಗಿತ್ತು." ಎಂದು ನೀನು ಹೇಳಿದ್ದೆ.

ಜಾನನು ಬಣ್ಣಗಾರನಾಗಿ ಬೆಳೆದನು. ಉಣ್ಣೆಯ ಬಣ್ಣಗಾರನೆಂದು ತೋರುತ್ತದೆ. ಬೆಂಜಮಿನನು ಸಿಲ್ಕ್‌ನ ಬಣ್ಣಗಾರನಾಗಿ ಬೆಳೆದು, ಕಲಿಯುವ ಕಾಲವನ್ನು ಲಂಡನಿನಲ್ಲಿ ಕಳೆದನು. ಅವನು ಬುದ್ಧಿವಂತ ಮನುಷ್ಯನಾಗಿದ್ದನು. ಅವನನ್ನು ನಾನು ಚೆನ್ನಾಗಿ ಬಲ್ಲೆ. ಯಾಕಂದರೆ ನಾನು ಚಿಕ್ಕವನಾಗಿದ್ದಾಗ ಬೋಸ್ಟನಿನಲ್ಲಿರುವ ನನ್ನ ತಂದೆಯವರಲ್ಲಿಗೆ ಬಂದು ಕೆಲವು ವರುಷಗಳ ತನಕ ನಮ್ಮ ಮನೆಯಲ್ಲೆ ನೆಲಸಿದ್ದನು. ಅವನು ಬಹಳ ಕಾಲ ಬದುಕಿದ್ದನು. ಅವನ ಮೊಮ್ಮಗ ಸಾಮ್ಯುಯಲ್ ಫ್ರ್ಯಾಂಕ್ಲಿ ನನು ಈಗ ಬೋಸ್ಟನಿನಲ್ಲಿ ವಾಸಿಸುತ್ತಿದ್ದಾನೆ. ತನ್ನ ಹಿಂದೆ ಅವನು ತನ್ನ ಕಾವ್ಯದ ಎರಡು ಕ್ವಾರ್ಟೋ ಗ್ರಂಥಗಳ ಹಸ್ತಪ್ರತಿಯನ್ನು ಬಿಟ್ಟಿದ್ದಾನೆ. ಅದರಲ್ಲಿ ಅವನ ಗೆಳೆಯರಿಗೆ ಮತ್ತು ಬಂಧುಗಳಿಗೆ ನಿವೇದಿಸಲ್ಪಟ್ಟ ಸಾಂದ ರ್ಭಿಕ ಚಿಕ್ಕ ಚಿಕ್ಕ ಪದ್ಯಗಳಿವೆ. ಅವುಗಳಲ್ಲಿ ಈ ಕೆಳಗೆ ಕೊಟ್ಟಿರುವುದು ನನಗೆ ಕಳುಹಿಸಲಾದ ಒಂದು ಮಾದರಿಯಾಗಿರುತ್ತದೆ. ಅವನು ತನ್ನದೇ ಆದ ಒಂದು ಲಘು–ಲಿಪಿಯನ್ನು ನಿರ್ಮಿಸಿದ್ದನು. ಅದನ್ನು ನನಗೆ ಕಲಿಸಿ ದ್ದನು. ಆದರೆ ಅದನ್ನು ಎಂದೂ ಉಪಯೋಗಿಸುತ್ತಿರಲಿಲ್ಲ. ನಾನು ಈಗ ಅದನ್ನು ಮರೆತು ಬಿಟ್ಟಿದ್ದೇನೆ. ಅವನಿಗೂ ನನ್ನ ತಂದೆಗೂ ಪರಸ್ಪರ ಒಂದು ವಿಶಿಷ್ಟ ಪ್ರೇಮವಿದ್ದ ಕಾರಣದಿಂದ ಈ ಕಾಕನ ಹೆಸರನ್ನೆ ನನಗೂ ಇಡಲಾ ಯಿತು. ಅವನು ಭಾರೀ ಧಾರ್ಮಿಕ ಪ್ರವೃತ್ತಿಯವನು. ಉತ್ತಮ ಧರ್ಮೋ ಪದೇಶಕರ ಪ್ರವಚನಗಳ ಅದ್ವಿತೀಯ ಶ್ರೋತೃವಾಗಿದ್ದು ಅವುಗಳನ್ನು ಅವನು ತನ್ನ ಲಘು–ಲಿಪಿಯಲ್ಲಿ ಬರೆದುಕೊಳ್ಳುತ್ತಿದ್ದನು ಮತ್ತು ಅವನ ಹತ್ತಿರ ಅವುಗಳ ಹಲವಾರು ಗ್ರಂಥಗಳಿದ್ದವು. ಅವನೊಬ್ಬ ಹೆಚ್ಚಿನ ರಾಜ ಕಾರಣಿಯಾಗಿದ್ದನು ; ಭಾರೀ ಹೆಚ್ಚಿನವನು, ಬಹುಶಃ ಅವನ ನೆಲೆಗೆ ಮೀರಿ

ದವನೆಂದರೂ ಸರಿಯೆ. ಲಂಡನ್ನಿನಲ್ಲಿ ಇತ್ತೀಚೆಗೆ ಅವನು ಮಾಡಿದ, ೧೬೪೧ ರಿಂದ ೧೭೧೭ ರ ವರೆಗಿನ ಸಾರ್ವಜನಿಕ ಕಾರ್ಯಗಳಿಗೆ ಸಂಬಂಧ ಪಟ್ಟ ಎಲ್ಲ ಪ್ರಮುಖ ಹಸ್ತಪುಸ್ತಕಗಳ ಸಂಗ್ರಹವು ನನಗೆ ಸಿಕ್ಕಿತ್ತು. ಸಂಖ್ಯಾನುಕ್ರಮದಿಂದ ನೋಡಲಾಗಿ ಅನೇಕ ಪುಸ್ತಕಗಳು ಕಳೆದು ಹೋದಂತೆ ಕಾಣುತ್ತಿತ್ತು. ಆದರೆ ಇನ್ನೂ ಫೋಲಿಯೋದಲ್ಲಿ ಎಂಟು ಗ್ರಂಥಗಳು ಮತ್ತು ಕ್ವಾರ್ಟೋ ಹಾಗೂ ಅಷ್ಟಪತ್ರಾಕಾರದಲ್ಲಿ ಇಪ್ಪತ್ತು ನಾಲ್ಕು ಗ್ರಂಥಗಳು ಇವೆ. ಹಳೆಯ ಪುಸ್ತಕಗಳ ವ್ಯಾಪಾರಿಯೊಬ್ಬನು, ನಾನು ಅವನಿಂದ ಕೆಲವು ಸಲ ಪುಸ್ತಕಗಳನ್ನು ಕೊಂಡುದರಿಂದ ನನ್ನ ಪರಿ ಚಯವಿದ್ದ ಕಾರಣ—ಅವುಗಳನ್ನು ನನಗಾಗಿ ದೊರಕಿದೊಡನೆ ವಿಕ್ರಯಿಸಿ ದನು. ಐವತ್ತು ವರುಷಗಳಿಗಿಂತ ಮುಂಚೆ ಅಮೆರಿಕಾಕ್ಕೆ ಹೋಗುವ ಕಾಲದಲ್ಲಿ ನನ್ನ ಕಾಕನು ಅವುಗಳನ್ನು ಇಲ್ಲಿ ಬಿಟ್ಟು ಹೋದಂತೆ ತೋರು ತ್ತದೆ. ಅಂಚಿನಲ್ಲಿ ಅವನು ಬರೆದ ಹಲವಾರು ಟಿಪ್ಪಣಿಗಳಿವೆ.

ರಿಫರ್ಮೇಷನ್‌ಗೆ ನಮ್ಮ ಅಜ್ಞಾತ ವಂಶವು ಮೊದಲೇ ಸೇರಿ ಮೇರಿ ರಾಣಿಯ ಆಳ್ವಿಕೆಯಲ್ಲೂ ಪ್ರೊಟೆಸ್ಟಂಟ್ ಆಗಿ ಸಾಗಿತ್ತು. ಈ ಕಾಲಕ್ಕೆ ಅವರು ಕೆಲವೊಮ್ಮೆ ತಮ್ಮ ಬಡತನವನ್ನು ನೀಗಿಸುವ ಹುಮ್ಮಸದಲ್ಲಿ ಗಂಡಾಂತರಕ್ಕೊಳಗಾಗುತ್ತಿದ್ದರು. ಅವರ ಸಂಗಡ ಒಂದು ಇಂಗ್ಲೀಷ್ ಬೈಬಲು ಇತ್ತು. ಅದನ್ನು ಸುರಕ್ಷಿತವಾಗಿ ಹಾಗೂ ಗುಪ್ತವಾಗಿಡುವ ಕಾರಣದಿಂದ ಒಂದು ಮಡಿಕೆಯ-ಕಾಲ್ಮಣೆ (Joint-stool) ಮುಚ್ಚಳದೊಳಗೆ ಅದನ್ನು ಬಿಡಿಸಿ ದಾರಗಳಿಂದ ಕಟ್ಟಲಾಗಿತ್ತು. ನನ್ನ ಅಜ್ಜನ ಅಜ್ಜನ ಮುತ್ತಜ್ಜನು ತನ್ನ ಮನೆತನದವರಿಗೆ ಅದನ್ನು ಓದಿ ಹೇಳುತ್ತಿದ್ದನು. ಅವನು ತನ್ನ ಮೊಣಕಾಲುಗಳ ಮೇಲೆ ಆ ಕಾಲ್ಮಣೆ ಯನ್ನು ಬಿಡಿಸಿಟ್ಟುಕೊಂಡು ದಾರಗಳ ಕೆಳಗಡೆಯಲ್ಲಿರುವ ಹಾಳೆ ಗಳನ್ನು ಮಗುಚಿ ಓದುತ್ತಿದ್ದನು. ಮಕ್ಕಳಲ್ಲಿ ಒಬ್ಬನು ಬಾಗಿಲಲ್ಲಿ ನಿಂತು ಕೊಂಡು ಎಲ್ಲಾದರೂ ಧಾರ್ಮಿಕ ನ್ಯಾಯಾಲಯದ ಅಧಿಕಾರಿಯು (apparitor) ಬರುವುದನ್ನು ಕಂಡರೆ ಅವರಿಗೆ ಸೂಚನೆ ಕೊಡಬೇಕಾಗಿ ತ್ತು. ಅಂಥ ಹೊತ್ತಿನಲ್ಲಿ ಕೂಡಲೆ ಆ ಕಾಲ್ಮಣೆಯನ್ನು ಪುನಃ ಮೊದಲಿನಂತೆ ಅದರ ಕಾಲುಗಳ ಮೇಲೆ ನಿಲ್ಲಿಸಲಾಗುತ್ತಿತ್ತು. ಯಥಾಪ್ರಕಾರ ಅದರ ಒಳ ಗಡೆಯಲ್ಲಿ ಬೈಬಲು ಕಣ್ಮರೆಯಾಗುತ್ತಿತ್ತು. ಈ ಉಪಕಥೆಯನ್ನು ನಾನು ನನ್ನ ಕಾಕ ಬೆಂಜಮಿನನಿಂದ ತಿಳಿದುಕೊಂಡಿದ್ದೇನೆ. ಎರಡನೆಯ ಚಾರ್ಲ್ಸ್‌ನ ಆಳ್ವಿಕೆಯ ಕೊನೆಯ ಹೊತ್ತಿನವರೆಗೆ ವಂಶಸ್ಥರೆಲ್ಲ ಇಂಗ್ಲೆಂಡಿನ

ಚರ್ಚಿಗೆ ಸೇರಿದ್ದರು. ಆ ಕಾಲದಲ್ಲಿ ಕೆಲವೊಂದು ಮಂತ್ರಿಗಳು ನೋರ್ಥಾಂಪ್ಟನ್‌ಷಯರಿನಲ್ಲಿ ಗುಪ್ತಸಭೆಗಳನ್ನು ಕೂಡಿಸಿದ್ದಕ್ಕಾಗಿ ಹೊರಗೆ ಹಾಕಲ್ಪಟ್ಟರು. ಬೆಂಜಮಿನ್ ಮತ್ತು ಜೊಸ್ಸೈಯರು ಅದನ್ನು ಅನುಸರಿಸಿ ತಮ್ಮ ಅಖಂಡ ಜೀವನವನ್ನು ಹಾಗೆಯೇ ಮುಂದುವರಿಸಿದರು : ವಂಶದ ಮಿಕ್ಕವರೆಲ್ಲ ಎಪಿಸ್ಕೋಪಲ್ ಚರ್ಚಿಗೆ ಸೇರಿಕೊಂಡರು.

ತಾರುಣ್ಯದಲ್ಲೇ ನನ್ನ ತಂದೆ ಜೊಸ್ಸೈಯರು ಮದುವೆಯಾಗಿ ತನ್ನ ಹೆಂಡತಿ ಮತ್ತು ಮೂವರು ಮಕ್ಕಳೊಂದಿಗೆ ಸುಮಾರು ೧೬೮೨ ರಲ್ಲಿ ನ್ಯೂ ಇಂಗ್ಲೆಂಡಿಗೆ ಹೋದರು. ಕಾಯ್ದೆ ಪ್ರಕಾರ ಗುಪ್ತಸಭೆಯವರು ಬಹಿಷ್ಕೃತರಾದುದರಿಂದಲೂ ಆಗಾಗ ಗೊಂದಲದಲ್ಲಿ ಬೀಳುತ್ತಿದ್ದುದರಿಂದಲೂ ತಂದೆಯವರು ಪರಿಚಯದ ಕೆಲವು ಪ್ರತಿಷ್ಠಿತ ವ್ಯಕ್ತಿಗಳನ್ನು ಆ ದೇಶಕ್ಕೆ ತೆರಳುವಂತೆ ಮನವೊಲಿಸಿದರು. ಅಂತೇ ಅವರನ್ನು ಅಲ್ಲಿಗೆ ಸಾಗಿಸುವುದರಲ್ಲಿ ಅವರು ಜಯಶೀಲರಾದರು. ಅಲ್ಲಿ ಅವರೆಲ್ಲ ತಮ್ಮ ಧರ್ಮಪದ್ಧತಿಯನ್ನು ಸ್ವೇಚ್ಛೆಯಿಂದ ಆನಂದಿಸುವ ಆಶಯವಿಟ್ಟಿದ್ದರು. ಮೊದಲಿನ ಅದೇ ಹೆಂಡತಿಯಿಂದ ಅಲ್ಲಿ ಅವರಿಗೆ ಇನ್ನೂ ನಾಲ್ಕು ಮಕ್ಕಳು ಹುಟ್ಟಿದರು ಮತ್ತು ಎರಡನೆಯ ಹೆಂಡತಿಯಿಂದ ಹತ್ತು ಮಂದಿಯಾದರು. ಒಟ್ಟಿನಲ್ಲಿ ಹೀಗೆ ಹದಿನೇಳು ಮಕ್ಕಳಾದುವು. ಅವರಲ್ಲಿ ಏಕಕಾಲಕ್ಕೆ ಅವರ ಟೇಬಲಿನ ಮುಂದೆ ಹದಿಮೂರು ಹುಡುಗರು ಕೂಡುತ್ತಿದ್ದದ್ದು ನನಗೆ ನೆನಪುಂಟು. ಇವರೆಲ್ಲ ಬೆಳೆದ ಗಂಡು–ಹೆಣ್ಣುಗಳಾಗಿ ಮದುವೆಯಾದುದೂ ಆಯಿತು. ಇತ್ತ ನಾನು ಕಿರಿಯ ಮಗ, ಹಾಗೂ ನನಗಿಂತ ಕಿರಿಯ ಮಕ್ಕಳು ಇಬ್ಬರಿದ್ದರು. ನಾನು ನ್ಯೂ ಇಂಗ್ಲೆಂಡಿನ ಬೋಸ್ಟನಿನಲ್ಲಿ ಹುಟ್ಟಿದೆನು. ಎರಡನೆಯ ಹೆಂಡತಿಯಾದ ನನ್ನ ತಾಯಿಯ ಹೆಸರು ಅಬಿಯಾಫೋಲ್ಗರ್. ನ್ಯೂ ಇಂಗ್ಲೆಂಡಿನಲ್ಲಿ ಮೊದಲಿಗೆ ನೆಲೆನಿಂತವರಲ್ಲಿ ಒಬ್ಬನಾದ ಪೀಟರ್ ಫೋಲ್ಗರ್‌ನ ಮಗಳು. ಕಾಟನ್ ಮಾಥರ್ ಎಂಬವನು ಆ ದೇಶದ ತನ್ನ 'ಮಗ್ನಾಲಿಯಾ ಕ್ರಿಸ್ಟಿ ಅಮೆರಿಕಾನಾ' ಎಂಬ ಹೆಸರಿನ ಚರ್ಚು ಇತಿಹಾಸದಲ್ಲಿ–ನಾನು ಸರಿಯಾಗಿ ಶಬ್ದಗಳನ್ನು ನೆನಪಿಟ್ಟುಕೊಂಡಿದ್ದರೆ—"ಒಬ್ಬ ಇಂಗ್ಲೀಷ ಪಂಡಿತ, ದೈವೀಪುರುಷ "ಎಂದು ಬರೆದು ಇವನಿಗೆ ಗೌರವ ತೋರಿಸಿದ್ದಾನೆ. ಅವನು ವಿವಿಧ ಸಾಂದರ್ಭಿಕ ಚಿಕ್ಕ-ಪುಟ್ಟ ಕವನಗಳನ್ನು ಬರೆದಿದ್ದನೆಂದು ನಾನು ಕೇಳಿದ್ದೇನೆ. ಆದರೆ ಅವುಗಳಲ್ಲಿ ಕೇವಲ ಒಂದು ಮಾತ್ರ ಮುದ್ರಣಗೊಂಡಿತ್ತು. ಅದನ್ನು ನಾನು ಈಗ ಅನೇಕ ವರುಷಗಳ ನಂತರ ಕಂಡೆನು. ಅದನ್ನು ೧೬೭೫ ರಲ್ಲಿ ಆ ಕಾಲದ ಹಾಗೂ ಜನರ ಮನೆಮಾತಿನ ಹಾಡಿನ ರೂಪದಲ್ಲಿ ಬರೆಯ

ಲಾಗಿದ್ದು ಅಂದು ಸರಕಾರದಲ್ಲಿ ಇದ್ದವರಿಗೆ ನಿವೇದಿಸಲಾಗಿತ್ತು. ಚಿತ್ತ ಸ್ವಾತಂತ್ರ್ಯದ ಪರವಾಗಿ ಮತ್ತು ಬೆಪ್ಟಿಸ್ಟ್ಸ್, ಕ್ವೇಕರ್ಸ್ (quakers), ಹಾಗೂ ಹಿಂಸೆಗೀಡಾದ ಮಿಕ್ಕ ಜನಾಂಗದವರ ವತಿಯಲ್ಲಿ, ಇತ್ತು. ಇಂಡಿಯನ್ ಯುದ್ಧಗಳ ಆರೋಪಣೆಯನ್ನು ಕುರಿತು ಮತ್ತು ದೇಶದ ಮೇಲೆ ದಾಳಿ ಮಾಡಿದ ಮಿಕ್ಕ ದುಃಖದಾರಿದ್ರ್ಯಗಳ ಬಗ್ಗೆ, ಆ ಹಿಂಸೆಗೆ—ದೇವರ ಅಂಥ ಅನೇಕ ತೀರ್ಪುಗಳಂತೆ ಅಷ್ಟೊಂದು ಕಠೋರವಾಗಿ ದಂಡಿಸುವ ಭಯಂಕರ ಅಪರಾಧದಂತೆ ಮತ್ತು ನಿರ್ದಯವಾದ ಆ ಕಾಯ್ದೆಗಳನ್ನು ರದ್ದುಪಡಿಸಲು ಅರಿಕೆ ಮಾಡಿಕೊಳ್ಳುವ ಹಾಗೆ ಅದನ್ನು ಬರೆಯಲಾಗಿತ್ತು. ಅಖಂಡ ಕಬ್ಬವನ್ನು ಶುದ್ಧವಾದ ಸರಳತನದಿಂದ ಮತ್ತು ವೀರ ಸ್ವಾತಂತ್ರ್ಯ ದಿಂದ ಬರೆದ ಹಾಗೆ ನನಗೆನಿಸಿತು. ಮೊದಲಿನ ಎರಡು ನುಡಿಗಳನ್ನು ನಾನು ಮರೆತಿದ್ದರೂ ಕೊನೆಯ ಆರು ಸಾಲುಗಳು ನನಗೆ ಗೊತ್ತಿವೆ. ಆದರೆ ಅವನ ಆರೋಪಣೆಗಳು ಶುದ್ಧ ಮನಸ್ಸಿನಿಂದ ಬಂದವುಗಳೆಂದು ಮತ್ತು ಆ ಕಾರಣದಿಂದ ಅವನು ಅದರ ಕರ್ತೃವೆಂದು ತಿಳಿಸುವುದು ಅವುಗಳ ಉದ್ದೇಶವಾಗಿತ್ತು.

> "ಯಾಕಂದರೆ—ನಿಂದೆಗಾರನಾಗುವುದನ್ನು (ಅವನು ಹೇಳುವನು)
>   ನನ್ನ ಹೃದಯವು ದೂಷಿಸುವುದು;
> ಈಗ ನಾನಿರುವ ಪೇಟೆ ಶರ್ಬರ್ನ್ ನಿಂದ
>   ನನ್ನ ಹೆಸರನ್ನು ನಾನಿಲ್ಲಿ ಬರೆಯುತಿಹೆನು;
> ಯಾವ ಅಪರಾಧವಿಲ್ಲದೆ ನಿಮ್ಮ ನೈಜ ಮಿತ್ರನು,
>   ಅವನೆ ಪೀಟರ್ ಫೋಲ್ಗಿಯರನೆಂದು."

ನನ್ನ ಹಿರಿಯ ಸೋದರರೆಲ್ಲ ಬೇರೆ ಬೇರೆ ಉದ್ಯೋಗಗಳ ತರಬೇತಿಗೆ ಹಾಕಲ್ಪಟ್ಟಿದ್ದರು. ಎಂಟು ವರುಷದವನಾದಾಗ ನನ್ನನ್ನು ವ್ಯಾಕರಣದ ಶಾಲೆಗೆ ಹಾಕಲಾಯಿತು. ಅವರ ಮಗಂದಿರ ಟೈಥ್ (tithe) ಕರಕ್ಕಾಗಿ ನನ್ನನ್ನು ತಂದೆಯವರು ಚರ್ಚಿನ ಸೇವೆಗಾಗಿ ಮೀಸಲಿಡುವ ಮನಸ್ಸು ಮಾಡಿದ್ದರು. ಓದುವುದಕ್ಕೆ ಕಲಿಯುವ ನನ್ನ ಶೀಘ್ರತೆಯೂ (ಅದು ಬಹು ಬೇಗನೆ ಇರಲೇ ಬೇಕು, ಯಾಕಂದರೆ—ನನಗೆ ಓದಲು ಬಾರದೆ ಇದ್ದುದು ನನಗೆ ನೆನಪಿಲ್ಲ) ಹಾಗೂ ನಾನು ಖಂಡಿತವಾಗಿಯೂ ಒಬ್ಬ ಘನ ವಿದ್ವಾಂಸನಾಗುತ್ತೇನೆನ್ನುವ ಅವರ ಎಲ್ಲಾ ಮಿತ್ರರ ಅಭಿಪ್ರಾಯವೂ ಅವರ ಈ ಉದ್ದೇಶಕ್ಕೆ ಸಹಾಯ ನೀಡಿತು. ನನ್ನ ಕಾಕ ಬೆಂಜಮಿನರು ಕೂಡಾ ಅದನ್ನು ದೃಢಪಡಿಸಿದರು ಮತ್ತು ತಮ್ಮ ಧರ್ಮೋಪದೇಶದ ಶೀಘ್ರ-ಲಿಪಿಯ ಎಲ್ಲ

ಗ್ರಂಥಗಳನ್ನು ನನಗೆ ಕೊಡುವ ಸಿದ್ಧತೆ ಮಾಡಿದರು. ಅವರ ಕರ್ಮವನ್ನು ನಾನು ಕಲಿಯುವುದಾದರೆ ಅದು ನೆರವು ನೀಡುವ ಸಂಗ್ರಹವೆಂದು ತಿಳಿದರು. ಹೇಗಾದರೂ ಆ ವ್ಯಾಕರಣ–ಶಾಲೆಯಲ್ಲಿ ನಾ ನು ಒಂದು ವರುಷದ ಕಾಲಾವಧಿಯೊಳಗೆ ವಿದ್ಯಾಭ್ಯಾಸ ನಡೆಸಿದೆನು. ಹೀಗಿದ್ದು ಆ ಹೊತ್ತಿನಲ್ಲಿ ನಾನು ಆ ವರುಷದ ಮಧ್ಯದಲ್ಲಿ ದರ್ಜೆಗೆ ಸೇರಿದ್ದರೂ ಕ್ರಮೇಣ ಆ ತರಗತಿಯ ಪ್ರಥಮ ಸ್ಥಾನವನ್ನು ಆಕ್ರಮಿಸಿದೆನು. ಅಂದೇ ಮುಂದಿನ ತರಗತಿಗೂ ನಂತರ ವರ್ಗಾಯಿಸಲ್ಪಟ್ಟೆನು. ಯಾಕಂದರೆ ಆ ತರಗತಿಯಿಂದ ಮೂರನೆಯದಕ್ಕೆ ವರುಷದ ಅಂತ್ಯದೊಳಗಾಗಿ ಹೋಗಬೇಕಾಗಿತ್ತು. ಆದರೆ ಆ ಹೊತ್ತಿನಲ್ಲೇ, ಕಾಲೇಜು ವಿದ್ಯಾಭ್ಯಾಸದ ಖರ್ಚಿನ ದೃಷ್ಟಿಯಿಂದ ಹಾಗೂ ಅಷ್ಟೊಂದು ದೊಡ್ಡ ಸಂಸಾರದ ಮೂಲಕ ಅವರಿಗೆ ಅದನ್ನು ಸರಿಯಾಗಿ ಸಹಿಸುವ ಶಕ್ತಿಯಿಲ್ಲದ ಕಾರಣದಿಂದ, ಅಲ್ಲದೆ ಅನೇಕ ವಿದ್ಯಾವಂತರಿಗೆ ಆನಂತರ ದೊರೆಯುವ ಬಹಳ ಬಡಸ್ತಿಕೆಯ ಜೀವನವನ್ನು ಅವಲೋಕಿಸಿ, ನನ್ನ ತಂದೆಯವರು—ಈ ಕಾರಣಗಳನ್ನೆಲ್ಲ ತಮ್ಮ ಮಿತ್ರರಿಗೆಲ್ಲ ಅವರು ನನಗೆ ಕೇಳಿಸುವಂತೆ ಹೇಳಿ—ತಮ್ಮ ಮೊದಲಿನ ನಿರ್ಧಾರವನ್ನು ಬದಲಿಸಿ, ನನ್ನನ್ನು ವ್ಯಾಕರಣ ಶಾಲೆಯಿಂದ ತೆಗೆದರು ; ಆ ಕಾಲಕ್ಕೆ ಖ್ಯಾತನಾಮ ವ್ಯಕ್ತಿಯಾದ ಮಿ| ಜಾರ್ಜ್‌ಬ್ರೌನೆಲ್ ಎಂಬವನು ನಡೆಸುತ್ತಿದ್ದ ಗಣಿತ ಹಾಗೂ ಬರವಣಿಗೆಯ ಶಾಲೆಗೆ ನನ್ನನ್ನು ಕಳುಹಿಸಿದರು. ಸಾಮಾನ್ಯವಾಗಿ ಬ್ರೌನೆಲ್ಲನು ತನ್ನ ಉದ್ಯೋಗದಲ್ಲಿ ತುಂಬ ಯಶಸ್ವಿಯಾಗಿ ಸೌಮ್ಯವಾದ ಉತ್ತೇಜನಪರವಾದ ಪದ್ಧತಿಗಳಿಂದ ಶಿಕ್ಷಣ ಕೊಡುತ್ತಿದ್ದನು. ಅವನ ಕೈಕೆಳಗೆ ನಾನು ಬಹು ಬೇಗನೆ ಸುಂದರ ಬರವಣಿಗೆಯನ್ನು ರೂಢಿಸಿಕೊಂಡೆನು ಆದರೆ ಗಣಿತದಲ್ಲಿ ಪರಾಜಿತನಾಗಿ ನಾನು ಅದರಲ್ಲಿ ಪ್ರಗತಿಯನ್ನು ಸಾಧಿಸಲೇ ಇಲ್ಲ. ಹತ್ತು ವರುಷ ಪ್ರಾಯದವನಾದಾಗ ನನ್ನನ್ನು ತಂದೆಯವರು ತಮ್ಮ ಉದ್ಯೋಗದಲ್ಲಿ ಸಹಕರಿಸಲು ಮನೆಗೆ ಒಯ್ದರು. ಮೇಣದ ಬತ್ತಿ ತಯಾರಿಸುವುದು ಮತ್ತು ಸೋಪು ಮಾಡುವುದು ಅವರ ಉದ್ಯೋಗವಾಗಿತ್ತು. ಈ ಉದ್ಯೋಗದಲ್ಲಿ ಅವರು ಬೆಳೆದವರಲ್ಲ. ಆದರೆ ನ್ಯೂ ಇಂಗ್ಲೆಂಡಿಗೆ ತಲಪಿದೊಡನೆ ಇದನ್ನು ಅವರು ಕೈಕೊಂಡದ್ದು. ಅಂತೇ ಅವರ ಸಂಸಾರವನ್ನು ಬಣ್ಣದ ಕಸಬಿನಿಂದ ಸಾಗಿಸಲಿಕ್ಕೆ ಸಾಧ್ಯವಿಲ್ಲದ್ದರಿಂದ ಮತ್ತು ಅದಕ್ಕೆ ಬೇಡಿಕೆಯೂ ಇಲ್ಲದುದರಿಂದ ಅದನ್ನು ಬಿಡಬೇಕಾಯಿತು. ಯಥಾಪ್ರಕಾರ ನಾನು ಮೇಣದಬತ್ತಿಗಳಿಗೆ ಬತ್ತಿಗಳನ್ನು ಕತ್ತರಿಸುವುದಕ್ಕೆ, ಮೇಣದ ಬತ್ತಿಯ ಅಚ್ಚುಗಳನ್ನು ತುಂಬುವುದಕ್ಕೆ ಮತ್ತು ಅಚ್ಚುಗಳನ್ನು

ಸಿದ್ಧಪಡಿಸಿ ಇಡುವುದಕ್ಕೆ, ಅಂಗಡಿಯಲ್ಲಿ ಸಹಕರಿಸುವುದಕ್ಕೆ, ಕೆಲಸದ ಸಲುವಾಗಿ ಅತ್ತಿತ್ತ ಅಡ್ಡಾಡುವುದಕ್ಕೆ ಇತ್ಯಾದಿ ಕೆಲಸಗಳಿಗೆ ನೇಮಿಸಲ್ಪಟ್ಟೆನು.

ಈ ವ್ಯವಹಾರವು ನನಗೆ ಸೇರಿಕೆಯಾಗಲಿಲ್ಲ. ಸಮುದ್ರದತ್ತ ನನ್ನ ಮನಸ್ಸು ಬಲವಾಗಿ ಒಲಿದಿತ್ತು. ಆದರೆ ನನ್ನ ತಂದೆಯವರು ಅದರ ವಿರುದ್ಧ ತೀರ್ಪುಕೊಟ್ಟರು. ಅಂತೂ ನೀರಿನ ಹತ್ತಿರವೆ ವಾಸಿಸುವ ಕಾರಣದಿಂದ ನಾನು ಹೆಚ್ಚಾಗಿ ಆದರಲ್ಲೆ ಇರುತ್ತಿದ್ದೆ. ಕಾರಣ ಬೇಗನೆ ಚೆನ್ನಾಗಿ ಈಜು ಕಲಿತೆನು ಮತ್ತು ದೋಣಿಗಳನ್ನು ನಡೆಸಲೂ ಕಲಿತುದುದಾಯಿತು. ಅಂತೇ ದೋಣಿಯಲ್ಲಿ ಅಥವಾ ಪೊಂಗಯಿಯಲ್ಲಿ ಮಿಕ್ಕ ಹುಡುಗರ ಸಂಗಡವಿದ್ದಾಗ ಸಾಮಾನ್ಯವಾಗಿ ನಾನೇ ಅದನ್ನು ನಡೆಸುವ ಯಜಮಾನನಾಗುತ್ತಿದ್ದೆ. ಮುಖ್ಯವಾಗಿ ತೊಂದರೆಯ ಪ್ರಸಂಗಗಳಲ್ಲಿ ನಾನೇ ಮುಖಂಡನಾಗುವುದಿತ್ತು. ಅಲ್ಲದೆ ಮಿಕ್ಕ ಸಂದರ್ಭಗಳಲ್ಲಿ ಕೂಡ ನಾನೇ ಹುಡುಗರ ನಾಯಕನಾಗಿರುವ ವಾಡಿಕೆಯಾಗಿತ್ತು. ಕೆಲವೊಮ್ಮೆ ಅವರನ್ನು ಕಷ್ಟಕ್ಕೀಡು ಮಾಡುತ್ತಿದ್ದದ್ದೂ ಉಂಟು. ಅಂಥವುಗಳಲ್ಲಿ ಒಂದು ಉದಾಹರಣೆಯನ್ನು ಕೊಡುತ್ತೇನೆ. ಆಗ ಅದನ್ನು ಯೋಗ್ಯವಾಗಿ ಕಾರ್ಯಗತಗೊಳಿಸಿರದಿದ್ದರೂ ಅದು ಬಾಲ್ಯದಲ್ಲಿನ ಸಾರ್ವಜನಿಕ ಯೋಜನೆಯ ಶಕ್ತಿಯನ್ನು ವ್ಯಕ್ತಪಡಿಸುವುದರಿಂದ ಅದನ್ನು ಉದಾಹರಿಸಬೇಕಾಗಿದೆ.

ಗಿರಣಿ-ಬಾವಿ (mill-pond) ಯ ಭಾಗವಾದ ಒಂದು ಉಪ್ಪಿನ-ಹುದುಳು ಇತ್ತು. ಅದರ ಬದಿಯ ನೀರಿಗಿಂತ ಎತ್ತರದಲ್ಲಿ ನಿಂತುಕೊಂಡು ನಾವು ಮಿನ್ನೊ (ಸಣ್ಣ ಬ್ರಿಟಿಷ್ ಮೀನು)ಗಳನ್ನು ಹಿಡಿಯುತ್ತಿದ್ದೆವು. ಅತ್ತಿತ್ತ ಬಹಳ ತುಳಿದಾಡಿ ನಾವು ಅದನ್ನು ಕೇವಲ ಬಯಲಿನಂತೆ ಮಾಡಿದ್ದೆವು. ಅಲ್ಲೊಂದು ಬಂದರದ ಕಟ್ಟೆಯನ್ನು ನಮಗೆಲ್ಲ ನಿಲ್ಲಲಿಕ್ಕೆ ಯೋಗ್ಯವಾಗುವಂತೆ ಕಟ್ಟಬೇಕೆಂಬುದು ನನ್ನ ಮತವಾಗಿತ್ತು. ಅಂತೇ ನನ್ನ ಗೆಳೆಯರಿಗೆ ಕಲ್ಲಿನ ಒಂದು ದೊಡ್ಡ ರಾಶಿಯನ್ನು ತೋರಿಸಿದೆನು. ಹುದುಳಿನ ಹತ್ತಿರದ ಒಂದು ಹೊಸ ಮನೆಗಾಗಿ ಅದನ್ನು ವಿಾಸಲಿಡಲಾಗಿತ್ತು. ನನ್ನ ಕಾರ್ಯಕ್ಕೆ ಅದು ಸರಿಯಾಗಿ ಉಪಯೋಗಬೀಳುವಂತಿತ್ತು. ಅದರಂತೆ, ಕೆಲಸದವರು ಹೋದಮೇಲೆ ಸಂಜೆಯಲ್ಲಿ ನನ್ನ ಆಟದ ಕೆಲವೊಂದು ಗೆಳೆಯರನ್ನು ಕೂಡಿ ಹಾಕಿದೆನು. ಅವರೊಡನೆ ಕೂಡಿಕೊಂಡು ಇರುವೆಗಳಂತೆ ಎಡೆಬಿಡದೆ ಕೆಲಸ ಮಾಡುತ್ತ ಒಮ್ಮೊಮ್ಮೆ ಒಂದು ಕಲ್ಲನ್ನು ಇಬ್ಬರು-ಮೂವರು ಕೂಡಾ ಎತ್ತಿಕೊಂಡು ಅವುಗಳನ್ನೆಲ್ಲ ಅಲ್ಲಿಂದ ತಂದು ನಮ್ಮ ಚಿಕ್ಕ ಕಟ್ಟೆಯನ್ನು ಕಟ್ಟಿದೆವು. ಮರುದಿನ ಬೆಳಿಗ್ಗೆ ಕೆಲಸಗಾರರು, ಕಲ್ಲುಗಳು

ಕಾಣೆಯಾಗಿರುವುದನ್ನು ನೋಡಿ ಅಚ್ಚರಿಪಟ್ಟರು. ಅವುಗಳೆಲ್ಲ ನಮ್ಮ ಕಟ್ಟೆಯಲ್ಲಿ ಕಾಣಿಸಿಕೊಂಡವು. ಅವುಗಳನ್ನು ಸಾಗಿಸಿದವರ ಬಗ್ಗೆ ತಪಾಸಣೆ ನಡೆಯಿತು. ನಾವು ಸಿಕ್ಕಿದ್ದಾಯಿತು. ಅಂತೇ ದೂರು ಕೂಡಾ ಹೋಯಿತು. ನಮ್ಮಲ್ಲಿ ಕೆಲವರು ತಂದೆಯಂದಿರ ಮೂಲಕ ಅಪರಾಧವನ್ನು ತಿದ್ದುಪಡಿ ಮಾಡಿಕೊಂಡರು. ಕಾರ್ಯದ ಉಪಯುಕ್ತತೆಯನ್ನು ಕುರಿತು ನಾನು ವಾದ ಹೂಡಿದರೂ ಕೂಡಾ ಪ್ರಾಮಾಣಿಕವಾಗಿರದ ಕಾರ್ಯವು ಯಾವುದೂ ಉಪಯೋಗವಿಲ್ಲದ್ದೆಂದು ನನ್ನ ಮನವರಿಕೆಯಾಯಿತು.

ನೀವು ಅವರ ವ್ಯಕ್ತಿ ಮತ್ತು ಸ್ವಭಾವದ ಬಗ್ಗೆ ಏನಾದರೂ ತಿಳಿದುಕೊಳ್ಳಲು ಇಚ್ಛಿಸಬಹುದೆಂದು ನನಗನಿಸುತ್ತದೆ. ಅವರ ಕಾಯ ಸದೃಢವಾಗಿತ್ತು. ಮಧ್ಯಮ ಎತ್ತರ ಆದರೂ ಗಟ್ಟಿಮುಟ್ಟಾದ ನಿಲುವು; ಮತ್ತು ಬಹಳ ಬಲವುಳ್ಳವರು ಹಾಗೂ ಬುದ್ಧಿವಂತರಾಗಿದ್ದರು. ಸುಂದರವಾಗಿ ಚಿತ್ರ ಬರೆಯ ಬಲ್ಲರು. ತುಸು ಸಂಗೀತದಲ್ಲೂ ಪ್ರವೀಣರಾಗಿದ್ದರು. ಅಂತೇ ಸ್ಪಷ್ಟವಾದ ಮಧುರಧ್ವನಿ ಕೂಡ ಅವರಿಗಿತ್ತು. ಕಾರಣ ಅವರು ಕೆಲವೊಮ್ಮೆ ದಿವಸದ ವ್ಯವಹಾರವೆಲ್ಲ ಮುಗಿದ ನಂತರ ಸಂಜೆಯ ಹೊತ್ತಿನಲ್ಲಿ ತಮ್ಮ ರೂಢಿಯಂತೆ ವೀಣೆಯಲ್ಲಿ ಶ್ಲೋಕ ಸ್ವರಗಳನ್ನು ನುಡಿಸುವಾಗ ಮತ್ತು ಅದೇ ಪ್ರಕಾರ ಹಾಡುವಾಗ ಕೇಳಲಿಕ್ಕೆ ಅತ್ಯಂತ ಸುಖಕರವಾಗುತ್ತಿತ್ತು. ಅವರಲ್ಲಿ ಯಾಂತ್ರಿಕ ಜಾಣ್ಮೆಯೂ ಇತ್ತು. ಅಂತೇ ಪ್ರಸಂಗ ಬಿದ್ದರೆ, ಬೇರೆ ಕೆಲಸಗಾರರ ಉಪಕರಣಗಳನ್ನುಪಯೋಗಿಸುವುದರಲ್ಲಿ ಬಹಳ ಕುಶಲರಾಗಿದ್ದರು. ಆದರೆ ಅವರ ಅದ್ಭುತವಾದ ಚಾತುರ್ಯವು ವೈಯಕ್ತಿಕ ಹಾಗೂ ಸಾಮಾಜಿಕ ಕಾರ್ಯಗಳ ಬಗ್ಗೆ ದೂರದೃಷ್ಟಿಯಿಂದ ವಿಚಾರಿಸಿ ಅರಿತುಕೊಳ್ಳುವುದರಲ್ಲಿ ಮತ್ತು ನಿರ್ದಿಷ್ಟವಾದ ಅಭಿಪ್ರಾಯವನ್ನು ವ್ಯಕ್ತಪಡಿಸುವುದರಲ್ಲಿ ಅಡಗಿರುತ್ತದೆ. ಹಾಗೆಂದು ಸಾರ್ವಜನಿಕ ಕೆಲಸದಲ್ಲಿ ಅವರೇನು ತೊಡಗಿರಲಿಲ್ಲ. ಸಂಸಾರದ ಅಷ್ಟೊಂದು ಮಂದಿಗೆ ಶಿಕ್ಷಣ ಕೊಡಿಸುವ ಹೊಣೆ ಹಾಗೂ ಅವರ ಜೀವನದ ತಾಪತ್ರಯಗಳು ಅವರನ್ನು ಸ್ವಂತವ್ಯವಹಾರದಿಂದ ದೂರ ಸರಿಯಲು ಬಿಡುವಂತಿರಲಿಲ್ಲ. ಆದರೆ ಅವರನ್ನು ಆಗಾಗ ಖ್ಯಾತಿವೆತ್ತ ವ್ಯಕ್ತಿಗಳು ಕಾಣುತ್ತಿದ್ದದ್ದು ನನಗೆ ಚೆನ್ನಾಗಿ ಜ್ಞಾಪಕವಿದೆ. ಅವರು ನಗರದ ಹಿತಸಂಬಂಧದ ಕುರಿತೋ ಅಥವಾ ಅವರ ಇಗರ್ಜಿಯ ಬಗ್ಗೆ ಇವರ ಸಲಹೆ ಕೇಳುತ್ತಿದ್ದರು. ಅಂತೇ ಇವರ ತೀರ್ಪಿಗೆ ಹಾಗೂ ಸಲಹೆಗಳಿಗೆ ತುಂಬಾ ಮನ್ನಣೆ ಕೊಡುತ್ತಿದ್ದರು. ಅಲ್ಲದೆ ತೊಂದರೆ-ತೊಡಕುಗಳು ಒದಗಿದಾಗ ವೈಯಕ್ತಿಕವಾಗಿ ಸಹ ಜನರು ಅವರ ಸಲಹೆ ಪಡೆಯಲು ಬರುತ್ತಿದ್ದರು.

ಮತ್ತು ಆಗಾಗ ಜಗಳಕ್ಕೊಳಗಾದ ಪಕ್ಷಗಳ ಮಧ್ಯಸ್ಥರಾಗಿ ಅವರು ನೇಮಿಸಲ್ಪಡುತ್ತಿದ್ದದ್ದುಂಟು. ಅವರು ಭೋಜನದ ವೇಳೆ ತನ್ನೊಡನೆ ಯಾವಾಗಲೂ ಸಾಧ್ಯವಿದ್ದ ಮಟ್ಟಿಗೆ ಸಂಭಾಷಣೆ ನಡೆಸಲು ಚತುರ ಗೆಳೆಯನನ್ನಾಗಲಿ ಅಥವಾ ನೆರೆಹೊರೆಯವನನ್ನಾಗಲಿ ಕೂಡಿಸಿಕೊಳ್ಳುತ್ತಿದ್ದರು. ಅಂತೇ ಯಾವಾಗಲೂ ಜಾಣತನದ ಅಥವಾ ಸದುಪಯೋಗದ ವಿಷಯವನ್ನು ಸಂಭಾಷಣೆಗೆ ತೆಗೆದುಕೊಳ್ಳುವ ಎಚ್ಚರಿಕೆ ವಹಿಸುತ್ತಿದ್ದರು. ಅದು ಅವರ ಮಕ್ಕಳ ಮನಸ್ಸನ್ನು ಸುಧಾರಿಸಲು ಉಪಯೋಗವಾಗುತ್ತಿತ್ತೆಂದು ಹೇಳಬಹುದು. ಈ ಮೂಲಕ ಅವರು ನಮ್ಮ ಲಕ್ಷ್ಯವನ್ನು ನಮ್ಮ ಜೀವನದ ನಡತೆಯಲ್ಲಿ ಯಾವುದು ಒಳ್ಳೆಯದು, ಯೋಗ್ಯವಾದುದು ಮತ್ತು ಅತ್ಯುಪಯುಕ್ತವಾದುದು ಎಂಬುದರತ್ತ ಸೆಳೆಯುತ್ತಿದ್ದರು. ಮತ್ತು ಎಂದೂ ಮೇಜಿನಮೇಲಿನ ಭೋಜನ ಸಾಹಿತ್ಯಕ್ಕೆ ಸಂಬಂಧಪಟ್ಟ ವಿಷಯಕ್ಕೆ, ಅದನ್ನು ಚೆನ್ನಾಗಿ ಪಾಕ ಮಾಡಿದ್ದಾರೋ ಇಲ್ಲವೋ, ಅದು ಆ ಕಾಲಕ್ಕೆ ತಕ್ಕದ್ದೋ ಅಲ್ಲವೋ, ಸುವಾಸನೆಯುಳ್ಳದ್ದೋ ಕೆಟ್ಟ ವಾಸನೆಯುಳ್ಳದ್ದೋ, ಅದಕ್ಕಿಂತ ಅಥವಾ ಇದಕ್ಕಿಂತ ಒಳ್ಳೆಯದೋ ಅಲ್ಲವೋ ಎಂಬಿವೇ ಮೊದಲಾದ ಮಾತುಗಳ ಕಡೆಗೆ ಒಂದಿಷ್ಟೂ ಗಮನಕೊಡುತ್ತಿರಲಿಲ್ಲವೆಂದೇ ಹೇಳಬೇಕು. ಹೀಗೆ ನಾನು ಈ ಬಗೆಯ ಸಂಗತಿಗಳಿಗೆ ಅಷ್ಟೊಂದು ಶುದ್ಧ ಅಲಕ್ಷ್ಯತನದಿಂದ ಬೆಳೆದು ಬಂದೆನಲ್ಲಾ—ನನ್ನ ಮುಂದೆ ಯಾವ ತರದ ಆಹಾರವನ್ನು ಇಟ್ಟಿದ್ದಾರೆಂಬುದು ಕೂಡ ತಿಳಿದಿರುವುದಿಲ್ಲ; ಅಂತೇ ಇಂದಿಗೂ ಸಹ ಮಧ್ಯಾಹ್ನ ಊಟವಾಗಿ ಒಂದೆರಡು ತಾಸುಗಳಾದ ಮೇಲೆ ನಾನೇನು ಉಂಡಿರುವೆನೆಂಬುದೂ ನನಗೆ ನೆನಪಿರುವುದು ಬಹಳ ಕಷ್ಟ. ಪ್ರಯಾಣ ಕಾಲದಲ್ಲಿ ಇದು ನನಗೆ ಒಂದು ಬಗೆಯ ಅನುಕೂಲವನ್ನುಂಟುಮಾಡಿದೆ. ಇಂಥಲ್ಲಿ ನನ್ನ ಸಂಗಡಿಗರು ಅನೇಕ ಸಲ ಅವರ ಹೆಚ್ಚಿನ ಸೂಕ್ಷ್ಮವಾದ ಹಾಗೂ ಯೋಗ್ಯವಾದ ಸಂಸ್ಕಾರಪೂರ್ಣ ಅಭಿರುಚಿ ಹಸಿವುಗಳನ್ನು ತೃಪ್ತಿಪಡಿಸುವುದಕ್ಕಾಗಿ ಅಸಂತೋಷಕ್ಕೊಳಗಾಗುತ್ತಿದ್ದರು.

ಇದರಂತೆ ನನ್ನ ತಾಯಿಗೂ ಕೂಡ ಅತ್ಯುತ್ತಮವಾದ ಶರೀರವಿತ್ತು. ಅವಳು ತನ್ನ ಹತ್ತು ಮಕ್ಕಳಿಗೂ ಮೊಲೆಯುಣ್ಣಿಸಿದ್ದಳು. ನನ್ನ ತಂದೆಯುವರು ೮೯ ನೇ ಹಾಗೂ ತಾಯಿಯುವರು ೮೫ ನೇ ವಯಸ್ಸಿನಲ್ಲಿ ತೀರಿಕೊಂಡದ್ದಲ್ಲದೇ ಅವರಿಗೆ ಯಾವ ಕಾಯಿಲೆ ಬಂದದ್ದೂ ನನಗೆ ಗೊತ್ತಿಲ್ಲ. ಅವರಿಬ್ಬರೂ ಬೋಸ್ಟನ್ನಿನಲ್ಲಿ ಒಟ್ಟಿಗೆ ಹೂಳಲ್ಪಟ್ಟರು. ಕೆಲವು ವರುಷಗಳ ಹಿಂದೆ ನಾನು ಅವರ ಗೋರಿಯ ಮೇಲೆ ಒಂದು ಅಮೃತಶಿಲೆಯನ್ನು

ನೆಟ್ಟಿದ್ದೆ. ಅದರಲ್ಲಿ ಈ ಬರಹವಿದೆ :

ಜೋಸೈಯ್ಯ ಫ್ರ್ಯಾಂಕ್ಲಿನ್,
ಮತ್ತು
ಆತನ ಹೆಂಡತಿ ಅಬೈಯ್ಯಾ
ಇಲ್ಲಿ ಹೂಳಲ್ಪಟ್ಟಿದ್ದಾರೆ.
ಅವರು ಐವತ್ತೈದು ವರ್ಷ, ಪ್ರೇಮದಿಂದ
ದಾಂಪತ್ಯವನ್ನು ಸಾಗಿಸಿದರು
ಆಸ್ತಿಯಿಲ್ಲದೆ ಅಥವಾ ಯಾವ ಲಾಭದಾಯಕ ಉದ್ಯೋಗವಿಲ್ಲದೆ,
ಕೇವಲ ಸತತ ಕರ್ಮ ಹಾಗೂ ದುಡಿತದಿಂದ,
ದೇವರ ಅನುಗ್ರಹದಿಂದ,
ಅವರು ಬಹು ದೊಡ್ಡ ಸಂಸಾರವನ್ನು ಸುಖವಾಗಿ
ನಡೆಸಿದರು
ಮತ್ತು ಹದಿಮೂರು ಮಕ್ಕಳನ್ನು
ಹಾಗೂ ಏಳು ಮೊಮ್ಮಕ್ಕಳನ್ನು
ಶೀಲವಂತರನ್ನಾಗಿ ಬೆಳಸಿದರು.
ಓದುಗ, ಈ ಉದಾಹರಣೆಯಿಂದ,
ನಿನ್ನ ಉದ್ಯೋಗದಲ್ಲಿ ಶ್ರಮಪಡುವ ಹುರುಪು ತಾ,
ಅಂತೇ ದೇವರ ದಯೆಯಲ್ಲಿ ನಂಬುಗೆಯಿಡು.
ಆತನೊಬ್ಬ ಧಾರ್ಮಿಕ ಮತ್ತು ಮುಂಘೋರಣೆಯ ಗಂಡಸು;
ಆಕೆ—ಜಾಣತನದ ಹಾಗೂ ಗುಣವತಿಯಾದ ಹೆಂಗಸು.
ಅವರ ಕಿರಿಯ ಮಗ,
ಪುತ್ರಯೋಗ್ಯವಾದ ಗೌರವದಿಂದ ಅವರ ಸ್ಮರಣೆಗೆ,
ಈ ಶಿಲೆಯ ನೆಟ್ಟಿರುವನು.

ಜೆ. ಎಫ್. ಜನನ ೧೬೫೫, ಮರಣ ೧೭೪೪, ಪ್ರಾಯ ೮೯.
ಎ. ಎಫ್. ಜನನ ೧೬೬೭, ಮರಣ ೧೭೫೨,— ೮೫.

ಹೀಗೆ ಅಡ್ಡಾತಿಡ್ಡಿಯಾಗಿ ವಿಷಯಾಂತರವಾದಾಗ ನಾನು ವೃದ್ಧನಾಗಿರುವೆನೆಂಬುದು ನನ್ನ ಲಕ್ಷ್ಯಕ್ಕೇ ಬರುತ್ತದೆ. ನಾನು ಹೆಚ್ಚು ಕ್ರಮವರಿತು ಬರವಣಿಗೆ ನಡೆಸುತ್ತಿದ್ದೆ. ಆದರೆ ಸಾರ್ವಜನಿಕ ನೃತ್ಯಕ್ಕೆ ಉಡುಗೆ—ತೊಡುಗೆಗಳನ್ನು ಹಾಕಿಕೊಳ್ಳುವಂತೆ ಖಾಸಗಿ ಕೂಟಕ್ಕೆ ಯಾರುಕೂಡಾ ಹಾಕಿಕೊಳ್ಳುವುದಿಲ್ಲ. ಅದು ಬಹಳ ಮಾಡಿ ಕೇವಲ ಅಲಕ್ಷ್ಯವಿದ್ದೀತು.

ತಿರುಗಿ ವಿಷಯಕ್ಕೆ ಬರೋಣ. ಹೀಗೆ ನನ್ನ ತಂದೆಯವರ ಉದ್ಯೋಗದಲ್ಲಿ ತೊಡಗಿ ಎರಡು ವರುಷಗಳ ತನಕ ಮುಂದುವರಿದೆನು, ಎಂದರೆ ನಾನು ಹನ್ನೆರಡು ವರುಷದವನು ಆಗುವ ವರೆಗೆ; ಮತ್ತು ನನ್ನ ಸೋದರ ಜಾನನು ಆ ಉದ್ಯೋಗಕ್ಕೆ ತಯಾರಾದವನು ನನ್ನ ತಂದೆಯನ್ನು ಬಿಟ್ಟು, ಲಗ್ನವಾಗಿ ರ್‍ಹೋಡೇ ದ್ವೀಪದಲ್ಲಿ ಸ್ವಂತ ಉದ್ಯೋಗದಮೇಲೆ ನಿಂತದ್ದರಿಂದ, ಅವನ ಸ್ಥಾನವನ್ನು ನಾನು ವಹಿಸುವ ಎಲ್ಲಾ ಲಕ್ಷಣಗಳು ವಿಧಿನಿಯುಕ್ತಗೊಂಡಿದ್ದವು. ಅಂತೇ ಕೊಬ್ಬು ಮೇಣಬತ್ತಿಯ ವ್ಯವಹಾರಸ್ಥನಾಗಬೇಕಾಗಿತ್ತು. ಆದರೆ ಈ ವ್ಯವಹಾರವನ್ನು ಮುಂದುವರಿಸಲು ನನ್ನಲ್ಲಿರುವ ಜುಗುಪ್ಸೆಯಿಂದಾಗಿ, ನನಗೆ ಇಷ್ಟವಾದ ಬೇರೊಂದು ಕೆಲಸವನ್ನು ಹೊಂದಿಸದಿದ್ದರೆ ನಾನುಕೂಡ ಅವರನ್ನು ಅವರ ಮಗ ಜೊಸೈಯ್ಯಾನಂತೆ ಬೇಸರಪಡಿಸಿ ಸಮುದ್ರದತ್ತ ಹೋಗುತ್ತೇನೆಂಬ ಭಯವಿತ್ತು. ಆದಕಾರಣ ಅವರು ಕೆಲವೊಮ್ಮೆ ನನ್ನನ್ನು ತಮ್ಮ ಜೊತೆಗೆ ವಿಹಾರಕ್ಕೆ ಮತ್ತು ಬಡಗಿಗಳನ್ನು, ಉಪ್ಪಾರರನ್ನು, ಕಡವುಗಾರರನ್ನು, ಕಂಚುಗಾರರನ್ನು ಮೊದಲಾದವರನ್ನು ನೋಡಲಿಕ್ಕೆ, ಅವರು ಕೆಲಸ ಮಾಡುವಲ್ಲಿಗೆ ಕರೆದುಕೊಂಡು ಹೋಗುತ್ತಿದ್ದರು. ಆಗ ಅವರು ನನ್ನ ಒಲವನ್ನು ನಿರೀಕ್ಷಿಸಿ ಅದನ್ನು ಭೂಮಿಯ ಮೇಲಿನ ಯಾವುದಾದರೂ ವ್ಯವಹಾರದಲ್ಲಿ ತೊಡಗಿಸಲು ಪ್ರಯತ್ನಿಸುತ್ತಿದ್ದರು. ಕುಶಲ ಕೆಲಸಗಾರರು ತಮ್ಮ ಉಪಕರಣಗಳನ್ನು ನಡೆಸುವುದನ್ನು ನೋಡುವುದೆಂದರೆ ನನಗೆ ಎಂದಿನಿಂದಲೂ ಉಲ್ಲಾಸವೆನಿಸುತ್ತಿತ್ತು. ಅಂತೇ ಆದರಿಂದ ನನಗೆ ಉಪಯೋಗವೂ ಬಿತ್ತು. ಅಷ್ಟನ್ನೆಲ್ಲ ಹಾಗೆ ಕಲಿತುದರಿಂದ ಅನುಕೂಲಕ್ಕೆ ಬೇಕಾದಾಗ, ಕೆಲಸಗಾರರು ದೊರೆಯದ ಹೊತ್ತಿನಲ್ಲಿ,ನಮ್ಮ ಮನೆಯಲ್ಲೆ ನಾನು ಚಿಕ್ಕಪುಟ್ಟ ಕೆಲಸಗಳನ್ನು ಮಾಡಲು ಸಮರ್ಥನಾಗಿದ್ದೆ. ಅಲ್ಲದೆ ಪ್ರಯೋಗದ ಆತುರದ ಕಾವಿನಲ್ಲಿದ್ದಾಗ ನನ್ನ ಪ್ರಯೋಗಗಳಿಗೆ ಬೇಕಾದ ಚಿಕ್ಕ-ಚಿಕ್ಕ ಯಂತ್ರಗಳನ್ನು ನನ್ನ ಮನೋನಿಲಯದಲ್ಲಿ ನಿರ್ಮಿಸಲೂ ನನಗೆ ಸಾಧ್ಯವಾಗಿತ್ತು. ಅಂತೂ ಕೊನೆಗೆ ನಮ್ಮ ತಂದೆಯವರು ಕಟ್ಲೆರಿ ವ್ಯವಹಾರವನ್ನು ಗೊತ್ತು ಮಾಡಿದರು. ಮತ್ತು ನನ್ನ ಕಾಕ ಬೆಂಜಮಿನರ ಮಗ ಸ್ಯಾಮುವೆಲ್‌ನು, ಲಂಡನಿನಲ್ಲಿ ಆ ವ್ಯವಹಾರವನ್ನು ರೂಢಿಸಿಕೊಂಡವನು—ಅದೇ ಹೊತ್ತಿಗೆ ಬೋಸ್ಟನಿನಲ್ಲಿ ನೆಲಸಿದನು. ಕೆಲಕಾಲ ಅವನೊಡನೆ ಇರಲು ನನ್ನನ್ನು ಇಚ್ಛೆಯಂತೆ ಕಳುಹಿಸಲಾಯಿತು. ಆದರೆ ನನ್ನಿಂದಅವನು ಶುಲ್ಕ ಇಚ್ಛಿಸಿದ ಮೂಲಕ ತಂದೆಯವರು ಅಸಂತೋಷಪಟ್ಟು ನನ್ನನ್ನು

ಮರಳಿ ಮನೆಗೆ ಕರೆಸಿದರು.

ಚಿಕ್ಕ ಮಗುವಿದ್ದಾಗಿನಿಂದ ಓದುವುದೆಂದರೆ ನನಗೆ ತುಂಬಾ ಇಷ್ಟ. ಮತ್ತು ನನ್ನ ಕೈಗೆ ಬೀಳುತ್ತಿದ್ದ ಎಲ್ಲ ಪುಡಿಕಾಸು ಪುಸ್ತಕಗಳಿಗೇ ವ್ಯಾಸಲು. 'ಪಿಲ್‌ಗ್ರಿಮ್ಸ್‌ಪ್ರೊಗ್ರೆಸ್' ನ್ನು ಬಹಳ ಮೆಚ್ಚಿದುದರಿಂದ ನನ್ನ ಮೊದಲನೆಯ ಸಂಗ್ರಹವು ಚಿಕ್ಕ ಚಿಕ್ಕ ಹೊತ್ತಗೆಗಳಲ್ಲಿ ಬಿಡಿಯಾಗಿರುವ ಜಾನ್ ಬನಿಯನನ ಗ್ರಂಥಗಳು. ಆಮೇಲೆ, ನನಗೆ ಆರ್. ಬರ್ಟನನ 'ಹಿಸ್ಟಾರಿಕಲ್ ಕಲೆಕ್ಷನ್ಸ್'ನ್ನು ಕೊಳ್ಳಲು ಸುಲಭವಾಗುವಂತೆ ನಾನು ಅವುಗಳನ್ನು ಮಾರಿದೆನು. ಅವುಗಳೆಲ್ಲ ಮನೆಮನೆಗೆ ಮಾರುವವರ ಪುಸ್ತಕಗಳ ಮಾಲಿಕೆಯಲ್ಲಿದ್ದು ಬಹಳ ಅಗ್ಗವಾಗಿದ್ದವು ಮತ್ತು ಒಟ್ಟಿನಲ್ಲಿ ೪೦ ಅಥವಾ ೫೦ ಇದ್ದವು. ನನ್ನ ತಂದೆಯವರ ಚಿಕ್ಕ ಪುಸ್ತಕ ಭಂಡಾರದಲ್ಲಿ ಮುಖ್ಯವಾಗಿ ದೈವೀ ಮತತತ್ತ್ವದ ಪುಸ್ತಕಗಳಿದ್ದವು. ಅವುಗಳಲ್ಲಿ ಹೆಚ್ಚಿನವುಗಳನ್ನೆಲ್ಲಾ ನಾನು ಓದಿದ್ದೇನೆ. ಅನಂತರ ಅನೇಕ ಸಲ, ನನಗೆ ಜ್ಞಾನದ ತೃಷೆಯುಂಟಾದಾಗ ಬೇರೆ ಯೋಗ್ಯವಾದ ಪುಸ್ತಕಗಳು ನನ್ನ ಕೈಗೆ ದೊರಕದಿದ್ದದ್ದಕ್ಕಾಗಿ ನನಗೆ ಬಹಳ ಕೆಡಕೆನಿಸುತ್ತಿತ್ತು. ಯಾಕೆಂದರೆ ಈಗ ಮಾತ್ರ ಧರ್ಮೋಪದೇಶಕನಾಗಬಾರದೆಂಬುದನ್ನು ನಿರ್ಧರಿಸಿಯಾಗಿತ್ತು. "ಪ್ಲುಟಾರ್ಕ್ಸ್ ಲೈವ್ಸ್" ನ್ನು ನಾನು ತುಂಬಾ ಓದಿದ್ದೇನೆ. ಅಂತೇ ಈಗ ಕೂಡಾ-ನಾನು ಆ ಬಗ್ಗೆ ಯೋಗ್ಯವಾಗಿ ಅಮೂಲ್ಯ ಸಮಯ ವಿನಿಯೋಗಿಸಿದೆನೆಂದು ನನಗೆನಿಸುತ್ತದೆ. "ಎಸ್ಸೇ ಆನ್ ಪ್ರೊಜೆಕ್ಟ್ಸ್" ಎಂಬ ಡಿಫೋನ ಪುಸ್ತಕವೊಂದಿತ್ತು. ಅಂತೇ "ಎಸ್ಸೇಸ್ ಟು ಡು ಗುಡ್" ಎಂಬ ಡಾ| ಮಾಥರ್ ಅವರು ಬರೆದ ಪುಸ್ತಕವೂ ಒಂದಿತ್ತು. ಇವುಗಳು ಬಹುಶಃ ನನ್ನ ಭಾವೀ ಜೀವನದ ಕೆಲವೊಂದು ಮುಖ್ಯ ಘಟನೆಗಳ ಮೇಲೆ ಪ್ರಭಾವ ಬೀಳುವಂತೆ ನನ್ನ ವಿಚಾರ ಸರದಿಯಲ್ಲಿ ಬದಲಾವಣೆಯನ್ನು ಮಾಡಿದವೆಂದು ಹೇಳಬಹುದಾಗಿದೆ.

ಈ ಪುಸ್ತಕೀಯ ಒಲವಿನಿಂದಾಗಿ ತಂದೆಯವರು ನನ್ನನ್ನು ಇಷ್ಟರಲ್ಲೇ ಅವರಿಗೆ ಆ ಕೆಲಸದ ಒಬ್ಬ ಮಗ(ಜೇಮ್ಸ್)ನಿದ್ದರೂ, ಮುದ್ರಕನಾಗಿ ಮಾಡುವ ನಿರ್ಧಾರಕ್ಕೆ ಬಂದರು. ೧೭೧೭ರಲ್ಲಿ ನನ್ನ ಸೋದರ ಜೇಮ್ಸ್‌ನು ಇಂಗ್ಲೆಂಡಿನಿಂದ ಮುದ್ರಣದ ಯಂತ್ರ ಹಾಗೂ ಮೊಳೆಗಳನ್ನು ಹಿಡಿದುಕೊಂಡು ಬೋಸ್ಟನಿನಲ್ಲಿ ವ್ಯವಹಾರ ಹೂಡಲ್ಕು ಬ್ಬಂದು ಇಳಿದನು. ತಂದೆಯವರಿಗಿಂತ ಬಹಳ ಹೆಚ್ಚಾಗಿ ನಾನು ಅದನ್ನು ಮೆಚ್ಚಿದ್ದೆ. ಆದರೆ ಇನ್ನೂ ಸಮುದ್ರದ ಆತುರ ಬಿಟ್ಟು ಹೋಗಿರಲಿಲ್ಲ. ಆ ಬಗೆಯ

ಒಲವಿನ ಪರಿಣಾಮದ ಭಯದಿಂದಾಗಿ ನನ್ನ ಸೋದರನ ವಶಕ್ಕೆ ನನ್ನನ್ನು ಬಿಡಲು ಅವರು ಬಹಳ ದುಡುಕಿದ್ದರು. ಕೆಲಹೊತ್ತು ನಾನು ಸುಮ್ಮನೆ ನಿಂತುಕೊಂಡಿದ್ದೆ. ಆದರೆ ಕೊನೆಗೆ ಒಪ್ಪಿಕೊಂಡದ್ದಾಯಿತು. ಅಂತೇ ನಾನಿನ್ನೂ ಹನ್ನೆರಡು ವರುಷದ ಹುಡುಗನಿರುವಾಗಲೇ ಕರಾರು ಪತ್ರಗಳಿಗೆ ರುಜುಹಾಕಿದೆನು. ಇಪ್ಪತ್ತೊಂದು ವರುಷದವನಾಗುವ ತನಕ ನಾನು ಶಿಷ್ಯ ವೃತ್ತಿಯಲ್ಲಿ ದುಡಿಯಬೇಕಾಗಿತ್ತು ಮತ್ತು ಕೇವಲ ಕೊನೆಯ ವರುಷದಲ್ಲಿ ಮಾತ್ರ ನನಗೆ ಸಂಚಾರಕ ವ್ಯಾಪಾರಿಯ ಸಂಬಳ ಸಿಗುವುದೆಂದು ನಿಯಮ ವಿತ್ತು. ಬಹಳ ಸ್ವಲ್ಪ ಕಾಲದಲ್ಲಿ ನಾನು ವ್ಯವಹಾರದಲ್ಲಿ ಹೆಚ್ಚಿನ ಪ್ರಾವೀಣ್ಯವನ್ನು ದೊರಕಿಸಿಕೊಂಡೆನು ಮತ್ತು ನನ್ನ ಸೋದರನಿಗೆ ಸಾಕಷ್ಟು ಉಪಯೋಗಕ್ಕೆ ಬರುವ ಕೈಯಾದೆನು. ಈಗ ನನಗೆ ಉತ್ತಮ ಪುಸ್ತಕಗಳನ್ನು ದೊರಕಿಸುವ ಸಂದರ್ಭವೊದಗಿತು. ಪುಸ್ತಕ ವ್ಯಾಪಾರಿಗಳ ಶಿಷ್ಯರ ಸಂಗಡ ಪರಿಚಯ ಹೊಂದಿದ ಮೂಲಕ ಚಿಕ್ಕ ಪುಸ್ತಕವೊಂದನ್ನು ಕೆಲಹೊತ್ತು ಎರವಲು ತರಲು ಅನುಕೂಲವಾಯಿತು. ಅದನ್ನು ಮಾತ್ರ ನಾನು ಬೇಗನೆ ಮತ್ತು ಸ್ವಚ್ಛವಾಗಿರಿಸಿ ಹಿಂದಿರುಗಿಸಬೇಕಾಗಿತ್ತು. ಆಗಾಗ ನಾನು ರಾತ್ರಿ ಕಾಲದಲ್ಲಿ ಬಹಳ ಹೊತ್ತಿನ ತನಕ ಓದುತ್ತ ಕೂಡುತ್ತಿದ್ದೆ. ಯಾಕಂದರೆ—ಸಂಜೆಯಲ್ಲಿ ಪುಸ್ತಕವನ್ನು ತಂದಿದ್ದರೆ ಮರುದಿನ ಬೆಳಗ್ಗೆ ಅದನ್ನು ಬೇಗನೆ ತಿರುಗಿ ಕೊಡಬೇಕಾಗಿತ್ತು. ಇಲ್ಲದಿದ್ದರೆ ಅದು ತಪ್ಪಿ ಹೋಗುತ್ತಿತ್ತು ಅಥವಾ ಅದಕ್ಕೆ ಬೇಡಿಕೆಯಿರುತ್ತಿತ್ತು.

ಕೆಲ ಕಾಲದ ನಂತರ ಮಿಸ್ಟರ್ ಮ್ಯಾಥ್ಯೂ ಆಡಮ್ಸ್ ಎಂಬ ಚತುರ ವ್ಯವಹಾರಸ್ಥರು ನಮ್ಮ ಮುದ್ರಣಾಲಯಕ್ಕೆ ಆಗಾಗ ಬಂದು ಹೋಗು ತ್ತಿದ್ದರು. ಅವರಲ್ಲಿ ಹೇರಳ ಪುಸ್ತಕ ಸಂಗ್ರಹವಿತ್ತು. ಅವರು ನನ್ನ ಪರಿಚಯ ಮಾಡಿಕೊಂಡರು. ನನ್ನನ್ನು ತಮ್ಮ ಪುಸ್ತಕ ಭಾಂಡಾರಕ್ಕೆ ಕರೆಯಿಸಿಕೊಂಡು ನಾನು ಓದಲು ಆರಿಸಿದ ಪುಸ್ತಕಗಳನ್ನು ಬಹಳ ಪ್ರೀತಿ ಯಿಂದ ನನಗೆ ಎರವಲು ನೀಡಿದರು. ಈಗ ನನಗೆ ಕವಿತೆಯತ್ತ ಮೋಹ ಬಿತ್ತು, ಅಂತೇ ಕೆಲವೊಂದು ಚಿಕ್ಕ-ಪುಟ್ಟ ತುಂಡುಗಳನ್ನೂ ಬರೆದೆನು. ಅದರಿಂದ ಏನಾದರೂ ಫಲ ದೊರೆತೀತೆಂದು ಬಗೆದು ನನ್ನ ಸೋದರನು ನನಗೆ ಪ್ರೋತ್ಸಾಹ ನೀಡಿದನು. ಕಾರಣ, ಪ್ರಾಸಂಗಿಕವಾಗಿ ಲಾವಣಿ ಗಳನ್ನು ರಚನೆಮಾಡಲು ನನಗೆ ಹಾಕಿದನು ಒಂದರ ಹೆಸರು 'ದಿ ಲೈಟ್ ಹೌಸ್ ಟ್ರೆಜಿಡಿ' ಎಂದಿತ್ತು. ಅದರಲ್ಲಿ ತನ್ನ ಎರಡು ಮಗಳಂದಿ ರೊಡನೆ ಮುಳುಗುವ ಕ್ಯಾಪ್ಟನ್ ವರ್ದಿಲೇಕನ ವೃತ್ತಾಂತವಿತ್ತು.

ಮತ್ತೊಂದು ಅಂದರೆ ಒಬ್ಬ ನಾವಿಕನ ಹಾಡು. ಟೀಚ್ (ಅಥವಾ ಬ್ಲ್ಯಾಕ್‌ಬಿಯರ್ಡ್) ಎಂಬ ಕಡಲುಗಳ್ಳನನ್ನು ಸೆರೆಹಿಡಿಯುವ ಕುರಿತಾಗಿ ಈ ಹಾಡು. ಇವುಗಳು ತೀರ ಕೀಳು ವಿಷಯದಿಂದ ತುಂಬಿ ಗ್ರಬ್-ಸ್ಟ್ರೀಟ್-ಲಾವಣಿಯ ಶೈಲಿಯಲ್ಲಿದ್ದವು. ಮತ್ತು ಮುದ್ರಣವಾದೊಡನೆ ಅವುಗಳನ್ನು ಮಾರಲು ನನ್ನನ್ನು ಪೇಟೆಗೆ ಕಳುಹಿಸಿದನು. ಮೊದಲನೆಯದು ಚೆನ್ನಾಗಿ ಮಾರಾಟವಾಯಿತು. ಅದರಲ್ಲಿನ ಘಟನೆಯು ಇತ್ತೀಚೆಗಿನದು ಆಗಿದ್ದುದರಿಂದ ಸಾಕಷ್ಟು ಗಡಿಬಿಡಿಯುಂಟಾಯಿತು. ಇದು ನನ್ನ ಅಭಿಮಾನವನ್ನು ಉಬ್ಬಿಸಿತು. ಆದರೆ ನನ್ನ ಕೆಲಸವನ್ನು ಅಪಹಾಸ್ಯಮಾಡಿ ತಂದೆಯವರು ನನ್ನನ್ನು ನಿರುತ್ಸಾಹಗೊಳಿಸಿದರು. ಅಂತೇ ಸಾಮಾನ್ಯವಾಗಿ ಪದ್ಯ ಬರೆಯುವವರು ಭಿಕ್ಷುಕರಾಗಿರುತ್ತಾರೆಂದು ಹೇಳುತ್ತಿದ್ದರು. ಕಾರಣ, ಕವಿಯಾಗುವುದನ್ನು, ಬಹುಶಃ ತೀರ ಕೆಟ್ಟ ಕವಿಯಾಗುವುದನ್ನು, ನಾನು ತಪ್ಪಿಸಿಕೊಂಡೆನು. ಆದರೆ ನನ್ನ ಜೀವನದ ದಾರಿಯಲ್ಲಿ ಗದ್ಯ ರಚನೆಯು ನನಗೆ ಅತ್ಯಂತ ಉಪಯುಕ್ತವಾಗಿರುವುದಲ್ಲದೆ ನನ್ನ ಪ್ರಗತಿಯ ಪ್ರಮುಖ ಸಾಧನವಾಗಿರುವುದರಿಂದ, ಅಂಥ ಪ್ರಸಂಗಗಳಲ್ಲಿ ನಾನು ಹೇಗೆ ಆ ದಿಸೆಯಲ್ಲಿ ನನಗಿದ್ದ ಅಲ್ಪ ಸಾಮರ್ಥ್ಯವನ್ನು ದೊರಕಿಸಿದೆನೆಂಬುದನ್ನು ನಾನು ನಿಮಗೆ ಹೇಳುವೆನು.

ಪಟ್ಟಣದಲ್ಲಿ ಇನ್ನೊಬ್ಬ ಪುಸ್ತಕಪ್ರಿಯ ಹುಡುಗನಿದ್ದನು. ಅವನ ಹೆಸರು ಜಾನ್ ಕೊಲಿನ್ಸ ಎಂದು. ಅವನೊಡನೆ ನನ್ನ ಸಖ್ಯ ತುಂಬಾ ಬೆಳೆದಿತ್ತು. ನಾವು ಕೆಲವೊಮ್ಮೆ ಜಗಳ ಕಾಯುತ್ತಿದ್ದೆವು. ವಾದ–ವಿವಾದ ನಮಗೆ ತುಂಬಾ ಸೇರುತ್ತಿತ್ತು. ಅಂತೇ ಒಬ್ಬರಿಗೊಬ್ಬರು ಖಂಡನೆ ಮಾಡುವುದರಲ್ಲಿ ಬಹಳ ತೊಡಗುತ್ತಿದ್ದೆವು. ಈ ಬಗೆಯ ತರ್ಕದ ತಿರುಗಣೆ ಸಾಮಾನ್ಯವಾಗಿ ಕೆಲವೊಮ್ಮೆ ಸಂಭಾಷಣೆಯನ್ನು ವಿಕೋಪಕ್ಕೆ ಮುಟ್ಟಿಸುವುದಲ್ಲದೆ, ಸ್ನೇಹ ಸಂಬಂಧದ ಕೂಟದಲ್ಲಿ ಜನರನ್ನು ಆಗಾಗ ಬಹಳ ವೈಮನಸ್ಸಿಗೆ ಈಡು ಮಾಡುತ್ತದೆ ; ಅದರ ಜೊತೆಯಲ್ಲಿ ವಿರೋಧ ಸಾಧನೆಯು ಕೃತಿಗಿಳಿಯುವ ಮೂಲಕ,ಅದು ತೀರ ಕೆಟ್ಟ ಅಭ್ಯಾಸವಾಗುತ್ತದೆಂದು ಹೇಳಬೇಕು. ಅಂತೇ ಅದರಿಂದ ಸ್ನೇಹದ ಸಂದರ್ಭಗಳು ಬೆಳೆಯುವ ಸ್ಥಳಗಳಲ್ಲಿ ಕೂಡ ತಿರಸ್ಕಾರ ವೈರತ್ವಗಳು ಉದ್ಭವಿಸಬಹುದು. ಧರ್ಮದ ಬಗ್ಗೆ ತರ್ಕ ನಡೆಸಿದ ನನ್ನ ತಂದೆಯವರ ಪುಸ್ತಕಗಳನ್ನು ಓದಿದ ಮೇಲೆ ಇದು ನನಗೆ ತಿಳಿದು ಬಂತು. ಲಾಯರುಗಳು, ವಿಶ್ವವಿದ್ಯಾಲಯದ ಜನರು ಮತ್ತು ಎಡಿನ್‌ಬರೋದಲ್ಲಿ ಬೆಳೆದ ಎಲ್ಲಾ ತರಹದ ಮನುಷ್ಯರ ಹೊರತಾಗಿ ಬೇರೆ ಯಾವ ಒಳ್ಳೆಯ

ಬುದ್ಧಿಯಿದ್ದ ಮನುಷ್ಯರೂ ಅಂಥ ತರ್ಕದಲ್ಲಿ ಬೀಳುವುದಿಲ್ಲವೆಂದು ನಾನು ಕಂಡು ಕೊಂಡಿದ್ದೇನೆ.

ಹೇಗೋ ಏನೋ ಕೊಲಿನ್ಸ ಹಾಗೂ ನನ್ನ ನಡುವೆ ಒಂದು ಪ್ರಶ್ನೆ ಎದ್ದಿತು. ಹೆಣ್ಣು ಮಕ್ಕಳಿಗೆ ಶಿಕ್ಷಣ ಕೊಡುವ ಔಚಿತ್ಯ ಹಾಗೂ ಅದನ್ನು ಸಾಧಿಸಲು ಅವರಲ್ಲಿರುವ ಯೋಗ್ಯತೆಗಳ ಬಗ್ಗೆ ಪ್ರಶ್ನೆ ಬಂತು. ಅವರು ನೈಸರ್ಗಿಕವಾಗಿ ಅದಕ್ಕೆ ಅಯೋಗ್ಯರಾಗಿರುವರು ಮತ್ತು ಅದು ಸರಿಯಾದುದೂ ಅಲ್ಲವೆಂಬ ಮತ ಅವನದಾಗಿತ್ತು. ನಾನು ಅದರ ವಿರುದ್ಧ ಪಕ್ಷವನ್ನು ಸ್ವಲ್ಪಮಟ್ಟಿಗೆ ವಾದದ ದೃಷ್ಟಿಯಿಂದಲೇ ಹಿಡಿದೆ. ಸ್ವಭಾವತಃ ಅವನು ಮಾತಿನಲ್ಲಿ ನಿರರ್ಗಳವಾಗಿದ್ದನು ಮತ್ತು ಅವನ ಶಬ್ದ ಸಂಪತ್ತು ವಿಪುಲವಾಗಿತ್ತು. ಆಗಾಗ ಅವನು ತನ್ನ ವಾಗ್ಝರಿಯಿಂದ ನನ್ನನ್ನು ಮುಗ್ಧಗೊಳಿಸುತ್ತಿದ್ದನೇ ಹೊರತು ಅವನ ಪ್ರಬಲವಾದ ಕಾರಣಗಳ ಮೂಲಕವೇನಲ್ಲ. ಯಾವ ನಿರ್ಧಾರಕ್ಕೂ ಬರದೆ ನಾವು ಅಗಲಿದ ಕಾರಣ,ಹಾಗೂ ಬೇಗನೆ ಪುನಃ ಒಬ್ಬರಿಗೊಬ್ಬರು ಕೆಲಕಾಲದ ತನಕ ಭೇಟಿಯಾಗದಿದ್ದುದರಿಂದ, ನಾನು ವಾದಗಳನ್ನು ಬರವಣಿಗೆಯಲ್ಲಿ ಇಳಿಸಲು ಕುಳಿತುಕೊಂಡೆನು. ಅದನ್ನು ಸ್ವಚ್ಛವಾಗಿ ಪ್ರತಿಮಾಡಿ ಅವನಿಗೆ ಕಳುಹಿಸಿದೆನು. ಅವನು ಉತ್ತರಿಸಿದನು, ನಾನೂ ಉತ್ತರಿಸಿದೆನು. ಮೂರು ಅಥವಾ ನಾಲ್ಕು ಪತ್ರಗಳು ಪ್ರತಿ ಪಕ್ಷದಿಂದ ಹರಿದಾಡಿದವು. ಆಗ ನನ್ನ ತಂದೆಯವರು ಆ ಪತ್ರಗಳನ್ನು ಕಂಡು ಓದಿದರೂ, ಅದರ ತರ್ಕದಲ್ಲಿ ಪ್ರವೇಶ ನಡೆಸದೆ, ನನ್ನ ಬರವಣಿಗೆಯ ಶೈಲಿಯ ಕುರಿತು ನನಗೆ ಹೇಳುವ ಸಂದರ್ಭ ಮಾಡಿದರು. ಅಂತೇ ನನ್ನ ಕಾಗುಣಿತ ಉತ್ತಮವಾಗಿದ್ದರೂ(ಅದಕ್ಕೆ ಮುದ್ರಣಾಲಯಕ್ಕೆ ನಾನು ಋಣಿ) ಅಭಿವ್ಯಕ್ತಿಯ ಸುನಿಶ್ಚಿತತೆಯಲ್ಲಿ, ಕ್ರಮದಲ್ಲಿ, ಹಾಗೂ ಸ್ಪಷ್ಟತೆಯಲ್ಲಿ, ನಾನು ತುಂಬಾ ಹಿಂದೆ ಬಿದ್ದಿರುವೆನೆಂದು ಅವರು ತಿಳಿಯಪಡಿಸಿದರು. ಅದನ್ನು ಅನೇಕ ಉದಾಹರಣೆಗಳಿಂದ ನನಗೆ ಮಂದಟ್ಟಾಗುವಂತೆ ಹೇಳಿದರು. ಅವರ ಅಭಿಪ್ರಾಯದ ಸತ್ಯವನ್ನು ನಾನು ಮನಗಂಡೆನು. ಕಾರಣ, ಅಲ್ಲಿಂದ ಮುಂದೆ ಬರೆಯುವ ಶೈಲಿಯಬಗ್ಗೆ ತುಂಬಾ ಎಚ್ಚರ ವಹಿಸಲು ಪ್ರಾರಂಭಿಸಿದೆನು. ಅಂತೇ ಸುಧಾರಿಸಿಕೊಳ್ಳುವ ಪ್ರಯತ್ನ ಮಾಡುವ ನಿರ್ಧಾರಕ್ಕೂ ಬಂದುದಾಯಿತು.

ಈ ಹೊತ್ತಿಗೆ 'ಸ್ಪೆಕ್ಟೇಟರ್'ದ ಒಂದು ಬಿಡಿ ಸಂಪುಟವು ನನ್ನ ಕೈಗೆ ದೊರಕಿತು. ಅದು ಮೂರನೆಯದು. ಅವುಗಳಲ್ಲಿ ಒಂದನ್ನೂ ನಾನು ಈ ಮೊದಲು ನೋಡಿರಲಿಲ್ಲ. ಅದನ್ನು ನಾನು ಕೊಂಡೆನು. ಮತ್ತೆ

ಮತ್ತೆ ಅದನ್ನು ಓದಿಯಾಯಿತು, ಅದರಿಂದ ತುಂಬಾ ಆನಂದವೂ ದೊರೆಯಿತು. ಅದರ ಬರವಣಿಗೆಯು ಅತ್ಯುತ್ತಮವಾದುದೆಂದು ನನಗೆ ಅನಿಸಿತು. ಅಂತೇ ಸಾಧ್ಯವಿದ್ದರೆ ಅದರ ಅನುಕರಣೆ ಮಾಡ ಬೇಕೆಂದು ಹಂಬಲಿಸಿದೆನು. ಈ ಉದ್ದೇಶದಿಂದ ನಾನು ಅದರ ಕೆಲವು ಪತ್ರಿಕೆ ಗಳನ್ನು ತೆಗೆದುಕೊಂಡೆನು. ಪ್ರತಿಯೊಂದು ವಾಕ್ಯದಲ್ಲಿ ವ್ಯಕ್ತವಾಗುವ ಭಾವನೆಯ ಸಂಕ್ಷಿಪ್ತ ಟಿಪ್ಪಣಿಗಳನ್ನು ಮಾಡಿದೆನು. ಕೆಲವು ದಿವಸ ಗಳ ತನಕ ಅವುಗಳನ್ನು ಹಾಗೇ ಬಿಟ್ಟೆನು. ಆ ಮೇಲೆ ಪುಸ್ತಕ ವನ್ನು ನೋಡದೆ ಪತ್ರಿಕೆಗಳನ್ನು ಮೊದಲಿನಂತೆ ಪೂರ್ಣಗೊಳಿಸಲು ಪ್ರಯತ್ನಿ ಸಿದೆನು. ಟಿಪ್ಪಣಿ ಮಾಡಿಕೊಂಡ ಪ್ರತಿಯೊಂದು ಭಾವನೆಯನ್ನು ಮೊದಲು ಎಷ್ಟು ದೀರ್ಘವಾಗಿ ವಿಸ್ತರಿಸಿ ಬರೆಯಲಾಗಿತ್ತೋ ಅದೇ ರೀತಿಯಲ್ಲಿ ಬರೆ ಯಲು—ನನ್ನ ಮನಸ್ಸಿಗೆ ಬರುವ ಯಾವುದೇ ಯೋಗ್ಯ ಶಬ್ದಗಳಿಂದ ಸಂಪೂರ್ಣ ವ್ಯಕ್ತವಾಗುವಂತೆ–ನೋಡಿಕೊಂಡುದಾಯಿತು. ಆ ಮೇಲೆ ನಾನು ನನ್ನ 'ಸ್ಪೆಕ್ಟೇಟರ'ನ್ನು ಮೂಲಪ್ರತಿಯೊಡನೆ ಹೋಲಿಸಿದೆನು. ಕೆಲ ವೊಂದು ತಪ್ಪುಗಳನ್ನು ನೋಡಿ ಸರಿಪಡಿಸಿದೆನು. ಆದರೆ ನನಗೆ ಶಬ್ದ ಸಂಪತ್ತು ಬೇಕಾಗಿದೆ ಅಥವಾ ಶಬ್ದಗಳನ್ನು ಯೋಗ್ಯವಾಗಿ ಉಪಯೋಗಿಸು ವುದು ಮತ್ತು ಅವುಗಳನ್ನು ಸ್ಮೃತಿಯಲ್ಲಿಡುವುದು ನನ್ನ ಕೊರತೆ ಯೆಂಬುದನ್ನು ನಾನು ಮನಗಂಡೆನು. ಈ ಕುಂದನ್ನು ನಾನು ಈ ಮೊದಲೇ ಪದ್ಯ ರಚನೆಯಲ್ಲಿ ತೊಡಗಿದ್ದರೆ ನೀಗಿಸಿಕೊಳ್ಳಬಹುದಾಗಿತ್ತೆಂದು ನನಗೆನಿ ಸಿತು. ಯಾಕೆಂದರೆ ಪದ್ಯರಚನೆಯಲ್ಲಿಒಂದೇ ಅರ್ಥದ ಬೇರೆಬೇರೆಶಬ್ದಗಳನ್ನು —ಪ್ರಾಸದ ಬೇರೆಬೇರೆ ನಾದಕ್ಕೆ ಹೊಂದುವ ನಾನಾ ಅಳತೆಯವುಗಳನ್ನು— ಉಪಯೋಗಿಸುವ ಸತತ ಪ್ರಸಂಗಗಳು ಬರುವುದರಿಂದ ಸದಾ ವಿವಿಧ ಶಬ್ದ ಗಳನ್ನು ಹುಡುಕುವ ಕೆಲಸಕ್ಕೆ ಜುಲುಮೆಯೊದಗುತ್ತಿತ್ತು. ಅಂತೇ ಆ ವೈವಿಧ್ಯವನ್ನು ನನ್ನ ಮನಸ್ಸಿನಲ್ಲಿ ಸ್ಥಿರಪಡಿಸಿ ಅದರ ಪ್ರಭುತ್ವ ನನಗೆ ದೊರೆ ಯುವಂತಾಗುತ್ತಿತ್ತು. ಆದುದರಿಂದ ಕೆಲವೊಂದು ಕಥೆಗಳನ್ನು ತೆಗೆದು ಕೊಂಡು ಅವುಗಳನ್ನು ಪದ್ಯರೂಪಕ್ಕೆ ತಂದೆನು. ತರುವಾಯ ಆ ಪದ್ಯವನ್ನು ಚೆನ್ನಾಗಿ ಮರೆತ ಮೇಲೆ ಅವುಗಳನ್ನು ಪುನಃ ಗದ್ಯಕ್ಕೆ ಪರಿವರ್ತಿಸುತ್ತಿದ್ದೆನು. ಅಂತೇ ನಾನು ಕೆಲವೊಮ್ಮೆ ನನ್ನ ಟಿಪ್ಪಣಿಗಳ ಸಂಗ್ರಹಗಳನ್ನು ಕಲಬೆರಕೆ ಮಾಡಿಕೊಂಡು ಗೊಂದಲಕ್ಕೀಡಾಗುತ್ತಿದ್ದೆನು. ಮತ್ತು ಕೆಲವು ವಾರಗಳ ನಂತರ ಪೂರ್ಣ ವಾಕ್ಯಗಳನ್ನು ರಚಿಸಲು ತೊಡಗಿ–ಪತ್ರಿಕೆಯನ್ನು ಪೂರ್ತಿ ಗೊಳಿಸಲು ಪ್ರಾರಂಭಿಸುವ ಮೊದಲು—ಅವುಗಳನ್ನು ಉತ್ಕೃಷ್ಟವಾದ ರೀತಿ

ಯಲ್ಲಿ ಸಂಕ್ಷಿಪ್ತಪಡಿಸಲು ಪ್ರಯತ್ನಿಸುತ್ತಿದ್ದೆನು. ವಿಚಾರಗಳನ್ನು ಹೊಂದಿಸಿ ಕೊಳ್ಳುವ ರೀತಿಯನ್ನು ತಿಳಿದುಕೊಳ್ಳುವುದಕ್ಕಾಗಿ ನಾನು ಹೀಗೆ ಮಾಡು ತ್ತಿದ್ದೆನು. ನನ್ನ ಬರವಣಿಗೆಯನ್ನು ಅನಂತರ ಮೂಲಪ್ರತಿಯೊಡನೆ ಹೋಲಿಸುವಾಗ ನನಗೆ ಅನೇಕ ತಪ್ಪುಗಳು ಕಂಡುಬಂದವು, ಅವುಗಳನ್ನು ತಿದ್ದಿಕೊಂಡುದೂ ಆಯಿತು. ಆದರೆ ಕೆಲವೊಂದು ವಿಶಿಷ್ಟವಾದ ಅರ್ಥ ವನ್ನುನಿರ್ದಿಷ್ಟವಾಗಿ ಸೂಚಿಸುವುದರಲ್ಲಿ ನಾನು ಅದರ ರೀತಿಯನ್ನು ಅಥವಾ ಭಾಷೆಯನ್ನು ಸುಧಾರಿಸುವ ಅದೃಷ್ಟಶಾಲಿಯಾದೆನೆಂಬ ಸಂತೋಷವು ಹಲವು ಸಲ ನನ್ನನ್ನು ಮುಗ್ಧಗೊಳಿಸುತ್ತಿತ್ತು. ಇದರಿಂದಾಗಿ ಕೆಲವೇ ದಿವಸಗಳ ಮೇಲೆ ನಾನೊಬ್ಬ ಸಾಧಾರಣ ಮಟ್ಟಿನ ಇಂಗ್ಲೀಷ್ ಬರೆಹಗಾರನಾದೇ ನೆಂದು ಬಗೆಯಲು ಪ್ರೇರಣೆಯನ್ನು ಕೊಟ್ಟಿತು. ಈ ಬಗ್ಗೆ ನಾನು ತುಂಬಾ ಮಹತ್ವಾಕಾಂಕ್ಷಿಯಾಗಿದ್ದೆ. ಇಂಥ ಅಭ್ಯಾಸಗಳಿಗೆ ಮತ್ತು ಓದುವುದಕ್ಕೆ— ರಾತ್ರಿ ಕೆಲಸವಾದ ಮೇಲೆ ಅಥವಾ ಬೆಳಿಗ್ಗೆ ಕೆಲಸ ಪ್ರಾರಂಭ ವಾಗುವ ಮೊದಲು, ಅಥವಾ ಆದಿತ್ಯವಾರಗಳಲ್ಲಿ ಒಬ್ಬನೇ ಮುದ್ರಣಾಲಯ ದಲ್ಲಿ ಇದ್ದುಕೊಂಡು ಮಿಕ್ಕ ಎಲ್ಲಾ ಸಾರ್ವಜನಿಕ ಧಾರ್ಮಿಕವಿಧಿಗಳಿಗೆ ಸಾಮಾನ್ಯವಾಗಿ ಹಾಜರಿರುವುದನ್ನು ಸಾಧ್ಯವಿದ್ದ ಮಟ್ಟಿಗೆ ತಪ್ಪಿಸಿಕೊಂಡಿ ರುವ ವೇಳೆಯಲ್ಲಿ ಮಾತ್ರ,—ಆಸ್ಪದ ದೊರೆಯುವುದಾಗಿತ್ತು. ಧಾರ್ಮಿಕ ವಿಧಿಗಳಿಗೆ ಹೋಗುವುದನ್ನು ನನಗೆ ತಂದೆಯವರು ಅವರ ಕೈಕೆಳಗೆ ನಾನಿದ್ದಾಗ ಕಡ್ಡಾಯದಿಂದ ವಿಧಿಸಿದ್ದರು. ನನ್ನಿಂದ ಅದರಂತೆ ನಡೆಯಲು ಸಮಯದ ಅನಾನುಕೂಲತೆಯಿಂದ ಸಾಧ್ಯವಿಲ್ಲದಿದ್ದರೂ ಅದನ್ನು ನಾನು ಈಗ ಕೂಡಾ ಕರ್ತವ್ಯಗಳಲ್ಲೊಂದು ಎಂದು ಭಾವಿಸುತ್ತೇನೆ.

ಹದಿನಾರು ವರುಷ ಪ್ರಾಯದವನಾದಾಗ ಟ್ರಿಯಾನ್ ಎಂಬವನು ಬರೆದಿರುವಂಥ, ಸಸ್ಯಾಹಾರವನ್ನು ಶಿಫಾರಸು ಮಾಡಿರುವ, ಒಂದು ಪುಸ್ತಕವು ನನ್ನ ದೃಷ್ಟಿಗೆ ಬಿದ್ದಿತು. ಅದರಂತೆ ನಡೆಯಬೇಕೆಂದು ನಾನು ನಿರ್ಧರಿಸಿದೆನು. ಇನ್ನೂ ಮದುವೆಯಾಗದೆ ಇದ್ದುದರಿಂದ ನನ್ನ ಸೋದ ರನು ಮನೆ ಮಾಡಿರಲಿಲ್ಲ. ಆದರೆ ತಾನು ಹಾಗೂ ತನ್ನ ಶಿಷ್ಯರೊಂದಿಗೆ ಮತ್ತೊಂದು ಮನೆಯವರಲ್ಲಿ ಊಟಕ್ಕೆ ಸೇರಿದ್ದನು. ನಾನು ಮಾಂಸ ತಿನ್ನಲು ನಿರಾಕರಿಸಿದ್ದರಿಂದ ಒಂದು ಬಗೆಯ ಅನಾನುಕೂಲಕ್ಕೆ ಇಟ್ಟು ಕೊಂಡಿತು. ಮತ್ತು ನನ್ನ ಒಂಟಿತನದ ಜೀವನವನ್ನು ಆಗಾಗ ಗೇಲಿ ಮಾಡು ತ್ತಿದ್ದರು. ಟ್ರಿಯಾನನ ಪದ್ಧತಿಯಂತೆ ಅವನ ಕೆಲವೊಂದು ತಿಂಡಿ ತಿನಸು ಗಳನ್ನು ತಯಾರಿಸುವುದನ್ನು ನಾನು ಕಲಿತುಕೊಂಡೆನು. ಬಟಾಟೆ ಅಥವಾ

ಅಕ್ಕಿಯನ್ನು ಬೇಯಿಸುವುದು, ಕಡಬು ತಯಾರಿಸುವುದು-ಇವೇ ಮೊದಲಾದವುಗಳನ್ನು ಅರಿತುಕೊಂಡದ್ದಾಯಿತು. ಆಮೇಲೆ, ನನ್ನ ಊಟಕ್ಕೆ ಅವನು ಕೊಡುವ ಖರ್ಚಿನ ಅರ್ಧದಷ್ಟು ಹಣವನ್ನು ನನಗೆ ಪ್ರತಿವಾರ ಕೊಟ್ಟರೆ ನಾನು ಸ್ವತಃ ಊಟ ತಯಾರಿಸುತ್ತೇನೆಂದು ನನ್ನ ಸೋದರನಿಗೆ ಹೇಳಿದೆನು. ಕೂಡಲೆ ಅವನು ಅದಕ್ಕೆ ಒಪ್ಪಿಯಾಯಿತು. ಅಂತೇ ನಾನು ಈಗ ಅವನು ಕೊಡುವ ಹಣದಲ್ಲಿ ಅರ್ಧದಷ್ಟನ್ನು ಉಳಿತಾಯ ಮಾಡುವಂತಾಯಿತು. ಪುಸ್ತಕಗಳನ್ನು ಕೊಳ್ಳುವುದಕ್ಕೆ ಇದೊಂದು ಹೆಚ್ಚಿನ ಹಣವಾಯಿತು. ಆದರೆ ನನಗೆ ಇದರಿಂದ ಮತ್ತೊಂದು ಅನುಕೂಲವಿತ್ತು. ನನ್ನ ಸೋದರ ಹಾಗೂ ಉಳಿದವರು ಪ್ರೆಸ್ಸಿನಿಂದ ಊಟಕ್ಕೆ ಹೋಗುವಾಗ ನಾನು ಒಬ್ಬನೇ ಅಲ್ಲಿ ಇರುತ್ತಿದ್ದೆ. ಆಗ ಲಘುವಾದ ಆಹಾರವನ್ನು ಬಿಚ್ಚುತ್ತಿದ್ದೆ. ಅದರಲ್ಲಿ ಹೆಚ್ಚಾಗಿ ಇರುವುದೆಂದರೆ—ಒಂದು ಬಿಸ್ಕತ್ತು ಅಥವಾ ಬ್ರೆಡ್ಡಿನ ತುಂಡು, ಒಂದು ಹಿಡಿ ಒಣ ದ್ರಾಕ್ಷಿ ಅಥವಾ ಬಟಗಡ್ಲೆ—ಬಾಣಸಿಗನಲ್ಲಿಂದ ತಂದ ಒಂದು ಹುಳಿ–ಚಟ್ನಿ ಮತ್ತು ಒಂದು ಗ್ಲಾಸು ನೀರು. ಇಷ್ಟನ್ನು ಮುಗಿಸಿದ ಮೇಲೆ ಉಳಿದ ಹೊತ್ತಿನಲ್ಲಿ ಅವರು ಬರುವ ತನಕ ನಾನು ಅಭ್ಯಾಸ ಮಾಡುತ್ತಿದ್ದೆ. ಈ ದಿಸೆಯಲ್ಲಿ ನಾನು ತುಂಬಾ ಪ್ರಗತಿ ಸಾಧಿಸಿದೆನು. ಯಾಕೆಂದರೆ ಮಿತವಾಗಿ ಉಣ್ಣುವುದರಿಂದ ಮತ್ತು ಕುಡಿಯುವುದರಿಂದ ಸಾಮಾನ್ಯವಾಗಿ ತಲೆಯು ಪರಿಶುದ್ಧವಾಗಿದ್ದು ತಿಳಿವಳಿಕೆಯು ಚುರುಕಾಗುವುದು.

ಲೆಕ್ಕದಲ್ಲಿ ನನ್ನ ದಡ್ಡತನದಿಂದ ಒಂದು ಪ್ರಸಂಗದಲ್ಲಿ ನನಗೆ ತುಂಬಾ ನಾಚಿಕೆಯಾಗಿತ್ತು. ಈ ಗಣಿತವನ್ನು ನಾನು ಸಾಲೆಯಲ್ಲಿದ್ದಾಗ ಎರಡು ಸಲ ಕಲಿಯಲು ಹೋಗಿ ಸೋತಿದ್ದೆ. ಈಗ ನಾನು ಕೋಕರನ ಗಣಿತ ಪುಸ್ತಕವನ್ನು ತೆಗೆದುಕೊಂಡು ಬಹಳ ಸುಲಭವಾಗಿ ನನ್ನಷ್ಟಕ್ಕೆ ಸಂಪೂರ್ಣ ಕಲಿತೆನು. ಅಂತೇ ಸೆಲ್ಲರ್ ಮತ್ತು ಶೆರ್ಮಿಯವರು ಬರೆದಿರುವ ಹಡಗು–ಸಂಚಾರ ವಿಷಯದ ಪುಸ್ತಕಗಳನ್ನು ಓದಿದೆನು. ಮತ್ತು ಅವುಗಳಲ್ಲಿ ಅಡಕವಾದ ಕೊಂಚ ಜ್ಯಾಮಿತಿಯನ್ನೂ ಅರಿತುಕೊಂಡುದಾಯಿತು. ಆದರೆ ಈ ಶಾಸ್ತ್ರದಲ್ಲಿ ಅದಕ್ಕಿಂತ ಹೆಚ್ಚು ಮುಂದುವರಿಯಲಿಲ್ಲ. ಈ ಹೊತ್ತಿನಲ್ಲೆ ನಾನು ಲೋಕ್ ಬರೆದಿರುವ 'ಆನ್ ಹ್ಯೂಮನ್ ಅಂಡರ್‌ಸ್ಟ್ಯಾಂಡಿಗ್' ಮತ್ತು ಮೆಸೆರ್ಸ್ ಡು ಪೋರ್ಟೆ ರೋಯಲ್‌ರು ಬರೆದಿರುವ 'ಆರ್ಟ್ ಆಫ್ ಥಿಂಕಿಂಗ್' ಪುಸ್ತಕವನ್ನೂ ಓದಿದೆನು.

ನನ್ನ ಶೈಲಿಯನ್ನು ಸುಧಾರಿಸುವುದರಲ್ಲಿ ನಾನು ತೊಡಗಿರುವ ಹೊತ್ತಿನಲ್ಲಿ ಒಂದು ಇಂಗ್ಲೀಷ್ ವ್ಯಾಕರಣ (ಅದು ಗ್ರೀನ್‌ವುಡ್ ಬರೆದು

ದೆಂದು ನನಗೆನಿಸುತ್ತದೆ) ಪುಸ್ತಕ ದೊರಕಿತು. ಅದರ ಕೊನೆಯಲ್ಲಿ ಅಲಂಕಾರಶಾಸ್ತ್ರ ಹಾಗೂ ತರ್ಕಶಾಸ್ತ್ರ—ಇವೆರಡು ಕಲೆಗಳ ಚಿಕ್ಕ ರೂಪ ರೇಷೆಗಳು ಇದ್ದವು. ಎರಡನೆಯದು—ಸೊಕ್ರೆಟೀಸನ ಪದ್ಧತಿಯಂತೆ ವಾದ ವನ್ನು ಕೊನೆಗೊಳಿಸುವ ಮಾದರಿಯಲ್ಲಿತ್ತು. ತರುವಾಯ ನಾನು ಬೇಗನೆ ಝೆನೋಫೋನನ 'ಮೆಮೊರೆಬಲ್ ಥಿಂಗ್ಸ್ ಆಫ್ ಸೊಕ್ರೆಟೀಸ್' ಎಂಬ ಪುಸ್ತಕವನ್ನು ದೊರಕಿಸಿಕೊಂಡೆನು. ಇದರಲ್ಲಿ ಈ ಪದ್ಧತಿಯ ಅನೇಕ ಉದಾಹರಣೆಗಳಿದ್ದವು. ಅದರಿಂದ ನಾನು ಮುಗ್ಧನಾದೆನು. ಅದನ್ನು ಅಳವಡಿಸಿಕೊಂಡೂ ಆಯಿತು. ನನ್ನ ಅಸಂಬದ್ಧ ವಾಗ್ವಿರೋಧಗಳನ್ನೂ ನಿಶ್ಚಿತ ವಾದರೀತಿಯನ್ನೂ ನಿಲ್ಲಿಸಿದೆನು, ಮತ್ತು ನಮ್ರ ಶೋಧಕ ಹಾಗೂ ಸಂಶಯಸ್ಥನಂತೆ ವರ್ತಿಸತೊಡಗಿದೆನು. ಅಂತೇ ಆ ಮೇಲೆ ಶಾಫ್ಟ್ಸಬರಿ ಮತ್ತು ಕೊಲಿನ್ಸರನ್ನು ಓದಿಕೊಂಡುದರಿಂದ ನಮ್ಮ ಧರ್ಮದ ತತ್ವಗಳ ಬಗ್ಗೆ ಅನೇಕ ರೀತಿಯಲ್ಲಿ ನಿಜವಾದ ಸಂಶಯಸ್ಥನಾದೆ. ನನ್ನ ಮಟ್ಟಿಗೆ ಈ ಪದ್ಧತಿಯು ಕ್ಷೇಮಕರವಾದುದೆಂದು ನನಗೆನಿಸಿತು ಮತ್ತು ಯಾರ ವಿರುದ್ಧ ಇದನ್ನು ಬಳಸುವೆನೋ ಅವರನ್ನು ಇದು ಕಷ್ಟಕ್ಕೀಡುಮಾಡುವುದೆಂದು ಕಂಡುಕೊಂಡೆನು. ಆದುದರಿಂದ ನಾನು ಅದರಲ್ಲಿ ಆನಂದಿಸಹತ್ತಿದೆನು. ಅದನ್ನು ಮುಂದುವರಿಸಿದುದೂ ಆಯಿತು. ಹೀಗೆ ಘನ ವಿದ್ವಾಂಸರನ್ನು ಕೂಡಾ ಸೋಲಿಸುವಷ್ಟು ಕುಶಲನೂ ಚತುರನೂ ನಾನಾದೆನು. ಅದರ ಪರಿಣಾಮವು (ಕಾರ್ಯವು) ಅವರಿಗೆ ತಿಳಿದುಬರುತ್ತಿರಲಿಲ್ಲ. ಹೀಗೆ ಅವ ರನ್ನು ತೊಡಕಿನಲ್ಲಿ ಸಿಲುಕಿಸಿದಾಗ ಅವರಿಂದಾಗಿಯೇ ಅದರಿಂದ ಪಾರಾಗಲು ಸಾಧ್ಯವಾಗುತ್ತಿರಲಿಲ್ಲ. ಇದರಿಂದಾಗಿ ನನಗೆ ಅಥವಾ ನನ್ನ ಕಾರಣ (cause) ಕ್ಕೆ ಸಲ್ಲಬೇಕಾಗಿರದ ವಿಜಯವು ದೊರೆಯುತ್ತಿತ್ತು. ಈ ಪದ್ಧತಿ ಯನ್ನು ನಾನು ಕೆಲವು ವರುಷಗಳ ತನಕ ಮುಂದುವರಿಸಿದೆನು. ಆದರೆ ಕ್ರಮೇಣ ಅದನ್ನು ಬಿಟ್ಟೆನು. ಕೇವಲ ನಮ್ರ ಶಬ್ದಗಳಿಂದ ವ್ಯಕ್ತಗೊಳಿ ಸುವ ಅಭ್ಯಾಸವನ್ನು ಉಳಿಸಿಕೊಂಡೆನು. ನಾನು ಮುಂದುವರಿದಾಗ ಯಾವ ರೀತಿಯ ವಾದಕ್ಕೆ ಎಡೆಯಿಲ್ಲದಂತೆ ಯಾವಾಗಲೂ ನೋಡಿಕೊಳ್ಳುತ್ತಿದ್ದೆ. ಸಹಜವಾಗಿ ವಾದಿಸಲರ್ಹವಾದ ವಿಷಯವೆತ್ತಿ ಮಾತನಾಡುವಾಗ ನಾನೆಂದೂ 'ಖಂಡಿತವಾಗಿ,' 'ನಿಸ್ಸಂಶಯವಾಗಿ' ಎಂಬ ಅಥವಾ ನನ್ನ ಅಭಿಪ್ರಾಯವನ್ನು ಒತ್ತಿ ಹೇಳುವ ಬೇರೆ ಯಾವ ಪದಗಳನ್ನಾಗಲೀ ಬಳಗು ತ್ತಿರಲಿಲ್ಲ. ಬದಲು—'ನನ್ನ ಊಹೆ ಪ್ರಕಾರ' ಅಥವಾ 'ಈ ವಿಷಯ ಹೀಗಿರ ಬಹುದೆಂದು ನಾನು ತಿಳಿಯುತ್ತೇನೆ', 'ನನಗೆ ಹೀಗೆ ಅನಿಸುತ್ತದೆ'

ಅಥವಾ 'ಹಾಗೆಂದು ನಾನು ತಿಳಿದುಕೊಳ್ಳಬೇಕಾಗಿದೆ'—'ಇಂಥ ಕಾರಣ ದಿಂದ ನಾನು ಅದನ್ನು ಹೀಗೆ ಬಗೆದಿದ್ದೇನೆ' ಅಥವಾ 'ನಾನು ತಪ್ಪಿರದಿದ್ದರೆ ಅದು ಹೀಗಿರಬಹುದು'—ಎಂದು ನಾನು ಹೇಳುತ್ತಿದ್ದೆ. ನನ್ನ ಅಭಿಪ್ರಾಯಗಳನ್ನು ಬೋಧಿಸಿ, ಕಾಲ ಕಾಲಕ್ಕೆ ನಾನು ಕೈಕೊಳ್ಳುತ್ತಿದ್ದ ಕಾರ್ಯಗಳನ್ನು ನೆರವೇರಿಸುವ ಉಪಕ್ರಮಗಳತ್ತ ಜನರನ್ನು ತಿರುಗಿಸುವ ಸಂದರ್ಭ ಒದಗಿದಾಗ ಈ ಅಭ್ಯಾಸವು ನನಗೆ ತುಂಬಾ ಲಾಭದಾಯಕವಾಗಿದೆಯೆಂದು ನನಗನಿಸುತ್ತದೆ. ವಿಷಯ ತಿಳಿಸುವುದು ಅಥವಾ ತಿಳಿದುಕೊಳ್ಳುವುದು, ಸಂತೋಷಪಡಿಸುವುದು ಅಥವಾ ಒಲಿಸಿಕೊಳ್ಳುವುದು—ಸಂಭಾಷಣೆಯ ಮುಖ್ಯ ಉದ್ದೇಶವಾಗಿರುವುದರಿಂದ ಯೋಗ್ಯರೂ ಬುದ್ಧಿವಂತರೂ ತಮ್ಮ ಅಭಿಪ್ರಾಯಗಳೇ ಸರಿಯೆಂದು ಸೂಚಿಸುವ ವರ್ತನೆಯಿಂದ ಸತ್ಕಾರ್ಯಗಳನ್ನು ಮಾಡುವ ಶಕ್ತಿಯನ್ನು ಕಡಿಮೆ ಮಾಡಿಕೊಳ್ಳಬಾರದೆಂದು ನನ್ನ ಬಯಕೆ. ಯಾಕೆಂದರೆ ಅದರಿಂದ ಜುಗುಪ್ಸೆ, ವೈರ ಎಂದೂ ಹುಟ್ಟದೆ ಇರುವುದು ಕಡಿಮೆ. ಅಂತೇ ನಮಗೆ ನೀಡಲಾದ ವಾಕ್ ಶಕ್ತಿಯ ಪ್ರತಿಯೊಂದು ಉದ್ದೇಶವನ್ನೂ—ಹೊಸ ವಿಷಯಗಳನ್ನು ತಿಳಿಯಪಡಿಸುವ ಅಥವಾ ತಿಳಿಯುವ ಅಥವಾ ಆನಂದವನ್ನು ನೀಡುವ ಯಾವ ಪ್ರಸಂಗವನ್ನೂ—ಅದು ಅಳಿಸಿಬಿಡುತ್ತದೆ. ಯಾಕೆಂದರೆ ನೀವು ವ್ಯಕ್ತಪಡಿಸಿದ ನಿಮ್ಮ ಭಾವನೆಗಳನ್ನು ಒತ್ತಾಯ ಪೂರ್ವಕ ಒಪ್ಪಿಸಲೆಳಸಿದರೆ, ವಿರೋಧವುಂಟಾಗಿ ಯಥಾರ್ಥವನ್ನು ತಡೆಯಬಹುದು. ಬೇರೆಯವರ ಜ್ಞಾನದಿಂದ ನಿಮಗೆ ವಿಷಯ ಸಂಗ್ರಹಣ ಮತ್ತು ಸುಧಾರಣೆಯಾಗುವುದು ಬೇಕಾಗಿದ್ದರೆ, ಮತ್ತು ಅದೇ ಪ್ರಕಾರ ನಿಮ್ಮ ಪ್ರಸ್ತುತ ಅಭಿಪ್ರಾಯಗಳನ್ನು ಖಂಡತುಂಡವಾಗಿ ವ್ಯಕ್ತಪಡಿಸಿ ಕೂತದ್ದೇ ಆದರೆ, ಸೌಮ್ಯ ಹಾಗೂ ವಿಚಾರವಂತ ವ್ಯಕ್ತಿಗಳು—ವಿವಾದ ಸೇರದಿದ್ದವರು—ನಿಮ್ಮನ್ನು ನಿಮ್ಮ ತಪ್ಪಿದ ಹಾದಿಯಲ್ಲೆ ಸ್ಥಿರವಾಗಿ ಬಿಟ್ಟು ಬಿಡಬಹುದು. ಆ ಪದ್ಧತಿಯಿಂದ ನಿಮ್ಮ ಶ್ರೋತೃಗಳನ್ನು ಸಂತೋಷಗೊಳಿಸುತ್ತೇನೆಂದು ಗ್ರಹಿಸಿಕೊಳ್ಳುವುದು ಬಹಳ ತ್ರಾಸದಾಯಕ ಅಥವಾ ನಿಮ್ಮ ಒಪ್ಪಿಗೆಗೆ ಪಾತ್ರರಾಗಬೇಕೆಂದು ಬಯಸಿದವರನ್ನು ಒಪ್ಪಿಸುವುದು ಬಹಳ ಕಷ್ಟ. ಪೋಪನು ನ್ಯಾಯ ಸಮ್ಮತವಾಗಿ ಹೀಗೆ ಹೇಳುತ್ತಾನೆ :

"ನೀವು ಅವರಿಗೆ ಕಲಿಸಿಲ್ಲವೆನ್ನುವ ರೀತಿಯಲ್ಲಿ ಜನರಿಗೆ ಕಲಿಸಬೇಕು, ಅಂತೇ ತಿಳಿಯದ ಸಂಗತಿಗಳನ್ನು ಮರೆತ ಸಂಗತಿಗಳಂತೆ ಮಂಡಿಸಬೇಕು,"

ಇನ್ನೂ ಮುಂದುವರಿದು—

"ಖಂಡಿತವಾಗಿದ್ದರೂ, ವಿನಯದೋರಿ ನುಡಿಯಬೇಕು." ಎಂದು ಹೇಳಿದ್ದಾನೆ. ಅಂತೇ ಅವನು ಮತ್ತೊಂದು ಸಾಲಿಗೆ ತುಸು ಅಸಮಂಜಸವಾಗಿ ಜೋಡಿಸಿದುದನ್ನು ಈ ಸಾಲಿಗೆ ಜೋಡಿಸಬಹುದಾಗಿತ್ತೆಂದು ನನಗೆನಿಸುತ್ತದೆ :

"ಯಾಕಂದರೆ–ವಿನಯ ಹೀನತೆಯೇ ವಿಚಾರಹೀನತೆಯು."

ಯಾಕೆ ತುಸು ಅಸಮಂಜಸ?—ಎಂದು ನೀವು ಕೇಳಿದರೆ ನಾನು ಈ ಸಾಲುಗಳನ್ನು ಉಚ್ಚರಿಸಬೇಕು,

"ಅವಿನಯ ಪದಗಳು ವಿರೋಧವನ್ನು ಸೈರಿಸವು,
ಯಾಕಂದರೆ–ವಿನಯಹೀನತೆಯೆ ವಿಚಾರಹೀನತೆಯು."

ಈಗ, ವಿಚಾರಹೀನತೆಯು (ಅದರ ಹೀನತೆಯಿಂದ ಮನುಷ್ಯನು ಅಷ್ಟೊಂದು ದುರ್ದೈವಿಯಾದಲ್ಲಿ) ಅವನ ವಿನಯಹೀನತೆಗೊಂದು ನೆಪವಲ್ಲವೇನು? ಕಾರಣ, ಈ ಕೆಳಗೆ ಹೇಳಿದ ಮಾತುಗಳು ಹೆಚ್ಚು ಯೋಗ್ಯವಾಗಿ ಇರಬಾರದೇನು?

"ಅವಿನಯ ಪದಗಳು ಕೇವಲ ಈ ಸಮಾಧಾನವನ್ನು ಸಹಿಸುವುವು,
ಏನೆಂದರೆ—ವಿನಯಹೀನತೆಯೇ ವಿಚಾರಹೀನತೆಯು."

ಏನಿದ್ದರೂ ನಾನಿದನ್ನು ಇನ್ನೂ ಯೋಗ್ಯ ನಿರ್ಧಾರಗಳ ಮುಂದಿಡಬೇಕು.

೧೭೨೦ ರಲ್ಲಿ ಅಥವಾ ೧೭೨೧ ರಲ್ಲಿ ನನ್ನ ಸೋದರನು ಒಂದು ವರ್ತಮಾನಪತ್ರವನ್ನು ಮುದ್ರಿಸಲು ಪ್ರಾರಂಭಿಸಿದ್ದನು. ಅಮೇರಿಕಾದಲ್ಲಿ ಹೊರಟ ಪತ್ರಿಕೆಗಳಲ್ಲಿ ಅದು ಎರಡನೆಯದಾಗಿತ್ತು. ಅದರ ಹೆಸರು 'ನ್ಯೂ ಇಂಗ್ಲೆಂಡ್ ಕೊರಾಂಟ್' ಎಂದಿತ್ತು. ಅದಕ್ಕಿಂತ ಮೊದಲು ಇದ್ದ ಏಕಮಾತ್ರ ಪತ್ರಿಕೆಯೆಂದರೆ—'ಬೋಸ್ಟನ್ ನ್ಯೂಸ್–ಲೆಟರ್' ಎಂಬುದು. ಅವನು ಕೈಕೊಂಡ ಈ ಕೆಲಸವನ್ನು ಕೆಲವು ಮಿತ್ರರು ಖಂಡಿಸಿದ್ದು ನನಗೆ ನೆನಪುಂಟು. ಅವರ ಮತದಂತೆ ಅಮೇರಿಕಾಕ್ಕೆ ಒಂದು ಪತ್ರಿಕೆಯು ಸಾಕಾಗುವುದರಿಂದ ಅವನ ಪತ್ರಿಕೆಯು ಯಶಸ್ವಿಯಾಗಲಿಕ್ಕೆ ಇಲ್ಲವೆಂದು ಅವರು ಹೇಳುತ್ತಿದ್ದರು. ಈ ಹೊತ್ತಿಗೆ (೧೭೭೧) ಸಾಧಾರಣ ಇಪ್ಪತ್ತೈದು ಪತ್ರಿಕೆಗಳಿವೆ. ಅವನು ತನ್ನ ಕೆಲಸವನ್ನು ಮುಂದುವರಿಸಿಯೇ ಬಿಟ್ಟನು. ಅಂತೇ ಟೈಪುಗಳನ್ನು ಜೋಡಿಸಿ, ಪತ್ರಿಕೆಗಳನ್ನು ಅಚ್ಚುಹಾಕಿ ಮುಗಿದ ನಂತರ, ಬೀದಿಗಳಲ್ಲಿ ಪತ್ರಿಕೆಗಳನ್ನು ಹೊತ್ತುಕೊಂಡು ಮಾರಾಟಮಾಡುವ ಕೆಲಸಕ್ಕೆ ನನ್ನನ್ನು ನೇಮಿಸಲಾಯಿತು.

ಅವನ ಮಿತ್ರರಲ್ಲಿ ಕೆಲವರು ಬುದ್ಧಿವಂತರಿದ್ದರು. ಈ ಪತ್ರಿಕೆಗೆ

ಅವರು ಚಿಕ್ಕ-ಚಿಕ್ಕ ಚುಟುಕಗಳನ್ನು ಬರೆದು ಆನಂದಿಸುತ್ತಿದ್ದರು. ಇದರಿಂದ ಪತ್ರಿಕೆಗೆ ಬೆಲೆ ಬಂತು ಮತ್ತು ಅದಕ್ಕೆ ಬೇಡಿಕೆ ಹೆಚ್ಚಿತು. ಅಂತೇ ಈ ಮಹಾಶಯರು ನಮ್ಮನ್ನು ಆಗಾಗ ಕಾಣುತ್ತಿದ್ದರು. ಅವರ ಸಂಭಾಷಣೆಗಳನ್ನು ಮತ್ತು ಅವರ ಲೇಖನಗಳಿಗೆ ದೊರೆಯುತ್ತಿದ್ದ ಪ್ರಶಂಸೆಯ ವೃತ್ತಾಂತವನ್ನು ಕೇಳಿ, ಅವರೊಡನೆ ನಾನು ಕೂಡಾ ಕೈ ಪಳಗಿಸಬೇಕೆಂದು ನನ್ನ ಕುತೂಹಲ ಕೆರಳಿತು. ಆದರೆ ಇನ್ನೂ ಹುಡುಗನಾಗಿರುವುದರಿಂದ, ಮತ್ತು ನನ್ನ ಸೋದರನು ತನ್ನ ಪೇಪರಿನಲ್ಲಿ ಒಂದುವೇಳೆ ನನ್ನದೆಂದು ತಿಳಿದರೆ ಏನನ್ನಾದರು ಮುದ್ರಿಸಲು ತಕರಾರು ಮಾಡಬಹುದೆಂದು ಸಂಶಯಪಟ್ಟು, ನನ್ನ ಹೆಸರನ್ನು ಮುಚ್ಚಿಡುವ ಹಂಚಿಕೆ ಹೂಡಿದೆನು. ಅಂತೇ ಅನಾಮಿಕ ಲೇಖನವೊಂದನ್ನು ಬರೆದು ಮುದ್ರಣಾಲಯದ ಬಾಗಿಲಿನೊಳಗೆ ನಾನು ರಾತ್ರಿಯಲ್ಲಿ ಹಾಕಿದ್ದೆನು. ಅದು ಬೆಳಿಗ್ಗೆ ಸಿಕ್ಕಿತು. ಮತ್ತು ವಾಡಿಕೆಯಂತೆ ಅವನ ಬರೆಯುವ ಗೆಳೆಯರು ಅಲ್ಲಿಗೆ ಬಂದಾಗ ಅವರಿಗೆ ಅದು ಕೊಡಲ್ಪಟ್ಟಿತು. ಅವರು ಅದನ್ನು ಓದಿದರು; ನನಗೆ ಕೇಳುವಂತೆ ಅದರ ಬಗ್ಗೆ ಚರ್ಚೆ ನಡೆಸಿಯೂ ಆಯಿತು; ಅಂತೇ ಅದರ ಕುರಿತು ಅವರು ಪ್ರಶಂಸೆ ಮಾಡುವುದನ್ನು ಕೇಳುವ ಅಪಾರ ಆನಂದವು ನನಗೆ ಲಭಿಸಿತು. ಅಲ್ಲದೆ ಅದರ ಲೇಖಕನ ಬಗ್ಗೆ ಅವರ ನಾನಾ ಊಹೆಗಳನ್ನು ಕೇಳಿದೆನು. ಆದರೆ ಅದರ ವಿದ್ವತ್ತಿಗೆ ಮತ್ತು ಚಾತುರ್ಯಕ್ಕೆ ನಮ್ಮಲ್ಲಿಯ ಗುಣಾಢ್ಯರನ್ನು ಬಿಟ್ಟು ಬೇರೆ ಯಾರನ್ನೂ ಹೆಸರಿಸಲಾಗಲಿಲ್ಲ. ಈಗ ನನ್ನ ನಿರ್ಣಾಯಕರ ಬಗ್ಗೆ ನಾನು ಸುದೈವಿಯೆಂದು ನನಗೆನಿಸುತ್ತದೆ. ಅಲ್ಲದೆ ಬಹುಶಃ ನಾನು ಅಂದು ಅವರನ್ನು ಘನತೆಗೇರಿಸಿದಷ್ಟು ಅವರು ಒಳ್ಳೆಯವರಾಗಿದ್ದರೆಂದು ಹೇಳಲಿಕ್ಕೆ ಸಾಧ್ಯವಿಲ್ಲ.

ಇದರಿಂದ ಉತ್ತೇಜನಗೊಂಡು ನಾನು ಇನ್ನೂ ಅನೇಕ ಲೇಖನಗಳನ್ನು ಬರೆದು ಇದೇ ರೀತಿಯಲ್ಲಿ ಪ್ರೆಸ್ಸಿಗೆ ಹಾಕಿದೆನು. ಅವುಗಳು ಕೂಡ ಅಷ್ಟೇ ಮೆಚ್ಚುಗೆಗೆ ಪಾತ್ರವಾದವು. ಇಂಥ ಬರವಣಿಗೆಯ ಈ ಗೋಪ್ಯವನ್ನು ನನ್ನ ಅಲ್ಪ ಜ್ಞಾನನಿಧಿಯು ಸಾಕಷ್ಟು ಬರಿದಾಗುವ ತನಕ ಮುಚ್ಚಿಟ್ಟೆನು. ನನ್ನ ಸೋದರನ ಮೂಲಕ ನಾನು ಇನ್ನೊಂದು ತುಸು ಹೆಚ್ಚಿಗೆ ಹೊರಗೆ ಕಾಣಿಸಿಕೊಳ್ಳಹತ್ತಿದಾಗ, ಅವನಿಗೆ ಏಕೋ ಅದು ಅಷ್ಟೊಂದು ಸೇರಲಿಲ್ಲವೆಂಬುದನ್ನು ಕಂಡುಕೊಂಡೆನು. ಬಹುಶಃ ಅದರಿಂದ ನಾನು ಒಂದಿಷ್ಟು ಗರ್ವಿಷ್ಟನಾಗಬಹುದೆಂದು ಅವನು ತಿಳಿಯುಕೊಂಡಂತೆ ಇತ್ತು. ಈ ಹೊತ್ತಿಗೆ ನಮ್ಮಲ್ಲಿ ಉಂಟಾಗತೊಡಗಿದ ಭಿನ್ನಾಭಿಪ್ರಾಯಗಳಲ್ಲಿ ಇದೂ

ಒಂದು ಸಂದರ್ಭವೆಂದು ಹೇಳಬಹುದು. ನನ್ನ ಸೋದರನಾಗಿದ್ದರೂ ಅವನು ನನ್ನ ಯಜಮಾನನಂತೆ ನಡೆಯತೊಡಗಿದನು. ಅವನ ಶಿಷ್ಯ ನಾನೆಂದು ತಿಳಿದುಕೊಂಡು ಬೇರೊಬ್ಬನಿಂದ ಪಡೆಯಬಹುದಾದ ಕೆಲಸ ಗಳನ್ನು ನನ್ನಿಂದ ಪಡೆಯಬೇಕೆಂದು ಬಗೆದನು. ಆದರೆ ಅವನಿಗೆ ಉಪ ಯೋಗ ಬೀಳುವ ನನ್ನ ಕೆಲಸಗಳಲ್ಲಿ ಅವನು ನನ್ನನ್ನು ತೀರಾ ಕೀಳಾಗಿ ಕಾಣುತ್ತಾನೆಂದು ನನಗನಿಸಿತು. ಇತ್ತ ನಾನು ನನ್ನ ಸೋದರನಿಂದ ನನ್ನ ಸೋಮಾರಿತನವೂ ಒಂದಿಷ್ಟು ದೂರವಾಗಿ ಮರೆಮಾಚಿ ಹೋಗುವು ದೆಂದು ಎಣಿಸಿದ್ದನು. ನಮ್ಮ ಜಗಳಗಳನ್ನು ಆಗಾಗ ನಮ್ಮ ತಂದೆಯವರ ಮುಂದೆ ತರಲಾಗುತ್ತಿತ್ತು. ಅಂತೇ ನಾನು ಸಾಮಾನ್ಯವಾಗಿ ತಪ್ಪುಗಾರ ನಾಗುತ್ತಿದ್ದಿಲ್ಲವೆಂದು ತಿಳಿದುಕೊಂಡಿದ್ದೇನೆ. ಅಥವಾ ನಾನೊಬ್ಬ ಉತ್ತಮ ವಾಗಿ ವಾದಿಸುವವನಾಗಿದ್ದೆನೆಂದು ನನ್ನ ಎಣಿಕೆ. ಏಕೆಂದರೆ, ಸಾಮಾನ್ಯ ವಾಗಿ ನನಗೆ ಅನುಕೂಲವಾಗಿಯೇ ನ್ಯಾಯ ತೀರ್ಮಾನವಾಗುತ್ತಿತ್ತು. ಆದರೆ ನನ್ನ ಸೋದರನು ಮುಂಗೋಪಿಯಾಗಿದ್ದನು ಮತ್ತು ಆಗಾಗ ನನಗೆ ಹೊಡೆಯುತ್ತಿದ್ದನು. ಇದನ್ನು ದೊಡ್ಡ ತಪ್ಪೆಂದು ನಾನು ತಿಳಿದುಕೊಳ್ಳು ತ್ತಿದ್ದೆ. ನನ್ನ ತರಬೇತಿಯ ಕಾಲವು ತಲೆಬೇಸರ ಹುಟ್ಟಿಸುವುದೆಂದು ನಾನು ನೆನಸುತ್ತಿದ್ದೆ. ಅದರ ಅವಧಿಯನ್ನು ಕಡಿಮೆ ಮಾಡಲು ನಾನು ಸತತ ಆಶಿಸುತ್ತಿದ್ದೆ. ಆದರೆ ಕಾಲಾವಧಿಯ ಮೇಲೆ ಅದು ಅಕಲ್ಪಿತ ರೀತಿ ಯಲ್ಲಿ ಕೂಡಿಕೊಂಡು ಬಂದಿತು.*

ನಮ್ಮ ವರ್ತಮಾನ ಪತ್ರಿಕೆಯಲ್ಲಿನ ಲೇಖನಗಳಲ್ಲಿ–ರಾಜಕಾರ್ಯಕ್ಕೆ ಸಂಬಂಧಪಟ್ಟ ಒಂದು ಲೇಖನವು ಅಸೆಂಬ್ಲಿಗೆ ಬೇಸರವನ್ನು ತಂದಿತು. ಆ ಲೇಖನವು ನನಗೀಗ ನೆನಪಿಲ್ಲ. ಅವನು ಬಂಧಿಸಲ್ಪಟ್ಟು ವಾಗ್ದಂಡನೆಗೆ ಗುರಿಯಾಗಿ, ಒಂದು ತಿಂಗಳವರೆಗೆ ಸೆರೆಯಲ್ಲಿಡಲ್ಪಟ್ಟನು. ಸಭಾಪತಿಯ ಆಕ್ಷೇಪಣೆಯ ಮೇರೆಗೆ ಇದು ಜಾರಿಯಾಗಿತ್ತು. ಕಾರಣ ಅವನಿಂದ ಅದರ ಲೇಖಕನನ್ನು ಹುಡುಕಲಿಕ್ಕಾಗಲಿಲ್ಲವೆಂದು ನನಗೆ ಅನಿಸುತ್ತದೆ. ನಾನು ಕೂಡ ಅಲ್ಲಿಗೆ ಒಯ್ಯಲ್ಪಟ್ಟೆನು. ಕೌನ್ಸಿಲಿನ ಮುಂದೆ ನನ್ನ ತಪಾಸಣೆಯೂ ನಡೆಯಿತು. ಆದರೆ ನಾನು ಅವರಿಗೆ ಯಾವತರಹದ ಯೋಗ್ಯ ಉತ್ತರಗಳನ್ನು

---

*ನನ್ನನ್ನು ಹೀಗೆ ದುಷ್ಟ ಹಾಗೂ ಕಠೋರ ರೀತಿಯಿಂದ ಶಿಕ್ಷಿಸಿದ ಕಾರಣ ನನ್ನ ಇಡೀ ಜೀವನದಲ್ಲೇ ನನ್ನಲ್ಲಿ ಸ್ವೇಚ್ಛಾಚಾರ ವೃತ್ತಿಯಬಗೆಗೆ ವೈರವು ಬೆಳೆದು ತಲೆದೋರಿತು ಎಂದು ಹೇಳಬಹುದಾಗಿದೆ.

ಕೊಡದಿದ್ದರೂ ನನಗೆ ಕೇವಲ ಎಚ್ಚರಿಕೆ ಕೊಟ್ಟು ತೃಪ್ತಿಪಟ್ಟರು. ನನ್ನನ್ನು ಅಲ್ಲಿಂದ ಹಿಂದೆ ಕಳುಹಿಸಿದರು. ಬಹುಶಃ ನಾನೊಬ್ಬ ತರಬೇತಿ ಪಡೆಯುವವನಾದ ಕಾರಣ ನನ್ನ ಪ್ರಭುವಿನ ಗೌಪ್ಯವನ್ನು ನಾನು ಮುಚ್ಚಿಡಲೇಬೇಕೆಂದು ಅವರಿಗೆ ಅನಿಸಿರಬಹುದು.

ನನ್ನ ಸೋದರನು ಸೆರೆಮನೆಯಲ್ಲಿರುವಾಗ, ನಮ್ಮ ಖಾಸಗಿ ಭಿನ್ನಾಭಿಪ್ರಾಯಗಳತ್ತ ಲಕ್ಷ್ಯ ಕೊಡದೆ ನಾನು ಪತ್ರಿಕೆಯ ಉಸ್ತುವಾರಿಯನ್ನು ನೋಡಿಕೊಂಡಿದ್ದೆ. ಅವನ ಬಂಧನವನ್ನು ಸಾಕಷ್ಟು ವಿರೋಧಿಸಿದ್ದೂ ಆಯಿತು. ಅಲ್ಲದೆ ನಮ್ಮನ್ನು ಆಳುವವರಿಗೆ ನಾನು ಧೈರ್ಯದಿಂದ ಕೆಲವೊಂದು ಚುಚ್ಚು ಮಾತುಗಳನ್ನು ಬರೆಯುತ್ತಿದ್ದೆ. ಇದನ್ನು ನನ್ನ ಸೋದರನು ತುಂಬಾ ಆದರದಿಂದ ಸ್ವಾಗತಿಸಿದನು. ಆದರೆ ಉಳಿದವರು ನನ್ನನ್ನು ವಕ್ರದೃಷ್ಟಿಯಿಂದ ನೋಡಲಿಕ್ಕೆ ಹತ್ತಿದರು. ನಾನೊಬ್ಬ ನಿಂದಾತ್ಮಕ ಹಾಗೂ ಕಟು ಹಾಸ್ಯದ ಪ್ರವೃತ್ತಿಯುಳ್ಳ ಬುದ್ಧಿವಂತ ತರುಣನೆಂದು ತಿಳಿದು ನನ್ನನ್ನು ಹಾಗೆ ಕಾಣುತ್ತಿದ್ದರು. ನನ್ನ ಸೋದರನ ಬಿಡುಗಡೆಯು ಸಭೆಯ (House) ಕಟ್ಟಪ್ಪಣೆಯೊಂದಿಗೆ (ಅದು ಭಾರೀ ದುಷ್ಟವಾದುದು) ಆಯಿತು. "ಜೇಮ್ಸ್ ಫ್ರ್ಯಾಂಕ್ಲಿನನು ಇನ್ನು ಮೇಲೆ 'ನ್ಯೂ ಇಂಗ್ಲೆಂಡ್ ಕೊರಾಂಟ್' ಎಂಬ ಹೆಸರಿನ ಪತ್ರಿಕೆಯನ್ನು ಮುದ್ರಿಸಬಾರದು, ಎಂಬುದು ಆ ಆಜ್ಞೆಯಾಗಿತ್ತು.

ಈ ವಿಷಯದಲ್ಲಿ ಅವನು ಏನು ಮಾಡಬೇಕೆಂಬುದರ ಕುರಿತು ಮುದ್ರಣಾಲಯದಲ್ಲಿ ಅವನ ಮಿತ್ರರು ಸಮಾಲೋಚನೆ ನಡೆಸಿದರು. ಪತ್ರಿಕೆಯ ಹೆಸರನ್ನು ಬದಲಿಸಿ ಆಜ್ಞೆಯಿಂದ ಪಾರಾಗಬಹುದೆಂದು ಕೆಲವರು ಸೂಚಿಸಿದರು. ಆದರೆ ಅದರಲ್ಲಿನ ತೊಡಕುಗಳನ್ನು ಮನಗಂಡ ನನ್ನ ಸೋದರನು ಕೊನೆಗೊಂದು ಉತ್ತಮ ರೀತಿಯಲ್ಲಿ ಈ ಸಂಗತಿಯನ್ನು ನಿರ್ಣಯಿಸಿದನು. ಅಂತೇ ಇನ್ನು ಮುಂದೆ ಬೆಂಜಮಿನ್ ಫ್ರ್ಯಾಂಕ್ಲಿನನ ಹೆಸರಿನಿಂದ ಮುದ್ರಿಸುವುದೆಂದು ಠರಾವು ಆಯಿತು. ಮತ್ತು ಅಸೆಂಬ್ಲಿಯ ನಿಷೇಧವನ್ನು ತಪ್ಪಿಸುವುದಕ್ಕೆ—ಅಂದರೆ ಅವನ ಶಿಷ್ಯನಿಂದಲೇ ಅದು ಇನ್ನೂ ಮುದ್ರಣಗೊಳ್ಳುತ್ತದೆಂಬುದನ್ನು ತಪ್ಪಿಸಲು – ನನ್ನ ಹಳೆಯ ಕರಾರು ಪತ್ರಗಳನ್ನು ನನಗೆ ಮರಳಿ ಕೊಡುವ ಏರ್ಪಾಡು ಮಾಡಲಾಯಿತು. ಅದರ ಹಿಂಬದಿಯಲ್ಲಿ ಸಂಪೂರ್ಣ ಬಿಡುಗಡೆಯನ್ನು ಸೂಚಿಸಬೇಕಾಗಿತ್ತು. ಪ್ರಸಂಗ ಬಿದ್ದಾಗ ಅದನ್ನು ತೋರಿಸಬೇಕಾಗಿತ್ತು. ಆದರೆ ನನ್ನ ಸೇವೆಯ ಲಾಭವನ್ನು ಅವನಿಗೆ ದೊರಕಿಸುವುದಕ್ಕಾಗಿ ಇನ್ನುಳಿದ

ಅವಧಿಯವರೆಗೆ ನಾನು ಹೊಸ ಕರಾರುಪತ್ರಕ್ಕೆ ಸಹಿ ಮಾಡಬೇಕಾಗಿತ್ತು. ಹಾಗೆಯೇ ನಾನದನ್ನು ಗುಪ್ತವಾಗಿ ಇಡಬೇಕಾಗಿತ್ತು. ಏನಿದ್ದರೂ ಇದೊಂದು ಭಾರೀ ಗೊಂದಲದ ಯೋಜನೆ. ಆ ಕೂಡಲೆ ಕಾರ್ಯಗತ ವಾದುದೂ ಆಯಿತು. ಪತ್ರಿಕೆಯು ನನ್ನ ಹೆಸರಿನಲ್ಲೆ ಅನೇಕ ತಿಂಗಳುಗಳ ತನಕ ನಡೆಯಿತು.

ಕೆಲ ಕಾಲದ ನಂತರ ನನ್ನ ಸೋದರನಿಗೂ ನನಗೂ ಉಂಟಾದ ಹೊಸ ಮನಸ್ತಾಪದಲ್ಲಿ ನನ್ನ ಸ್ವಾತಂತ್ರ್ಯವನ್ನು ದೃಢಪಡಿಸಿಕೊಳ್ಳಲು ತೊಡಗಿದೆ. ಅವನು ಹೊಸ ಕರಾರು ಪತ್ರಗಳನ್ನು ಸಾದರಪಡಿಸುವ ಸಾಹಸ ಮಾಡಲಿಕ್ಕಿಲ್ಲವೆಂದು ನಾನು ಯೋಚಿಸಿದ್ದೆ. ಈ ಲಾಭವನ್ನು ಪಡೆದುಕೊಳ್ಳುವುದು ನನಗೆ ಯೋಗ್ಯವಾದುದಾಗಿರಲಿಲ್ಲ. ಇದನ್ನು ಆ ಕಾರಣದಿಂದ ನಾನು ನನ್ನ ಜೀವನದ ತಪ್ಪುಗಳಲ್ಲಿ ಮೊದಲಿನದೆಂದು ಭಾವಿಸುವೆನು. ಆದರೆ ಅವನ ಸಿಟ್ಟಿನಿಂದ ಕಠೋರ ಆಘಾತಗಳು ಆಗಾಗ ನನ್ನಮೇಲೆ ನಡೆಸುತ್ತಿರುವ ಕಲ್ಪನೆಯು ನನ್ನಲ್ಲಿ ಬಂದಾಗ ಅದರ ಅಯೋಗ್ಯ ತೆಯು ನನಗೆ ಅಷ್ಟೊಂದು ಕಟಿಯುತ್ತಿರಲಿಲ್ಲ. ಹೀಗಿಲ್ಲದಿದ್ದರೆ ಅವನು ಹಾಗೇನು ಕೆಟ್ಟ ಸ್ವಭಾವದ ಮನುಷ್ಯನಲ್ಲ. ಬಹುಶಃ ನಾನೇ ತೀರಾ ಅವಿಧೇಯ ಮತ್ತು ಕೋಪಿಷ್ಟನಾಗಿರಬಹುದು.

ನಾನು ಅವನನ್ನು ಬಿಟ್ಟು ಹೋಗುವುದು ತಿಳಿದೊಡನೆ ಅವನು ನನಗೆ ಆ ಪಟ್ಟಣದ ಯಾವ ಮುದ್ರಣಾಲಯದಲ್ಲೂ ಕೆಲಸ ದೊರೆಯದಂತೆ ನೋಡಿಕೊಳ್ಳುವ ಎಚ್ಚರಿಕೆ ವಹಿಸಿದನು. ಪ್ರತಿಯೊಬ್ಬ ಧನಿಯೊಡನೆ (Master) ಮಾತಾಡಲು ಎಲ್ಲೆಲ್ಲೂ ಸುತ್ತಾಡಿದನು. ಇದರಿಂದಾಗಿ ಯಾವ ಧನಿಯೂ ನನಗೆ ಕೆಲಸ ಕೊಡಲು ಒಪ್ಪಲಿಲ್ಲ. ಆ ಮೇಲೆ ನಾನು ನ್ಯೂಯಾರ್ಕಿಗೆ ಹೋಗುವ ವಿಚಾರ ಮಾಡಿದೆನು. ಅದು ಹತ್ತಿರದ ಸ್ಥಳ ಮತ್ತು ಅಲ್ಲೊಬ್ಬ ಪ್ರಿಂಟರನಿದ್ದನು. ನಾನು ಬೋಸ್ಟನ್ ಬಿಡುವ ವಿಚಾರ ದಲ್ಲೆ ಇದ್ದೆನು. ಆಳುವ ಪಕ್ಷದವರಿಗೆ ಇಷ್ಟರಲ್ಲೆ ತುಸು ಆಕ್ಷೇಪಯುಕ್ತ ವಾಗಿ ನಾನು ವರ್ತಿಸುತ್ತಿರುವುದನ್ನು ಮನಗಂಡಾಗ ನನಗೆ ಈ ವಿಚಾರ ಬಂದಿತು. ಮತ್ತು ನನ್ನ ಸೋದರನ ಖಟ್ಲೆಯಲ್ಲಿ ಅಸೆಂಬ್ಲಿಯ ನಿರಂಕುಶ ವರ್ತನೆಯಿಂದಾಗಿ ಇನ್ನೂ ನಾನು ಇಲ್ಲಿ ಉಳಿದುಕೊಂಡರೆ ಬೇಗನೆ ತೊಂದರೆಗೀಡಾಗುವ ಸಂಭವ ಕೂಡಾ ಇತ್ತು. ಅಲ್ಲದೆ ಧರ್ಮದ ಬಗ್ಗೆ ನನ್ನ ತಿಳಿಗೇಡಿ ವಿವಾದಗಳಿಂದಾಗಿ ಒಳ್ಳೆಯ ವ್ಯಕ್ತಿಗಳಿಂದ ನಾನು ನಾಸ್ತಿಕ ಅಥವಾ ಧರ್ಮನಿಂದಕನೆಂದು ಕರೆಯಲ್ಪಡುವ ಭಯವು ನನಗುಂಟಾಗ

ಹತ್ತಿತು. ನನ್ನ ನಿರ್ಧಾರಕ್ಕೆ ನಾನು ಬಂದುದಾಯಿತು. ಆದರೆ ಈಗ ನನ್ನ ತಂದೆಯವರು ಸೋದರನ ಪಕ್ಷ ವಹಿಸಿರುವುದರಿಂದ ನಾನು ಬಹಿರಂಗವಾಗಿ ಹೋಗಲಿಕ್ಕೆ ಸಾಧ್ಯವಿಲ್ಲೆಂಬುದು ನನಗೆ ತಿಳಿದಿತ್ತು. ನನ್ನ ಗೆಳೆಯನಾದ ಕೊಲಿನ್ಸನು ನನಗೆ ತುಸು ಸಹಾಯದ ವ್ಯವಸ್ಥೆ ಕೈಕೊಂಡನು. ನ್ಯೂಯಾರ್ಕ್ ಜಲಯಾನದ ಕಪ್ತಾನನ ಸಂಗಡ ಅವನು ನನ್ನ ಸಮುದ್ರ ಪ್ರವಾಸದ ಬಗ್ಗೆ ಒಂದು ಮಾತು ಹೇಳಿ ಅವನ ಒಪ್ಪಿಗೆ ಪಡೆದನು. ಅಂದರೆ ತಾರುಣ್ಯದಲ್ಲಿ ಅವನಿಗೂ ನನಗೂ ಸ್ನೇಹವಾಗಿದೆಯೆಂದೂ, ಅಂತೇ ನನಗೊಬ್ಬಳು ತುಂಟ ಹುಡುಗಿಯ ಪರಿಚಯುವಾಗಿ ಮತ್ತು ಅವಳಿಗೊಂದು ಮಗು ಕೂಡ ಇದ್ದ ಕಾರಣ, ಅವಳನ್ನು ಮದುವೆಯಾಗಬೇಕೆಂದು ನನಗೆ ಅವಳ ಸ್ನೇಹಿತರು ಬಲವಂತಗೊಳಿಸುತ್ತಿದ್ದುರಿಂದ ನಾನು ಎಲ್ಲಿಯೂ ಕಾಣಿಸಿಕೊಳ್ಳಬಾರದು ಅಥವಾ ಬಹಿರಂಗವಾಗಿ ಬರಲಿಕ್ಕೆ ಸಾಧ್ಯವಿಲ್ಲ ವೆಂಬುದು ಆ ಮಾತಿನ ಇತ್ಯರ್ಥವಾಗಿತ್ತು. ಕೊಂಚ ಹಣ ದೊರಕಿಸಿ ಕೊಳ್ಳುವುದಕ್ಕಾಗಿ ನಾನು ನನ್ನ ಕೆಲವೊಂದು ಪುಸ್ತಕಗಳನ್ನು ಮಾರಿದೆನು. ಗುಪ್ತವಾಗಿ ನನ್ನ ಸಮುದ್ರಯಾನವೂ ನಡೆಯಿತು. ಯೋಗ್ಯ ಗಾಳಿಯೂ ನನುಗೆ ಸಹಕರಿಸಿದುದರಿಂದ ನಾನು ಮೂರು ದಿವಸಗಳಲ್ಲಿ ನ್ಯೂಯಾರ್ಕಿಗೆ ತಲಪಿದ್ದಾಯಿತು. ಮನೆಯಿಂದ ಸುಮಾರು ೩೦೦ ಮೈಲುಗಳಷ್ಟು ದೂರ ಬಂದಿದ್ದೆ; ಕೇವಲ ಹದಿನೇಳು ವರುಷದ ಹುಡುಗ ನಾನು; ಮನೆಯವರ ಒಂದಿಷ್ಟು ಅನುಮತಿಯಿಲ್ಲದೆ ಅಥವಾ ಆ ಊರಿನ ಯಾವ ಮನುಷ್ಯನಿಗೂ ಗೊತ್ತಾಗದಂತೆ ಮತ್ತು ಕಿಸೆಯಲ್ಲಿ ಒಂದೆರಡು ಪುಡಿ ಕಾಸು ಮಾತ್ರ ಇಟ್ಟು ಕೊಂಡು ನ್ಯೂಯಾರ್ಕಿನಲ್ಲಿ ಬಂದಿಳಿದೆನು.

ಈ ಹೊತ್ತಿನಲ್ಲಿ ಸಮುದ್ರದ ಕಡೆಯ ನನ್ನ ಬಲವೆಲ್ಲ ನುಚ್ಚು ನೂರಾ ಗಿತ್ತು ಅಥವಾ ನಾನು ಅದನ್ನು ಆನಂದಿಸಿಯಾಗಿರಲೂ ಸಾಕು. ಆದರೆ ಒಂದು ಉದ್ಯೋಗವಿದ್ದ ಮೂಲಕ ಮತ್ತು ನಾನೊಬ್ಬ ಸಾಕಷ್ಟು ಯೋಗ್ಯ ಕೆಲಸ ಗಾರನೆಂದು ಬಗೆದು ಆ ಸ್ಥಳದ ಹಳೆಯ ಮುದ್ರಕನಾದ ಮಿಸ್ಟರ್ ವಿಲಿಯಮ್ ಬ್ರ್ಯಾಡ್‌ಫೋರ್ಡ್ ಎಂಬವನಿಗೆ ನನ್ನ ಸೇವೆಯನ್ನು ಅರ್ಪಿಸಿ ದೆನು. ಈತನು ಪೆನ್ಸಿಲ್ವೇನಿಯಾದಲ್ಲಿನ ಮೊದಲನೆ ಮುದ್ರಕನಾಗಿದ್ದನು. ಆದರೆ ಜಾರ್ಜ್ ಕೀತ್‌ನ ಕೂಡ ವೈಮನಸ್ಸು ಮಾಡಿಕೊಂಡು ಅಲ್ಲಿಂದ ಬೇರೆ ಡೆಗೆ ಬಂದಿದ್ದನು. ಹೆಚ್ಚಿನ ಕೆಲಸವಿಲ್ಲದ ಕಾರಣ ಮತ್ತು ಸಾಕಷ್ಟು ಸಹಾಯಕರು ಇಷ್ಟರಲ್ಲೆ ಅವನಲ್ಲಿದ್ದುದರಿಂದ ನನಗೆ ಯಾವ ಕೆಲಸ ವನ್ನೂ ಕೊಡಲಿಕ್ಕೆ ಅಸಾಧ್ಯವಾಗಿತ್ತು. ಆದರೆ ಅವನು, "ಫಿಲಡೆಲ್ಫಿಯಾದಲ್ಲಿ

ಎಕ್ವಿಲಾ ರೋಸ್ ಎಂಬವನ ಮರಣಾನಂತರ ನನ್ನ ಮಗನು ಒಬ್ಬ ಮುಖ್ಯ ಕೆಲಸಗಾರನನ್ನು ಕಳೆದುಕೊಂಡ ಹಾಗಾಗಿದೆ. ನೀನು ಅಲ್ಲಿಗೆ ಹೋದರೆ ಅವನು ನಿನಗೆ ಕೆಲಸ ಕೊಡಬಹುದೆಂದು ನಾನು ನಂಬಿದ್ದೇನೆ" ಎಂದು ಹೇಳಿದನು. ಫಿಲಡೆಲ್ಫಿಯಾ ಇನ್ನೂ ನೂರು ಮೈಲಿಗಳಾಚೆ ಇತ್ತು. ನನ್ನ ಸಾಹಿತ್ಯ–ಸಾಮಗ್ರಿಗಳನ್ನು ಮತ್ತು ಪೆಟ್ಟಿಗೆಯನ್ನು ಸುತ್ತುವರಿದು ಸಮುದ್ರದ ಮುಖಾಂತರ ಬರುವಂತೆ ಅಲ್ಲಿಯೇ ಬಿಟ್ಟು ಹೇಗಾದರೂ ನಾನೊಂದು ದೋಣಿಯಲ್ಲಿ ಎಂಬ್ಯೊ (Amboy) ಕಡೆಗೆ ಹೊರಟು ಬಿಟ್ಟೆನು.

ಕೊಲ್ಲಿಯನ್ನು ದಾಟುವಾಗ ನಾವು ಬಿರುಗಾಳಿಯಲ್ಲಿ ಸಿಲುಕಿಕೊಂಡೆವು. ನಮ್ಮ ಹಳೆಯ ಹಾಯಿಗಳನ್ನು ಅದು ನುಚ್ಚು–ನೂರು ಮಾಡಿತು. ಕಿಲ್ಲಿಗೆ ಹೋಗುವ ನಮ್ಮನ್ನು ತಪ್ಪಿಸಿ ದೀರ್ಘ ದ್ವೀಪದತ್ತ (Long Island) ಸೆಳೆದೊಯ್ದಿತು. ದಾರಿಯಲ್ಲಿ ಪ್ರಯಾಣಿಕನಾದ ಕುಡುಕ ಡಚ್ಚನೊಬ್ಬನು ಹಡಗಿನಿಂದ ಸಮುದ್ರದಲ್ಲಿ ಬಿದ್ದನು. ಅವನು ಮುಳುಗುತ್ತಿರುವಾಗ ನಾನು ನೀರಿನೊಳಗಿಂದ ಹೋಗಿ ಅವನ ತಲೆಯ ಮುಡಿಯನ್ನು ಹಿಡಿದು ಮೇಲಕ್ಕೆ ಎಳೆದುಹಾಕಿದೆನು. ಹೀಗೆ ಅವನನ್ನು ಪುನಃ ನಾವು ಒಳಗೆ ತಂದೆವು. ಅವನು ನೀರಿನಲ್ಲಿ ಮುಳುಗಿದುದರಿಂದ ಅವನ ಅಮಲು ತುಸು ಇಳಿಯಿತು. ಮೊದಲು ಅವನು ತನ್ನ ಕಿಸೆಯಿಂದ ಒಂದು ಪುಸ್ತಕವನ್ನು ಹೊರಗೆ ತೆಗೆದು ಅದನ್ನು ನಾನು ಒಣಗಿಸಿ ಕೊಡಬೇಕೆಂದು ಕೇಳಿಕೊಂಡನು. ಆಮೇಲೆ ಆತ ನಿದ್ದೆಹೋದನು. ಅದು ನನ್ನ ಹಳೆಯ ಮೆಚ್ಚುಗೆಯ ಲೇಖಕ ಬನಿಯನ್ನನ 'ಪಿಲ್ಗ್ರಿಮ್ಸ್ ಪ್ರೊಗ್ರೆಸ್' ಎಂಬುದು ಅಷ್ಟರಲ್ಲೆ ಸಿದ್ಧವಾಯಿತು. ಡಚ್ ಭಾಷೆಯಲ್ಲಿದ್ದು ಅದನ್ನು ಉತ್ತಮ ಕಾಗದದಲ್ಲಿ ಅಚ್ಚು ಮಾಡಲಾಗಿತ್ತು. ತಾಮ್ರದ ಕಟ್ಟು ಅದಕ್ಕಿತ್ತು. ಅದರ ಸ್ವಭಾಷೆಯಲ್ಲಿ ಅದಕ್ಕೆ ಇದಕ್ಕಿಂತ ಒಳ್ಳೆಯ ತೊಡುಗೆಯನ್ನು ತೊಡಿಸಿದ್ದು ನಾನು ಎಂದೂ ನೋಡಿರಲಿಲ್ಲ. ಅದು ಯುರೋಪಿನ ಅನೇಕ ಭಾಷೆಗಳಲ್ಲಿ ತರ್ಜುಮೆಗೊಂಡದ್ದನ್ನು ನಾನು ಆಮೇಲೆ ನೋಡಿದ್ದೇನೆ. ಬಹುಶಃ ಬೈಬಲನ್ನು ಹೊರತು ಸಾಮಾನ್ಯವಾಗಿ ಅದನ್ನು ಓದುವಂತೆ ಜನರು ಬೇರಾವ ಪುಸ್ತಕವನ್ನು ಓದಿಲ್ಲವೆಂದು ನನಗೆ ನಿಸುತ್ತದೆ. ಪ್ರಾಮಾಣಿಕನಾದ ಜಾನ್‌ನು ಸಂಭಾಷಣೆ ಮತ್ತು ನಿರೂಪಣೆಯನ್ನು ಕೂಡಿಸಿಕೊಂಡು ಬರೆದವರಲ್ಲಿ ಮೊದಲಿಗನೆಂದು ನನಗೆ ಗೊತ್ತು. ಓದುಗನಿಗೆ ಈ ಪದ್ಧತಿಯು ತುಂಬಾ ಉಲ್ಲಾಸದಾಯಕವಾಗಿರುತ್ತದೆ. ಅಲ್ಲದೆ ಅನೇಕ ಕುತೂಹಲಕಾರಕ ಭಾಗಗಳಲ್ಲಿ ಸಂಭಾಷಣೆಯ ಪಾತ್ರಗಳ ಸಂಗಡ ಮೈಮರೆತಂತೆ ಅನಿಸುವುದು. ಡಿಫೋನು ತನ್ನ ಕ್ರೂಸೋ, ಮೋಲ್

ಫ್ಲ್ಯಾಂಡರ್ಸ್, ರಿಲಿಜಿಯಸ್ ಕೋರ್ಟ್‌ಶಿಪ್, ಫ್ಯಾಮಿಲಿ ಇನ್‌ಸ್ಟ್ರಕ್ಟರ್ ಮತ್ತು ಇತರ ಬರವಣಿಗೆಯಲ್ಲಿ ಅದನ್ನು ಯಶಸ್ವಿಯಾಗಿ ಅನುಕರಣೆ ಮಾಡಿದ್ದಾನೆ ಮತ್ತು ರಿಚರ್ಡ್‌ಸನ್ ಕೂಡಾ ತನ್ನ ಪಮೆಲಾ ಮೊದಲಾದವುಗಳಲ್ಲಿ ಇದೇ ರೀತಿ ಮಾಡಿದ್ದಾಗಿದೆ.

ದೀಪದ ಹತ್ತಿರಕ್ಕೆ ನಾವು ಸೇರಿದಾಗ ಆ ಸ್ಥಳದಲ್ಲಿ ತಂಗಲು ಭೂಮಿಯಿಲ್ಲದ್ದು ಕಂಡು ಬಂದಿತು. ಅಲ್ಲಿ ಭೂತಾಕಾರದ ಕಲ್ಲು–ಉಸುಕಿನಲ್ಲಿ ದೊಡ್ಡ ದೊಡ್ಡ ತೆರೆಗಳೇಳುತ್ತಿದ್ದವು. ಆದುದರಿಂದ ನಾವು ಲಂಗರು ಹಾಕಿದೆವು ಮತ್ತು ದಡದ ಕಡೆಗೆ ಸಾಗಿದ್ದಾಯಿತು. ಕೆಲವು ಜನರು ನೀರಿನ ಬದಿಯ ತನಕ ಬಂದರು ಮತ್ತು ಅವರಿಗೆ ನಾವು ಬೊಬ್ಬಿಟ್ಟಂತೆ ಅವರು ನಮ್ಮ ಕಡೆ ನೋಡಿ ಕೂಗಿಟ್ಟರು. ಆದರೆ ಭೀಕರವಾದ ಬಿರುಗಾಳಿಯ ಶಬ್ದದಲ್ಲಿ ಮತ್ತು ಕಠೋರವಾದ ತೆರೆಗಳು ಅಪ್ಪಳಿಸುವುದರಿಂದ ಪರಸ್ಪರರು ಹೇಳಿದ್ದೇನೆಂದು ತಿಳಿಯದಂತಾಗಿತ್ತು. ದಡದಲ್ಲಿ ದೋಣಿಗಳಿದ್ದವು. ನಾವು ಸನ್ನೆ ಮಾಡಿದೆವು. ಅವರು ನಮ್ಮನ್ನು ಒಯ್ಯಬೇಕೆಂದು ವಿನಂತಿಸಿದೆವು. ಆದರೆ ಅವರಿಗೆ ನಾವು ಹೇಳಿದ್ದು ಅರ್ಥವಾಗಲೇ ಇಲ್ಲವೋ ಅಥವಾ ಹಾಗೆ ಮಾಡುವುದು ಅಸಾಧ್ಯವೆಂದು ಬಗೆದರೋ ತಿಳಿಯದಾಯಿತು. ಅವರು ಅಲ್ಲಿಂದ ಹಿಂದೆ ನಡೆದೇ ಬಿಟ್ಟರು. ಇತ್ತ ರಾತ್ರಿ ಕವಿಯುತ್ತ ಬಂತು. ಬಿರುಗಾಳಿ ಶಾಂತವಾಗುವ ತನಕ ಕಾದು ಕೂಡದ ಹೊರತು ನಮಗೆ ಬೇರೆ ಮಾರ್ಗವಿರಲಿಲ್ಲ. ಇದೇ ಹೊತ್ತಿಗೆ ದೋಣಿಗ ಮತ್ತು ನಾನು ಸಾಧ್ಯವಾದರೆ ನಿದೆ ಹೋಗಲು ನಿರ್ಧರಿಸಿದೆವು—ಆ ಬುಟ್ಟಿಯಲ್ಲಿ ಮುದುಡಿಕೊಂಡೆವು, ಆ ಡಚ್ಚನೂ ನಮ್ಮೊಡನಿದ್ದ, ಅವನು ಇನ್ನೂ ಒದ್ದೆಯಾಗಿದ್ದನು. ಇತ್ತ ನಮ್ಮ ದೋಣಿಯ ತಲೆಯ ಮೇಲೆ ಹೊಡೆಯುತ್ತಿರುವ ನೀರ ಹನಿಗಳು ನಮ್ಮ ಮೇಲೆ ಬೀಳುತಿದ್ದುವು, ಹೀಗಾಗಿ ಕ್ಷಣಾರ್ಧದಲ್ಲೆ ನಾವು ಕೂಡಾ ಅವನಷ್ಟೇ ಒದ್ದೆಯಾದೆವು. ಹೀಗೆ ನಾವು ಇಡೀ ರಾತ್ರಿ ವಿಶ್ರಾಂತಿಯಿಲ್ಲದೆ ಮಲಗಿದ್ದಾಯಿತು. ಆದರೆ ಮರುದಿನ ಬಿರುಗಾಳಿ ಶಾಂತವಾದೊಡನೆ, ರಾತ್ರಿ ಕವಿಯುವುದರೊಳಗೆ ಎಂಬ್ಬೊಗೆ(Amboy) ಮುಟ್ಟಲು ನಾವು ಮುಂದುವರಿದೆವು. ಮೂವತ್ತು ಗಂಟೆಗಳ ತನಕ ನೀರಿನಲ್ಲೆ ಯಾವ ಅನ್ನಪಾನಾದಿಗಳಿಲ್ಲದೆ ಹೀಗೆ ಇದ್ದೆವು, ಅಥವಾ ಸಿಕ್ಕರೆ ಒಂದು ಬಾಟ್ಲ ಕೆಟ್ಟ ರಮ್. ಅಲ್ಲದೆ ನಾವು ನೀರಿನಲ್ಲಿ ಹೋಗುತ್ತಿರುವಾಗ ದೊರೆತದ್ದು ಉಪ್ಪು ನೀರು.

ಸಂಜೆಯ ಹೊತ್ತಿಗೆ ನನಗೆ ಭಾರೀ ಜ್ವರಬಿದ್ದುದರಿಂದ ನಾನು ಮಲಗಿಕೊಂಡೆನು. ಆದರೆ ತುಂಬಾ ತಣ್ಣೀರು ಕುಡಿದರೆ, ಅದು ಜ್ವರ

ವನ್ನು ಹೋಗಲಾಡಿಸುವುದೆಂದು ಎಲ್ಲಿಯೋ ಓದಿರುವುದರಿಂದ ನಾನು ಈ ವಿಧಾನವನ್ನು ಅನುಸರಿಸಿದೆನು. ರಾತ್ರಿಯಲ್ಲಿ ತುಂಬಾ ಬೆವರು ಹೋಯಿತು. ಜ್ವರವೂ ಕಡಿಮೆಯಾಯಿತು. ಬೆಳಿಗ್ಗೆ ನದಿಯನ್ನು ದಾಟಿಕೊಂಡು ಕಾಲ್ನಡಿಗೆಯಿಂದಲೆ ನನ್ನ ಪ್ರಯಾಣವನ್ನು ಮುಂದುವರಿಸಿದೆನು. ಬರ್ಲಿಂಗ್‌ಟನ್ನಿಗೆ ಐವತ್ತು ಮೈಲುಗಳಿದ್ದವು. ಅಲ್ಲಿಂದ ಮುಂದೆ ಉಳಿದ ಫಿಲಡೆಲ್ಫಿಯಾದ ಹಾದಿಯನ್ನು ಉಪಕ್ರಮಿಸಲು ನನಗೆ ದೋಣಿಗಳು ಸಿಗುತ್ತವೆಂದು ಕೇಳಿದ್ದೆನು.

ಹಗಲಿಡೀ ವಿಪರೀತ ಮಳೆ ಸುರಿಯುತ್ತಿತ್ತು. ನಾನು ಸಂಪೂರ್ಣ ತೊಯ್ದು ಹೋಗಿದ್ದೆನು. ಮಧ್ಯಾಹ್ನದ ಹೊತ್ತಿಗೆ ಸಾಕಷ್ಟು ದಣಿವೂ ಆಯಿತು. ಒಂದು ಬಡ ಹೊಟೇಲಿನಲ್ಲಿ ನಾನು ಉಳಿದುಕೊಂಡೆನು. ನಾನು ರಾತ್ರಿಯೆಲ್ಲ ಅಲ್ಲೇ ಇದ್ದೆನು. ಈಗ ಮಾತ್ರ ನಾನು ಮನೆ ಬಿಡಬಾರದಿತ್ತೆಂದು ಯೋಚಿಸಲಿಕ್ಕೆ ಪ್ರಾರಂಭಿಸಿದ್ದೆನು. ನನ್ನ ಪರಿಸ್ಥಿತಿ ತೀರಾ ಹದಗೆಟ್ಟು ಹೋಗಿತ್ತು. ಹೀಗೆ ನನ್ನ ರೂಪು ಬಡವಾಗಿದ್ದುದರಿಂದ ನನಗೆ ಕೇಳಲಾಗುತ್ತಿದ್ದ ಕೆಲವೊಂದು ಪ್ರಶ್ನೆಗಳಿಂದ ನಾನು ಯಾರೋ ಒಬ್ಬ ಓಡಿ ಬಂದ ಆಳೆಂದು ಅವರೆಲ್ಲರಿಗೆ ಸಂಶಯ ಬಂದಂತೆ ಇತ್ತು. ಸಂಶಯದ ಮೇಲೆ ಬಂಧಿಸಲ್ಪಡುವ ಅಪಾಯದಲ್ಲಿಯೂ ನಾನು ಸಿಲುಕಿದ್ದೆ. ಹೇಗೂ ನಾನು ಮರುದಿನ ಮುಂದುವರಿದೆನು ಮತ್ತು ಸಂಜೆಯಲ್ಲಿ ಒಂದು ಹೊಟೇಲಿಗೆ ಹೋದೆನು. ಅದು ಬರ್ಲಿಂಗ್‌ಟನ್ನಿನಿಂದ ಎಂಟು ಅಥವಾ ಹತ್ತು ಮೈಲು ದೂರದಲ್ಲಿತ್ತು. ಅದನ್ನು ಡಾ| ಬ್ರೌನ್ ಎಂಬುವನು ನಡೆಸುತ್ತಿದ್ದನು. ನಾನು ಉಪಾಹಾರ ತೆಗೆದುಕೊಳ್ಳುತ್ತಿದ್ದ ಹೊತ್ತಿಗೆ ಅವನು ನನ್ನೊಡನೆ ಸಂಭಾಷಣೆಗೆ ತೊಡಗಿದನು. ಹೀಗೆ ನಾನು ಒಂದಿಷ್ಟು ಓದಿರುವುದನ್ನು ಕಂಡುಕೊಂಡು ನನ್ನೊಡನೆ ತುಂಬಾ ಆತ್ಮೀಯನಾಗಿ ಸ್ನೇಹದಿಂದ ವರ್ತಿಸಿದನು. ಅವನು ಜೀವಂತ ಇರುವ ತನಕ ನಮ್ಮ ಪರಿಚಯ ಬೆಳೆದು ಹೋಯಿತು. ಅವನು ಒಬ್ಬ ಸಂಚಾರಿ ಡಾಕ್ಟರನಾಗಿದ್ದನೆಂದು ನನ್ನ ಕಲ್ಪನೆ. ಯಾಕೆಂದರೆ ಅವನು ಗುರುತು-ಅರ್ಥ ಹೇಳದ ಪೇಟೆ ಅಥವಾ ಊರು ಇಂಗ್ಲೆಂಡಿನಲ್ಲಾಗಲೀ ಯೂರೋಪಿನಲ್ಲಾಗಲೀ ಇರಲಿಲ್ಲ. ಅವನಲ್ಲಿ ಕೆಲವೊಂದು ಪತ್ರಗಳಿದ್ದವು ಮತ್ತು ಆತನು ಬುದ್ಧಿವಂತನಿದ್ದನು. ಆದರೆ ಮುಖ್ಯವಾಗಿ ನಾಸ್ತಿಕನಾಗಿದ್ದನು. ಕೆಲವು ವರುಷಗಳ ನಂತರ ಕಿಡಿಗೇಡಿತನದಿಂದ ಬೈಬಲನ್ನು ಹುರುಳಿಲ್ಲದ ಲಾವಣಿಯಲ್ಲಿ—ವರ್ಜಿಲನನ್ನು ಕೋಟನ್ ಮಾಡಿದ ಹಾಗೆ—ಅಪಹಾಸ್ಯ ಮಾಡಿದನು. ಈ ಕೃತಿಯಿಂದ

ಅವನು ಅನೇಕ ಸಂಗತಿಗಳನ್ನು ತೀರ ವಿಕಟವಾದ ಬೆಳಕಿನಲ್ಲಿ ತೋರಿಸಿದ್ದನು. ಅವನ ಗ್ರಂಥವು ಪ್ರಕಟವಾಗಿದ್ದರೆ ದುರ್ಬಲ ಮಾನಸಿಕರು ಆಘಾತಕ್ಕೆ ಈಡಾಗುತ್ತಿದ್ದರು. ಆದರೆ ಅದೆಂದೂ ಪ್ರಕಟಗೊಳ್ಳಲಿಲ್ಲ.

ಆ ರಾತ್ರಿ ಅವನ ಮನೆಯಲ್ಲಿ ನಾನು ಮಲಗಿಕೊಂಡೆನು. ಮರುದಿನ ಬೆಳಿಗ್ಗೆ ಬರ್ಲಿಂಗ್‌ಟನ್ನಿಗೆ ತಲಪಿದ್ದಾಯಿತು. ಆದರೆ ನಾನು ಬರುವುದಕ್ಕೆ ಸ್ವಲ್ಪ ಮೊದಲು ಅಲ್ಲಿಂದ ನಿಯಮಿತ ದೋಣಿಗಳು ಹೋಗಿದ್ದವೆಂಬುದನ್ನು ತಿಳಿದು ನಿರ್ವಿಣ್ಣನಾದೆನು. ಮತ್ತು ಮಂಗಳವಾರಕ್ಕಿಂತ ಮೊದಲು ಬೇರೆ ಯಾವುದೂ ಅಲ್ಲಿಂದ ಬಿಡುವ ದೋಣಿಯಿರಲಿಲ್ಲ. ಅಂದು ಶನಿವಾರವಾಗಿತ್ತು. ಪೇಟೆಯಲ್ಲಿನ ಒಬ್ಬ ಮುದುಕಿಯ ಮನೆಗೆ ಮರಳಿದೆನು. ನೀರಿನೊಡನೆ ತಿನ್ನುವ ಗೆಣಸಿನ ಬ್ರೆಡ್ಡನ್ನು ನಾನು ಅವಳಿಂದ ಕೊಂಡಿದ್ದೆನು. ಅವಳ ಉಪದೇಶವನ್ನು ನಾನು ಕೇಳಿಕೊಂಡೆ. ತಿರುಗಿ ನೀರಿನಲ್ಲಿ ಪ್ರಯಾಣ ಪ್ರಾರಂಭವಾಗುವ ತನಕ ಅವಳು ನನಗೆ ತನ್ನ ಮನೆಯಲ್ಲಿ ವಾಸ ಮಾಡಲು ಹೇಳಿ ನನ್ನನ್ನು ಅಲ್ಲಿಗೆ ಆಮಂತ್ರಿಸಿದಳು. ಕಾಲನಡಿಗೆಯಿಂದ ತುಂಬಾ ದಣಿದಿರುವುದರಿಂದ ನಾನು ಅವಳ ಆಮಂತ್ರಣವನ್ನು ಸ್ವೀಕರಿಸಿದೆನು. ನಾನೊಬ್ಬ ಮುದ್ರಕನೆಂಬುದನ್ನು ಅರಿತುಕೊಂಡು ಉದ್ಯೋಗವನ್ನು ಅವಲಂಬಿಸಿಕೊಂಡು ನಾನು ಆ ಪೇಟೆಯಲ್ಲಿ ನೆಲೆಸುವಂತೆ ಇಚ್ಛಿಸಿರಬೇಕು. ಯಾಕಂದರೆ—ಮುದ್ರಣಾಲಯವನ್ನು ತೆರೆಯಲು ಅಗತ್ಯವಾದ ಸಾಮಗ್ರಿಗಳ ಕಲ್ಪನೆಯು ಅವಳಿಗೆ ಇರಲಿಲ್ಲ. ಅವಳು ಭಾರೀ ಸತ್ಕಾರ ಮಾಡುತ್ತಿದ್ದಳು. ಬಹು ಆದರದಿಂದ ನನಗೆ ಎತ್ತಿನ—ಕಪಾಳದಭಾರೀ ಮೇಜವಾನಿ ಮಾಡಿಸಿದಳು. ಪ್ರತಿಯಾಗಿ ಕೇವಲ ಒಂದು ಬಾಟ್ಲಿ ಮದ್ಯವನ್ನು ಸ್ವೀಕರಿಸಿದಳು. ಮಂಗಳವಾರದ ತನಕ ಅಲ್ಲಿ ತಳವೂರುವುದೆಂದು ನಾನು ನಿರ್ಧರಿಸಿದೆನು. ಅಂತೂ ನದಿಯ ದಡದಿಂದ ವಿಹಾರಕ್ಕೆ ಹೊರಟಾಗ ಒಂದು ದೋಣಿ ಬಂದಿತು. ಅನೇಕ ಜನರಿಂದ ತುಂಬಿದ ಅದು ಫಿಲಡೆಲ್ಫಿಯಾದತ್ತ ಹೋಗುತ್ತದೆಂದು ನಾನು ತಿಳಿದುಕೊಂಡೆನು. ಅವರು ನನ್ನನ್ನು ಒಳಗೆ ಕರೆದುಕೊಂಡರು. ಮತ್ತು ಗಾಳಿಯಿಲ್ಲದ್ದರಿಂದ ನಾವು ದಾರಿಯಿಡೀ ಹುಟ್ಟು ಹಾಕುತ್ತ ಹೋಗಬೇಕಾಯಿತು. ಇತ್ತ ಸುಮಾರು ಮಧ್ಯರಾತ್ರಿಯ ಹೊತ್ತಿಗೆ, ಇನ್ನೂ ಪಟ್ಟಣವೇ ಕಾಣದಿದ್ದುದರಿಂದ ನಾವು ಅದನ್ನು ದಾಟಿ ಹೋಗಿದ್ದೇವೆಂದು ನಮ್ಮ ಮಂಡಳಿಯ ಕೆಲವರು ದೃಢವಾಗಿ ಹೇಳಿದರು. ಮುಂದೆ ಹುಟ್ಟು ಹಾಕಬಾರದೆಂದರು. ಮಿಕ್ಕವರಿಗಂತೂ ನಾವೆಲ್ಲಿದ್ದೇವೆಂಬುದು ಗೊತ್ತಿರಲಿಲ್ಲ. ಆದ್ದರಿಂದ ನಾವು

ದಡದತ್ತ ಸರಿದೆವು. ಒಂದು ಕೊಲ್ಲಿಯನ್ನು ಸೇರಿದ್ದಾಯಿತು. ಒಂದು ಹಳೆಯ ಬೇಲಿಯ ಹತ್ತಿರ ನೆಲಕ್ಕಿಳಿದೆವು. ಆದರ ಕಟ್ಟಿಗೆಯಿಂದ ಬೆಂಕಿ ಉರಿಸಿದೆವು. ಅಕ್ಟೋಬರಿನ ಆ ರಾತ್ರಿಯಲ್ಲಿ ಬಹಳ ಚಳಿಯಿದ್ದುದರಿಂದ ನಸುಕಿನ ತನಕ ನಾವು ಅಲ್ಲಿಯೆ ಇರಬೇಕಾಯಿತು. ಆ ಮೇಲೆ ಮಂಡಳಿಯ ಒಬ್ಬನಿಗೆ ಅದು 'ಕೂಪರ್ಸ್ ಕ್ರೀಕ್' ಎಂಬ ಸ್ಥಳವೆಂದು ಗೊತ್ತಾಯಿತು. ಅದು ಫಿಲಡೆಲ್ಫಿಯಾಕ್ಕಿಂತ ತುಸು ಮೇಲಕ್ಕೆ ಇತ್ತು. ಕೊಲ್ಲಿಯಿಂದ ಹೊರಗೆ ಬಂದೊಡನೆ ನಾವು ಅದನ್ನು ನೋಡಿದೆವು. ಅಂತೇ ಅಲ್ಲಿಗೆ ಆದಿತ್ಯವಾರದ ದಿನ ಬೆಳಿಗ್ಗೆ ಎಂಟು ಅಥವಾ ಒಂಬತ್ತು ಗಂಟೆಯ ಹೊತ್ತಿಗೆ ನಾವು ಸೇರಿದೆವು. ಮಾರ್ಕೆಟ್ ಬೀದಿಯ ಬಂದರು ಕಟ್ಟೆಯಲ್ಲಿ ನೆಲಕ್ಕಿಳಿದೆವು.

ನನ್ನ ಈ ಪ್ರಯಾಣದ ವರ್ಣನೆಯಲ್ಲಿ ನಾನು ಹೆಚ್ಚು ವೈಯಕ್ತಿಕವಾಗಿದ್ದೇನೆ. ಅಂತೇ ಹೀಗೆ ನನ್ನ ಆ ಪಟ್ಟಣದ ಮೊದಲ ಪ್ರವೇಶದಲ್ಲಿ ಕೂಡ ಇರುವೆನು. ಕಾರಣ, ನೀವು ನಿಮ್ಮ ಮನಸ್ಸಿನಲ್ಲಿ ನನ್ನ ಅಂದಿನ ವಿಚಿತ್ರವಾದ ಆರಂಭಗಳನ್ನು ಮುಂದಿನ ವ್ಯಕ್ತಿತ್ವದೊಡನೆ ಹೋಲಿಸಿಕೊಳ್ಳಬಹುದು. ನಾನು ನನ್ನ ಕೆಲಸದ ಅರಿವೆಗಳನ್ನು ತೊಟ್ಟುಕೊಂಡಿದ್ದೆ. ಇತ್ತ ನನ್ನ ಒಳ್ಳೆಯ ಅರಿವೆಗಳು ಸಮುದ್ರದಿಂದ ಸುತ್ತುವರಿದು ಬರಬೇಕಾಗಿದ್ದವು. ಪ್ರಯಾಣದಿಂದಾಗಿ ನಾನು ಕೊಳಕಾಗಿದ್ದೆನು. ನನ್ನ ಕಿಸೆಗಳು ಶರ್ಟುಗಳಿಂದ ಮತ್ತು ಕಾಲುಚೀಲಗಳಿಂದ ತುಂಬಿ ಹೋಗಿದ್ದವು. ಅಲ್ಲದೆ ಎಲ್ಲಿಗೆ ಅಥವಾ ಯಾರಲ್ಲಿ ವಸತಿಗೆ ಹೋಗಬೇಕೆಂದು ನನಗೆ ತಿಳಿದಿರಲಿಲ್ಲ. ನಾನು ಪ್ರಯಾಣದಿಂದ ಮತ್ತು ಹುಟ್ಟು ಹಾಕಿದುದರಿಂದ ದಣಿದು ಹೋಗಿದ್ದೆ. ನನಗೆ ವಿಶ್ರಾಂತಿ ಬೇಕಾಗಿತ್ತು. ನಾನು ತುಂಬಾ ಹಸಿದಿದ್ದೆ. ಅಂತೇ ನನ್ನಲ್ಲಿ ನಗದಿಯಾಗಿ ಇದ್ದ ಬಂಡವಾಲ ಎಂದರೆ ಒಂದು ಡಚ್ ಡಾಲರು ಮತ್ತು ಸುಮಾರು ತಾಮ್ರದ ಒಂದು ಶಿಲ್ಲಿಂಗ್ ಮಾತ್ರ. ಈ ಶಿಲ್ಲಿಂಗ್‌ನ್ನು ನಾನು ನನ್ನ ಪ್ರಯಾಣಕ್ಕಾಗಿ ದೋಣಿಯ ಮಂದಿಗೆ ಕೊಟ್ಟೆನು. ಮೊದಲಿಗೆ ಅವರು ಅದನ್ನು ನಾನು ಹುಟ್ಟು ಹಾಕಿದ್ದಕ್ಕಾಗಿ ನಿರಾಕರಿಸಿದರು. ಆದರೆ ಅದನ್ನು ತೆಗೆದುಕೊಳ್ಳುವಂತೆ ನಾನು ಅವರಿಗೆ ಬಲವಂತ ಪಡಿಸಿದೆನು. ಕೆಲವೊಮ್ಮೆ ಮನುಷ್ಯನು ತನ್ನಲ್ಲಿ ಹೇರಳವಿರುವುದಕ್ಕಿಂತ ಹೆಚ್ಚು ಉದಾರಿಯಾಗಿ ಕಡಿಮ್ಮೆ ಹಣಯಿದ್ದಾಗ ಇರುತ್ತಾನೆ. ಬಹುಶಃ ಬಹಳ ಕಡಿಮೆ ಹಣವಿದೆಯೆಂದು ತಿಳಿಯುತ್ತದೆಂಬ ಹೆದರಿಕೆಯಿಂದ ಹಾಗಾಗುತ್ತಾನೆಂದು ಕಾಣುತ್ತದೆ.

ಆ ಮೇಲೆ ನಾನು ಸುತ್ತುಮುತ್ತಲೆಲ್ಲ ದೃಷ್ಟಿಹಾಕುತ್ತ ಬೀದಿಯ ಮೇಲಕ್ಕೆ ನಡೆದೆನು. ಮಾರ್ಕೆಟಿನ ಕಟ್ಟಡ ಸಮೀಪಿಸಿದಾಗ ನನಗೊಬ್ಬ ಬ್ರೆಡ್ ಹಿಡಿದುಕೊಂಡ ಹುಡುಗ ಕಂಡನು. ಬ್ರೆಡ್ಡಿನಿಂದ ನಾನು ಅನೇಕ ಸಲ ಊಟ ತೀರಿಸಿದ್ದೇನೆ. ಅವನಿಗೆ ಅದು ಎಲ್ಲಿ ದೊರಕಿತೆಂಬುದನ್ನು ಕೇಳಿಕೊಂಡು ನಾನು ಕೂಡಲೆ ಅವನು ಹೇಳಿದ ಬ್ರೆಡ್ಡಿನ ಭಟ್ಟಿಗೆ ಹೋದೆನು. ಅದು ಎರಡನೆಯ ಬೀದಿಯಲ್ಲಿತ್ತು. ಮತ್ತು ಬೋಸ್ಟನಿನಲ್ಲಿ ಬೇಕಾದ್ದು ದೊರೆಯುತ್ತದೆಂದು ಬಗೆದು—ಬಿಸ್ಕಿಟ್ ಕೇಳಿದೆನು. ಆದರೆ ಅವುಗಳು ಫಿಲಡೆಲ್ಫಿಯಾದಲ್ಲಿ ತಯಾರಿಸಲ್ಪಡುವುದಿಲ್ಲವೆಂದು ಕಾಣುತ್ತದೆ. ಆಮೇಲೆ ನಾನು ಮೂರು–ಪೆನ್ನಿಯ ತುಂಡನ್ನು ಕೇಳಿದೆನು. ಅಂಥ ತುಂಡೇ ಅವರಲ್ಲಿ ಇಲ್ಲವೆಂಬ ಉತ್ತರ ಬಂದಿತು. ಹಣವನ್ನು ಪರಿಗಣಿಸದೆ ಅಥವಾ ಹಣದ ವ್ಯತ್ಯಾಸವನ್ನು ಅರಿಯದೆ ಮತ್ತು ಹೆಚ್ಚು ಅಗ್ಗದ ಮಾಲನ್ನು ತಿಳಿಯದೆ, ಅವನ ಬ್ರೆಡ್ಡುಗಳ ಹೆಸರನ್ನು ಕೂಡಾ ತಿಳಿಯದೆ ನಾನು ಅವನಿಗೆ ಮೂರು ಪೆನ್ನಿ ಕ್ರಯದ ಬ್ರೆಡ್ಡಿನ ಯಾವ ಜಾತಿಯನ್ನಾದರೂ ಕೊಡುಯೆಂದು ಕೇಳಿದೆನು. ಆದರಂತೆ ಅವನು ನನಗೆ ಮೂರು ದೊಡ್ಡ ಉಬ್ಬಿದ ದಿಂಡುಗಳನ್ನು ಕೊಟ್ಟನು. ಆ ಪ್ರಮಾಣವನ್ನು ಕಂಡು ನನಗೆ ಆಶ್ಚರ್ಯವಾಯಿತು. ಆದರೆ ಅದನ್ನು ಪಡಕೊಂಡೆನು. ಇತ್ತ ನನ್ನ ಕಿಸೆಗಳಲ್ಲಿ ಸ್ಥಳವಿಲ್ಲದ ಕಾರಣ ಕಂಕುಳಲ್ಲಿ ಒಂದೊಂದು ದಿಂಡನ್ನು ಸಿಕ್ಕಿಸಿಕೊಂಡು–ರುಚಿ ನೋಡುತ್ತ ಬೀದಿಯಲ್ಲಿ ಹೊರಟೇಬಿಟ್ಟೆನು. ಹೀಗೆ ನಾನು ಮಾರ್ಕೆಟ್ ಬೀದಿಯಲ್ಲಿ ನಡೆಯುತ್ತ ನಡೆಯುತ್ತ ನನ್ನ ಭಾವೀ ಪತ್ನಿಯ ತಂದೆ ಮಿಸ್ಟರ್ ರೀಡ್ ಅವರ ಮನೆ ಮುಂದಿನಿಂದ ಕೂಡಾ ಹಾದು ಹೋದೆನು. ಆಗ ನನ್ನ ಭಾವಿ ಪತ್ನಿಯು ಬಾಗಿಲಿನಲ್ಲಿ ನಿಂತುಕೊಂಡು ನನ್ನನ್ನು ನೋಡಿದ್ದಳು. ಅಂದು ನಾನು ಅವಳನ್ನು ತೀರ ಅಡ್ಡಾತಿಡ್ಡಿಯಾದ ಕುರೂಪಿಯೆಂದು ಖಂಡಿತವಾಗಿಯೂ ಗ್ರಹಿಸಿದ್ದೆನು. ಆಮೇಲೆ ನಾನು ಹೊರಳಿ ಚಸ್ಟನಟ್ ಬೀದಿಯಲ್ಲಿ ಇಳಿದುಕೊಂಡು ಹೋಗಿ ವಾಲ್‌ನಟ್ ಬೀದಿಯ ಕೆಲ ಭಾಗವನ್ನು ಕೂಡ ಉಪಕ್ರಮಿಸಿದ್ದೆನು. ದಾರಿಗುಂಟ ನನ್ನ ಬ್ರೆಡ್ಡಿನ ದಿಂಡನ್ನು ತಿನ್ನುತ್ತಾ ಹೊರಟಿದ್ದೆ. ಹೀಗೆ ಸುತ್ತುವರಿದು ನಡೆದು ಹೋಗುವಾಗ ಮರಳಿ ನಾನು ಮಾರ್ಕೆಟ್ ಬೀದಿಯ ಬಂದರು ಕಟ್ಟೆಗೆ ಬಂದೆನು. ನಾನು ಬಂದ ದೋಣಿಯ ಹತ್ತಿರವೆ ನಾನು ಬಂದುದಾಯಿತು. ಅಲ್ಲಿಗೆ ಒಂದಿಷ್ಟು ಬಾಯಾರಿಕೆ ತೀರಿಸಿಕೊಳ್ಳಲು ನದಿ ನೀರಿಗಾಗಿ ಹೋದೆನು. ಒಂದು ಬ್ರೆಡ್ಡಿನ ದಿಂಡಿನಿಂದಲೇ ಹೊಟ್ಟೆ ತುಂಬಿದುದರಿಂದ ಉಳಿದ ಎರಡು ದಿಂಡು

ಗಳನ್ನು ತನ್ನ ಮಗುವಿನೊಡನೆ ಕಾದು ಕುಳಿತ ಒಬ್ಬಳು ಹೆಣ್ಣು ಮಗಳಿಗೆ ಕೊಟ್ಟೆನು. ಅವ್ವಳು ನಮ್ಮ ಸಂಗಡ ದೋಣಿಯಲ್ಲಿ ಕುಳಿತುಕೊಂಡು ನದಿಯಲ್ಲಿ ಕೆಳಕ್ಕೆ ಬಂದವಳಾಗಿದ್ದಳು. ಅಲ್ಲದೆ ಇನ್ನೂ ದೂರಕ್ಕೆ ಹೋಗುವುದಕ್ಕಾಗಿ ಅಲ್ಲಿ ಕಾದು ಕೂತಿದ್ದಳು.

ಹೀಗೆ ದಣುವಾರಿಸಿಕೊಂಡು ನಾನು ಪುನಃ ಆ ಬೀದಿಯಲ್ಲಿ ಮೇಲ್ಗಡೆ ನಡೆದೆನು. ಈಗ ಅದರಲ್ಲಿ ಅನೇಕ ಶುಭ್ರ ವಸ್ತ್ರಧಾರಿಗಳಾದ ಜನರಿದ್ದರು. ಅವರೆಲ್ಲ ಅದೇ ದಾರಿಯಲ್ಲಿ ನಡೆಯುತ್ತಿದ್ದರು. ಅವರನ್ನು ನಾನು ಸೇರಿಕೊಂಡೆ. ಹೀಗಾಗಿ ಮಾರ್ಕೆಟ್ಟಿನ ಬಳಿಯಿರುವ ಕ್ರೈಸ್ತಮಿತ್ರ ಸಂಘದ ದೊಡ್ಡ ಸಭಾ ಭವನಕ್ಕೆ ಅವರ ಸಂಗಡ ಹೋದುದಾಯಿತು. ಅವರಲ್ಲೊಬ್ಬನಾಗಿ ನಾನೂ ಕುಳಿತುಕೊಂಡೆನು. ಕೆಲಹೊತ್ತು ಸುತ್ತ ಮುತ್ತಲೆಲ್ಲ ದೃಷ್ಟಿ ಬೀರಿದೆನು. ಆ ಮೇಲೆ ಏನನ್ನೂ ಹೇಳುವುದೂ ಕೇಳದ್ದರಿಂದ ಮತ್ತು ಕಳೆದ ರಾತ್ರಿಯೆಲ್ಲ ವಿಶ್ರಾಂತಿಯಿಲ್ಲದ್ದರಿಂದ ಹಾಗೂ ಕೆಲಸದಿಂದ ದಣಿದ ಕಾರಣ, ನಾನು ತೂಕಡಿಸುತ್ತ ನಿದ್ದೆ ಹೋಗಿಯೇ ಬಿಟ್ಟೆ. ಅವರ ಸಭೆ ಮುಗಿಯುವ ತನಕವೂ ನನ್ನ ನಿದ್ರೆ ಮುಂದುವರಿಯಿತು. ಆಗ ಒಬ್ಬನು ನನ್ನನ್ನು ನಿದ್ದೆಯಿಂದ ಎಚ್ಚರಿಸುವ ದಯೆ ತೋರಿಸಿದನು. ಇದು ನಾನು ಫಿಲಡೆಲ್ಫಿಯಾದಲ್ಲಿ ಒಳಹೊಕ್ಕ ಅಥವಾ ನಿದ್ರೆಮಾಡಿದ ಪ್ರಥಮ ಭವನವೆನ್ನಬೇಕು.

ಪುನಃ ನದಿಯತ್ತ ಕೆಳಗೆ ನಡೆದು ಹೋಗುವಾಗ ಮತ್ತು ಜನರ ಮುಖಗಳನ್ನು ನೋಡುವಾಗ ನನಗೊಬ್ಬ ತರುಣ ಕ್ವೇಕರನ ಭೇಟಿಯಾಯಿತು. ಅವನ ರೂಪು ನನಗೆ ಸೇರಿಕೆಯಾಯಿತು. ನಮಸ್ಕಾರ ಪರಿಚಯುವಾದ ನಂತರದಲ್ಲಿ ಅಪರಿಚಯಸ್ಥನಿಗೆ ವಸತಿಸ್ಥಳವು ಎಲ್ಲಿ ದೊರೆಯುತ್ತದೆಂದು ನಾನು ಅವನಿಗೆ ಕೇಳಿಕೊಂಡೆನು. ಆಗ ನಾವು "ಮೂವರು ನಾವಿಕರು" (Three Mariners) ಗುರುತಿನ ಬಳಿಯಲ್ಲಿ ಇದ್ದೆವು. "ಇಲ್ಲಿ ಅಪರಿಚಯಸ್ಥರನ್ನು ಸ್ವಾಗತಿಸುವ ಒಂದು ಸ್ಥಳವಿದೆ, ಆದರೆ ಅದು ಅಷ್ಟೊಂದು ಖ್ಯಾತಿವೆತ್ತ ಮನೆಯಲ್ಲ. ನೀನು ನನ್ನೊಡನೆ ಬಂದರೆ ನಾನು ನಿನಗೆ ಉತ್ತಮವಾದುದನ್ನು ತೋರಿಸುತ್ತೇನೆ" ಎಂದು ಅವನು ಹೇಳಿದ. ಅವನು ನನ್ನನ್ನು ವಾಟರ್-ಸ್ಟ್ರೀಟಿನ ಕ್ರೂಕೆಡ್ ಬಿಲ್ಲೆಟಿಗೆ ಕರತಂದನು. ಅಲ್ಲಿ ನಾನು ಊಟ ಮಾಡಿದೆನು. ಮತ್ತು ನಾನು ಊಟ ಮಾಡುವಾಗ ನನಗೆ ಕುಹಕ ಪ್ರಶ್ನೆಗಳನ್ನು ಕೇಳಲಾಯಿತು. ಯಾಕಂದರೆ ನನ್ನ ತಾರುಣ್ಯ ಮತ್ತು ರೂಪಿನಿಂದಾಗಿ ನಾನು ಯಾವನಾದರೊಬ್ಬ ಪರಾರಿ

ಮನುಷ್ಯನೆಂದು ಸಂಶಯ ಬಂದಿರಬೇಕು.

ಮಧ್ಯಾಹ್ನದ ಊಟವಾದೊಡನೆ ಮತ್ತೆ ತೂಕಡಿಕೆ ಬಂದಿತು. ಹಾಸಿಗೆಯೊಂದನ್ನು ನನಗೆ ಬಿಟ್ಟುಕೊಟ್ಟುದರಿಂದ ನಾನು ವಿವಸ್ತ್ರನಾಗದೆ ನಿದ್ದೆ ಹೋದೆನು. ಸಂಜೆ ಆರು ಗಂಟೆಯ ತನಕ ಮಲಗಿದ್ದಾಯಿತು. ರಾತ್ರಿಯೂಟಕ್ಕೂ ಕರೆದರು. ಮತ್ತೆ ಜೇಗನೆ ಹಾಸಿಗೆ ಮೇಲೆ ಬಿದ್ದು ಕೊಂಡೆನು. ಮರುದಿನ ಬೆಳಗಿನ ವರೆಗೆ ಸುಖವಾಗಿ ಮಲಗಿಕೊಂಡೆನು. ಆ ಮೇಲೆ ಸಾಧ್ಯವಿದ್ದಷ್ಟು ಮಟ್ಟಿಗೆ ಅಚ್ಚುಕಟ್ಟಾಗಿ ಅರಿವೆ ತೊಟ್ಟೆನು. ಅಂಡ್ರ್ಯೂ ಬ್ರೆಡ್‌ಫೋರ್ಡ್ ಮುದ್ರಕರಲ್ಲಿಗೆ ಹೋದೆನು ಅಂಗಡಿಯಲ್ಲಿ ಅವನ ಮುದಿ ತಂದೆಯನ್ನು ಕಂಡೆನು. ಅವನನ್ನು ನಾನು ನ್ಯೂಯಾರ್ಕಿ ನಲ್ಲಿ ನೋಡಿದ್ದಾಗಿತ್ತು. ಅಲ್ಲದೆ ಅವನು ಕುದುರೆ ಸವಾರಿ ಮಾಡಿಕೊಂಡು ನನಗಿಂತ ಮೊದಲು ಫಿಲಡೆಲ್ಫಿಯಾಕ್ಕೆ ಮುಟ್ಟಿದ್ದನು. ಅವನ ಮಗನಿಗೆ ಅವನು ನನ್ನ ಪರಿಚಯವನ್ನು ಮಾಡಿಕೊಟ್ಟನು. ಅವನೂ ನನ್ನನ್ನು ಆದರದಿಂದ ಬರಮಾಡಿಕೊಂಡನು ಮತ್ತು ನನಗೆ ಬೆಳಗಾತದ ಆಹಾರ ವನ್ನು ಕೊಟ್ಟನು ಮತ್ತು ಇತ್ತೀಚೆಗೆ ಒಬ್ಬನನ್ನು ಕೆಲಸಕ್ಕೆ ತೆಗೆದುಕೊಂಡು ದರಿಂದ ಸದ್ಯಕ್ಕೆ ತನಗೆ ಯಾರೂ ಬೇಕಾಗಿಲ್ಲ. ಆದರೆ ಪೇಟೆಯಲ್ಲಿ ಇನ್ನೊಬ್ಬ ಕೈಮರ್ ಎಂಬ ಮುದ್ರಕನಿದ್ದಾನೆ, ಅವನು ಬಹುಶಃ ನನ್ನನ್ನು ಕೆಲಸಕ್ಕೆ ಸೇರಿಸಿಕೊಂಡಾನೆಂದು ಹೇಳಿದನು. ಅಲ್ಲಿಗೆ ಒಂದುವೇಳೆ ಹೋಗಿ ಅಲ್ಲಿ ಕೆಲಸ ಸಿಕ್ಕದಿದ್ದರೆ ನನಗೆ ಅವನ ಮನೆಯಲ್ಲಿ ವಾಸವಾಗಿರಲು ಸ್ವಾಗತವಿದೆ ಮತ್ತು ಅವನು ಆಗ–ಈಗ ನನಗೆ ಚಿಕ್ಕ ಪುಟ್ಟ ಕೆಲಸಗಳನ್ನು ವ್ಯವಹಾರ ಹೆಚ್ಚುವ ತನಕ ಕೊಡುವುದಾಗಿಯೂ ವಚನ ಮಾಡಿದನು.

ನನ್ನೊಂದಿಗೆ ಆ ಮುದಿ ಗೃಹಸ್ಥನು ಹೊಸ ಮುದ್ರಕನಲ್ಲಿಗೆ ಬರುವು ದಾಗಿ ಹೇಳಿದನು. ಮತ್ತು ನಾವು ಅವನನ್ನು ಕಂಡಾಗ "ನೆರೆಯವನೇ, ನಿನ್ನ ಉದ್ಯೋಗದ ಒಬ್ಬ ತರುಣನನ್ನು ನಾನು ಕರೆದು ತಂದಿರುವೆನು, ಬಹುಶಃ ನಿನಗೆ ಅಂಥ ಮನುಷ್ಯನು ಬೇಕಾಗಿರಬಹುದು," ಎಂದು ಬ್ರೆಡ್ ಫೋರ್ಡನು ಹೇಳಿದನು. ಅವನು ನನಗೆ ಕೆಲವೊಂದು ಪ್ರಶ್ನೆಗಳನ್ನು ಕೇಳಿ ದನು. ನನ್ನ ಕೈಯಲ್ಲಿ ಒಂದು ಕಂಪೋಸಿಂಗ್ ಸ್ಟಿಕ್ ಕೊಟ್ಟು ನಾನು ಹೇಗೆ ಕೆಲಸ ಮಾಡುತ್ತೇನೆಂದು ನೋಡಿದನು. ಆ ಮೇಲೆ ನನ್ನನ್ನು ಬೇಗನೆ ಕೆಲಸಕ್ಕೆ ಇಟ್ಟುಕೊಳ್ಳುವುದಾಗಿ ಅವನು ಹೇಳಿದುದಾಯಿತು. ಹಾಗೆಂದು ಅವನಲ್ಲಿ ಆಗ ನನಗೇನೂ ಕೆಲಸವಿರಲಿಲ್ಲ. ಅಂತೇ ಈ ಮೊದಲು ಅವನು ಕಾಣದೆ ಇರುವ ಮುದಿ ಬ್ರೆಡ್‌ಫೋರ್ಡನ ಸಂಗಡ ತನ್ನ ಪ್ರಸ್ತುತ

ಉದ್ಯೋಗ ಹಾಗೂ ಅದರ ಭವಿತವ್ಯದ ಕುರಿತು, ಪೇಟೆಯಲ್ಲಿನ ಜನರಲ್ಲಿ ಇವನೊಬ್ಬನು ತನ್ನ ಬಗ್ಗೆ ಆದರ ಬುದ್ಧಿಯುಳ್ಳವನೆಂದು ಬಗೆದು, ಸಂಭಾಷಣೆಗೆ ತೊಡಗಿದನು. ಇತ್ತ ಅವನು ಮತ್ತೊಬ್ಬ ಆ ಮುದ್ರಕನ ತಂದೆಯೆಂದು ತಿಳಿಯದೆ ಬ್ರೆಡ್‌ಫೋರ್ಡನು ಕೈಮರನ ಹೇಳಿಕೆಯಂತೆ—ವ್ಯವಹಾರದ ಹೆಚ್ಚಿನ ಅಂಶವನ್ನೆಲ್ಲ ಬೇಗನೆ ತನ್ನ ಸ್ವಂತ ಕೈಗಳಲ್ಲಿ ಇಟ್ಟುಕೊಳ್ಳಬೇಕೆಂದು ಆಶಿಸಿದನು. ಕಲಾತ್ಮಕ ಪ್ರಶ್ನೆಗಳಿಂದ ಅವನನ್ನು ತನ್ನತ್ತ ಒಲಿಸಿಕೊಂಡನು. ಮತ್ತು ಚಿಕ್ಕ–ಪುಟ್ಟ ಸಂಶಯಗಳನ್ನು ಕೂಡಾ ನಿವಾರಿಸುತ್ತ ತಾನು ಯಾವ ಉದ್ದೇಶವಿಟ್ಟುಕೊಂಡಿದ್ದೇನೆ ಮತ್ತು ಯಾವ ರೀತಿಯಲ್ಲಿ ಮುಂದುವರಿಯುತ್ತೇನೆಂಬುದನ್ನೆಲ್ಲ ಅವನಿಗೆ ವಿಶದ ಪಡಿಸಿದನು. ಇತ್ತ ಅವರ ಬದಿಯಲ್ಲಿ ನಿಂತುಕೊಂಡು ಇದನ್ನೆಲ್ಲ ಕೇಳುತ್ತಿದ್ದ ನಾನು ಕೂಡಲೆ ಅವರಲ್ಲಿ ಒಬ್ಬನು ಕಪಟಿ, ಕುತರ್ಕಿ, ಮತ್ತೊಬ್ಬ ಕೇವಲ ಶಿಷ್ಯನೆಂಬುದನ್ನು ಕಂಡು ಹಿಡಿದೆನು. ಕೈಮರನ ಸಂಗಡ ನನ್ನನ್ನು ಬಿಟ್ಟು ಬ್ರೆಡ್‌ಫೋರ್ಡನು ಹೋದನು. ಆ ಮುದಿ ಮನುಷ್ಯನು ಯಾರೆಂದು ನಾನು ಕೈಮರನಿಗೆ ತಿಳಿಸಿದಾಗ ಅವನು ಭಾರೀ ಆಶ್ಚರ್ಯಕ್ಕೊಳಗಾದನು.

ಕೈಮರನ ಮುದ್ರಣಾಲಯದಲ್ಲಿ ಒಂದು ಹಳೆಯ ಚದರಿಹೋದ ಮುದ್ರಣ ಯಂತ್ರ ಮತ್ತು ಒಂದು ಸಣ್ಣ ಹಳೆಯ ಇಂಗ್ಲೀಷ ಅಚ್ಚುಮೊಳೆಗಳ ಕೇಸು ಇದ್ದುದನ್ನು ನಾನು ಕಂಡೆನು. ಅವನೇ ಸ್ವತಃ ಎಕ್ವಿಲಾರೋಸಿನ ಬಗ್ಗೆ ಒಂದು ಶೋಕ ಗೀತೆಯನ್ನು ಕಂಪೋಸ್ ಮಾಡುತ್ತ ಅದನ್ನು ಉಪಯೋಗಿಸುತ್ತಿದ್ದನು. ಈ ಶೋಕ ಗೀತೆಯನ್ನು ಮೊದಲೆ ಪ್ರಸ್ತಾಪಿಸಿದೆ. ಎಕ್ವಿಲಾ ರೋಸನು ಚತುರನಾದ ತರುಣನು. ಯೋಗ್ಯ ಗುಣವಂತನಾದ ಅವನು ಅಸೆಂಬ್ಲಿಯ ಕಾರಕೂನನೂ ಸುಂದರ ಕವಿಯೂ ಆಗಿದ್ದು ಪೇಟೆಯಲ್ಲೆಲ್ಲ ಗೌರವಿಸಲ್ಪಡುತ್ತಿದ್ದನು. ಕೈಮರನೂ ಕೂಡ ಕವಿತೆಗಳನ್ನು ಕಟ್ಟುತ್ತಿದ್ದನು. ಆದರೆ ತೀರ ಉದಾಸೀನತೆಯಿಂದ ರಚಿಸುತ್ತಿದ್ದನು. ಅವನು ಅವುಗಳನ್ನು ಬರೆಯುತ್ತಿದ್ದನೆಂದು ಹೇಳಲಾಗದು. ಯಾಕಂದರೆ ಅವನು ತಲೆಯಿಂದ ನೇರವಾಗಿ ಒಮ್ಮೆಲೆ ಮೊಳೆ ಜೋಡಿಸಿಯೇ ಅವುಗಳನ್ನು ರಚಿಸುತ್ತಿದ್ದನು. ಹೀಗಾಗಿ ಅದರ ಪ್ರತಿ ಇರುತ್ತಿದ್ದಿಲ್ಲ. ಆದರೆ ಒಂದು ಜೊತೆ ಕೇಸುಗಳಷ್ಟೆ ಇದ್ದವು. ಮತ್ತು ಶೋಕ ಗೀತೆಗೆ ಎಲ್ಲಾ ಅಕ್ಷರಗಳು ಬೇಕಾಗುವಂತೆ ಇದ್ದುವು. ಕಾರಣ–ಯಾರೂ ಅವನಿಗೆ ಸಹಾಯ ಮಾಡಲು ಸಾಧ್ಯವಿರಲಿಲ್ಲ. ನಾನು ಅವನ ಪ್ರೆಸ್ಸನ್ನು (ಅದನ್ನು ಅವನು ಇನ್ನೂ ಉಪಯೋಗಿಸಿರಲಿಲ್ಲ ಮತ್ತು ಅದರ ಬಗ್ಗೆ

ಏನೂ ತಿಳಿದಿರಲೂ ಇಲ್ಲ) ಕೆಲಸಕ್ಕೆ ಉಪಯೋಗ ಬೀಳುವಂತೆ ವ್ಯವಸ್ಥೆ ಯಲ್ಲಿಡಲು ಪ್ರಯತ್ನಿಸಿದೆನು. ಅಂತೇ ಅವನು ಶೋಕಗೀತೆಯನ್ನು ಸಿದ್ಧಪಡಿಸಿದೊಡನೆ ಬಂದು ಅದನ್ನು ಮುದ್ರಿಸುತ್ತೇನೆಂದು ವಚನ ಕೊಟ್ಟು ನಾನು ಬ್ರೆಡ್‌ಫೋರ್ಡ್‌ನ ಮನೆಗೆ ತೆರಳಿದೆನು. ಅವನು ಈಗ ನನಗೆ ಚಿಕ್ಕ ಕೆಲಸವೊಂದನ್ನು ಕೊಟ್ಟಿದ್ದನು. ಅಲ್ಲಿ ನಾನು ವಸತಿ ಮಾಡಿದ್ದೆ ಮತ್ತು ಊಟವೂ ಅಲ್ಲಿಯೆ ಆಯಿತು. ಕೆಲವು ದಿವಸಗಳ ನಂತರ ಶೋಕ ಗೀತೆಯನ್ನು ಮುದ್ರಿಸಲು ನನಗೆ ಕೈಮರನು ಹೇಳಿ ಕಳುಹಿಸಿದನು. ಈಗ ಮಾತ್ರ ಅವನಲ್ಲಿ ಮತ್ತೊಂದು ಜೊತೆ ಕೇಸುಗಳಿದ್ದವು. ಅಲ್ಲದೆ ಒಂದು ಕರ ಪುಸ್ತಕವನ್ನು ಪುನರ್ಮುದ್ರಿಸಲಿಕ್ಕೂ ಇತ್ತು. ಅದರ ಕೆಲಸಕ್ಕೆ ಅವನು ನನ್ನನ್ನುಬಿಟ್ಟನು.

ಈ ಇಬ್ಬರು ಮುದ್ರಕರು ತಮ್ಮ ಉದ್ಯೋಗಕ್ಕೆ ಸರಿಯಾಗಿ ಸಜ್ಜಾಗಿ ರಲಿಲ್ಲವೆಂದು ನನಗೆ ತೋರಿಬಂತು. ಬ್ರೆಡ್‌ಫೋರ್ಡನು ಅದಕ್ಕೆ ಬೆಳೆದು ಬಾಳಿದವನಲ್ಲ ಮತ್ತು ತೀರಾ ನಿರಕ್ಷರಕುಕ್ಷಿಯಾಗಿದ್ದನು. ಕೈಮರನು ತುಸು ವಿದ್ವಾಂಸನಾಗಿದ್ದರೂ ಕೇವಲ ಕಂಪೊಜಿಟರ್‌ನಾಗಿದ್ದನು. ಪ್ರೆಸ್ಸಿನ ಕೆಲಸ ಗಳಾವುದೂ ಅವನಿಗೆ ತಿಳಿದಿರಲಿಲ್ಲ. ಅವನು ಫ್ರೆಂಚ್ ಭವಿಷ್ಯವಾದಿಗಳಲ್ಲಿ ಒಬ್ಬನಾಗಿದ್ದು ಅವರ ಹಾಗೆ ಉತ್ಸಾಹಪೂರ್ಣ ಉದ್ವೇಗವನ್ನು ನಟಿಸುವವ ನಾಗಿದ್ದನು. ಈ ಹೊತ್ತಿನಲ್ಲಿ ಅವನು ನಿರ್ದಿಷ್ಟವಾದ ಯಾವ ಧರ್ಮವನ್ನೂ ಉಪದೇಶಿಸುತ್ತಿರಲಿಲ್ಲ. ಆದರೆ ಪ್ರಸಂಗ ಬಿದ್ದರೆ ಎಲ್ಲವನ್ನೂ ಉಪದೇಶಿಸು ತ್ತಿದ್ದ. ಜಗತ್ತಿನ ಬಗ್ಗೆ ತೀರ ಅಜ್ಞಾನಿಯಾಗಿದ್ದ. ಅಂತೇ ನಾನು ಆ ಮೇಲೆ ಕಂಡುಕೊಂಡಂತೆ ಅವನಲ್ಲಿ ಸಾಕಷ್ಟು ಠಕ್ಕತನ ಸೇರಿಕೊಂಡಿತ್ತು. ನಾನು ಅವನಲ್ಲಿ ಕೆಲಸ ಮಾಡುತ್ತಿದ್ದಾಗ ನನ್ನ ವಸತಿಯು ಬ್ರೆಡ್‌ಫೋರ್ಡ್‌ನಲ್ಲಿ ಇರುವುದು ಅವನಿಗೆ ಸೇರಿಬರಲಿಲ್ಲ. ಅವನಲ್ಲೊಂದು ಮನೆಯಿತ್ತೇನೋ ನಿಜ, ಆದರೆ ಅದರಲ್ಲಿ ಟೇಬಲು ಕುರ್ಚಿಗಳ ವ್ಯವಸ್ಥೆಯಿದ್ದಿಲ್ಲ. ಕಾರಣ, ಅವನು ನನ್ನನ್ನು ಅದರಲ್ಲಿ ನೆಲೆವೂರಿಸಲು ಸಾಧ್ಯವಿರಲಿಲ್ಲ. ಆದ್ದರಿಂದ ಈ ಮೊದಲೆ ಪ್ರಸ್ತಾಪಿಸಲಾದ ಮಿಸ್ಟರ್ ರೀಡನಲ್ಲಿ ನನಗೆ ವಸತಿ ಸೌಕರ್ಯ ವನ್ನು ಒದಗಿಸಿದನು. ಅವನು ಇವನ ಮನೆಯ ಮಾಲಿಕನಾಗಿದ್ದನು ಮತ್ತು ನನ್ನ ಗಂಟು–ಗದಡಿ ಪೆಟ್ಟಿಗೆ–ಅರಿವೆಗಳು ಈ ಹೊತ್ತಿಗೆ ಬಂದು ದರಿಂದ ಈ ಮೊದಲು ನಾನು ಬ್ರೆಡ್ಡಿನ ತುಂಡನ್ನು ತಿಂದುಕೊಂಡು ಬೀದಿ ಯಲ್ಲಿ ಹೋಗುವಾಗ ಮಿಸ್ ರೀಡಳ ಕಣ್ಣಿಗೆ ಬಿದ್ದ ನನ್ನ ರೂಪಿಗಿಂತ ಈ ಗಿನದು ಹೆಚ್ಚು ಗೌರವದಾಯಕವಾಗಿ ಕಂಡು ಬಾರದಿರಲಿಕ್ಕಿಲ್ಲ ಎಂದು

ಹೇಳಬಹುದು.

ಈಗ ನಾನು ಪೇಟೆಯಲ್ಲಿನ ಓದುವ ಅಭಿರುಚಿಯುಳ್ಳ ತರುಣರೊಡನೆ ಮಿತ್ರತ್ವ ಬೆಳೆಸಲು ಪ್ರಾರಂಭಿಸಿದೆನು. ಇವರೊಡನೆ ಸಂಜೆಯ ಹೊತ್ತನ್ನು ಸಂತೋಷದಿಂದ ಕಳೆಯತೊಡಗಿದೆನು. ನನ್ನ ಉದ್ಯೋಗದಿಂದ ಮತ್ತು ಮಿತವ್ಯಯದಿಂದ ಹಣ ಗಳಿಸುತ್ತ ನಾನು ಬಹಳ ಸುಖಕರವಾಗಿ ಜೀವಿಸಿದೆನು. ನನ್ನಿಂದ ಸಾಧ್ಯವಾದಷ್ಟರ ಮಟ್ಟಿಗೆ ಬೊಸ್ಟನ್ ಮರೆತುದೂ ಆಯಿತು. ಅಲ್ಲದೆ ನನ್ನ ಮಿತ್ರ ಕೊಲಿನ್ಸನ ಹೊರತಾಗಿ ಬೇರೆ ಯಾರೂ ಅಲ್ಲಿಯವರಿಗೆ ನಾನು ಎಲ್ಲಿ ವಾಸವಾಗಿದ್ದೇನೆಂಬುದನ್ನು ತಿಳಿಯಬಾರದೆಂದು ನನ್ನ ಆಶಯವಿತ್ತು. ಅವನು ನನ್ನ ಬಗ್ಗೆ ಗೌಪ್ಯವಿಟ್ಟಿದ್ದನು ಮತ್ತು ನಾನು ಅವನಿಗೆ ಪತ್ರ ಹಾಕಿದರೂ ಅವನು ಗುಟ್ಟಾಗಿ ವ್ಯವಹರಿಸುತ್ತಿದ್ದನು. ಕೆಲ ಕಾಲದ ನಂತರ ಒಂದು ಘಟನೆ ಒದಗಿ ಬಂದಿತು. ಅದು ನನ್ನನ್ನು ನಾನು ಇಚ್ಛಿಸಿದುದಕ್ಕಿಂತ ಮೊದಲೆ ಹಿಂದೆ ಹೋಗುವಂತೆ ಮಾಡಿತು. ರೊಬರ್ಟ ಹೋಮ್ಸ್ ಎಂಬೊಬ್ಬ ಭಾವನು ನನಗಿದ್ದನು. ಅವನು ಡೆಲವೇರ ಮತ್ತು ಬೋಸ್ಟನ್‌ಗಳ ನಡುವೆ ವ್ಯಾಪಾರ ಮಾಡುವ ಹಡಗಿನ ಒಡೆಯನಾಗಿದ್ದನು. ಫಿಲಡೆಲ್ಫಿಯಾದಿಂದ ನಾಲ್ವತ್ತು ಮೈಲು ಕೆಳಗಡೆ ಇರುವ ನ್ಯೂಕ್ಯಾಸಲ್‌ನಲ್ಲಿ ಅವನಿದ್ದನು. ಅಲ್ಲಿ ಅವನು ನನ್ನ ಬಗ್ಗೆ ಕೇಳಿಕೊಂಡು, ನನ್ನ ಆಕಸ್ಮಿಕ ತೆರಳುವಿಕೆಯಿಂದ ಬೋಸ್ಟನಿನ ನನ್ನ ಮಿತ್ರರ ಉದ್ವೇಗವನ್ನು ಕುರಿತು ಒಂದು ಪತ್ರ ಬರೆದನು. ಅಂತೇ ಆದರಲ್ಲಿ ಅವರು ನನ್ನ ಬಗ್ಗೆ ವ್ಯಕ್ತಪಡಿಸಿದ ಆದರಭಾವನೆ ಕಾಣುತ್ತಿತ್ತು. ಹಾಗೂ ನಾನು ಪುನಃ ಅಲ್ಲಿಗೆ ತೆರಳಿದರೆ ನನ್ನ ಮನಸ್ಸಿನಂತೆ ಎಲ್ಲವನ್ನು ಸರಿಪಡಿಸಿಕೊಳ್ಳಲಾಗುವುದೆಂದು ಅಭಯವಚನವಿತ್ತಿದ್ದನು. ಹೀಗೆ ಮಾಡಲು ಅವನು ನನಗೆ ಬಹಳ ವಿಶ್ವಾಸದಿಂದ ಬೋಧಿಸಿದ್ದನು. ಅವನ ಪತ್ರಕ್ಕೆ ಉತ್ತರ ಬರೆದು ಅವನ ಉಪದೇಶಕ್ಕೆ ಉಪಕಾರಸ್ಮರಣೆ ಮಾಡಿದೆನು. ಅಂತೇ ನಾನು ಬೋಸ್ಟನ್ ಬಿಟ್ಟು ಬಂದುದಕ್ಕೆ ಸಂಪೂರ್ಣ ಕಾರಣಗಳನ್ನು ಹೇಳಿ ಮತ್ತು ಆ ದೃಷ್ಟಿಯಿಂದ ಅವನು ಕಲ್ಪಿಸಿರುವಷ್ಟು ತಪ್ಪಿತಸ್ಥನು ನಾನಲ್ಲವೆಂದು ತಿಳಿಯಪಡಿಸಿದುದಾಯಿತು.

ಆ ಪ್ರಾಂತದ ಗವರ್ನರಾದ ಸರ್ ವಿಲಿಯಂ ಕೈತನು ಆಗ ನ್ಯೂಕ್ಯಾಸಲಿನಲ್ಲಿದ್ದನು. ನನ್ನ ಕಾಗದವು ಕ್ಯಾಪ್ಟನ್ ಹೋಮ್ಸನ ಕೈ ಸೇರುವಾಗ ಗವರ್ನರರ ಜೊತೆಯಲ್ಲಿ ಇವನು ಇದ್ದುದರಿಂದಾಗಿ ನನ್ನ ಬಗ್ಗೆ ಹೋಮ್ಸನು ಗವರ್ನರರನೊಡನೆ ಪ್ರಸ್ತಾಪವನ್ನೆತ್ತಿ ನನ್ನ ಪತ್ರವನ್ನೂ ಅವ

ನಿಗೆ ತೋರಿಸಿದನು, ಗವರ್ನರನು ಅದನ್ನು ಓದಿದನು. ನನ್ನ ಪ್ರಾಯ ವನ್ನು ಕೇಳಿದೊಡನೆ ಅವನಿಗೆ ದಿಗಿಲು ಬಿದ್ದಿರಬೇಕು. ನಾನೊಬ್ಬ ಆಶಾ ದಾಯಕ ಭವಿಷ್ಯವುಳ್ಳ ತರುಣನಾದುದರಿಂದ ಪ್ರೋತ್ಸಾಹ ನೀಡಬೇಕೆಂದು ಅವನು ಹೇಳಿದನು. ಫಿಲಡೆಲ್ಫಿಯಾದ ಮುದ್ರಕರೆಲ್ಲ ಚಂಡಾಲರು. ಮತ್ತು ನಾನು ಅಲ್ಲಿ ನೆಲಸಿದ್ದಾದರೆ ನನ್ನ ಯಶಸ್ಸಿಗೆ ಸಂಶಯ ಪಡ ಬೇಕಾದ್ದಿಲ್ಲ. ಆದರೆ ತನ್ನ ವತಿಯಿಂದ ಅವನು ನನಗೆ ಸಾರ್ವಜನಿಕ ಉದ್ಯೋಗವನ್ನು ದೊರಕಿಸಿ ಕೊಡುವುದಾಗಿ ಮತ್ತು ತನ್ನ ಅಧಿಕಾರದ ಮೂಲಕ ನನಗೆ ಮಿಕ್ಕೆಲ್ಲ ಸೌಕರ್ಯಗಳನ್ನು ನೀಡುವ ವಚನವಿತ್ತನು. ಕೆಲ ದಿವಸಗಳ ಮೇಲೆ ಇದನ್ನು ನನಗೆ ನನ್ನ ಭಾವನು ಬೋಸ್ಟನಿನಲ್ಲಿ ಹೇಳಿದನು. ಆದರೆ ಅದರ ಬಗ್ಗೆ ನನಗಿನ್ನೂ ಯಾವುದೂ ಗೊತ್ತಿರಲಿಲ್ಲ. ಹೀಗಿರಲು—ಒಂದು ದಿನ ನಾನು ಮತ್ತು ಕೈಮರನು ಕಿಟಕಿಯ ಹತ್ತಿರ ಕೂಡಿಕೊಂಡು ಕೆಲಸ ಮಾಡುತ್ತಿದ್ದಾಗ ಗವರ್ನರ ಮತ್ತು ಒಬ್ಬ ಗೃಹಸ್ಥ (ಅವನು ನ್ಯೂಕ್ಯಾಸಲಿನ ಕರ್ನಲ್ ಫ್ರೆಂಚ್ ಎಂಬುದು ಸಿದ್ಧವಾಗು ವಂತಿತ್ತು) – ಅಂದವಾದ ಉಡುಪು ಹಾಕಿಕೊಂಡವನು – ಬೀದಿಯನ್ನು ದಾಟಿ ನೇರವಾಗಿ ನಮ್ಮ ಮುದ್ರಣಾಲಯದತ್ತ ಬಂದರು. ನಮ್ಮ ಬಾಗಿಲಿ ನಲ್ಲಿ ಮಾತನಾಡುವುದು ಕೇಳಿಸಿತು.

ತನ್ನಲ್ಲಿಗೇ ಆ ಸಂದರ್ಶನವೆಂದು ಬಗೆದುಕೊಂಡು ಕೈಮರ್ ಕೂಡಲೆ ಕೆಳಗೆ ಓಡಿಬಂದನು. ಆದರೆ ಗವರ್ನರನು ನನ್ನನ್ನು ಕೇಳಿದನು. ಮೇಲೆ ಹತ್ತಿ ಬಂದೇ ಬಿಟ್ಟನು. ನಮ್ರತೆ ಹಾಗೂ ಸುಸಂಸ್ಕೃತ ನಡತೆಯು ನನ್ನ ಬಗ್ಗೆ ತೀರ ವಿರಳವಾಗಿ ಉಪಯೋಗಿಸಲ್ಪಡುತ್ತಿತ್ತು. ನನಗೆ ಅನೇಕ ಅಭಿನಂದನೆಗಳನ್ನು ಸಲ್ಲಿಸಿದನು. ನನ್ನೊಡನೆ ಪರಿಚಯ ಮಾಡಿಕೊಳ್ಳಲು ಆಶಿಸಿದನು. ಅಂತೇ ನಾನು ಆ ಊರಿಗೆ ಮೊದಲು ಹೋದೊಡನೆ ಅವನ ಪರಿಚಯ ಮಾಡಿಕೊಳ್ಳದುದಕ್ಕಾಗಿ ವಿನಯಪೂರ್ವಕವಾಗಿ ಗದರಿಸಿದುದೂ ಆಯಿತು. ನಂತರ ತನ್ನ ಸಂಗಡವಿದ್ದ ಕರ್ನಲ್ ಫ್ರೆಂಚನೊಡನೆ ಉಪಾಹಾರಕ್ಕೆ ಹೋಗುವಾಗ ನನ್ನನ್ನೂ ಉಪಾಹಾರ ಗೃಹಕ್ಕೆ ಕರೆದು ಕೊಂಡು ಹೋಗುವುದಾಗಿ ಹೇಳಿದನು. ಅವನು ಅತ್ಯುತ್ತಮ ಮದೀರಾ (Madeira) ವನ್ನು ಕೊಡುವುದಾಗಿ, ಹೇಳಿದೊಡನೆ ಅತ್ಯಾಶ್ಚರ್ಯ ವಾಯಿತು. ವಿಷಹಾಕಿದ ಹಂದಿಯಂತೆ ಕೈಮರನು ಕೆರಳಿ ನೋಡುತ್ತಿದ್ದನು. ಅಂತೂ ನಾನು ಗವರ್ನರ ಹಾಗೂ ಕರ್ನಲ್ ಫ್ರೆಂಚ್ ಇವರನ್ನು ಕೂಡಿ ಕೊಂಡು ಉಪಾಹಾರಗೃಹಕ್ಕೆ ಹೋದೆನು. ಅದು ಮೂರನೆ ಬೀದಿಯ

ಮೂಲೆಯಲ್ಲಿತ್ತು. ಮತ್ತು ಮದೀರಾಸೇವನೆಯ ಸಂದರ್ಭದಲ್ಲಿ ಅವನು ನನ್ನ ಉದ್ಯೋಗವನ್ನು ನೆಲೆಗೊಳಿಸುವ ಪ್ರಸ್ತಾಪವೆತ್ತಿದನು. ಯಶಸ್ಸಿನ ಸಂಭವಗಳನ್ನೆಲ್ಲ ನನ್ನ ಮುಂದಿರಿಸಿದನು. ಅಲ್ಲದೆ ಅವನಿಂದ ಮತ್ತು ಕರ್ನಲ್ ಫ್ರೆಂಚ್ ಇಬ್ಬರಿಂದ ಕೂಡಾ ಎರಡೂ ಸರಕಾರಗಳ ಸಾರ್ವಜನಿಕ ವ್ಯವಹಾರ ದೊರಕಿಸುವುದರಲ್ಲಿ ಸಹಾಯ ಹಾಗೂ ವರ್ಚಸ್ಸಿನ ಉಪಯೋಗ ಸಿಗುತ್ತದೆಂದು ಅಭಯನೀಡಿದನು. ನನ್ನ ತಂದೆಯವರು ನನ್ನ ಈ ಉದ್ಯಮದಲ್ಲಿ ನನಗೆ ಸಹಕಾರನೀಡಬಹುದೇ ಹೇಗೆಂದು ನಾನು ಸಂಶಯ ವ್ಯಕ್ತಪಡಿಸಿದಾಗ ಅವರಿಗೆ ತಾನೊಂದು ಪತ್ರ ಕೊಡುವುದಾಗಿ ಸರ್ ವಿಲಿಯಮ್ ಹೇಳಿದನು. ಅದರಲ್ಲಿ ನಮೂದಿಸಿದ ವ್ಯವಹಾರದ ಅನುಕೂಲತೆಗಳನ್ನೆಲ್ಲ ಅವರು ಒಪ್ಪದಿರಲಾರರೆಂಬುದರಲ್ಲಿ ಇವನಿಗೆ ಸಂಶಯವಿರಲಿಲ್ಲ. ಆದ್ದರಿಂದ ನನ್ನನ್ನು ಶಿಫಾರಸು ಮಾಡುವ–ತಂದೆಯವರಿಗೆ ಕೊಡುವ ಗವರ್ನರನ ಪತ್ರದೊಂದಿಗೆ, ನಾನು ಬೋಸ್ಟನಿಗೆ ಪ್ರಥಮ ಹಡಗಿನಲ್ಲಿ ಹೋಗುವುದೆಂದು ನಿರ್ಧರವಾಯಿತು. ಇತ್ತ ಈ ನಿರ್ಣಯವನ್ನು ಗುಟ್ಟಿನಲ್ಲಿ ಇಡಬೇಕಾಗಿತ್ತಷ್ಟೆ. ಕಾರಣ, ನಾನು ಯಥಾಪ್ರಕಾರ ಕೈಮರನೊಡನೆ ಕೆಲಸ ಮಾಡುತ್ತಾ ಇದ್ದೆನು. ನನ್ನನ್ನು ಆಗ ಈಗ ಗವರ್ನರನು ತನ್ನ ಸಂಗಡ ಭೋಜನಕ್ಕೆ ಆಮಂತ್ರಿಸುತ್ತ ಇದ್ದನು. ಅದೊಂದು ಬಹು ದೊಡ್ಡ ಗೌರವವೆಂದು ನಾನು ತಿಳಿದುಕೊಂಡಿದ್ದೆ. ಅಲ್ಲದೆ ಕಲ್ಪನಾತೀತವಾದ ಮಿತ್ರತ್ವದಿಂದ, ಆದರದಿಂದ–ವಿಶ್ವಾಸದ ರೀತಿಯಲ್ಲಿ ನನ್ನ ಕೂಡ ಮಾತುಕತೆ ನಡೆಸುತ್ತಿದ್ದನು.

೧೭೨೪ ರ ಏಪ್ರಿಲ್ ತಿಂಗಳ ಕೊನೆಯಲ್ಲಿ ಒಂದು ಸಣ್ಣ ಹಡಗವು ಬೋಸ್ಟನಿಗೆ ಹೋಗಲು ಸಿದ್ಧವಾಗಿತ್ತು. ನನ್ನ ಮಿತ್ರರನ್ನು ನೋಡಲು ಹೋಗುತ್ತೇನೆಂದು ಹೇಳಿ ನಾನು ಕೈಮರನನ್ನು ಬಿಟ್ಟು ಬಂದೆನು. ಗವರ್ನರನು ನನಗೆ ತಕ್ಕ ಪತ್ರವನ್ನೆ ಕೊಟ್ಟನು. ನನ್ನ ತಂದೆಯವರಿಗೆ ಬರೆದ ಆ ಪತ್ರದಲ್ಲಿ ನನ್ನ ಬಗ್ಗೆ ತುಂಬಾ ಹೊಗಳಿದ್ದನು. ಮತ್ತು ನಾನು ಫಿಲಡೆಲ್ಫಿಯಾದಲ್ಲಿ ವ್ಯವಹಾರ ಹೂಡುವುದನ್ನು ಬಲವಾಗಿ ಶಿಫಾರಸು ಮಾಡಿ ಆದರಿಂದ ನನ್ನ ಅಭಿವೃದ್ಧಿಯಾಗುವುದೆಂದು ಬರೆದಿದ್ದನು. ಕಿರಿದಾಳದಿಂದ ಹಡಗನ್ನು ನಡೆಸುತ್ತ ನಾವು ಕೊಲ್ಲಿಯತ್ತ ಕೆಳಗೆ ಹೋದೆವು. ಹಡಗಿನಿಂದ ನೀರನ್ನು ಹಾರಿಸುತ್ತ ನಾವು ಸಮುದ್ರದಲ್ಲಿ ಉಲ್ಲಾಸದಿಂದ ಸಮಯ ಕಳೆದೆವು. ಎಡೆಬಿಡದೆ ಹುಟ್ಟು ಹಾಕುವ ಕೆಲಸವನ್ನು ಮಾಡಬೇಕಾಗಿತ್ತು. ಈ ಕೆಲಸದಲ್ಲಿ ನನ್ನ ಸರದಿಯೂ ಇತ್ತು. ಅಂತೂ ಸುಮಾರು ಹದಿನೈದು ದಿವಸಗಳಲ್ಲಿ ನಾವು ಸುಖವಾಗಿ ಬೋಸ್ಟನಿಗೆ ಮುಟ್ಟಿದೆವು. ಏಳು ತಿಂಗಳು

ಗಳ ಕಾಲ ನಾನು ಅಲ್ಲಿ ಇರಲಿಲ್ಲ. ನನ್ನ ಮಿತ್ರರು ನನ್ನ ಬಗ್ಗೆ ಏನನ್ನೂ ತಿಳಿದಿರಲಿಲ್ಲ. ಯಾಕಂದರೆ ನನ್ನ ಭಾವ ಹೋಮ್ಸನು ಇನ್ನೂ ಹಿಂದಿರುಗಿ ಬಂದಿರಲಿಲ್ಲ. ಅಲ್ಲದೆ ನನ್ನ ವಿಷಯ ಏನೂ ಬರೆದಿರಲಿಲ್ಲ. ನನ್ನ ಅಕಲ್ಪಿತ ಸಂದರ್ಶನ ಮನೆಯವರಿಗೆಲ್ಲ ಅಚ್ಚರಿಯನ್ನುಂಟು ಮಾಡಿತು. ಹೇಗೂ ಆಗಲಿ, ನನ್ನ ಸೋದರನ ಹೊರತಾಗಿ, ಎಲ್ಲರೂ ನನ್ನನ್ನು ನೋಡಿ ಬಹಳ ಸಂತೋಷಗೊಂಡು ಸ್ವಾಗತಿಸಿದರು. ನಾನು ಅವನನ್ನು ನೋಡಲು ಅವನ ಮುದ್ರಣಾಲಯಕ್ಕೆ ಹೋದೆನು. ಅವನಲ್ಲಿ ಕೆಲಸಕ್ಕಿದ್ದಾಗಿನಕ್ಕಿಂತ ನಾನು ಈಗ ಉತ್ತಮ ಉಡುಪನ್ನು ಹಾಕಿಕೊಂಡಿದ್ದೆನು. ನಖಶಿಖಾಂತ ಒಂದು ಹೊಸ ನಾಜೂಕಾದ ಸೂಟನ್ನು ಹಾಕಿಕೊಂಡಿದ್ದೆ. ಒಂದು ವಾಚೂ ಇತ್ತು. ಮತ್ತು ನನ್ನ ಕಿಸೆಗಳು ಸುಮಾರು ಐದು ಪೌಂಡುಗಳ ಸ್ಟರ್ಲಿಂಗ್ ಬೆಳ್ಳಿಯಿಂದ ಸಾಲುಕಟ್ಟಲ್ಪಟ್ಟಿದ್ದವು. ಅವನು ನನ್ನನ್ನು ತೆರೆದ ಮನಸ್ಸಿನಿಂದ ಬರಮಾಡಿಕೊಳ್ಳಲಿಲ್ಲ ನನ್ನನ್ನು ಮೇಲಿಂದ ಕೆಳತನಕ ನೋಡಿದನು. ಪುನಃ ತನ್ನ ಕೆಲಸದತ್ತ ತಿರುಗಿಯೇ ಬಿಟ್ಟನು.

ನಾನು ಎಲ್ಲಿಗೆ ಹೋಗಿದ್ದೆ, ಅದು ಯಾವ ತರಹದ ಊರು ಮತ್ತು ಅದನ್ನು ನಾನು ಹೇಗೆ ಮೆಚ್ಚಿದ್ದೇನೆ ಎಂಬುದರ ಕುರಿತು ಕೆಲಸಗಾರರು (journeymen) ಕುತೂಹಲಿಗಳಾಗಿದ್ದರು. ಆ ನಾಡನ್ನು ಮತ್ತು ನಾನು ಅಲ್ಲಿ ಕಳೆದ ಜೀವನವನ್ನು ತುಂಬಾ ಹೊಗಳಿ ಅಲ್ಲಿಗೆ ಮರಳಿ ಹೋಗುವ ಇಚ್ಛೆಯನ್ನು ಬಲವಾಗಿ ವ್ಯಕ್ತಪಡಿಸಿದೆನು. ಅಂತೇ ಅವರಲ್ಲಿ ಒಬ್ಬನು ಅಲ್ಲಿಯ ನಾಣ್ಯ ಹೇಗಿದೆ ಎಂಬದನ್ನು ಕೇಳಿದನು. ನಾನು ಅವನ ಮುಂದೆ ಒಂದು ಹಿಡಿ ಬೆಳ್ಳಿಯ ನಾಣ್ಯಗಳನ್ನು ತೋರಿಸಿ ಅವರೆಲ್ಲರ ಎದುರಿಗೆ ಚದರಿಸಿದೆನು. ಅವರಿಗೆಲ್ಲ ಅದೊಂದು ಬಗೆಯ ಅಪೂರ್ವ ನೋಟವಾಗಿ ಕಂಡಿತು. ಯಾಕಂದರೆ ಕಾಗದವೆ ಬೋಸ್ಟನಿನ ಹಣವಾಗಿತ್ತು. ಆ ಮೇಲೆ ಅವರಿಗೆಲ್ಲ ನನ್ನ ವಾಚು ತೋರಿಸಲು ಒದಗುವ ಸಂದರ್ಭವನ್ನು ಸಾಧಿಸಿಕೊಂಡೆನು. ಮತ್ತು ಕೊನೆಗೆ (ನನ್ನ ಸೋದರನು ಇನ್ನೂ ಬಿಗುವಿನಲ್ಲೆ ಉರಿಮೊಗದಿಂದ ಇದ್ದನು) ನಾನು ಅವರಿಗೆ ಕುಡಿಯಲು ಎಂಟು ಹಣದ ಒಂದು ನಾಣ್ಯವನ್ನು ಕೊಟ್ಟು ಅವರನ್ನು ಬಿಟ್ಟು ಬಂದೆನು. ನನ್ನ ಈ ಸಂದರ್ಶನವು ಅವನನ್ನು ತುಂಬಾ ರೇಗಿಸಿತು. ಕೆಲ ಕಾಲದ ನಂತರ ನನ್ನ ತಾಯಿಯು ಈ ಬಗ್ಗೆ ಸಂಧಾನ ಮಾಡಲು ಮಾತಾಡಿದಳು. ನಾವಿಬ್ಬರೂ ಒಂದುಗೂಡಿ ಇರುವುದು ಅವಳ ಆಶಯವಾಗಿತ್ತು. ಮತ್ತು ಇನ್ನು ಮುಂದಕ್ಕೆ ನಾವು ಸೋದರರ ಹಾಗೆ ಜೀವಿಸುವುದೂ ಅವಳಿಗೆ

ಬೇಕಾಗಿತ್ತು. ಆದರೆ ತನ್ನ ಶಿಷ್ಯರ ಮುಂದೆ ನಾನು ಅವನಿಗೆ ಇಷ್ಟು ಅಪ ಮಾನಗೊಳಿಸಿರುವೆನಲ್ಲಾ ಅವನು ಅದನ್ನು ಎಂದೆಂದೂ ಮರೆಯುವಂತಿಲ್ಲ ಮತ್ತು ಮನ್ನಿಸುವಂತೂ ಇಲ್ಲ ಎಂದನು. ಈ ವಿಚಾರದಲ್ಲಿ ಏನೇ ಆಗಲಿ, ಅವನು ತಪ್ಪು ಭಾವಿಸಿಕೊಂಡಿದ್ದನೆನ್ನಬೇಕು.

ಗವರ್ನರನ ಪತ್ರವನ್ನು ನನ್ನ ತಂದೆಯವರು ತುಸು ಆಶ್ಚರ್ಯದಿಂದಲೆ ತೆಗೆದುಕೊಂಡರು. ಆದರೆ ಕೆಲವು ದಿವಸಗಳ ತನಕ ಅದರ ಬಗ್ಗೆ ಅಂಥ ದೇನೂ ಹೇಳಲಿಲ್ಲ. ಕ್ಯಾಪ್ಟನ್ ಹೋಮ್ಸನು ಹಿಂದಿರುಗಿದಾಗ ಅವನಿಗೆ ಅದನ್ನು ತೋರಿಸಿದರು. ಅಂತೇ ಅವನಿಗೆ ಕೈಥ್‌ನ ಪರಿಚಯವಿದೆಯೇ, ಮತ್ತು ಅವನು ಯಾವ ರೀತಿಯ ಮನುಷ್ಯನು ಎಂದು ಕೇಳಿದರು. ಅಲ್ಲದೆ ಇಂಥ ಇನ್ನೂ ಹಕ್ಕುದಾರ ವ್ಯಕ್ತಿಯಾಗಲು ಮೂರು ವರುಷ ಬೇಕಾಗಿರುವ ಈ ಹುಡುಗನನ್ನು ವ್ಯವಹಾರಕ್ಕೆ ನಿಲ್ಲಿಸಲು ನಿರ್ಧರಿಸಿದ ಅವನು ಖಂಡಿ ತಕ್ಕೂ ವಿವೇಕ ಕಡಿಮೆಯಿದ್ದವನೆಂದು—ತಮ್ಮ ಅಭಿಪ್ರಾಯವನ್ನು ತಿಳಿಸಿ ದನು. ಯೋಜನೆಯ ಪರವಾಗಿ ತನ್ನಿಂದಾದಷ್ಟು ಎಲ್ಲವನ್ನೂ ಹೋಮ್ಸನು ಹೇಳಿದನು. ಆದರೆ ನನ್ನ ತಂದೆಯವರು ಅದರ ಅನೌಚಿತ್ಯದ ಬಗ್ಗೆ ಸ್ಪಷ್ಟ ವಾದಿಯಾಗಿದ್ದರು. ಕೊನೆಗೆ ಅವರು ಸರಳವಾದ ಅಸಮ್ಮತಿಯನ್ನು ವ್ಯಕ್ತ ಗೊಳಿಸಿದರು. ಆಮೇಲೆ ಅವರು ಸರ್ ವಿಲಿಯಂನಿಗೆ ಸಭ್ಯ ಪತ್ರವೊಂದನ್ನು ಬರೆದು, ಅವರು ನನಗೆ ದಯಮಾಡಿ ಕೊಡಲು ಬಂದಿರುವ ಸಹಾಯದ ಕುರಿತು ಉಪಕಾರ ಸ್ಮರಿಸಿದ್ದರು. ಆದರೆ ಅವರ ಮತದಂತೆ ನಾನಿನ್ನೂ ಅಷ್ಟೊಂದು ಮಹತ್ವದ ವ್ಯವಹಾರವನ್ನು ನೋಡಿಕೊಳ್ಳಲು ಕಿರಿಯವನಾ ಗಿರುವುದರಿಂದ ಅವರು ನನಗೆ ಸಹಕರಿಸಲು ಒಪ್ಪದಿರುವುದಾಗಿ ಮತ್ತು ಆ ವ್ಯವಹಾರದ ಸಿದ್ಧತೆಯು ಭಾರೀ ಖರ್ಚಿನದಾಗಿಯೂ ಇರುವುದೆಂದು ತಿಳಿ ಸಿದ್ದರು.

ನನ್ನ ಗೆಳೆಯ ಮತ್ತು ಸಂಗಾತಿಯೂ ಆದ ಕೊಲಿನ್ಸನು ನನ್ನ ಹೊಸ ದೇಶದ ವರದಿಯನ್ನು ಕೇಳಿ ಸಂತೋಷಪಟ್ಟು ಅಲ್ಲಿಗೆ ಬರಲು ಕೂಡಾ ನಿರ್ಧರಿಸಿದ್ದನು. ಅವನು ಇಲ್ಲಿ ಅಂಚೆಮನೆಯಲ್ಲಿ ಕಾರಕೂನನಾಗಿದ್ದನು. ಇತ್ತ ನಾನು ಇಲ್ಲಿ ತಂದೆಯವರ ನಿರ್ಣಯವನ್ನು ಕೇಳಲು ಕಾದಿರುವಾಗ ಅವನು ನನಗಿಂತ ಮೊದಲು ಭೂಮಾರ್ಗವಾಗಿ ರ್‍ಹೋಡ್ ದ್ವೀಪಕ್ಕೆ ಹೊರಟು ಹೋದನು. ಅವನು ತನ್ನ ಪುಸ್ತಕಗಳ ಗಂಟು—ಮೂಟೆಯನ್ನು ಹಿಂದೆ ಬಿಟ್ಟು ಹೋಗಿದ್ದನು. ಅವುಗಳನ್ನು ನಾನು ನನ್ನವುಗಳ ಸಂಗಡ ನ್ಯೂಯಾರ್ಕಿಗೆ ಒಯ್ಯಬೇಕಾಗಿತ್ತು. ಅವುಗಳು ಗಣಿತದ ಹಾಗೂ

ನೈಸರ್ಗಿಕ ತತ್ತ್ವಜ್ಞಾನದ ಅದ್ಭುತ ಸಂಗ್ರಹಗಳಾಗಿದ್ದವು. ನ್ಯೂಯಾರ್ಕಿನಲ್ಲಿ ಅವನು ನನಗಾಗಿ ಕಾದಿರಲು ನಿರ್ಣಯಿಸಿದ್ದನು.

ಸರ್ ವಿಲಿಯಂನ ಸೂಚನೆಯನ್ನು ನನ್ನ ತಂದೆಯವರು ಒಪ್ಪಿರದಿದ್ದರೂ ನಾನು ನೆಲೆಸಿರುವ ದೇಶದ ಅಂಥ ಗಣ್ಯ ವ್ಯಕ್ತಿಯಿಂದ ನನಗೆ ಅಷ್ಟೊಂದು ಸಹಕಾರ ದೊರೆಯುವುದನ್ನು ನೆನೆದು ಸಂತಸಗೊಂಡಿದ್ದರು. ಮತ್ತು ಇಷ್ಟೊಂದು ಚಿಕ್ಕ ಕಾಲಾವಧಿಯಲ್ಲಿ ನಾನು ನನ್ನ ಸತತ ಕಾರ್ಯತತ್ಪರತೆಯಿಂದ ಮತ್ತು ಮುಂಜಾಗ್ರತೆಯಿಂದ ಇಷ್ಟು ಅಂದವಾಗಿ ವ್ಯವಹಾರಕ್ಕೆ ಸಿದ್ಧವಾದುದನ್ನು ಕಂಡೂ ಅವರಿಗೆ ಮನದುಂಬಿತ್ತು. ಆದುದರಿಂದ, ನನ್ನ ಸೋದರ ಮತ್ತು ನಾನು ಕೂಡಿಕೊಂಡು ಇರುವ ಯಾವ ಸಂಭವವನ್ನೂ ಕಾಣದೆ ಅವರು ನನಗೆ ಪುನಃ ಫಿಲಡೆಲ್ಫಿಯಾಕ್ಕೆ ಹೋಗಲು ಅನುಮತಿಯನ್ನು ಕೊಟ್ಟರು. ಅಲ್ಲಿಯ ಜನರೊಡನೆ ಗೌರವಯುಕ್ತವಾಗಿ ನಡೆದುಕೊಳ್ಳಲು, ಸಾರ್ವಜನಿಕ ಕೀರ್ತಿಯನ್ನು ಸಂಪಾದಿಸಲು ಕಷ್ಟಪಡಲು ಮತ್ತು ನಿಂದಾತ್ಮಕ ಲೇಖನ ಭಾಷಣಗಳಿಂದ ದೂರವಿರಲು—ಇದಕ್ಕೆ ನನಗೆ ತುಂಬಾ ಮನಸ್ಸು ಹೋಗುತ್ತದೆಂದು ಅವರು ತಿಳಿದಿದ್ದರು—ಬುದ್ಧಿವಾದ ಹೇಳಿದ್ದರು. ಅಂತೇ ಸತತ ದುಡಿಮೆಯಿಂದ ಮತ್ತು ಮಿತವ್ಯಯದಿಂದ ನಾನು ಇಪ್ಪತ್ತೊಂದು ವರುಷದವನಾಗುವ ಹೊತ್ತಿಗೆ ನೆಲೆವೂರಲು ಸಾಕಷ್ಟು ಗಳಿಸಿಡಬಹುದೆಂದು ಹೇಳಿದ್ದರು. ಅಲ್ಲದೆ ಅಷ್ಟೊಂದು ಮೂಡಿ ಒಂದಿಷ್ಟು ಬಂಡವಾಳ ಕಡಿಮೆ ಬಿದ್ದರೂ ಉಳಿದುದನ್ನು ತಾನು ಹಾಕಿ ಸಹಾಯ ಮಾಡುತ್ತೇನೆಂದೂ ಹೇಳಿದರು. ಅವರ ಮತ್ತು ನನ್ನ ತಾಯಿಯ ಕೆಲವು ಸಣ್ಣಪುಟ್ಟ ಉಡುಗೊರೆ, ಪ್ರೀತಿಯ ಮತ್ತು ಸ್ಮರಣಾರ್ಥದ ವಸ್ತುಗಳು —ಇವಿಷ್ಟೇ ನನಗೆ ದೊರೆಯಬಹುದಾದ ಪಾಲು ಆಗಿತ್ತು. ನಾನು ಪುನಃ ನ್ಯೂಯಾರ್ಕಿಗೆ ಹಡಗು ಹತ್ತಿ ಹೋಗುವಾಗ—ಅಂದರೆ ಈಗ ಮಾತ್ರ ಅವರ ಅಪ್ಪಣೆ ಮತ್ತು ಆಶೀರ್ವಾದಗಳಿಂದ ನಾನು ಹೋಗುವವನಿದ್ದೆನಷ್ಟೆ.

ರ್‍ಹೋಡೇ ದ್ವೀಪದ ನ್ಯೂಪೋರ್ಟಿನಲ್ಲಿ ಹಡಗು ನಿಂತೊಡನೆ ನನ್ನ ಸೋದರ ಜಾನ್‌ನಲ್ಲಿಗೆ ನಾನು ಹೋದೆನು. ಮದುವೆಯಾದ ಅವನು ಕೆಲವು ವರುಷಗಳಿಂದ ಅಲ್ಲಿ ನೆಲಸಿದ್ದನು. ಅವನು ನನ್ನನ್ನು ಬಹಳ ಪ್ರೀತಿಯಿಂದ ಬರಮಾಡಿಕೊಂಡನು. ಯಾಕಂದರೆ ಅವನು ನನ್ನನ್ನು ಯಾವಾಗಲೂ ಪ್ರೀತಿಸುತ್ತಿದ್ದನು. ವರ್ನನ್ ಎಂಬೊಬ್ಬ ಅವನ ಮಿತ್ರನಿಗೆ ಪೆನ್‌ಸಿಲ್ವೇನಿಯಾದಿಂದ ಸುಮಾರು ಮೂವತ್ತೈದು ಪೌಂಡುಗಳಷ್ಟು

ನೋಟುಗಳು ಬರುವುದಿತ್ತು. ಅದನ್ನು ನಾನು ಅವನಿಂದ ಇವನ ಪರವಾಗಿ ಪಡೆಕೊಂಡು ಮುಂದೆ ಮನಿಯಾರ್ಡರ ಮಾಡಬೇಕೋ ಬೇಡವೆಂದು ಇವನ ಸೂಚನೆ ಬರುವತನಕ ನನ್ನಲ್ಲಿ ಇಟ್ಟುಕೊಳ್ಳಬೇಕೆಂದು ಅಪೇಕ್ಷೆ ಪಟ್ಟನು, ಅದೇ ಪ್ರಕಾರ ಇವನು ನನಗೆ ಒಂದು ಆಜ್ಞಾಪತ್ರವನ್ನು ಕೊಟ್ಟು ದಾಯಿತು. ಇದು ಆ ತರುವಾಯ ನನಗೆ ಸಾಕಷ್ಟು ತೊಂದರೆಯನ್ನೂ ಕೊಟ್ಟಿತು.

ನ್ಯೂಪೋರ್ಟಿನಲ್ಲಿ ನಾವು ನ್ಯೂಯಾರ್ಕಿಗೆ ಹೋಗುವ ಅನೇಕ ಪ್ರಯಾಣಿಕರನ್ನು ಕರೆದುಕೊಂಡೆವು. ಅವರಲ್ಲಿ ಇಬ್ಬರು ತರುಣಿಯರು ಇದ್ದರು ಮತ್ತು ಒಬ್ಬಳು ಗಂಭೀರ, ವಿಚಾರಶೀಲ–ಪರಿಚಾರಿಕೆಯಂಥ ಕ್ವೇಕರ್ ಹೆಂಗಸು ತನ್ನ ಶಿಷ್ಯರೊಂದಿಗೆ ಇದ್ದಳು. ನಾನು ಅವಳಿಗೆ ಚಿಕ್ಕ ಪುಟ್ಟ ಸಹಾಯ ನೀಡುವ ಸಿದ್ಧತೆಯನ್ನು ತೋರಿಸಿ ಋಣಿಯಾದೆನು. ನನ್ನ ಬಗ್ಗೆ ಸಾಕಷ್ಟು ಆದರಭಾವನೆ ಹುಟ್ಟುವಂತೆ ಅದು ಅವಳ ಮನಸ್ಸಿಗೆ ಹೋಯಿತೆಂದು ನನಗೆನಿಸುತ್ತದೆ. ಅಂತೇ ನನ್ನ ಹಾಗೂ ಆ ಇಬ್ಬರು ತರುಣಿಯರ ನಡುವೆ ಪ್ರತಿನಿತ್ಯವೂ ಬೆಳೆಯುತ್ತಿರುವ ಪರಿಚಯ–ಸಂಬಂಧವನ್ನು ಅವಳು ಕಂಡಳು. ಇದನ್ನು ಆ ಇಬ್ಬರು ಯುವತಿಯರು ಪುಷ್ಟೀಕರಿಸುತ್ತಲೂ ಇದ್ದರು. ಇತ್ತ ಅವಳು ನನ್ನನ್ನು ಬದಿಗೆ ಕರೆದು, "ತರುಣನೇ, ನಾನು ನಿನ್ನ ಹಿತವನ್ನು ನೋಡಬೇಕಾಗಿದೆ. ಯಾಕಂದರೆ ನಿನ್ನ ಜೊತೆಗೆ ನಿನ್ನ ಮಿತ್ರರಾರೂ ಇಲ್ಲ. ಅಲ್ಲದೆ ಜಗತ್ತಿನ ಬಗ್ಗೆ ಹೆಚ್ಚಿನ ಜ್ಞಾನ ನಿನಗಿದ್ದ ಹಾಗೆ ಕಾಣದು. ಅವರು ತೀರಾ ಕೆಟ್ಟ ಹೆಂಗಸರು. ಅದನ್ನೆಲ್ಲ ನಾನು ಅವರ ಹಾವಭಾವಗಳಿಂದ ಅರಿತುಕೊಳ್ಳಬಲ್ಲೆ. ಮತ್ತು ನೀನು ನಿನ್ನ ಮೇಲೆ ಎಚ್ಚರಿಕೆ ವಹಿಸದಿದ್ದರೆ ಅವರು ನಿನ್ನನ್ನು ಯಾವುದಾದರೂ ಅಪಾಯಕ್ಕೀಡುಮಾಡುತ್ತಾರೆ. ಅವರು ನಿನಗೆ ಅಪರಿಚಯಸ್ಥರು. ಮಿತ್ರತ್ವದ ಮೇಲೆ ನಿನ್ನ ಹಿತಕ್ಕಾಗಿ ನಾನು ನಿನಗೆ ಬುದ್ಧಿ ಹೇಳುತ್ತೇನೆ. ಅವರೊಡನೆ ಯಾವ ಪರಿಚಯ ಹಚ್ಚಿಕೊಳ್ಳಬೇಡ." ಮೊಟ್ಟಮೊದಲು ನೋಡುವಾಗ ಅವಳು ಹೇಳಿದಂತೆ ಅವರ ಬಗ್ಗೆ ಕೆಟ್ಟ ವಿಚಾರಗಳು ನನಗೇನೂ ಬರಲಿಲ್ಲ. ಅಂತೇ ಕೆಲವೊಂದು ಸಂಗತಿಗಳನ್ನು ತಿಳಿಸಿದ್ದಳು. ಮತ್ತು ಕೆಲವೊಂದು ನನ್ನ ಗೋಚರಕ್ಕೆ ಬಾರದೆ ತಪ್ಪಿಸಿಕೊಂಡು ಹೋದುದನ್ನು ಆಕೆ ನಿರೀಕ್ಷಿಸಿದ್ದಳು. ಆದರೆ ಈಗ ಮಾತ್ರ ಅವಳು ಹೇಳಿದುದು ನಿಜವೆಂದು ನನ್ನ ಮನವರಿಕೆಯಾಯಿತು. ಅವಳು ಆದರಪೂರ್ವಕ ಹೇಳಿದ ಬುದ್ಧಿವಾದಕ್ಕೆ ನಾನು ಅವಳಿಗೆ ವಂದನೆ ಸಲ್ಲಿಸಿ ಅವಳ ಮಾತಿನಂತೆ ನಡೆ

ಯುವೆನೆಂದು ತಿಳಿಸಿದೆನು. ನಾವು ನ್ಯೂಯಾರ್ಕಿಗೆ ತಲಪಿದೊಡನೆ ಆ ಹೆಂಗಸರು ತಮ್ಮ ವಾಸಸ್ಥಾನವನ್ನು ನನಗೆ ಹೇಳಿದರು ಮತ್ತು ಅಲ್ಲಿಗೆ ನನ್ನನ್ನು ಆಹ್ವಾನಿಸಿದರು. ನಾನು ಅವರನ್ನು ನೋಡಬೇಕೆಂಬುದು ಅವರ ಅಭಿಮತ. ಆದರೆ ನಾನದನ್ನು ತಪ್ಪಿಸಿಕೊಂಡೆನು. ನಾನು ಹಾಗೆ ಮಾಡಿದುದು ಒಳ್ಳೆಯದೇ ಆಯಿತು. ಯಾಕಂದರೆ ಮರುದಿವಸವೆ ಕ್ಯಾಪ್ಟನನು ಒಂದು ಬೆಳ್ಳಿಯ ಚಮಚ ಮತ್ತು ಕೆಲವೊಂದು ವಸ್ತುಗಳನ್ನು ಕಳೆದುಕೊಂಡನು. ಅವುಗಳನ್ನು ಅವನ ಕೋಣೆಯಿಂದ ಒಯ್ದಿದ್ದರಂತೆ. ಅವುಗಳನ್ನು ಒಯ್ದವರು ಜೊತೆಗಾರರಾದ ಇಬ್ಬರು ಸೂಳೆಯರೆಂದು ತಿಳಿದುಕೊಂಡು ಅವರ ಮನೆಗಳನ್ನು ಜಪ್ತಿ ಮಾಡಲು ಅವನು ವಾರಂಟು ತಂದನು. ಅಂತೇ ಕಳವಾದ ಸಾಮಾನುಗಳು ದೊರೆತವು. ಕದ್ದ ಆ ಹೆಂಗಸರನ್ನೂ ಶಿಕ್ಷೆಗೆ ಗುರಿಮಾಡಿದರು. ಹೀಗೆ ನಮ್ಮ ಕಾಲನ್ನು ಕೊರೆದು ಮುಳುಗಿದ್ದ ಬಂಡೆಯನ್ನು ನಾವು ಪ್ರಯಾಣದಲ್ಲಿ ತಪ್ಪಿಸಿಕೊಂಡು ಬಂದರೂ ಕೂಡ ನನ್ನ ಮಟ್ಟಿಗೆ ಇದೊಂದು ಮಹತ್ವದ ಸಂಗತಿಯೆಂದು ನಾನು ತಿಳಿದುಕೊಂಡಿದ್ದೇನೆ.

ನನಗಿಂತ ಸ್ವಲ್ಪ ಹೊತ್ತು ಮೊದಲು ನ್ಯೂಯಾರ್ಕಿಗೆ ಬಂದು ಮುಟ್ಟಿದ ನನ್ನ ಗೆಳೆಯ ಕೊಲಿನ್ಸನನ್ನು ಕಂಡೆನು. ಚಿಕ್ಕ ಹುಡುಗರಿರುವಾಗಿನಿಂದ ನಾವಿಬ್ಬರೂ ಸಂಗಾತಿಗಳಾಗಿದ್ದೆವು. ಮತ್ತು ಇಬ್ಬರೂ ಅವೇ ಪುಸ್ತಕಗಳನ್ನು ಓದಿದ್ದೆವು. ಆದರೆ ಸಮಯದ ವಿಷಯದಲ್ಲಿ ಅವನಿಗೆ ಹೆಚ್ಚು ಅನುಕೂಲವಿದ್ದು ಓದಲಿಕ್ಕೆ ಮತ್ತು ಅಭ್ಯಾಸ ಮಾಡಲು ಹೆಚ್ಚು ವೇಳೆ ದೊರೆಯುತ್ತಿತ್ತು. ಅಂತೇ ಗಣಿತದಲ್ಲಿ ಅದ್ಭುತ ಕೌಶಲ್ಯವಿತ್ತು. ಇದರಲ್ಲಿ ಅವನು ನನ್ನನ್ನು ಬಿಟ್ಟು ದೂರ ನೆಗೆದಿದ್ದನು. ನಾನು ಬೋಸ್ಟನಿನಲ್ಲಿ ವಾಸವಾಗಿದ್ದ ಕಾಲಕ್ಕೆ ನನ್ನ ಹೆಚ್ಚಿನ ವಿರಾಮದ ಸಮಯವೆಲ್ಲ ಇವನೊಡನೆ ಸಂಭಾಷಣೆ ನಡೆಸುವುದರಲ್ಲಿ ಕಳೆದು ಹೋಗುತ್ತಿತ್ತು. ಹೀಗೆ ಅವನು ಶಾಂತಚಿತ್ತದ ಸತತ ಕರ್ಮಶೀಲ ಹುಡುಗನಾಗಿಯೇ ಇರುತ್ತಿದ್ದನು. ಅವನ ವಿದ್ವತ್ತಿಗಾಗಿ ಪಾದರಿಗಳಿಂದ ಮತ್ತು ಅನೇಕ ಗೃಹಸ್ಥರಿಂದ ತುಂಬಾ ಗೌರವವನ್ನು ಪಡೆದಿದ್ದನು ಅಲ್ಲದೆ ಜೀವನದಲ್ಲಿ ಒಬ್ಬ ಪ್ರತಿಷ್ಠಿತ ವ್ಯಕ್ತಿಯಾಗುವ ಲಕ್ಷಣವಂತನಾಗಿದ್ದನು. ಆದರೆ ನನ್ನ ಗೈರಹಾಜರಿಯ ಕಾಲದಲ್ಲಿ ಅವನು ಬ್ರಾಂಡಿ ಕುಡಿಯುವ ಚಟಕ್ಕೆ ಬಿದ್ದಿದ್ದನು. ನಾನು ಇದನ್ನು ಅವನ ಮೂಲಕವೆ ಕಂಡುಕೊಂಡೆನು. ಅವನು ನ್ಯೂಯಾರ್ಕಿಗೆ ಬಂದಂದಿನಿಂದ ಯಾವಾಗಲೂ ಕುಡಿದು ಬಹಳ ಅಯೋಗ್ಯ ರೀತಿಯಿಂದ

ವರ್ತಿಸುತ್ತಿದ್ದನೆಂದು ನಾನು ಬೇರೆಯವರಿಂದ ತಿಳಿದುಕೊಂಡೆನು. ಅವನು ಜುಗಾರಿ ಕೂಡಾ ಆಡಿದ್ದನು. ಹಣವನ್ನು ಕಳೆದುಕೊಂಡಿದ್ದನು. ಹೀಗಾಗಿ ನಾನು ಅವನ ವಸತಿಯ ಖರ್ಚನ್ನು ತೀರಿಸಬೇಕಾಯಿತು. ಅಲ್ಲದೆ ಫಿಲಡೆಲ್ಫಿಯಾದವರೆಗಿನ ಅವನ ಖರ್ಚನ್ನು ನಾನು ನೋಡಿಕೊಳ್ಳಬೇಕಾಗಿ ಬಂದಿತು. ಇದು ನನಗೆ ತೀರಾ ತ್ರಾಸದಾಯಕವಾಗಿ ಪರಿಣಮಿಸಿತು.

ಆಗ ನ್ಯೂಯಾರ್ಕಿನ ಗವರ್ನರನಾಗಿದ್ದ ಬರ್ನೆಟ್ (ಬಿಶಪ್ ಬರ್ನೆಟ್‌ನ ಮಗ)ನು ಪ್ರವಾಸಿಕರಲ್ಲಿ ಒಬ್ಬನಾದ ತರುಣ ಹುಡುಗನೊಡನೆ ಅನೇಕ ಪುಸ್ತಕಗಳಿವೆ ಎಂಬುದನ್ನು ನಾವಿಕನಿಂದ ಕೇಳಿಕೊಂಡು ಅವನನ್ನು ತನ್ನ ಅವಗಾಹನೆಗೆ ತರಬೇಕೆಂದು ಆಸೆ ವ್ಯಕ್ತಮಾಡಿದನು. ಅದೇ ಪ್ರಕಾರ ನಾನು ಅವರನ್ನು ಕಾಣಲು ಕಾದು ಕುಳಿತುಕೊಂಡೆನು. ಮತ್ತು ನನ್ನ ಸಂಗಡ ಕೊಲಿನ್ಸನನ್ನೂ ಕರೆದೊಯ್ಯಬಹುದಾಗಿತ್ತು. ಆದರೆ ಅವನು ಮಾತ್ರ ಶಾಂತಚಿತ್ತದವನಾಗಿರಲಿಲ್ಲ. ಗವರ್ನರನು ನನ್ನನ್ನು ಭಾರೀ ಆದರ ಪೂರ್ವಕವಾಗಿ ಬರಮಾಡಿಕೊಂಡನು. ತನ್ನ ಪುಸ್ತಕ ಭಂಡಾರವನ್ನು ತೋರಿಸಿದನು. ಅದು ಭಾರೀ ದೊಡ್ಡದಾಗಿತ್ತು. ಹೀಗೆ ನಾವಿಬ್ಬರೂ ಪುಸ್ತಕಗಳ ಕುರಿತು ಮತ್ತು ಅವುಗಳ ಲೇಖಕರ ಬಗ್ಗೆ ಸಾಕಷ್ಟು ಮಾತು ಕತೆ ನಡೆಸಿದೆವು. ಸರಿ, ಇವನು ನನ್ನ ಬಗ್ಗೆ ಕೃಪಾದೃಷ್ಟಿ ಬೀರುವ ಗೌರವ ತೋರಿಸಿದ ಎರಡನೆಯ ಗವರ್ನರನಾಗಿದ್ದನು. ಬಡವನಾದ ನನಗೆ ಇದು ತುಂಬಾ ಸಂತೋಷದ ಸಂಗತಿಯಾಗಿತ್ತು.

ನಾವು ಫಿಲಡೆಲ್ಫಿಯಾಕ್ಕೆ ಮರಳಿದೆವು. ದಾರಿಯಲ್ಲೇ ನನಗೆ ವರ್ನನ್‌ನ ಹಣ ದೊರಕಿತು. ಅದಿಲ್ಲದೆ ಹೋಗಿದ್ದರೆ ನಾವು ನಮ್ಮ ಪ್ರಯಾಣವನ್ನು ಮುಗಿಸುವುದು ಬಹಳ ಕಷ್ಟಸಾಧ್ಯವಾಗಿತ್ತು. ಯಾವುದೋ ಬ್ಯಾಂಕಿನಲ್ಲಿ ನೌಕರಿಗೆ ಹೋಗಲು ಕೊಲಿನ್ಸ್ ಇಚ್ಛಿಸಿದ್ದನು. ಆದರೆ ಅವರು ಇವನ ಕುಡುಕತನವನ್ನು ಬಾಯಿಯ ವಾಸನೆಯಿಂದ ಅರಿತುಕೊಂಡರೋ ಅಥವಾ ಇವನ ನಡತೆಯಿಂದ ತಿಳಿದುಕೊಂಡರೋ ಗೊತ್ತಿಲ್ಲ; ಅವನಿಗೆ ಕೆಲವೊಂದು ಶಿಫಾರಸುಗಳಿದ್ದರೂ ಅವನ ಯಾವ ಅರ್ಜಿಗೂ ಯಶಸ್ಸು ದೊರೆಯದಾಯಿತು. ಇತ್ತ ಅದೇ ಹೊಟೇಲಿನಲ್ಲಿ ನನ್ನ ಸಂಗಡ ಊಟ-ವಸತಿಯನ್ನು ಮುಂದುವರಿಸಿದನು. ಅವನ ಖರ್ಚನ್ನು ನಾನು ನೋಡಬೇಕಾಗಿತ್ತು. ವರ್ನನ್‌ನ ಹಣವು ತನ್ನಲ್ಲಿರುವುದನ್ನು ಬಲ್ಲ ಅವನು ನನ್ನಿಂದ ಸತತ ಸಾಲ ತೆಗೆದುಕೊಳ್ಳಲಿಕ್ಕೆ ಹತ್ತಿದ. ಆದರೂ ತಾನು ಕೆಲಸಕ್ಕೆ ನಿಂತೊಡನೆ ಸಂದಾಯ ಮಾಡುವ ವಚನ ಕೊಡುತ್ತ ಇದ್ದನು.

ಕಟ್ಟಕಡೆಗೆ, ವರ್ನನ್‌ನು ಅದನ್ನು ನನಗೆ ಮನಿಯಾರ್ಡರ್ ಮಾಡಲು ಹೇಳಿದರೆ ನಾನು ಏನು ಮಾಡಲಿ?—ಎಂಬುದನ್ನು ವಿಚಾರಿಸಲು ನನಗೆ ಖೇದವೆನಿಸುವಲ್ಲಿಯತನಕ ಅವನು ಆ ಹಣವನ್ನು ಬಳಸಿದ್ದನು.

ಅವನ ಕುಡುಕತನ ಹಾಗೆ ಮುಂದುವರೆಯಿತು. ಈ ಬಗ್ಗೆ ನಾವು ಕೆಲವೊಮ್ಮೆ ಜಗಳಾಡಲೆತ್ನಿಸಿದ್ದೆವು. ಯಾಕಂದರೆ ತುಸು ಅಮಲೇರಿದಾಗ ಅವನು ತೀರಾ ತಲೆತಿರುಕನಾಗುತ್ತಿದ್ದನು. ಒಮ್ಮೆ ಡೆಲವೇರಿಗೆ ಹೋಗುವ ಬೋಟಿನಲ್ಲಿ ಬೇರೆ ಕೆಲ ತರುಣರೊಡನಿದ್ದ ಇವನು ಹುಟ್ಟು ಹಾಕುವ ತನ್ನ ಸರದಿ ಬಂದಾಗ ನಿರಾಕರಿಸಿದನು. "ನನ್ನನ್ನು ಮನೆಯತ್ತ ಹುಟ್ಟು ಹಾಕಬೇಕು" ಎಂದು ಅವನು ಹೇಳಿದನು. "ನಾವು ನಿನಗೆ ಹುಟ್ಟು ಹಾಕುವುದಿಲ್ಲ" ಎಂದು ಹೇಳಿದವನು ನಾನು. "ನೀನು ಹುಟ್ಟು ಹಾಕಲೇ ಬೇಕು. ಇಲ್ಲದಿದ್ದರೆ ರಾತ್ರಿಯೆಲ್ಲ ನೀರಲ್ಲೇ ಉಳಿಯಬೇಕು. ನಿನ್ನ ಮನಸ್ಸಿಗೆ ಬಂದಹಾಗೆ ಮಾಡು." ಆಗ ಮಿಕ್ಕವರೆಂದರು "ನಡೆಯಿರಿ ಹುಟ್ಟು ಹಾಕೋಣ; ಅದಕ್ಕೇನು ಮಾಡುವುದು ?" ಆದರೆ ಅವನ ಬೇರೆ ಗುಣಗಳಿಂದ ನನ್ನ ಮನಸ್ಸು ಮುರಿದುಹೋದುದರಿಂದ ನಾನು ಸಾಧ್ಯವಿಲ್ಲೆಂದೇ ಹೇಳತೊಡಗಿದೆನು. ಹೀಗಾಗಿ ಅವನು ನನ್ನನ್ನು ಹುಟ್ಟುಹಾಕಲಿಕ್ಕೆ ತೊಡಗಿಸುವನೆಂದೇ ಭಾಷೆಯಿಟ್ಟನು. ಇಲ್ಲದೆ ಹೋದರೆ ನನ್ನನ್ನು ದೋಣಿಯಿಂದ ನೀರಿಗೆ ದೂಡುವೆನೆಂದು ಕಿಡಿಕಿಡಿಯಾಗಿ ನನ್ನತ್ತ ಅಡಿಯಿಡುತ್ತ ಮುಂದೆ ಮುಂದೆ ಬಂದನು. ಅವನು ನನ್ನ ಹತ್ತಿರ ಬಂದು ನನಗೆ ಹೊಡೆದೊಡನೆ ನಾನು ಅವನ ಕಾಲುಗಳ ಕೆಳಗೆ ನನ್ನ ಕೈಗಳನ್ನು ಹೊಡೆದು, ತಟ್ಟನೆ ಎದ್ದು ಅವನನ್ನು ಎತ್ತಿದವನೇ ಅವನ ತಲೆ ಮುಂದೆ ಹಾಕಿ ನದಿಗೆ ದೂಡಿಬಿಟ್ಟೆನು. ಅವನು ಒಳ್ಳೆಯ ಈಜುಗಾರನೆಂಬುದು ನನಗೆ ತಿಳಿದಿತ್ತು. ಅಂತೇ ಅವನ ಬಗ್ಗೆ ಹೆಚ್ಚಿನ ಕಾಳಜಿಯನ್ನೂ ವಹಿಸಲಿಲ್ಲ. ಆದರೆ ಅವನು ದೋಣಿಯನ್ನು ಹಿಡಿಯಲು ಸುತ್ತುವರಿದುಕೊಂಡು ಬರುವಷ್ಟರಲ್ಲಿ ನಾವು ಕೆಲವೇ ಸಲ ಹುಟ್ಟು ಹಾಕಿ ಅವನಿಗೆ ಅದು ಸಿಗಲಾರದಷ್ಟು ದೂರಕ್ಕೆ ಅದನ್ನು ಒಯ್ದಾಗಿತ್ತು. ಅಲ್ಲದೆ ಅವನು ಯಾವಾಗ ದೋಣಿಯ ಹತ್ತಿರ ಬರುತ್ತಾನೋ ಆಗ ನಾವು ಅವನಿಗೆ 'ಹುಟ್ಟು ಹಾಕುವೆಯಾ'—ಎಂದು ಕೇಳುತ್ತ ಹುಟ್ಟು ಹಾಕಿ, ಅದನ್ನು ಅವನಿಗಿಂತ ದೂರ ಓಡಿಸಿಕೊಂಡು ಒಯ್ಯುತ್ತಿದ್ದೆವು. ಈ ಪೀಡೆಯಿಂದ ಅವನು ಸಾಯಲಿಕ್ಕೆ ಸಿದ್ಧವಾಗಿದ್ದನು. ಆದರೆ ಮೊಂಡುತನದಿಂದ ಹುಟ್ಟು ಹಾಕಲು ಮಾತ್ರ ಒಪ್ಪಿಗೆ ಕೊಡುತ್ತಿದ್ದಿಲ್ಲ. ಆದರೂ ಕೂಡ ಅವನು ಆಯಾಸದಿಂದ ನಿತ್ರಾಣಗೊಳ್ಳಲಿಕ್ಕೆ

ತೊಡಗಿದುದನ್ನು ನೋಡಿ ನಾವು ಅವನನ್ನು ಮೇಲಕ್ಕೆ ಎತ್ತಿದೆವು. ಸಂಜೆಯ ಹೊತ್ತಿಗೆ ಒದ್ದೆಮುದ್ದೆಯಾದ ಅವನನ್ನು ಮನೆಗೆ ಕರೆದುಕೊಂಡು ಬಂದೆವು. ಆ ನಂತರ ನಾವಿಬ್ಬರೂ ಕ್ಷೇಮಸಮಾಚಾರದ ಒಂದು ಶಬ್ದವನ್ನು ಕೂಡ ಎತ್ತಲಿಲ್ಲ. ಮತ್ತು ವೆಸ್ಟ್ ಇಂಡಿಯಾದ ಒಬ್ಬ ಕ್ಯಾಪ್ಟನನನ್ನು ಭೇಟಿಯಾಗುವ ಸಂದರ್ಭ ಅವನಿಗೆ ಒದಗಿತು. ಬಾರ್ಬಡೋಸಿನ ಗೃಹಸ್ಥನ ಮಗಂದಿರಿಗೆ ಒಬ್ಬ ಟ್ಯೂಟರನನ್ನು ದೊರಕಿಸಿ ಕೊಡುವ ದಲಾಲಿಯನ್ನು ಇವನು ವಹಿಸಿದ್ದನಂತೆ. ಇವನು ಅವನನ್ನು ಅಲ್ಲಿಗೆ ಒಯ್ಯಲು ಒಪ್ಪಿದನು. ಆ ಮೇಲೆ ಅವನು ತನಗೆ ಮೊದಲು ದೊರೆತ ಹಣವನ್ನು ಸಾಲವನ್ನು ಜಾಡ ಮಾಡುವುದಕ್ಕೆ ನನಗೆ ಮನಿಯಾರ್ಡರ್ ಮಾಡುವುದಾಗಿ ವಚನ ಕೊಟ್ಟು ಅಲ್ಲಿಂದ ನನ್ನನ್ನು ಬಿಟ್ಟು ಹೋದನು. ಆ ನಂತರ ನಾನು ಅವನ ಬಗ್ಗೆ ಯಾವ ಸುದ್ದಿಯನ್ನೂ ಕೇಳಲಿಲ್ಲ.

ವರ್ನನ್‌ನ ಹಣವನ್ನು ಖರ್ಚು ಮಾಡಿಕೊಂಡದ್ದು ನನ್ನ ಜೀವನದಲ್ಲಿಯ ಬಹು ದೊಡ್ಡ ತಪ್ಪುಗಳಲ್ಲಿ ಒಂದು ಎಂದು ಹೇಳಬಹುದು. ಜವಾಬ್ದಾರಿಯ ವ್ಯವಹಾರವನ್ನು ನಡೆಸಿಕೊಂಡು ಹೋಗಲು ನಾನಿನ್ನೂ ತೀರ ಚಿಕ್ಕವನಾಗಿದ್ದೇನೆಂಬ ನನ್ನ ತಂದೆಯವರ ಊಹೆಯು ಹೆಚ್ಚು ತರ್ಕ ರಹಿತವಾಗಿರಲಿಲ್ಲವೆಂಬುದನ್ನು ಈ ಘಟನೆ ತೋರಿಸಿಕೊಟ್ಟಿತು. ಆದರೆ ಅವರ ಪತ್ರವನ್ನು ಸರ್ ವಿಲಿಯಮ್ ಓದಿ ಅವರು ಮಿತಿಮೀರಿದ ದೂರ ದರ್ಶಿಗಳೆಂದು ಹೇಳಿದನು. ಜನರಲ್ಲಿ ತುಂಬಾ ವ್ಯತ್ಯಾಸವುಂಟು. ವಿವೇಕವು ಯಾವಾಗಲೂ ವಯಸ್ಸನ್ನು ಅವಲಂಬಿಸಿರುವುದಿಲ್ಲ. ಅಂತೇ ತರುಣನು ವಿವೇಕಶೂನ್ಯವಾಗಿಯೂ ಇರುವುದಿಲ್ಲ. "ಅಲ್ಲದೆ ಅವರು ನಿನ್ನನ್ನು ವ್ಯವಹಾರಕ್ಕೆ ಸ್ಥಿರಗೊಳಿಸದುದರಿಂದ ನಾನೇ ಆ ಕೆಲಸವನ್ನು ಮಾಡುವೆನು. ಇಂಗ್ಲೆಂಡಿನಿಂದ ತರಬೇಕಾದ ಅವಶ್ಯವುಳ್ಳ ಸಾಮಗ್ರಿಗಳ ಒಂದು ಯಾದಿಯನ್ನು ನನಗೆ ಕೊಡು. ಅವುಗಳನ್ನು ನಾನು ಇಂಗ್ಲೆಂಡಿನಿಂದ ತರಲು ಕಳುಹಿಸುವೆನು. ನಿನಗೆ ಸಾಧ್ಯವಾದಾಗ ನೀನು ಹಣ ಹಿಂದಕ್ಕೆ ಕೊಡುವೆಯಂತೆ. ಇಲ್ಲ ಒಬ್ಬ ಒಳ್ಳೆಯ ಮುದ್ರಕನನ್ನು ನೆಲೆಗೊಳಿಸಲು ನಾನು ನಿರ್ಣಯಿಸಿರುತ್ತೇನೆ. ಅಂತೇ ನೀನು ಇದರಲ್ಲಿ ಯಶಸ್ವಿಯಾಗುತ್ತೀಯೆಂದು ನನಗೆ ಖಾತ್ರಿಯಾಗಿದೆ." ಎಂದು ಅವನು ಹೇಳಿದನು. ಇದೆಲ್ಲವನ್ನು ಅಷ್ಟೊಂದು ನಮ್ರಭಾವನೆಯಿಂದ ಹೇಳಿದ್ದನಲ್ಲಾ–ಅವನು ಹೇಳಿದುದರ ಬಗ್ಗೆ ನನಗೆ ಯಾವ ಸಂಶಯವೂ ಇರಲಿಲ್ಲ. ನಾನು ಹೀಗೆ ವ್ಯವಹಾರ ಮಾಡುವ ಮಾತನ್ನು ಇಲ್ಲಿಯವರೆಗೆ ಫಿಲಡೆಲ್ಫಿ

ಯಾದಲ್ಲಿ ಗುಟ್ಟಾಗಿಟ್ಟಿದ್ದೆನು. ಹಾಗೇ ಅದನ್ನು ಇನ್ನೂ ಇಟ್ಟಿದ್ದಾಯಿತು. ಈ ವಿಷಯವು ಗವರ್ನರನನ್ನು ಚೆನ್ನಾಗಿ ಬಲ್ಲ ಅವರ ಮಿತ್ರರಲ್ಲಿ ಯಾರಿಗಾದರೂ ನಾನು ಅವನನ್ನು ಅವಲಂಬಿಸಿದ್ದೇನೆಂದು ಗೊತ್ತಾಗಿದ್ದರೆ ಹಾಗೆ ಅವನನ್ನು ನಂಬಬೇಡವೆಂದು ಅವರು ನನಗೆ ಬುದ್ಧಿವಾದ ಹೇಳುತ್ತಿದ್ದರು. ಯಾಕಂದರೆ–ಅವನು ಮಾತು ಕೊಡುವುದರಲ್ಲಿ ತುಂಬಾ ಧಾರಾಳಿಯಾಗಿದ್ದಂತೆ. ಅದನ್ನು ನಡೆಸಿಕೊಡುವುದು ಅವನ ಚಾಳಿಯಾಗಿರಲಿಲ್ಲವೆಂಬುದು ನನಗೆ ಆ ನಂತರ ತಿಳಿದುಬಂತು. ಆದರೂ, ನಾನೇ ಅವನಿಗೆ ವಿನಂತಿ ಮಾಡಿಕೊಳ್ಳದಿದ್ದಾಗ್ಯೂ ಕೂಡಾ ಅವನು ನನಗೆ ವಚನಕೊಟ್ಟ ಉದಾರ ಕೊಡುಗೆಗಳು ಅಪ್ರಾಮಾಣಿಕತನದವುಗಳೆಂದು ಹೇಗೆ ನಾನು ನಂಬಲಿ? ಜಗತ್ತಿನಲ್ಲಿಯ ಅತ್ಯುತ್ತಮ ಜನರಲ್ಲಿ ಒಬ್ಬನೆಂದು ನಾನು ಅವನನ್ನು ವಿಶ್ವಾಸದಿಂದ ನಂಬಿದೆನು.

ಚಿಕ್ಕ ಮುದ್ರಣಾಲಯವೊಂದರ ಯಾದಿಯನ್ನು ನಾನು ಅವನಿಗೆ ಸಾದರ ಪಡಿಸಿದೆನು. ನನ್ನ ಲೆಕ್ಕದ ಪ್ರಕಾರ ಸುಮಾರು ನೂರು ಪೌಂಡು ಸ್ಟರ್ಲಿಂಗ್ ಅದರ ಬೆಲೆಯಾಗುತ್ತಿತ್ತು. ಅವನಿಗೆ ಅದು ಮೆಚ್ಚುಗೆಯಾಯಿತು. ಆದರೆ ಟೈಪುಗಳನ್ನು ಆರಿಸುವುದಕ್ಕೆ ಮತ್ತು ಮಿಕ್ಕೆಲ್ಲ ಸಾಮಾನು ಅತ್ಯುತ್ತಮವಾದುವುಗಳೇ ಎಂಬದನ್ನು ನೋಡುವುದಕ್ಕೆ ನಾನು ವ್ಯಕ್ತಿಶಃ ಇಂಗ್ಲೆಂಡಿಗೆ ಹೋದರೆ ಸಾಕಷ್ಟು ಉತ್ತಮವೆಂದು ಅಭಿಪ್ರಾಯಪಟ್ಟುದೂ ಆಯಿತು. “ಆ ಮೇಲೆ ನೀನು ಅಲ್ಲಿ ಇದ್ದಾಗ ಗುರುತು-ಪರಿಚಯ ಮಾಡಿಕೊಂಡು ಪುಸ್ತಕ ವ್ಯಾಪಾರದ ಮತ್ತು ಸ್ಟೇಷನರಿ ವ್ಯವಹಾರದ ಮಾದರಿಯಲ್ಲಿ ಪತ್ರ ವ್ಯವಹಾರವನ್ನು ಕುದುರಿಸಿಕೊಳ್ಳಬಹುದು.” ಎಂದೂ ಅವನು ಹೇಳಿದನು. ಇದು ಪ್ರಯೋಜನಕಾರಿಯಾದೀತೆಂದು ನಾನು ಒಪ್ಪಿಕೊಂಡೆನು. “ಹಾಗಾದರೆ ಎನ್ನಿಸ್’ (Annis) ನಲ್ಲಿ ಹೋಗಲು ನೀನು ಸಿದ್ಧವಾಗಿರು.” ಎಂದನು. ‘ಎನ್ನಿಸ್’ ವಾರ್ಷಿಕ ಹಡಗು. ಅಂತೇ ಆ ಕಾಲದಲ್ಲಿ ಲಂಡನಿನಿಂದ ಫಿಲಡೆಲ್ಫಿಯಾಕ್ಕೆ ಹೋಗುವ ಕೇವಲ ಒಂದೇ ಹಡಗವಾಗಿತ್ತು. ಆದರೆ ಎನ್ನಿಸ್ ನಿರ್ಗಮನಕ್ಕೆ ಇನ್ನು ಕೆಲವು ತಿಂಗಳುಗಳಿದ್ದವು. ಆದುದರಿಂದ ಕೊಲಿನ್ಸನು ನನ್ನ ಕಡೆಯಿಂದ ಪಡಕೊಂಡ ಹಣವನ್ನು ಕೂಡಿಸುತ್ತ, ನಾನು ಕೈಮರನ ಕೂಡ ಕೆಲಸ ಮಾಡುತ್ತಾ ಇದ್ದೆನು. ಅಂತೇ ದಿನದಿನವೂ ವರ್ನನನು ನನ್ನಿಂದ ಹಣ ಕೇಳುತ್ತಾನೆಂಬ ನಿರೀಕ್ಷೆಯಲ್ಲೂ ಇದ್ದೆನು. ಸುದೈವದಿಂದ ಅದು ಮಾತ್ರ ಕೆಲವು ವರುಷಗಳ ತನಕ ಸಂಭವಿಸಲಿಲ್ಲ.

ನನ್ನ ಪ್ರಥಮ ಜಲಯಾತ್ರೆಯಲ್ಲಿ ನಾನು ಬೋಸ್ಟನಿನಿಂದ ಹೊರಟ ವನು ಬ್ಲೋಕ್ ದ್ವೀಪದಲ್ಲಿ ತಂಗಿದ ವಿಷಯ ಹೇಳುವುದನ್ನು ಬಿಟ್ಟಿದ್ದೇನೆಂದು ನನಗೆನಿಸುತ್ತದೆ. ನಮ್ಮ ಮಂದಿ ಕೋಡ್ ಮೀನುಗಳನ್ನು ಹಿಡಿಯುವುದರಲ್ಲಿ ತೊಡಗಿದರು. ಅಂತೇ ಸಾಕಷ್ಟು ಮೀನುಗಳನ್ನು ಎಳೆದು ಹಾಕಿದ್ದಾಯಿತು. ಇಲ್ಲಿಯವರೆಗೆ ನಾನು ಮಾಂಸಾಹಾರವನ್ನು ತಿನ್ನಬಾರದೆಂಬ ನನ್ನ ನಿರ್ಧಾರಕ್ಕೆ ಅಂಟಿಕೊಂಡಿದ್ದೆನು. ಈ ಪ್ರಸಂಗದಲ್ಲಿ ಮಾತ್ರ ನಾನು ನನ್ನ ಗುರು ಟ್ರೆಯಾನನ ಸಂಗಡ ಯಾವ ಮೀನನ್ನು ತಿನ್ನುವುದು ನಿರ್ದುಷ್ಟ ಖೂನಿಯೆಂದು ಪರಿಗಣಿಸಿದೆನು. ಯಾಕಂದರೆ ಅವುಗಳಲ್ಲಿ ಯಾವುದೂ ಕೊಲೆಗರ್ಹವೆಂದು ಸಾದರಪಡಿಸಲಿಕ್ಕೆ ಅಂಥ ಅಪಾಯವನ್ನು ಈವರೆಗೆ ಮಾಡಿಲ್ಲ ಅಥವಾ ಮಾಡುವ ಹಾಗೂ ಇಲ್ಲ. ಇದೆಲ್ಲ ಸಾಕಷ್ಟು ತರ್ಕಬದ್ಧವಾಗಿ ಕಂಡಿತು. ಆದರೆ ಹಿಂದಕ್ಕೆ ನಾನು ಮೀನನ್ನು ಬಹಳ ಮೆಚ್ಚುತ್ತಿದ್ದೆ. ಇತ್ತ ಇದು ಒಲೆಯ ಕಾವಲಿಯಿಂದ ಬಿಸಿಯಾಗಿ ಬಂದೊಡನೆ ತುಂಬ ರುಚಿಕಟ್ಟಾಗಿ ಗಮಗಮಿಸಿತು. ಕೆಲ ಹೊತ್ತಿನ ತನಕ ನಾನು ನನ್ನ ತತ್ವ ಮತ್ತು ಒಲವನ್ನು ಸಮತೂಕದಲ್ಲಿಟ್ಟೆನು. ಆದರೆ ಮೀನುಗಳನ್ನು ಬಿಡಿಸಿದೊಡನೆ ಅವುಗಳ ಹೊಟ್ಟೆಯಿಂದ ಚಿಕ್ಕ-ಪುಟ್ಟ ಮೀನುಗಳು ಹೊರಬಿದ್ದೊಡನೆ ನನ್ನ ವಿಚಾರ ಬದಲಾಯಿತು. ಆಗ ನಾನು, "ನೀವು ಒಬ್ಬರನ್ನು ಒಬ್ಬರು ತಿಂದರೆ, ನಾವು ನಿಮ್ಮನ್ನೇಕೆ ತಿನ್ನಬಾರದೆಂಬುದು ನನಗೆ ತಿಳಿಯುವುದಿಲ್ಲ" ಎಂದು ವಿಚಾರಿಸಿದೆನು. ಆದ್ದರಿಂದ ನಾನು ಉಲ್ಲಾಸದಿಂದ ಕೋಡಿನ ಮೇಜವಾನಿಯನ್ನು ಸವಿದೆನು. ಮಿಕ್ಕ ಜನರೊಡನೆಯೂ ಅದರ ಸವಿನೋಡತೊಡಗಿದೆ. ಎಂದಾದರೊಮ್ಮೆ ಸಸ್ಯಾಹಾರವನ್ನು ತೆಗೆದುಕೊಳ್ಳುವುದೂ ಇತ್ತು. ಹೀಗೆ ತರ್ಕಬದ್ಧವಾದ ಪ್ರಾಣಿಯೆನ್ನಿಸಿಕೊಳ್ಳಲು ಬಹಳ ಅನುಕೂಲವಾಗಿತ್ತು. ಯಾಕಂದರೆ ತನಗೆ ಪ್ರೀತಿಯುಳ್ಳ ವಸ್ತುವನ್ನು ದೊರಕಿಸಿಕೊಳ್ಳಲು ಯಾವನಿಗೂ ಅದು ತರ್ಕವನ್ನು ಸಿದ್ಧಪಡಿಸಲಿಕ್ಕೆ ಅಥವಾ ತರ್ಕಮಾಡಲಿಕ್ಕೆ ಸಹಾಯಕಾರಿಯಾಗುತ್ತದೆ.

ಕೈಮರ್ ಮತ್ತು ನಾನು ಅನ್ಯೋನ್ಯವಾಗಿ ಮಿತ್ರತ್ವದಿಂದ ಇದ್ದೆವು ಮತ್ತು ಒಬ್ಬರಿಗೊಬ್ಬರು ಹೊಂದಿಕೊಳ್ಳುವುದೂ ಸಾಕಷ್ಟು ಹೆಚ್ಚಾಗಿತ್ತು. ಯಾಕಂದರೆ ನಾನು ವ್ಯವಹಾರದಲ್ಲಿ ನೆಲೆಗೊಳ್ಳುವುದರ ಬಗ್ಗೆ ಅವನು ಯಾವ ಸಂಶಯವನ್ನೂ ತಾಳಿರಲಿಲ್ಲ, ಅವನಲ್ಲಿ ಹಳೆಯ ಹುರುಪು ತುಂಬಾ ಉಳಿದುಕೊಂಡಿತ್ತು ಮತ್ತು ವಾದವನ್ನು ಮೆಚ್ಚುತ್ತಲೂ ಇದ್ದನು. ಆದುದರಿಂದ ನಾವಿಬ್ಬರೂ ಸಾಕಷ್ಟು ವಾದ-ವಿವಾದವನ್ನು ಹೂಡುತ್ತಿದ್ದೆವು.

ನನ್ನ ಸೊಕ್ರೆಟಿಕ್ ಪದ್ಧತಿಯಂತೆ ನಾನು ಅವನೊಡನೆ ವಾದಕ್ಕೆ ತೊಡಗುತ್ತಿದ್ದೆನು. ಆಗಾಗ ವಾದಕ್ಕೆ ತೊಡಗಿದ ಯಾವ ವಿಷಯದಿಂದಲಾದರೂ ಕೂಡ ಸ್ವಾಭಾವಿಕವಾಗಿಯೆ ದೂರವಿರುವ ಪ್ರಶ್ನೆಗಳಿಂದ ಅವನನ್ನು ಖಂಡಿಸುತ್ತಿದ್ದೆ ಮತ್ತು ಕ್ರಮವಾಗಿ ವಿಷಯದತ್ತ ತೆರಳುತ್ತಲೂ ಇದ್ದೆ. ಹೀಗೆ ಅವನನ್ನು ತೊಡಕಿನಲ್ಲಿ ಮತ್ತು ವಿರೋಧಾಭಾಸಗಳಲ್ಲಿ ಸಿಲುಕಿಸಿ, ಕಟ್ಟಕಡೆಗೆ ಅವನು ಹಾಸ್ಯಾಸ್ಪದವಾದ ಎಚ್ಚರಿಕೆ ವಹಿಸುತ್ತಿದ್ದನು. ಅಂತೇ ತೀರ ಸಾಮಾನ್ಯವಾದ ಪ್ರಶ್ನೆಗಳನ್ನು ಕೂಡಾ "ಅದರಿಂದ ನೀನು ಯಾವುದನ್ನು ತರ್ಕಿಸಬೇಕೆಂದು ಮಾಡಿರುವಿ?" ಎಂದು ಕೇಳದ ಹೊರತು ಉತ್ತರಿಸುತ್ತಿರಲಿಲ್ಲ. ಏನಿದ್ದರೂ ಖಂಡನೆಯ ರೀತಿಯಲ್ಲಿರುವ ನನ್ನ ಸಾಮರ್ಥ್ಯದ ಬಗ್ಗೆ ಅಷ್ಟೊಂದು ಘನವಾದ ಅಭಿಪ್ರಾಯವಿತ್ತಲ್ಲಾ ಆದರಿಂದಾಗಿ ಅವನು ನನ್ನನ್ನು ಸ್ಥಾಪಿಸಲಿರುವ ಹೊಸ ಮತದ ಯೋಜನೆಯಲ್ಲಿ ನಾನು ಅವನ ಸಹೋದ್ಯೋಗಿಯಾಗಬೇಕೆಂದು ದೃಢವಾಗಿ ಶಿಫಾರಸು ಮಾಡಿದನು. ಅವನು ತತ್ವೋಪದೇಶಗಳನ್ನು ಬೋಧಿಸಲಿಕ್ಕೆ ಮತ್ತು ನಾನು ವಿರೋಧಿಗಳನ್ನು ಖಂಡಿಸುವುದೆಂದು ಅವನ ಅಭಿಮತ. ಅವನು ನನ್ನೊಡನೆ ತತ್ವಗಳನ್ನು ವಿವರಿಸುವಾಗ ನನಗೆ ಅದರಲ್ಲಿ ಅನೇಕ ಗೂಢ ಸಮಸ್ಯೆಗಳು ಕಂಡುಬಂದವು. ಅವುಗಳಿಗೆ ನಾನು ಆಕ್ಷೇಪವೆತ್ತಿದೆನು. ಅಲ್ಲದೆ ನಾನು ನನ್ನ ರೀತಿಯನ್ನು ಸ್ವಲ್ಪವಾದರೂ ಒಳಪಡಿಸಿಕೊಳ್ಳದೆ ಮತ್ತು ನನ್ನವೇ ಆದ ಕೆಲವನ್ನು ಸೇರಿಸದೆ ಅದು ಸಾಧ್ಯವಿರಲಿಲ್ಲ.

ಕೈಮರನು ತನ್ನ ಗಡ್ಡ ತುಂಬಾ ಬೆಳೆಸಿದ್ದ. ಯಾಕಂದರೆ ಮೊನಾಯಿಕ್ ತತ್ವದಲ್ಲಿ ಎಲ್ಲಿಯೋ ಒಂದು ಕಡೆ "ನೀನು ನಿನ್ನ ಗಡ್ಡದ ತುದಿಗಳನ್ನು ಅಂದಗೆಡಿಸಬಾರದು" ಎಂದು ಹೇಳಲಾಗಿತ್ತು. ಆದರಂತೆ ಅವನು ಏಳನೆಯ ದಿವಸ (ವಿಶ್ರಾಂತಿ ದಿವಸ)—ಸಬ್ಬತನ್ನು ಆಚರಿಸುತ್ತಿದ್ದನು. ಹೀಗೆ ಈ ಎರಡು ವಿಷಯಗಳು ಅವನಲ್ಲಿ ಅಗ್ರಸ್ಥಾನ ವಹಿಸಿದ್ದವು. ನಾನು ಇವೆರಡನ್ನು ತಿರಸ್ಕರಿಸುತ್ತಿದ್ದೆ. ಆದರೆ ಅವನು ಮಾಂಸಾಹಾರವನ್ನು ನಿಲ್ಲಿಸುವುದಾದರೆ ನಾನು ಅವನ ಎರಡೂ ತತ್ವಗಳನ್ನು ಸ್ವೀಕರಿಸಲು ಸಾಧ್ಯವೆಂಬ ಕರಾರು ಮಾಡಿದೆನು. "ನನ್ನ ಪ್ರಕೃತಿಗೆ ಅದು ಹೊಂದಲಿಕ್ಕೆ ಇಲ್ಲವೆಂದು ನನಗೆ ಸಂಶಯ." ಎಂದು ಅವನು ಹೇಳಿದನು. ಆದು ಅವನಿಗೆ ಹೊಂದಿಕೊಳ್ಳುತ್ತದೆಂದು ನಾನು ದೃಢಪಡಿಸಿದೆ ಮತ್ತು ಅದರಿಂದ ಅವನು ಅತ್ಯುತ್ತಮನಾಗುವೆನೆಂದೂ ಹೇಳಿದೆನು. ಸಾಮಾನ್ಯವಾಗಿ ಅವನು ದೊಡ್ಡ ಬಕಾಸುರ; ಅಂತೇ ಅವನನ್ನು ಅರ್ಧ ಉಪವಾಸ ಹಾಕುವ ವಚನ

ವನ್ನು ಇಟ್ಟುಕೊಳ್ಳುವುದರಲ್ಲಿ ನಾನು ತುಸು ವಿನೋದಪಡೆದನು. ಅವನೂ ಈ ರೂಢಿಯನ್ನು ಸಾಧಿಸಲು ನಾನು ಅವನ ಜೊತೆಗಾರನಾದರೆ ಮಾತ್ರ ಪ್ರಯತ್ನಿಸುವುದಾಗಿ ಒಪ್ಪಿದನು. ನಾನು ಅದರಂತೆ ವರ್ತಿಸಿದೆನು. ನಾವು ಹೀಗೆ ಮೂರು ತಿಂಗಳು ಈ ವ್ರತವನ್ನು ಆಚರಿಸಿದೆವು. ನೆರೆಮನೆಯ ಒಬ್ಬಳು ಹೆಂಗಸು ನಮ್ಮ ಆಹಾರವನ್ನು ಸಿದ್ಧಪಡಿಸಿ ದಿನ ನಿತ್ಯವೂ ನಮಗೆ ತಂದುಕೊಡುತ್ತಿದ್ದಳು. ಬೇರೆ ಬೇರೆ ಸಂದರ್ಭಗಳಲ್ಲಿ ನಮಗೆ ಮಾಡಿ ಕೊಡತಕ್ಕ ನಾಲ್ವತ್ತು ವಿಧದ ಖಾದ್ಯವಸ್ತುಗಳ ಪಟ್ಟಿಯನ್ನು ನಾನು ಅವಳಿಗೆ ಕೊಟ್ಟಿದ್ದಾಗಿತ್ತು. ಇವುಗಳಲ್ಲಿ ಒಂದರಲ್ಲೂ ಮೀನಾಗಲಿ, ಮಾಂಸ ವಾಗಲಿ, ಅಥವಾ ಕೋಳಿಯಾಗಲಿ ಉಪಯೋಗಿಸಲಿಕ್ಕಿರಲಿಲ್ಲ. ಈ ಚಟವು ಬಹಳ ಅಗ್ಗವಾದುದರಿಂದ ನನಗೆ ತುಂಬಾ ಹೊಂದಿಕೊಂಡಿತು. ಪ್ರತಿ ಯೊಬ್ಬನಿಗೆ ಒಂದು ವಾರಕ್ಕೆ ಎಂಟು ಪೆನ್ಸ್ ಸ್ಟರ್ಲಿಂಗಿಗಿಂತ ಹೆಚ್ಚು ಖರ್ಚು ಆಗುತ್ತಿರಲಿಲ್ಲ. ಆನಂತರ ಕೂಡ ಅನೇಕ ಉಪವಾಸ್ರವತಗಳನ್ನು (lents) ನಿಷ್ಠುರವಾಗಿ ಸಾಧಿಸಿದ್ದೇನೆ. ಅದಕ್ಕಾಗಿ ಸಾಮಾನ್ಯವಾದ ಆಹಾರವನ್ನು ತೊರೆದುದುಂಟು ಮತ್ತು ಅಂಥ ಸಾಮಾನ್ಯ ಆಹಾರವನ್ನು ಕೂಡ ಹಠಾತ್ತಾಗಿ ಯಾವ ತೊಂದರೆಯಿಲ್ಲದೆ ಬಿಟ್ಟದ್ದಾಗಿದೆ. ಹೀಗಾಗಿ ಅಂಥ ಬದಲಾವಣೆ ಗಳನ್ನು ಅನುಕ್ರಮವಾಗಿ ಮಾಡಬೇಕೆಂಬ ಉಪದೇಶದಲ್ಲಿ ಹುರುಳಿಲ್ಲವೆಂದೂ ನನಗನಿಸಿರುತ್ತದೆ. ನಾನು ಉಲ್ಲಾಸದಿಂದಲೇ ದಿನಗಳೆಯುತ್ತಿದ್ದೆನು. ಆದರೆ ಬಡ ಕೈಮರನು ದುಃಖದಾಯಕ ರೀತಿಯಲ್ಲಿ ತೊಂದರೆಗೀಡಾದನು. ಯೋಜನೆಯ ಬಗ್ಗೆ ಅವನು ಬೇಸತ್ತು ಬಳಲಿಹೋದನು. ಅಂತೇ ಈಜಿಪ್ಟಿನ ಮಾಂಸದ ಪ್ಲೇಟುಗಳಿಗೆ ಅವನು ಆಶಿಸಹತ್ತಿದನು. ಒಂದು ಹುರಿದ ಹಂದಿಗೆ ಕ್ರಯಕೊಟ್ಟು ಇಟ್ಟನು. ಅವನೊಡನೆ ಈ ಊಟಕ್ಕೆ ನನ್ನನ್ನು ಮತ್ತು ಇಬ್ಬರು ಹೆಂಗಸರನ್ನು ಆಹ್ವಾನಿಸಿದ್ದನು. ಆದರೆ ಅದನ್ನು ಊಟದ ಮೇಜಿನ ಮೇಲೆ ಬಹಳ ಬೇಗನೆ ತಂದಿಡಲಾದ ಮೂಲಕ ಅವನಿಂದ ತನ್ನ ಆಸೆ–ಅವಲೋಭನೆಯನ್ನು ತಡೆದುಕೊಳ್ಳುವುದಕ್ಕೆ ಆಗಲಿಲ್ಲ. ಕೊನೆಗೆ, ನಾವೆಲ್ಲ ಬರುವುದಕ್ಕಿಂತ ಮೊದಲೇ ಆ ಹಂದಿಯನ್ನಿಡೀ ಒಬ್ಬನೇ ಬಕ್ಕರಿಸಿ ಬಿಟ್ಟನು.

ಈ ಕಾಲದಲ್ಲಿ ಮಿಸ್ ರೀಡಳೊಡನೆ ನಾನೊಂದಿಷ್ಟು ಪ್ರಣಯ ಬೆಳೆ ಸಿದ್ದನು. ಅವಳ ಮೇಲೆ ಹೆಚ್ಚಿನ ಗೌರವ ಮತ್ತು ಪ್ರೀತಿ ನನಗಿತ್ತು. ಅಂತೇ ಅವಳೂ ಅದೇ ರೀತಿಯಲ್ಲಿ ನನ್ನನ್ನು ಕಾಣುತ್ತಿದ್ದಾಳೆಂದು ನಂಬು ವುದಕ್ಕೆ ಕೆಲಪೊಂದು ಕಾರಣಗಳಿದ್ದವು. ಆದರೆ ನಾನು ಈಗ ದೀರ್ಘ

ಜಲಯಾತ್ರೆಯನ್ನು ಕೈಗೊಳ್ಳಲಿರುವುದರಿಂದ ಹಾಗೂ ನಾವಿಬ್ಬರು ಇನ್ನೂ ತಾರುಣ್ಯದಲ್ಲಿ ಅಂದರೆ–ಹದಿನೆಂಟಕ್ಕಿಂತ ಸ್ವಲ್ಪ ಹೆಚ್ಚು ವಯಸ್ಸಿನವರಾದುದರಿಂದ–ಈಗ ನಾವಿಬ್ಬರೂ ಬಹಳ ದೂರ ಹೋಗುವುದನ್ನು ತಪ್ಪಿಸುವುದು ವಿವೇಕವೆಂದು ಆವಳ ತಾಯಿ ತರ್ಕಿಸಿದಳು. ಇತ್ತ ಮದುವೆಯಾಗುವುದಿದ್ದರೆ ಅದು ನಾನು ಮರಳಿ ಬಂದ ಮೇಲೆ ಜರಗುವುದು ಶ್ರೇಯಸ್ಕರ— ಅಂದರೆ ನಾನು ನನ್ನ ವ್ಯವಹಾರದಲ್ಲಿ ನೆಲೆನಿಂತ ತರುವಾಯ ಅದು ನಡೆಯಬೇಕಾಗಿತ್ತೆಂಬುದು ಅವಳ ಅಭಿಪ್ರಾಯ. ಬಹುಶಃ ನನ್ನ ಊಹೆಗಳು ಸಾಕಷ್ಟು ಬಲವಾದವುಗಳೆಂದು ನಾನು ತಿಳಿದಂತೆ ಅವಳು ತಿಳಿದಿರಲಿಕ್ಕಿಲ್ಲವೆಂದೂ ಹೇಳಬಹುದು.

ನನ್ನ ಈ ಕಾಲದಲ್ಲಿನ ಪ್ರಮುಖ ಪರಿಚಯಸ್ಥರೆಂದರೆ ಚಾರ್ಲ್ಸ್, ಒಸ್ಬರ್ನ್, ಜೋಸೆಫ್ ವಾಟ್ಸನ್ ಮತ್ತು ಜೇಮ್ಸ್ ರಾಲ್ಫ್; ಎಲ್ಲರೂ ಪುಸ್ತಕ ಪ್ರೇಮಿಗಳು. ಪೇಟೆಯಲ್ಲಿ ಮುಖ್ಯನಾದ ಚಾರ್ಲ್ಸ್ ಬ್ರೊಗ್ಡೆನ್ ಎಂಬ ದಸ್ತಾವೇಜು ಮೊದಲಾದ ಕಾಗದ ಪತ್ರಗಳನ್ನು ಬರೆಯುವವನಲ್ಲಿ (ದೇಶಪಾಂಡೆಯಲ್ಲಿ) ಅಥವಾ ವಿಕ್ರಯ-ಪತ್ರದಾರನಲ್ಲಿ ಮೊದಲಿನ ಇಬ್ಬರು ಕಾರಕೂನರಾಗಿದ್ದರು. ಉಳಿದವನು ಒಬ್ಬ ವ್ಯಾಪಾರಸ್ಥನಿಗೆ ಕಾರಕೂನನಾಗಿದ್ದ, ವಾಟ್ಸನನು ಅದ್ಭುತ ಸಾಂಕಲ್ಯದ ಧಾರ್ಮಿಕ, ವಿವೇಕಶಾಲಿಯಾದ, ತರುಣ ವ್ಯಕ್ತಿಯಾಗಿದ್ದ. ಉಳಿದವರು ತಮ್ಮ ಧಾರ್ಮಿಕ ತತ್ವಗಳಲ್ಲಿ ಶೈಥಿಲ್ಯವುಳ್ಳವರಾಗಿದ್ದರು. ಇವರಲ್ಲಿ ಪ್ರಮುಖರಾದವರೆಂದರೆ ರಾಲ್ಫ್ ಮತ್ತು ಕೊಲಿನ್ಸ್. ಈ ಇಬ್ಬರು ನೆಲೆಯಿಲ್ಲದ ಮೂಲಕ ನನ್ನನ್ನು ಸಾಕಷ್ಟು ಪೇಚಾಟಕ್ಕೆ ಹಾಕುತ್ತಿದ್ದರು. ಒಸ್ಬರ್ನನು ವಿವೇಕವಂತ, ನಿಷ್ಕಪಟ; ಸರಳ ಹಾಗೂ ನಂಬಿಗಸ್ಥ ಮತ್ತು ಮಿತ್ರರಿಗೆಲ್ಲ ಪ್ರೀತಿಗೆ ಪಾತ್ರನಾಗಿದ್ದನು. ಆದರೆ ಸಾಹಿತ್ಯಕ ವಿಷಯದಲ್ಲಿ ಮಾತ್ರ ಅವನು ಟೀಕಿಸುವುದನ್ನು ತುಂಬಾ ಒಲವಿನಿಂದ ಮಾಡುತ್ತಿದ್ದನು. ರಾಲ್ಫನು ಬುದ್ಧಿವಂತ, ನಡೆ-ನುಡಿಯಲ್ಲಿ ದಯಾವಂತ ಮತ್ತು ಭಾರೀ ನಿರರ್ಗಳವಾಗಿ ಮಾತನಾಡುತ್ತಿದ್ದನು. ಅಷ್ಟು ಉಲ್ಲಾಸದಾಯಕ ಮಾತುಗಾರನು ನನಗೆ ಇನ್ನೊಬ್ಬನು ಗೊತ್ತಿಲ್ಲವೆಂದು ಹೇಳಬೇಕು. ಇಬ್ಬರೂ ಪದ್ಯ ಪ್ರೇಮಿಗಳು. ಅಂತೇ ಚಿಕ್ಕ-ಚಿಕ್ಕ ಪದ್ಯಗಳಲ್ಲಿ ತಮ್ಮ ಕೈಯಾಡಿಸಲು ಪ್ರಯತ್ನಿಸಿದವರು. ಅನೇಕ ಸರಸ ವಿಹಾರಗಳಲ್ಲಿ ನಾವು ನಾಲ್ವರೂ ಒಟ್ಟುಗೂಡಿಕೊಂಡು ಆದಿತ್ಯವಾರದ ದಿವಸಗಳಲ್ಲಿ ಸ್ಕೂಯಿಲ್ಕೆಲದ ಬಳಿಯ ಅಡವಿಗೆ ಹೋಗುತ್ತಿದ್ದೆವು. ಅಲ್ಲಿ ನಾವು ಒಬ್ಬರಿಗೊಬ್ಬರು ಓದಿ ತೋರಿಸುತ್ತಿದ್ದೆವು.

ಹಾಗೂ ನಾವು ಓದಿದುದನ್ನು ಚರ್ಚೆ ಮಾಡುತ್ತಲೂ ಇದ್ದೆವು.

ಪದ್ಯದ ಅಭ್ಯಾಸವನ್ನು ಕೈಕೊಳ್ಳುವುದು ರಾಲ್ಫ್‌ನ ಒಲವಿನ ವಿಷಯವಾಗಿತ್ತು. ಆದರಲ್ಲಿ ಅವನು ಖ್ಯಾತಿಗಳಿಸುವುದಾಗಿಯೂ ಮತ್ತು ಅದರಿಂದಲೆ ಐಶ್ವರ್ಯವಂತನಾಗುವುದಾಗಿಯೂ ಅವನು ನಂಬಿದ್ದನು. ಅವನಿಗೆ ಆ ಬಗ್ಗೆ ಸಂಶಯವಿರಲಿಲ್ಲ. ದೊಡ್ಡ ದೊಡ್ಡ ಕವಿಗಳು ಕೂಡಾ ತಾವು ಮೊದಲು ಬರೆಯಲಿಕ್ಕೆ ಹತ್ತಿದಾಗ ತಾನು ಮಾಡಿದಷ್ಟೇ ತಪ್ಪು ಮಾಡುತ್ತಿದ್ದರೆಂದು ಅವನು ನೆವ ಹೇಳುತ್ತಿದ್ದನು. ಒಸ್ಬರ್ನನು ಅವನನ್ನು ಅದರಿಂದ ಪರಾವರ್ತನೆ ಹೊಂದಿಸುತ್ತಿದ್ದನು. ಅವನಿಗೆ ಪದ್ಯಕ್ಕೆ ಬೇಕಾದ ಬುದ್ಧಿವಂತಿಕೆ ಇಲ್ಲವೆಂದು ಸಿದ್ಧಪಡಿಸುತ್ತಿದ್ದನು. ಅವನು ಬೆಳೆದು ಬಾಳಿಬಂದ ವ್ಯವಹಾರದ ಹೊರತು ಬೇರೆ ಯಾವುದರ ಬಗ್ಗೆ ಕೈವೊಡ್ಡ ಬೇಡೆಂದು ಅವನಿಗೆ ಉಪದೇಶವಿತ್ತವನೂ ಅವನೆ. ಅವನಲ್ಲಿ ಯಾವ ಸಂಗ್ರಹವೂ ಇಲ್ಲದಿದ್ದರೂ, ವ್ಯಾಪಾರದ ರೀತಿಯಲ್ಲಿ ಮಾತ್ರ ಅವನ ಸತತ ದುಡಿಮೆಯಿಂದ ಮತ್ತು ನಿಯಮಿತತನದಿಂದ ವ್ಯವಹಾರದಲ್ಲಿ* ಒಂದು ಪ್ರಮುಖ ಘಟಕವೆಂದು ತನ್ನನ್ನು ನಿಯಮಿಸಿಕೊಳ್ಳಬಹುದಾಗಿತ್ತು. ಅಲ್ಲಿಂದ ಮುಂದೆ ಕಾಲಕ್ರಮೇಣ ತನ್ನ ಸ್ವಂತ ಲೆಕ್ಕದ ಮೇಲೆ ವ್ಯವಹಾರವನ್ನು ಸ್ಥಾಪಿಸಬಹುದಾಗಿತ್ತು. ಒಬ್ಬನು ತನ್ನ ಮನಸ್ಸನ್ನು ಪದ್ಯದಲ್ಲಿ ತೊಡಗಿಸಿ ಅವನ ಭಾಷೆಯು ಸುಧಾರಿಸುವಷ್ಟರ ಮಟ್ಟಿಗೆ ಮಾತ್ರ ಆಗೀಗ ಆನಂದಿಸಲಿಕ್ಕೆ ನನ್ನ ಒಪ್ಪಿಗೆಯೇ ಹೊರತು ಅದಕ್ಕಿಂತ ದೂರ ಹೋಗುವುದು ನನಗೆ ಸರಿಯೆನಿಸದು.

ಹೀಗಾಗಿ ನಮ್ಮಲ್ಲಿಯ ಪ್ರತಿಯೊಬ್ಬರೂ ಸ್ವರಚಿತ ಒಂದೊಂದು ಕೃತಿಯನ್ನು ಮುಂದಿನ ಕೂಟದಲ್ಲಿ ಪರಸ್ಪರ ನಿರೀಕ್ಷಣೆ, ವಿಮರ್ಶೆ ಹಾಗೂ ತಿದ್ದುಪಡಿಯಿಂದ ನಮ್ಮ ಭಾಷೆಯನ್ನು ಸುಧಾರಿಸುವುದಕ್ಕಾಗಿ ತರಬೇಕೆಂದು ಪ್ರಸ್ತಾಪಿಸಲಾಯಿತು. ಭಾಷೆ ಮತ್ತು ಅಭಿವ್ಯಕ್ತಿ ನಮ್ಮ ಸ್ವಕಲ್ಪಿತವಾಗಿದ್ದು ನಾವು ಹದಿನೆಂಟನೆಯ ಕೀರ್ತನೆಯನ್ನು (Psalm) ಕೃತಿಗಿಳಿಸಬೇಕಾದುದರಿಂದ ವಸ್ತುಶೋಧನೆಯ ವಿಚಾರವನ್ನೆಲ್ಲ ಬದಿಗಿರಿಸಿದೆವು. ಆ ಕೀರ್ತನೆಯು ಒಂದು ದೇವತೆಯ ಅವತಾರವನ್ನು ವರ್ಣಿಸುವಂತಹದಾಗಿತ್ತು. ನಮ್ಮ ಕೂಟದ ಸಮಯ ಹತ್ತಿರ ಬಂದೊಡನೆ ಮೊದಲಿಗೆ ನನ್ನನ್ನು ರಾಲ್ಫ್ ಬರಮಾಡಿಕೊಂಡನು. ಅಂತೇ ತನ್ನ ಕೃತಿಯು ಸಿದ್ಧವಾಗಿರುವುದನ್ನೂ ತಿಳಿಸಿದನು. ನಾನು ತುಂಬಾ ಕೆಲಸದಲ್ಲಿ ಮಗ್ನನಾಗಿದ್ದುದರಿಂದ ಮತ್ತು ಅತ್ತ ಒಲವೂ ಇಲ್ಲದ್ದರಿಂದ ಏನೂ ಮಾಡಿಲ್ಲವೆಂದು ಅವನಿಗೆ ಹೇಳಿದೆ. ಆ ಮೇಲೆ ಅವನು ನನಗೆ ತನ್ನ ಕೃತಿಯನ್ನು ನನ್ನ ಅಭಿಪ್ರಾಯಕ್ಕಾಗಿ ತೋರಿಸಿ

ದನು. ಆದರಲ್ಲಿ ತುಂಬಾ ಗುಣಗಳಿವೆಯೆಂದು ನನಗೆ ಕಂಡುದರಿಂದ ನಾನು ಅದನ್ನು ಸಾಕಷ್ಟು ಹೊಗಳಿದೆನು. "ಕೇಳು, ನನ್ನದೆಂಬುದರಲ್ಲಿ ಯಾವ ಗುಣವನ್ನೂ ಒಸ್ಬರ್ನ್ ಕಾಣಲಿಕ್ಕೆ ಬಿಡುವುದಿಲ್ಲ. ಬದಲು ಕೇವಲ ಹೊಟ್ಟೆ ಕಿಚ್ಚಿನಿಂದ ಸಾವಿರ ಟೀಕೆಗಳನ್ನು ಎತ್ತುತ್ತಾನೆ. ನಿನ್ನ ಬಗ್ಗೆ ಅವನಿಗೆ ಅಷ್ಟೊಂದು ಹೊಟ್ಟೆಯುರಿ ಇಲ್ಲ. ಆದ್ದರಿಂದ ನೀನು ಈ ಪದ್ಯವನ್ನು ಒಯ್ದು, ಇದು ನಿನ್ನ ಕೃತಿಯೆಂದೇ ಅಲ್ಲಿ ತೋರಿಸಬೇಕೆಂದು ನಾನು ಅಪೇಕ್ಷಿಸಿರುವೆನು. ನನಗೆ ಸಮಯವೇ ಸಿಗಲಿಲ್ಲವೆಂದು ನಾನು ನಟಿಸುತ್ತೇನೆ ಮತ್ತು ಏನನ್ನೂ ತೋರಿಸುವುದಿಲ್ಲ. ಅದರ ಬಗ್ಗೆ ಅವನು ಏನು ಹೇಳು ತ್ತಾನೆಂಬುದನ್ನು ನಾವು ಆ ಮೇಲೆ ನೋಡೋಣವಂತೆ." ಎಂದು ಅವನು ಹೇಳಿದನು. ಅದಕ್ಕೆ ನಾನು ಒಪ್ಪಿಕೊಂಡೆನು. ಅದು ನನ್ನ ಸ್ವಲಿಪಿಯಲ್ಲಿ ಕಾಣುವಂತೆ ನಾನು ಆ ಕೂಡಲೆ ಅದನ್ನು ಪ್ರತಿಮಾಡಿದೆನು.

ನಾವು ನೆರೆದೆವು. ವಾಟ್ಸನ್‌ನ ಕೃತಿಯನ್ನು ಓದಲಾಯಿತು. ಅದರಲ್ಲಿ ಕೆಲವೊಂದು ಯೋಗ್ಯತೆಗಳಿದ್ದವು. ಆದರೆ ಅನೇಕ ದೋಷಗಳೂ ಇದ್ದವು. ಒಸ್ಬರ್ನ್‌ನದನ್ನು ಓದಲಾಯಿತು. ಅದು ಸಾಕಷ್ಟು ಉತ್ತಮವಾಗಿತ್ತು. ರಾಲ್ಫ್‌ನು ಅದಕ್ಕೆ ತಕ್ಕ ಸ್ಥಾನವನ್ನು ನೀಡಿದನು. ಕೆಲವೊಂದು ದೋಷಗ ಳನ್ನು ಎತ್ತಿ ತೋರಿಸಿದನು. ಆದರೆ ಅದರ ಸೌಂದರ್ಯವನ್ನು ಬಾಯಿತುಂಬ ಹೊಗಳಿದನು. ಅವನಲ್ಲಿ ಸ್ವಂತದ್ದೇನೂ ಓದಲಿಕ್ಕೆ ಇರಲಿಲ್ಲ. ನಾನಂತೂ ಹಿಂದುಳಿದವನಷ್ಟೆ. ಕ್ಷಮೆ ಪಡೆಯಲು ಅಪೇಕ್ಷಿಸುವ ಹಾಗೆ ಕಂಡೆನು. ಸಾಕಷ್ಟು ಸಮಯ ನನ್ನ ಕೃತಿಯ ತಿದ್ದುಪಾಟಿಗೆ ಇರಲಿಲ್ಲ,....ಇತ್ಯಾದಿ. ಆದರೆ ಯಾವ ನೆಪವೂ ನಡೆಯುವಂತೆ ಇದ್ದಿಲ್ಲ. ನಾನು ಯಾವುದನ್ನಾ ದರೂ ಸಾದರಪಡಿಸಲೇಬೇಕಾಗಿತ್ತು. ಸರಿ, ಅದನ್ನು ಓದಲಾಯಿತು ; ಪುನಃ ಒಮ್ಮೆ ಓದಿದುದಾಯಿತು. ವಾಟ್ಸನ್ ಮತ್ತು ಒಸ್ಬರ್ನ್‌ರು ವಾದ ವನ್ನು ತೊರೆದರು. ಅಂತೇ ಅದನ್ನು ಹೊಗಳುವುದಕ್ಕೆ ಸೇರಿದರು. ರಾಲ್ಫ್ ಮಾತ್ರ ಕೆಲವೊಂದು ಟೀಕೆಗಳನ್ನು ಮಾಡಿದನು. ಅಂತೇ ಕೆಲವೊಂದು ತಿದ್ದುಪಾಟುಗಳನ್ನು ಸೂಚಿಸಿದನು. ಆದರೆ ನನ್ನ ಸ್ವಕೃತಿಯನ್ನು ನಾನು ಸಮರ್ಥಿಸಿದೆನು. ಒಸ್ಬರ್ನ್‌ನು ರಾಲ್ಫ್‌ನ ವಿರುದ್ಧವಿದ್ದ. ರಾಲ್ಫ್‌ನು ವಿಮರ್ಶಕನಾಗುವುದಕ್ಕಿಂತ ಕವಿಯಾಗುವುದೇ ಲೇಸೆಂದನು. ಕಾರಣ ಅವನು ವಾದವನ್ನು ಅಲ್ಲಿಗೆ ನಿಲ್ಲಿಸಿಬಿಟ್ಟನು. ಅವರಿಬ್ಬರೂ ಮನೆಗೆ ಹೋದೊಡನೆ ನನ್ನ ಸ್ವಕೃತಿಯೆಂದು ಅವನು ಗ್ರಹಿಸಿದುದರ ಬಗ್ಗೆ ಒಸ್ಬರ್ನ್‌ನು ಇನ್ನೂ ಬಲವಾಗಿ ಹೊಗಳ ತೊಡಗಿದನು. ಮೊದಲಿಗೇ ಹೇಳಬಾರದೆಂದು

ತಡೆದುಕೊಂಡಿದ್ದೆನೆಂದೂ, ಹಾಗೆ ಅಷ್ಟೊಂದು ಆ ಬಗ್ಗೆ ಹೇಳಿದ್ದರೆ ಅದನ್ನು ನಾನು ಮುಖಸ್ತುತಿಯೆಂದು ತಿಳಿದುಕೊಳ್ಳಬಹುದಾಗಿತ್ತೆಂದೂ ಅವನು ಹೇಳಿದನು. "ಆದರೆ ಫ್ರ್ಯಾಂಕ್ಲಿನ್ನನು ಇಂಥ ಕೃತಿಯನ್ನು ರಚಿಸಲಿಕ್ಕೆ ಸಮರ್ಥನಿದ್ದಾನೆಂದು ಯಾರು ಯೋಚಿಸಿದ್ದರು? ಏನು ಬಣ್ಣನೆ! ಎಂಥ ಕಿಚ್ಚು! ಅವನು ಮೂಲವನ್ನು ಕೂಡ ಸುಧಾರಿಸಿದ್ದಾನೆ. ಅವನು ದಿನನಿತ್ಯದ ಸಂಭಾಷಣೆ ಮಾಡುವಾಗ ಅವನಲ್ಲಿ ಯೋಗ್ಯ ಶಬ್ದಸಂಗ್ರಹವಿದ್ದಂತೆ ಕಾಣುವುದಿಲ್ಲ. ಆಗ ಅವನು ತಡವರಿಸುತ್ತಾನೆ ಮತ್ತು ತಪ್ಪುವುದೂ ಉಂಟು. ಆದರೂ ಓ ಪರಮಾತ್ಮಾ! ಅವನು ಹೇಗೆ ಬರೆಯುತ್ತಾನೆ!" ಎಂದು ಅವನು ಹೇಳಿದನು. ನಾವು ಮರಳಿ ಕೂಡಿದಾಗ ಅವನಿಗೆ ನಾವು ಹೂಡಿದ ಹೊಂಚನ್ನು ರಾಲ್ಫ್ ಹೊರಗೆಡಹಿದನು. ಅಂತೇ ಒಸ್ಬರ್ನನೂ ತುಸು ನಗೆಗೀಡಾದನು.

ಈ ವ್ಯವಹಾರವು ಕವಿಯಾಗುವ ರಾಲ್ಫ್‌ನ ಧೋರಣೆಯನ್ನು ದೃಢಪಡಿಸಿತು. ಅವನನ್ನು ಅದರಿಂದ ಹಿಂದಿರುಗಿಸಲು ನನ್ನಿಂದ ಸಾಧ್ಯವಾದುದನ್ನೆಲ್ಲ ನಾನು ಮಾಡಿದೆನು. ಆದರೆ ಪೋಪನು ಅವನ ಜಾಡ್ಯ ಬಿಡಿಸುವ ತನಕ ಅವನು ಕವಿತೆ ಕಟ್ಟುವುದನ್ನು ಮುಂದುವರಿಸಿದನು. ಏನಿದ್ದರೂ ಅವನೊಬ್ಬ ಯೋಗ್ಯ ಗದ್ಯ ಲೇಖಕನಾದನು. ಈ ತರುವಾಯವೆ ಅವನ ಹೆಚ್ಚಿನದನ್ನೆಲ್ಲ ನೋಡಬೇಕು. ಆದರೆ ಇನ್ನೊಮ್ಮೆ ಈ ಪ್ರಸಂಗ ಬಾರದ ಮೂಲಕ ನಾನು ಇಲ್ಲಿಯೇ ಉಳಿದ ಇಬ್ಬರ ಬಗ್ಗೆ ಸ್ವಲ್ಪ ಪ್ರಸ್ತಾಪಿಸುತ್ತೇನೆ. ಕೆಲವು ವರುಷಗಳ ನಂತರ ವಾಟ್ಸನ್‌ನು ನನ್ನ ತೋಳುಗಳಲ್ಲೆ ಮಡಿದನು. ನಮ್ಮವರಲ್ಲಿ ಅತ್ಯುತ್ತಮನಾದ ಅವನ ಬಗ್ಗೆ ತುಂಬ ದುಃಖಿಸಿದ್ದಾಯಿತು. ಒಸ್ಬರ್ನ್‌ನು ವೆಸ್ಟ್ ಇಂಡೀಸ್‌ಗೆ ಹೋದನು. ಅಲ್ಲಿ ಅವನೊಬ್ಬ ಹೆಸರಾದ ವಕೀಲನಾದನು. ಮತ್ತು ತಾರುಣ್ಯದಲ್ಲೆ ಸ್ವರ್ಗಸ್ಥನಾದನು. ಅವನು ಮತ್ತು ನಾನು ಒಂದು ಭಯಂಕರ ಒಪ್ಪಂದವನ್ನು ಮಾಡಿಕೊಂಡಿದ್ದೆವು. ಆ ಪ್ರಕಾರ ನಮ್ಮಿಬ್ಬರಲ್ಲಿ ಯಾವನು ಮೊದಲಿಗೆ ಸಾಯುತ್ತಾನೋ ಅವನು ಸಾಧ್ಯವಾದರೆ ಮತ್ತೊಬ್ಬನಿಗೆ ಮಿತ್ರತ್ವದ ಸಂದರ್ಶನವೊಂದನ್ನು ಕೊಟ್ಟು, ಆ ಪ್ರತ್ಯೇಕ ಪ್ರಪಂಚದಲ್ಲಿಯ ವಿಚಾರಗಳನ್ನೆಲ್ಲ ಅವನು ಕಂಡ ಹಾಗೆ ತಿಳಿಸಬೇಕು. ಆದರೆ ಅವನು ಇದುವರೆಗೂ ತನ್ನ ವಚನವನ್ನು ಪಾಲಿಸಲಿಲ್ಲ.

ನನ್ನ ಗೆಳೆತನವನ್ನು ಮೆಚ್ಚಿದಂತೆ ಕಂಡ ಗವರ್ನರನು ನನ್ನನ್ನು ಆಗಾಗ ಅವನ ಮನೆಗೆ ಬರಮಾಡಿಕೊಳ್ಳುತ್ತಿದ್ದನು ಮತ್ತು ಅವನು ನನ್ನನ್ನು ನೆಲೆ ನಿಲ್ಲಿಸುವ ವಿಚಾರವಂತು ಯಾವಾಗಲೂ ಖಂಡಿತವಾಗಿದ್ದಂತೆ

ತಿಳಿಯಪಡಿಸುತ್ತಿದ್ದನು. ಮುದ್ರಣ ಯಂತ್ರ, ಮೊಳೆಗಳು ಮತ್ತು ಕಾಗದ ವನ್ನು ಕೊಂಡುಕೊಳ್ಳಲಿಕ್ಕೆ ಅಗತ್ಯವಾದ ಹಣವನ್ನು ನನಗೆ ಸಾಲವಾಗಿ ಒದಗಿಸುವ ಹೊರತಾಗಿ ಅವನ ಅನೇಕ ಮಿತ್ರರಿಗೆ ಅವನು ನನ್ನ ಬಗ್ಗೆ ಕೊಟ್ಟ ಶಿಫಾರಸು ಪತ್ರಗಳನ್ನು ಒಯ್ಯಬೇಕಾಗಿತ್ತು. ಈ ಪತ್ರಗಳಿಗಾಗಿ ಅವು ಗಳು ಸಿದ್ಧವಾಗುವ ಹೊತ್ತಿಗೆ ನಾನು ಬರಬೇಕೆಂದು ಬೇರೆ ಬೇರೆ ಸಮಯ ವಿಧಿಸಲಾಗಿತ್ತು. ಆದರೆ ಆದಕ್ಕೂ ಮುಂದಿನ ದಿವಸವೊಂದನ್ನು ಹೇಳಲಾಗು ತ್ತಿತ್ತು. ಹೀಗೆ ಹಡಗು ಹೊರಡುವ ಹೊತ್ತಿನವರೆಗೆ ಅವನು ತಾನು ವಿಧಿ ಸಿದ ಸಮಯವನ್ನು ಮುಂದುವರಿಸಿದ್ದನು. ಇತ್ತ ಆ ಹಡಗಿನ ನಿರ್ಗಮನದ ಅವಧಿಯೂ ಸಾಕಷ್ಟು ಮುಂದೂಡಲಾಗುತ್ತಿತ್ತು. ಆ ಮೇಲೆ ನಾನು ಹೊರ ಡಲಿಕ್ಕೆ ಸಿದ್ಧನಾದಾಗ ಮತ್ತು ಅವನ ಪತ್ರಗಳನ್ನು ಪಡೆಯ ಹೋದಾಗ ಅವನ ಕಾರ್ಯದರ್ಶಿ ಡಾ। ಬಾರ್ಡನು ನನ್ನ ಬಳಿಗೆ ಬಂದು, ಗವರ್ನರನು ಬರೆಯುವ ಕೆಲಸದಲ್ಲಿ ಎಡೆಬಿಡದೆ ತೊಡಗಿದ್ದಾನೆ—ಆದರೆ ಹಡಗ ಕ್ಕಿಂತ ಮುಂದೆ ನ್ಯೂಕ್ಯಾಸಲಿಗೆ ಮುಟ್ಟುವವನಿದ್ದಾನೆ ಮತ್ತು ಅಲ್ಲಿ ನನಗೆ ಪತ್ರಗಳನ್ನು ಕೊಡಲಾಗುವುದೆಂದು ಹೇಳಿದನು.

ರಾಲ್ಫನು ಮದುವೆಯಾಗಿ ಒಂದು ಮಗುವಿದ್ದರೂ ನನ್ನ ಈ ಜಲ ಯಾತ್ರೆಯಲ್ಲಿ ನನ್ನೊಡನೆ ಬರಲು ನಿರ್ಧರಿಸಿದ್ದನು. ಅವನು ಸಾಮಾನು ಗಳನ್ನು ಕಮಿಷನ್ ತೆಗೆದುಕೊಂಡು ಮಾರಲು ಪತ್ರವ್ಯವಹಾರ ಹೊಂದಿ ಸುವ ಉದ್ದೇಶದಿಂದ ಇದ್ದಾನೆಂದು ತಿಳಿಯಿತು. ಆದರೆ ಯಾವುದೋ ಕಾರಣದಿಂದ ಅವನಿಗೆ ತನ್ನ ಹೆಂಡತಿಯ ಸಂಬಂಧಿಕರೊಡನೆ ವೈಮನಸ್ಸು ಉಂಟಾದುದರಿಂದ ಅವಳನ್ನು ಅವರಲ್ಲಿ ಬಿಟ್ಟು ತಿರುಗಿ ಎಂದೂ ಅವರಲ್ಲಿಗೆ ಮರಳಬಾರದೆಂಬ ಉದ್ದೇಶದಿಂದ ಅವನು ಹೊರಟಿದ್ದಾನೆಂಬುದು ನನಗೆ ಆನಂತರ ತಿಳಿಯಿತು. ನನ್ನ ಗೆಳೆಯರಿಂದ ಬೀಳ್ಕೊಡಿಸಿಕೊಂಡು ಮತ್ತು ಮಿಸ್ ರೀಡಳೊಡನೆ ಕೆಲವೊಂದು ವಚನಗಳನ್ನು ಅದಲು ಬದಲು ಮಾಡಿ ಕೊಂಡು ನಾನು ಫಿಲಡೆಲ್ಫಿಯಾಕ್ಕೆ ಹಡಗು ಹತ್ತಿದೆನು. ಅದು ನ್ಯೂಕ್ಯಾಸ ಲಿಗೆ ಹೋಗಿ ರೇವು ಸೇರಿತು. ಅಲ್ಲಿ ಗವರ್ನರನೇನೋ ಇದ್ದನು, ಆದರೆ ನಾನು ಅವನ ವಾಸಸ್ಥಳಕ್ಕೆ ಹೋದಾಗ ಅವನ ಕಾರ್ಯದರ್ಶಿಯು ನನ್ನ ಬಳಿಗೆ ಬಂದು, ಈಗ ಗವರ್ನರನು ಅತ್ಯಂತ ಮಹತ್ವದ ಕೆಲಸದಲ್ಲಿರುವುದ ರಿಂದ ನನ್ನನ್ನು ಕಾಣುವುದಿಲ್ಲ—ಆದರೆ ಪತ್ರಗಳನ್ನು ಹಡಗಿನ ಮೇಲ್ಗಡೆಗೆ ಕಳುಹಿಸುತ್ತಾನೆ ಮತ್ತು ನನಗೆ ಹೃತ್ಪೂರ್ವಕವಾಗಿ ಸುಜಲಯಾತ್ರೆಯನ್ನು ಹಾಗೂ ತ್ವರಿತ ಪುನರಾಗಮನವನ್ನು ಆಶೀರ್ವದಿಸಿದ್ದಾನೆಂಬ ಜಗತ್ತಿನಲ್ಲೆ

ಅತ್ಯಂತ ಆದರಪೂರ್ವಕ ಸುದ್ದಿಯನ್ನು ಅವನು ಹೇಳಿದನು. ನಾನು ತುಸು ಗೊಂದಲಕ್ಕೀಡಾಗಿ ಹಡಗಿನ ಮೇಲ್ಗಡೆಗೆ ಹಿಂದಿರುಗಿದೆನು. ಆದರೆ ಇನ್ನೂ ಸಂಶಯ ತಾಳಲಿಲ್ಲ.

ಮಿ॥ ಎಂಡ್ರ್ಯೂ ಹೆಮಿಲ್ಟನ್ ಎಂಬ ಒಬ್ಬ ಫಿಲಡೆಲ್ಫಿಯಾದ ಪ್ರಖ್ಯಾತ ವಕೀಲನು ಅದೇ ಹಡಗಿನಲ್ಲಿ ಹೊರಟಿದ್ದನು. ಅವನು ತನಗೆ ಮತ್ತು ಮಗನಿಗೆ ಒಂದು ನಿದ್ದೆಯ ಸ್ಥಳವನ್ನು ಇಟ್ಟುಕೊಂಡಿದ್ದನು. ಅವರ ಜೊತೆಯಲ್ಲಿ ಮಿ॥ ಡೆನ್‌ಹ್ಯಾಮ್ ಎಂಬೊಬ್ಬ ಕ್ವ್ಯಾಕರ ವ್ಯಾಪಾರಿ ಮತ್ತು ಮೆರಿಲ್ಯಾಂಡಿನ ಕಬ್ಬಿಣದ ಕಾರ್ಖಾನೆಯ ಒಡೆಯರಾದ ಮೆಸರ್ಸ್ ಒನಿಯನ್ ಮತ್ತು ರಸೆಲ್ ಕೂಡಾ ಇದ್ದರು. ಹೀಗೆ ಇವರೆಲ್ಲ ಒಂದು ದೊಡ್ಡ ಕೋಣೆಯನ್ನೇ ಹಿಡಿದಿದ್ದರು. ನಾನು ಮತ್ತು ರಾಲ್ಫ್ ಹಡಗು ನಡೆಸುವ ಸ್ಥಳದಲ್ಲಿ ಒಂದು ಬರ್ಥನ್ನು ಹಿಡಿಯಲೇಬೇಕಾಯಿತು. ಅಂತೇ ಹಡಗಿನ ಮೇಲಿದ್ದವರಲ್ಲಿ ಯಾರೂ ನಮ್ಮನ್ನು ಬಲ್ಲವರಾಗಿರದ್ದರಿಂದ ನಮ್ಮನ್ನು ಸಾಮಾನ್ಯ ವ್ಯಕ್ತಿಗಳೆಂದು ಪರಿಗಣಿಸಿದರು.

ಆದರೆ ಮಿಸ್ಟರ್ ಹೆಮಿಲ್ಟನ್ ಮತ್ತು ಅವನ ಮಗ (ಗವರ್ನರನಾದ ನಂತರ ಅವನು ಜೇಮ್ಸ) ನ್ಯೂಕ್ಯಾಸಲಿನಿಂದ ಫಿಲಡೆಲ್ಫಿಯಾಕ್ಕೆ ಬಂದಿದ್ದರು. ಒಂದು ತಕರಾರಿನಲ್ಲಿದ್ದ ಹಡಗಿನ ವಿಷಯದಲ್ಲಿ ವಾದ ಹೂಡಲು ತಂದೆಯವರನ್ನು ಕರೆಸಲಾಗಿತ್ತು. ಇತ್ತ ನಾವು ಹೊರಡುವುದಕ್ಕಿಂತ ಸ್ವಲ್ಪ ಮೊದಲು ಕರ್ನಲ್ ಫ್ರೆಂಚ್ ಹಡಗಿನ ಮೇಲಕ್ಕೆ ಬಂದು ನನಗೆ ತುಂಬಾ ಗೌರವ ಸಲ್ಲಿಸಿದನು. ನನ್ನ ಮೇಲೆ ಎಲ್ಲರ ದೃಷ್ಟಿಯೂ ಬಿದ್ದಿತು. ಮತ್ತೊಬ್ಬ ಗೃಹಸ್ಥನಿಂದ ಕ್ಯಾಬಿನೊಳಗೆ ಬರಲು ಆಹ್ವಾನಿಸಲ್ಪಟ್ಟೆನು. ಅಲ್ಲಿ ಈಗ ಮಾತ್ರ ಸ್ಥಳವಿತ್ತು. ಆ ಪ್ರಕಾರ ನಾವು ಅಲ್ಲಿಗೆ ನಡೆದೆವು.

ಗವರ್ನರನ ಪತ್ರಗಳನ್ನು ಕರ್ನಲ್ ಫ್ರೆಂಚ್ ಅಲ್ಲಿಗೆ ತಂದಿರುವುದನ್ನು ತಿಳಿದೊಡನೆ ನಾನು ಕ್ಯಾಪ್ಟನ್ ಸಾಹೇಬರೊಡನೆ ನನಗೇನಾದರೂ ಅದರಲ್ಲಿ ಪತ್ರಗಳಿವೆಯೇ ಎಂದು ಕೇಳಿದೆನು. ಎಲ್ಲವುಗಳನ್ನು ಚೀಲದಲ್ಲಿ ಹಾಕಿರುವುದರಿಂದ ಈಗ ಅವುಗಳನ್ನು ನೋಡಲಿಕ್ಕೆ ಸಾಧ್ಯವಿಲ್ಲೆಂದು ಅವರು ಹೇಳಿದರು. ಆದರೆ ನಾವು ಇಂಗ್ಲೆಂಡಿಗೆ ತಲುಪುವುದರೊಳಗೆ ಅವುಗಳನ್ನು ತೆಗೆದುಕೊಳ್ಳುವ ಸಂದರ್ಭವು ನನಗೆ ದೊರೆಯುತ್ತದೆಂದು ಹೇಳಲಾಯಿತು. ಸದ್ಯಕ್ಕೆ ನಾನು ತೃಪ್ತನಾದೆನು. ಹೀಗೆ ನಾವು ನಮ್ಮ ಜಲಯಾನವನ್ನು ಮುಂದುವರಿಸಿದ್ದಾಯಿತು. ಕ್ಯಾಬಿನಿನಲ್ಲಿ ನಮಗೆ ಸಲುಗೆಯ ಸಂಗಡಿಗರು ದೊರೆತಿದ್ದರು. ಅಂತೇ ಅಸಾಮಾನ್ಯವಾದ ಸೌಖ್ಯವನ್ನು ಪಡೆದೆವು.

ಅಲ್ಲದೆ ಮಿಸ್ಟರ್ ಹೆಮಿಲ್ಟನ್ ಅವರ ವಿಪುಲವಾದ ಭಂಡಾರವೂ ನಮ್ಮ ಉಪಯೋಗಕ್ಕೆ ದೊರೆತಿತ್ತು. ಈ ಪ್ರಯಾಣದಲ್ಲಿ ಮಿ। ಡೆನ್‌ಹ್ಯಾಮರು ನನ್ನೊಡನೆ ಗೆಳೆತನ ಕಟ್ಟಿಕೊಂಡರು. ಅವರ ಜೀವಮಾನದವರೆಗೆ ಅದು ಉಳಿದುಕೊಂಡಿತ್ತು. ಹೀಗೆಲ್ಲಾ ದೊರೆತುದಲ್ಲದಿದ್ದರೆ ಜಲಯಾತ್ರೆಯು ಸಂತೋಷದಾಯಕವಾಗಿರುತ್ತಿದ್ದಿಲ್ಲ. ಯಾಕೆಂದರೆ ನಮ್ಮ ಪಾಲಿಗೆ ಸಾಕಷ್ಟು ಕೆಟ್ಟ ಹವೆ ಕೂಡಿಬಂದಿತ್ತು.

ಹಡಗವು ತನ್ನ ದಾರಿ ಹಿಡಿದು ಹೊರಟಾಗ ಕ್ಯಾಪ್ಟನ್ ತಮ್ಮ ವಚನವನ್ನು ಪಾಲಿಸಿ ಗವರ್ನರನ ಪತ್ರಗಳಿದ್ದ ಚೀಲವನ್ನು ಶೋಧಿಸುವ ಸಂಧಿಯನ್ನು ನನಗೆ ಒದಗಿಸಿ ಕೊಟ್ಟರೂ ನನ್ನ ನೇತೃತ್ವದಲ್ಲಿದ್ದ ನನ್ನ ಹೆಸರಿನ ಯಾವ ಚೀಲವನ್ನೂ ನಾನು ಕಾಣಲಿಲ್ಲ. ಆರೋ-ಏಳೋ ಪತ್ರಗಳನ್ನು ನಾನು ಹೆಕ್ಕಿತೆಗೆದೆನು. ಹಸ್ತಾಕ್ಷರಗಳ ಮೂಲಕ ಅವುಗಳು ವಚನವಿತ್ತ ಪತ್ರಗಳೆಂದು ಬಗೆದೆನು. ಮುಖ್ಯವಾಗಿ ಅವುಗಳಲ್ಲಿ ಒಂದು ಅರಸನ ಮುದ್ರಕನಾದ ಬಾಸ್ಕೆಟ್‌ನಿಗೆ ಬರೆಯಲಾಗಿತ್ತು ಮತ್ತು ಇನ್ನೊಂದು ಮತ್ತೊಬ್ಬ ಸ್ಟೇಷನರಿ ವ್ಯಾಪಾರಿಗೆ ಬರೆಯಲಾಗಿತ್ತು. ೧೭೨೪ ಡಿಸೆಂಬರ್ ೨೪ರಂದು ನಾವು ಲಂಡನ್ನಿಗೆ ತಲುಪಿದೆವು. ಮೊಟ್ಟ ಮೊದಲು ನನ್ನ ದಾರಿಯಲ್ಲಿ ಸಿಕ್ಕ ಸ್ಟೇಷನರಿ ವ್ಯಾಪಾರಿಯನ್ನು ಕಾದು ಕುಳಿತೆನು. ಅವನಿಗೆ ಗವರ್ನರ್ ಕೈಥ್‌ನ ಪತ್ರವನ್ನೂ ಕೊಟ್ಟಿದ್ದೆನಷ್ಟೆ. "ಈ ಹೆಸರಿನ ಮನುಷ್ಯನೇ ನನಗೆ ಗೊತ್ತಿಲ್ಲ" ಎಂದು ಅವನು ಪತ್ರವನ್ನು ನೋಡಿ ಹೇಳಿದನು. ಪತ್ರವನ್ನು ಒಡೆದು ನೋಡಿದೊಡನೆ, "ಓ! ಇದು ರಿಡ್ಲಸ್‌ಡೆನ್ನನ ಪತ್ರ. ಇತ್ತೀಚೆಗೆ ಅವನು ಸಂಪೂರ್ಣ ಘಟಿಂಗನೆಂಬುದು ನನಗೆ ತಿಳಿದು ಬಂದಿತು. ಅವನಿಂದ ನನಗೇನೂ ಆಗಬೇಕಾಗಿಲ್ಲ, ಅವನಿಂದ ಪತ್ರಗಳನ್ನೂ ನಾನು ಪಡೆದುಕೊಳ್ಳಲಾರೆ" ಎಂದು ಹೇಳಿಬಿಟ್ಟ. ಹೀಗೆ ಹೇಳಿ ಅವನು ಆ ಪತ್ರವನ್ನು ಮರಳಿ ನನ್ನ ಕೈಯಲ್ಲಿ ಇಟ್ಟು ಕಾಲಿಗೆ ಬುದ್ಧಿ ಹೇಳಿದವನೆ ಬೇರೆ ಗಿರಾಕಿಯತ್ತ ನಡೆದನು. ಇವುಗಳು ಗವರ್ನರನ ಪತ್ರಗಳಾಗಿರಲಿಕ್ಕಿಲ್ಲವೆಂದು ನನಗೆ ಆಶ್ಚರ್ಯವುಂಟಾಯಿತು. ಅಂತೇ ವಾತಾವರಣವನ್ನೆಲ್ಲ ಒಂದಕ್ಕೊಂದು ಹೊಂದಿಸುತ್ತ ಹಾಗೂ ಪುನರಾಲೋಚಿಸುತ್ತ ಹೋದಂತೆ ನಾನು ಅವನ ಪ್ರಾಮಾಣಿಕತನದ ಬಗ್ಗೆ ಸಂಶಯ ತಾಳಲಿಕ್ಕೆ ಹತ್ತಿದೆನು. ನನ್ನ ಮಿತ್ರ ಡೆನ್‌ಹ್ಯಾಮನನ್ನು ಕಂಡು ಅವನ ಮುಂದೆ ಸಂಪೂರ್ಣ ಸಂಗತಿಯನ್ನು ತರದಿಟ್ಟೆನು. ಅವನು ನನಗೆ ಕೈಥನ ಸ್ವಭಾವ ಗೊತ್ತುಪಡಿಸಿದನು. ನನಗಾಗಿ ಅವನು ಪತ್ರ ಬರೆದಿರುತ್ತಾನೆಂಬ ಮಾತಿನಲ್ಲಿ ಎಳ್ಳಷ್ಟೂ

ನಂಬಿಕೆಯಿಲ್ಲ, ಅವನನ್ನು ಬಲ್ಲವರು ಯಾರೂ ಅವನ ಮೇಲೆ ಸ್ವಲ್ಪವೂ ಅವಲಂಬಿಸುವುದಿಲ್ಲವೆಂದು ಹೇಳಿದನು. ಹಾಗೂ ಗವರ್ನರಾದ ಅವನು ಸ್ವತಃ ತನ್ನ ಸಾಲವನ್ನೆ ಸಂದಾಯ ಮಾಡಲಿಕ್ಕೆ ಸಾಧ್ಯವಿಲ್ಲದವನು ನನಗೆ ಸಾಲಕೊಡಿಸುವ ಪತ್ರ ಕೊಟ್ಟ ಸಂಗತಿಯನ್ನು ಕೇಳಿ ಇವನು ಬಾಯಿ ತುಂಬ ನಕ್ಕನು. ನನ್ನ ವಿಷಯದ ಕುರಿತು ನಾನೇನು ಮಾಡಲೆಂದು ಅವನ ಮುಂದೆ ಕೇಳಿದಾಗ, ನನ್ನ ವ್ಯವಹಾರ ಕ್ಷೇತ್ರದಲ್ಲೆ ಯಾವುದಾದರು ಉದ್ಯೋಗ ದೊರಕಿಸಿಕೊಳ್ಳಲು ಪ್ರಯತ್ನಪಡಬೇಕೆಂದು ಅವನು ನನಗೆ ಉಪದೇಶ ಮಾಡಿದನು. "ಇಲ್ಲಿನ ಮುದ್ರಕರ ಜೊತೆಯಲ್ಲಿ ನೀನು ತುಂಬಾ ಸುಧಾರಿಸಿಕೊಳ್ಳುವಿ ಮತ್ತು ನೀನು ಅಮೆರಿಕಾಕ್ಕೆ ಹಿಂದಿರುಗಿದಾಗ ನಿನಗೆ ವ್ಯವಹಾರದಲ್ಲಿ ನೆಲೆವೂರಲು ಹೆಚ್ಚಿನ ಅನುಕೂಲವಾಗುವುದು" ಎಂದು ಅವನು ಹೇಳಿದನು.

ನಾವಿಬ್ಬರು ಹಾಗೂ ಆ ಸ್ಟೇಷನರಿ ವ್ಯಾಪಾರಿ ಕೂಡಾ ರಿಡ್ಲ್‌ಸ್ಟೆನ್ ವಕೀಲನು ಮಹಾ ಕಪಟಿಯೆಂಬುದನ್ನು ತಿಳಿದುಕೊಂಡಿದ್ದೆವು. ತಾನು ಮದುವೆಯಾಗಲು ಗೊತ್ತಾಗಿರುವನೆಂದು ಮಿಸ್ ರೀಡಳ ತಂದೆಯು ಬೆನ್ನು ಹಿಡಿದು ಅವನನ್ನು ಅರ್ಧ ನಿರ್ನಾಮ ಮಾಡಿಯಾಗಿತ್ತು. ಈ ಪತ್ರದ ಮೂಲಕ ಒಂದು ಗುಪ್ತ ಯೋಜನೆಯು ಹೆಮಿಲ್ಟನನ (ಆಗ ನಮ್ಮೊಡನೆ ಬರುತ್ತಿದ್ದವನೆಂದು ಊಹಿಸಲಾಗಿತ್ತು) ವಿರೋಧವಾಗಿ ನಡೆಯುತ್ತಿದೆಯೆಂಬುದು ಕಂಡುಬಂದಿತ್ತು. ಅಲ್ಲದೆ ಇದರಲ್ಲೆ ಕೈಥನನ್ನು ರಿಡ್ಲಸ್ಟನನೆಂದು ಇಟ್ಟುಕೊಳ್ಳಲಾಗಿತ್ತು. ಹೆಮಿಲ್ಟನನ ಮಿತ್ರನಾದ ಡೆನ್‌ಹ್ಯಾಮನು ಅದನ್ನು ಅಗತ್ಯವಾಗಿ ತಿಳಿದುಕೊಳ್ಳಬೇಕೆಂದು ಯೋಚಿಸಿದನು. ಆದ್ದರಿಂದ ಅವನು ಇಂಗ್ಲೆಂಡಿಗೆ ತಲುಪಿ ಸ್ವಲ್ಪ ಹೊತ್ತು ಕಳೆದೊಡನೆ, ಕೈಥ ಮತ್ತು ರಿಡ್ಲ್‌ಸ್ಡೆನ್ ಅವರ ಮೇಲಿನ ಕೋಪ ಹಾಗೂ ವೈಮನಸ್ಸಿನಿಂದ, ತುಸು ಅವನ ಮೇಲಿನ ನಂಬಿಕೆಯಿಂದ, ನಾನು ಅವನನ್ನು ಕಾದು ಕುಳಿತು ಅವನಿಗೆ ಆ ಪತ್ರವನ್ನು ಕೊಟ್ಟೆನು. ಈ ಸುದ್ದಿಯು ಬಹಳ ಮಹತ್ವದ್ದಾಗಿದ್ದುದರಿಂದ ಅವನು ನನ್ನನ್ನು ಆದರದಿಂದ ಉಪಕಾರಸ್ಮರಣೆ ಮಾಡಿದ. ಈ ಹೊತ್ತಿನಿಂದ ಅವನು ನನ್ನ ಮಿತ್ರನಾಗಿ ಉಳಿದನು. ಆ ಬಳಿಕ ಅನೇಕ ಸಂದರ್ಭಗಳಲ್ಲಿ ಅವನು ನನಗೆ ತುಂಬಾ ಅನುಕೂಲ ಮಾಡಿಕೊಟ್ಟಿದ್ದಾನೆ.

ಆದರೆ ಒಬ್ಬ ಗವರ್ನರನು ಇಂಥ ಕರುಣಾಜನಕ ಕುತಂತ್ರಗಳನ್ನು ಏನೂ ಅರಿಯದ ಬಡಹುಡುಗನಲ್ಲಿ ಹೂಡುವುದೆಂದರ ಅವನ ಬಗ್ಗೆ ನಾವೇನು ತಿಳಿದುಕೊಳ್ಳಬೇಕು! ಅವನು ಮೈಗೂಡಿಸಿಕೊಂಡ ಚಟವೇ ಅದಾಗಿತ್ತು.

ಪ್ರತಿಯೊಬ್ಬನನ್ನು ಸಂತಸಪಡಿಸಲು ಅವನು ಆಶಿಸುತ್ತಿದ್ದನು. ಅಂತೇ ಅವರಿಗೆ ಕೊಡಲಿಕ್ಕೆ ತನ್ನಲ್ಲಿ ಏನೂ ಇಲ್ಲದ್ದರಿಂದ ಅವನು ಕೇವಲ ನಿರೀಕ್ಷಣೆಯನ್ನೇ ದಯಪಾಲಿಸುತ್ತಿದ್ದನು. ಹೀಗಿಲ್ಲದಿದ್ದರೆ ಅವನೊಬ್ಬ ಚತುರ, ತಿಳುವಳಿಕೆಯುಳ್ಳ ಮನುಷ್ಯ ಮತ್ತು ಒಳ್ಳೆಯ ಬರಹಗಾರ – ತನಗೆ ಸ್ಥಾನ ಕೊಟ್ಟ ಒಡೆಯರಿಗೆ ಅಲ್ಲದಿದ್ದರೂ ತನ್ನ ಜನರಿಗೆ ಅವನು ಉತ್ತಮ ರಾಜ್ಯಪಾಲನಾಗಿದ್ದನು. ಅವನು ಕೆಲವು ಸಲ ಆವರ ಬೋಧನೆಗಳನ್ನು ಮನ್ನಿಸುತ್ತಿದ್ದಿಲ್ಲ. ನಮ್ಮ ಕಾಯಿದೆಗಳಲ್ಲಿ ಅನೇಕ ಕಾಯಿದೆಗಳು ಅವನು ಯೋಚಿಸಿದವುಗಳು ಮತ್ತು ಅವನ ಆಳ್ವಿಕೆಯ ಕಾಲದಲ್ಲಿ ಜಾರಿಗೆ ಬಂದವುಗಳಾಗಿವೆ.

ನಾನು ಮತ್ತು ರಾಲ್ಫ್ ಅಗಲಲಾರದ ಸಂಗಾತಿಗಳಾಗಿದ್ದೆವು ನಾವಿಬ್ಬರೂ 'ಲಿಟ್ಲ ಬ್ರಿಟನಿ'ನಲ್ಲಿ ವಸತಿಯನ್ನು ಹೂಡಿದ್ದೆವು. ವಾರಕ್ಕೆ ಮೂರು ಶಿಲ್ಲಿಂಗು ಮತ್ತು ನಾಲ್ಕು ಪೆನ್ಸ ಕೊಡುತ್ತಿದ್ದೆವು. ಆಗ ನಮ್ಮಿಂದ ಕೊಡಲಿಕ್ಕೆ ಸಾಧ್ಯವಾದ ಹೆಚ್ಚಿನ ಹಣವಿದು. ಅವನಿಗೆ ಕೆಲವು ಸಂಬಂಧಿಕರು ದೊರೆತರು. ಆದರೆ ಅವರು ಬಡವರಾಗಿದ್ದುದರಿಂದ ಅವನಿಗೆ ಅವರಿಂದ ಸಹಾಯ ದೊರೆಯುವ ಹಾಗಿರಲಿಲ್ಲ. ಈಗ ಅವನು ಲಂಡನಿನಲ್ಲಿರುವ ತನ್ನ ಉದ್ದೇಶಗಳನ್ನು ನನಗೆ ತಿಳಿಯಪಡಿಸಿದನು. ಅಂತೇ ಅವನು ಹಿಂದಿರುಗಿ ಎಂದೂ ಫಿಲಡೆಲ್ಫಿಯಾಕ್ಕೆ ಹೋಗುವವನಾಗಿರಲಿಲ್ಲ. ತನ್ನ ಸಂಗಡ ಏನೂ ಹಣ ಅವನು ತಂದಿರಲಿಲ್ಲ, ಪ್ರಯಾಣದ ಖರ್ಚನ್ನು ಪೂರೈಸುವುದರಲ್ಲೇ ಅವನಿಂದ ಸಂಗ್ರಹಿಸಲಿಕ್ಕೆ ಸಾಧ್ಯವಾದ ಹಣವೆಲ್ಲ ಮುಗಿದು ಹೋಯಿತು. ನನ್ನಲ್ಲಿ ಹದಿನೈದು ಪಿಸ್ಟೋಲ (Pistole) ಗಳಿದ್ದವು. ಹೀಗಾಗಿ ವ್ಯವಹಾರವನ್ನು ಹುಡುಕಾಡುವ ಕಾಲದಲ್ಲಿ ಜೀವನ ಸಾಗಿಸಲು ಅವನು ನನ್ನಿಂದ ಆಗಾಗ ಸಾಲ ಪಡೆಯುತ್ತಿದ್ದನು. ತಾನು ನಟನಾಗಲು ಅರ್ಹನಾಗಿದ್ದೇನೆಂದು ಬಗೆದು ಅವನು ಮೊದಲು ಒಂದು ನಾಟಕ ಗೃಹದಲ್ಲಿ ಸೇರಿಕೊಳ್ಳಲು ಪ್ರಯತ್ನಿಸಿದನು ಆದರೆ ಅವನು ಅರ್ಜಿಯನ್ನು ತನಿಖೆಮಾಡಿದ ವಿಲ್ಕ್ಸ್ ಅವನು ಅದರಲ್ಲಿ ಯಶಸ್ವಿಯಾಗುವುದು ಅಸಾಧ್ಯವಾದುದರಿಂದ ಆ ಉದ್ಯೋಗದ ಬಗ್ಗೆ ಏನೂ ಯೋಚಿಸಬೇಡವೆಂದು ಉಪದೇಶ ಮಾಡಿದರು. ಆಮೇಲೆ ಅವನು ಕೆಲವೊಂದು ಕರಾರುಗಳ ಮೇಲೆ 'ಸ್ಪೆಕ್ಟೇಟರ್' (Spectator) ದಂಥ ಒಂದು ವಾರಪತ್ರಿಕೆಯಲ್ಲಿ ತಾನು ಬರೆಯುತ್ತೇನೆಂದು ಪೆಟರ್ನೊಸ್ಟರ್ ರೋಡದಲ್ಲಿರುವ ರೋಬರ್ಟ್ಸ್ ಎಂಬ ಪ್ರಕಾಶಕನಲ್ಲಿ ಪ್ರಸ್ತಾಪಿಸಿದನು. ರೋಬರ್ಟ್ಸ್ ಮಾತ್ರ ಇದನ್ನು ಒಪ್ಪಲಿಲ್ಲ. ತರುವಾಯ ಅವನು ಬಳಕೆಯ

ಬರೆಹಗಾರ (Hackney Writer) ನ ಉದ್ಯೋಗಕ್ಕೆ ಪ್ರಯತ್ನಿಸಿದನು. ನ್ಯಾಯಾಲಯಕ್ಕೆ (Temple) ಸಂಬಂಧಪಟ್ಟ ವಿಷಯಗಳನ್ನು ವ್ಯಾಪಾರಿಗಳಿಗೆ ಮತ್ತು ವಕೀಲರುಗಳಿಗೆ ಪ್ರತಿಮಾಡಿಕೊಡುವ ಈ ಬಳಕೆ ಬರೆಹಗಾರನ ಕೆಲಸವು ಖಾಲಿ ಬೀಳದೆ ಇದ್ದುದರಿಂದ ಅವನಿಗೆ ದೊರೆಯಲಿಲ್ಲ.

ಆ ಕೂಡಲೆ ನಾನು ಆಗ ಪ್ರಖ್ಯಾತ ಮುದ್ರಣಾಲಯವಾಗಿದ್ದ ಪಾಮರರಲ್ಲಿ ಕೆಲಸಕ್ಕೆ ಸೇರಿದೆನು. ಇಲ್ಲಿ ನಾನು ಸುಮಾರು ಒಂದು ವರುಷದತನಕ ಇದ್ದೆನು. ಅದು ಬಾರ್ಥೆಲೊಮ್ಯು ಕ್ಲೋಸ್‌ನಲ್ಲಿ ಇದ್ದಿತು. ನಾನು ಸಾಕಷ್ಟು ಸತತ ಕರ್ಮಿಯಾಗಿದ್ದೆ. ನಾಟಕಗಳಿಗೆ ಮತ್ತು ಬೇರೆ ವಿನೋದಗಳಿಗೆ ರಾಲ್ಫ್‌ನೊಡನೆ ಸಂದರ್ಶನವೀಯುತ್ತ ನನ್ನ ಸಂಪಾದನೆಯ ಹೆಚ್ಚಿನ ಭಾಗವನ್ನೆಲ್ಲ ಖರ್ಚು ಮಾಡುತ್ತಿದ್ದೆ. ನಾವಿಬ್ಬರೂ ಕೂಡಿ ನನ್ನ ಎಲ್ಲಾ ಪಿಸ್ಟೋಲುಗಳನ್ನು ಮುಗಿಸಿದ್ದಾಯಿತು. ಈಗ ಮಾತ್ರ ಕೈಯಿಂದ ಬಾಯಿಗೆ ನನ್ನ ಸಂಪಾದನೆ ಬರತೊಡಗಿತು. ಅವನು ತನ್ನ ಹೆಂಡತಿ ಮತ್ತು ಮಗುವನ್ನು ಚೆನ್ನಾಗಿ ಮರೆತ ಹಾಗೆ ಕಂಡಿತು. ಇತ್ತ ನಾನು ಕೂಡ ಕ್ರಮೇಣ ಮಿಸ್ ರೀಡಳೊಡನಿದ್ದ ನನ್ನ ಸಂಬಂಧವನ್ನು ಮರೆಯಹತ್ತಿದೆನು. ಅವಳಿಗೆ ನಾನು ಒಂದಕ್ಕಿಂತ ಹೆಚ್ಚು ಪತ್ರ ಬರೆಯಲೇ ಇಲ್ಲ. ಅದು ಕೂಡಾ ಬೇಗನೆ ಹಿಂದಿರುಗುವ ಸಂಭವವಿಲ್ಲೆಂದು ಅವಳಿಗೆ ತಿಳಿಸಲಿಕಷ್ಟೇ ಆಗಿತ್ತು. ಇದು ನನ್ನ ಬಾಳಿನಲ್ಲಿಯ ಇನ್ನೊಂದು ದೊಡ್ಡ ತಪ್ಪು ಎನ್ನಬೇಕು. ಇನ್ನೊಮ್ಮೆ ನಾನು ಬದುಕಿ ಬರುವುದಾದರೆ ಇದನ್ನು ಸರಿಪಡಿಸಬೇಕೆಂಬ ಇಚ್ಛೆಯುಂಟು. ಅಲ್ಲದೆ ನಮ್ಮ ಸತತ ಖರ್ಚಿನಿಂದಾಗಿ ನನಗೆ ನನ್ನ ಪ್ರಯಾಣದ ಖರ್ಚನ್ನು ತುಂಬಲಿಕ್ಕೆ ಸಾಧ್ಯವಾಗದೆ ಉಳಿಯಿತು.

ಪಾಮರರಲ್ಲಿ ನಾನು ವೊಲಸ್ಟನರ "ರಿಲಿಜನ್ ಆಫ್ ನೇಚರ್" (Religion of Nature) ಎಂಬ ಗ್ರಂಥದ ದ್ವಿತೀಯ ಆವೃತ್ತಿಯನ್ನು ಕಂಪೋಸು ಮಾಡಲು ಕೆಲಸ ಮಾಡುತ್ತಿದ್ದೆನು. ಅದರ ಕೆಲವೊಂದು ತರ್ಕಗಳು ಸ್ಥಿರವಾಗಿ ನಿರ್ಧರಿಸಲ್ಪಟ್ಟವುಗಳೆಂದು ನನಗೆ ಕಂಡು ಬರಲಿಲ್ಲ. ನಾನು ಚಿಕ್ಕದೊಂದು ಆಧ್ಯಾತ್ಮಿಕ ಲೇಖನವನ್ನು ಬರೆದು ಅದರಲ್ಲಿ ಅವುಗಳ ಬಗ್ಗೆ ನೋಡುವಳಿಕೆಯನ್ನು ಬರೆದೆನು. ಅದಕ್ಕೆ "ಸ್ವಾತಂತ್ರ್ಯ ಮತ್ತು ಆವಶ್ಯಕತೆ, ಸುಖ ಮತ್ತು ದುಃಖಗಳ ಮೇಲಿನವೊಂದು ವಿವೇಚನೆ" (A Disseration on Liberty and Necessity, Pleasure and Pain) ಎಂಬ ಹೆಸರು ಕೊಡಲಾಗಿತ್ತು. ನಾನು ಅದನ್ನು ನನ್ನ ಗೆಳೆಯ ರಾಲ್ಫನ ಸ್ಮರಣೆಯ ಸಲುವಾಗಿ ಬರೆದೆನು. ಸ್ವಲ್ಪ ಪ್ರತಿಗಳನ್ನಷ್ಟೆ ಮುದ್ರಿ

ಸಿದೆನು. ನನ್ನ ಹಸ್ತಪುಸ್ತಕದ ತತ್ವಗಳ ಬಗ್ಗೆ ಅವರು ನನಗೆ ಗಂಭೀರ ವಾಗಿ ತರ್ಕಬದ್ಧವಾದ ಬೋಧನೆಯನ್ನು ಕೊಟ್ಟರೂ ಕೂಡ ಪಾಮರ ಆದರ ಮೂಲಕ ನನ್ನನ್ನು ಒಬ್ಬ ತುಸು ಬುದ್ಧಿವಂತ ತರುಣನೆಂದು ಸಾಕಷ್ಟು ಉತ್ತಮ ರೀತಿಯಲ್ಲಿ ಪರಿಗಣಿಸುವ ಪ್ರಸಂಗವೊದಗಿತು. ನನ್ನ ಲೇಖನದ ತತ್ವಗಳು ಅವರಿಗೆ ಬೀಭತ್ಸವಾಗಿ ಕೂಡ ಅನಿಸಿದ್ದುವು. ನಾನು ಈ ಹಸ್ತ ಪುಸ್ತಕವನ್ನು ಪ್ರಕಟಿಸಿದುದು ಇನ್ನೊಂದು ತಪ್ಪು. ನಾನು 'ಲಿಟ್ಲ್ ಬ್ರಿಟನಿ'ನಲ್ಲಿ ವಾಸವಿದ್ದಾಗ ವಿಲ್‌ಕೋಕ್ಸ್ ಎಂಬೊಬ್ಬ ಪುಸ್ತಕ ವ್ಯಾಪಾರಿ ಯೊಡನೆ ಮಿತ್ರತ್ವಕಟ್ಟಿಕೊಂಡೆನು. ಅವನ ಅಂಗಡಿಯು ನನ್ನ ವಾಸಸ್ಥಾನದ ಮಗ್ಗಲಿನ ಬಾಗಿಲಿಗಿತ್ತು. ಅವನಲ್ಲಿ ಬಳಸಿದ ಪುಸ್ತಕಗಳ ಅದ್ಭುತ ಸಂಗ್ರಹ ವಿತ್ತು. ಸಂಚಾರಿ ವಾಚನಾಲಯಗಳು ಆಗ ಬಳಕೆಯಲ್ಲಿ ಇರಲಿಲ್ಲ. ಆದರೆ ಯೋಗ್ಯವಾದ ಕೆಲವೊಂದು ಕರಾರುಗಳ ಮೇಲೆ – ಅವುಗಳು ಯಾವು ವೆಂದು ನನಗೀಗ ಮರೆತುಹೋಗಿದೆ–ನಾನು ಒಪ್ಪಂದ ಮಾಡಿಕೊಂಡು ಅವನ ಯಾವ ಪುಸ್ತಕಗಳನ್ನಾದರೂ ಒಯ್ದು ಓದಿ ಮರಳಿ ಕೊಡಬಹು ದಾಗಿತ್ತು. ಇದು ಬಹು ದೊಡ್ಡ ಅನುಕೂಲವೆಂದು ನಾನು ತಿಳಿದು ಕೊಂಡಿದ್ದೆ. ನಾನು ಅದರ ಎಷ್ಟು ಹೆಚ್ಚು ಉಪಯೋಗ ಪಡೆಯು ಬಹುದೋ ಅಷ್ಟನ್ನು ಪಡೆದುದಾಗಿತ್ತು.

ಯಾವುದೋ ಒಂದು ಕಾರಣದಿಂದ ನನ್ನ ಕೈಹೊತ್ತಗೆಯು "ಮಾನವ ವಿವೇಕದ ದೃಢತೆ" (The Infallibility of Human-Judgement) ಎಂಬ ಪುಸ್ತಕದ ಕರ್ತೃವಾದ ಲಿಯೋನ್ಸ್ ಎಂಬೊಬ್ಬ ಸರ್ಜನನ ಕೈಗೆ ಬಿತ್ತು. ಇದು ನಮ್ಮಿಬ್ಬರೊಳಗೆ ಗೆಳೆತನ ಕೂಡುವಂಥ ಪ್ರಸಂಗವನ್ನು ತಂದಿತು. ಅವನು ನನ್ನ ಬಗ್ಗೆ ಅಪಾರ ಆದರವನ್ನು ವ್ಯಕ್ತ ಪಡಿಸ ಹತ್ತಿದ್ದನು. ಆ ವಿಷಯಗಳ ಬಗ್ಗೆ ಸಂಭಾಷಣೆ ನಡೆಸಲು ನನ್ನಲ್ಲಿಗೆ ಆಗಾಗ ಬರುತ್ತಿದ್ದನು. ಚೀಪಸೈಡ್‌ದ ಲೇನಿನ 'ಹೋರ್ನ್ಸ' (Horns) ಎಂಬ ಒಂದು ಸಾಮಾನ್ಯ ಹೆಂಡದಂಗಡಿಗೆ ನನ್ನನ್ನು ಕರೆದೊಯ್ದು, ಅಲ್ಲಿ "ಜೇನುಗಳ ನೀತಿ ಕಥೆ" (Fable of the Bees) ಎಂಬ ಹೊತ್ತಗೆಯ ಲೇಖಕರಾದ ಡಾ। ಮೆಂಡೆವಿಲಿಯಂರವರಿಗೆ ನನ್ನನ್ನು ಪರಿಚಯ ಮಾಡಿಸಿ ದನು. ಇವರದೊಂದು ಕ್ಲಬ್ಬು ಅಲ್ಲಿತ್ತು. ಅಧರ ಜೀವವೇ ಅವರಾಗಿದ್ದರು. ಅಲ್ಲದೆ ಅವರೊಬ್ಬ ಭಾರೀ ಹಾಸ್ಯದ ವಿನೋದಯುಕ್ತ ಸಂಗಡಿಗರಾಗಿದ್ದರು. ಲಿಯೊನ್ಸರು ಕೂಡ "ಬೇಟಸನ್ಸ್ ಕಾಫಿಹೌಸಿ"ನಲ್ಲಿ ನನ್ನನ್ನು ಡಾ। ಪೆಂಬ ರ್ಟನರಿಗೆ ಪರಿಚಯ ಮಾಡಿಕೊಟ್ಟರು. ಇವರು ಸಹ ಸರ್, ಐಸಾಕ್ ನ್ಯೂ

ಟನ್ನರನ್ನು ನನಗೆ ಕಾಣುವ ಸಂದರ್ಭವನ್ನು ಒಮ್ಮೆಯಲ್ಲ ಒಮ್ಮೆ ಒದಗಿಸುವುದಾಗಿ ವಚನ ಕೊಟ್ಟಿದ್ದರು. ಈ ವಿಷಯದಲ್ಲಿ ನಾನು ಬಹಳ ಆತುರನಾಗಿದ್ದೆ. ಆದರೆ ಇದು ಮಾತ್ರ ನೆರವೇರಲಿಲ್ಲ.

ನಾನು ಕೆಲವು ವಿಚಿತ್ರ ವಸ್ತುಗಳನ್ನು ತಂದಿದ್ದೆನು. ಅವುಗಳಲ್ಲಿ ಕಲ್ನಾರಿನಿಂದ ತಯಾರಿಸಿದ ಒಂದು ಹಣದ ಚೀಲ (Purse) ಪ್ರಮುಖವಾಗಿತ್ತು. ಇದು ಬೆಂಕಿಯಿಂದ ಶುದ್ಧವಾಗುತ್ತಿತ್ತು. ಸರ್ ಹನ್ಸ್ಲೋನೆಯವರು ಇದರ ಬಗ್ಗೆ ಕೇಳಿಕೊಂಡು ನನ್ನನ್ನು ಕಾಣಲು ಬಂದರು. ಅಂತೇ ನನ್ನನ್ನು ಬ್ಲೂಮ್ಸುಚರಿ ಸ್ಕ್ವೇರಿನಲ್ಲಿರುವ ತಮ್ಮ ಮನೆಗೆ ಆಹ್ವಾನಿಸಿದರು. ಅಲ್ಲಿ ತಮ್ಮ ಎಲ್ಲಾ ವಿಚಿತ್ರ ವಸ್ತುಗಳನ್ನು ನನಗೆ ತೋರಿಸಿದರು. ಮತ್ತು ಅವುಗಳ ಸಂಖ್ಯೆಯನ್ನು ಹೆಚ್ಚಿಸಲು ಆ ಹಣದ ಚೀಲವನ್ನು ಕೊಡಬೇಕಾಗಿ ಕೇಳಿಕೊಂಡರು. ಸರಿ, ಆ ಬಗ್ಗೆ ಅವರು ನನಗೆ ಧಾರಾಳವಾಗಿ ಹಣಕೊಟ್ಟರು.

ನಮ್ಮ ಗೃಹದಲ್ಲಿ ಹೆಣ್ಣು ಮಕ್ಕಳ ಉಡುಗೆ–ತೊಡುಗೆಗಳ ವ್ಯವಹಾರ ಮಾಡುವ ಒಬ್ಬಳು ತರುಣಿ ವಾಸವಾಗಿದ್ದಳು. ಅವಳಿಗೊಂದು ಅಂಗಡಿಯು ಕ್ಲೋಯಿಸ್ಟರಿನಲ್ಲಿತ್ತು. ಅವಳು ಕರುಣೆಯಿಂದ ಬೆಳೆದು ಬಂದವಳು ಮತ್ತು ತಿಳುವಳಿಕೆಯುಳ್ಳವಳು, ಹಾಗೂ ಚುರುಕಾಗಿದ್ದಳು. ಅವಳ ಸಂಭಾಷಣೆಗಳು ಭಾರೀ ಉಲ್ಲಾಸದಾಯಕವಾಗಿದ್ದವು. ಸಾಯಂಕಾಲದ ಹೊತ್ತಿನಲ್ಲಿ ರಾಲ್ಫನು ಅವಳಿಗೆ ನಾಟಕಗಳನ್ನು ಓದಿ ಹೇಳುತ್ತಿದ್ದನು. ಅವರಿಬ್ಬರಲ್ಲಿ ಮಿತ್ರತ್ವ ಬೆಳೆಯಿತು. ಅವಳು ಮತ್ತೊಂದು ವಸತಿಯನ್ನು ಹೂಡಿದಳು. ಅವಳನ್ನು ಅವನೂ ಹಿಂಬಾಲಿಸಿದನು. ಕೆಲ ಕಾಲದ ತನಕ ಅವರಿಬ್ಬರೂ ಕೂಡಿ ವಾಸವಾಗಿದ್ದರು. ಆದರೆ ಅವನು ಇನ್ನೂ ನಿರುದ್ಯೋಗಿಯಾಗಿರುವುದರಿಂದ ಮತ್ತು ಅವಳ ಉತ್ಪನ್ನವು, ಅವರಿಬ್ಬರು ಮಗುವಿನ ಜೊತೆಗೆ ಜೀವಿಸಲು ಸಾಲದಾಗಿರಲು ಅವನು ಲಂಡನಿನಿಂದ ಹೊರಗೆ ಹೋಗುವ ನಿರ್ಧಾರಕ್ಕೆ ಬಂದನು. ಒಂದು ಹಳ್ಳಿಯ ಸಾಲೆಯಲ್ಲಿ ಕೆಲಸ ಸಾಧಿಸಿಕೊಳ್ಳಲು ಪ್ರಯತ್ನಿಸಲಿಕ್ಕೆ ಅವನು ಹೋಗುವವನಿದ್ದನು. ಅಂತೇ ಆ ವೃತ್ತಿ ಕೈಕೊಳ್ಳಲು ಅವನು ಒಳ್ಳೇ ಅರ್ಹತೆಯನ್ನು ಹೊಂದಿದ್ದನು. ಅವನ ಹಸ್ತಾಕ್ಷರಗಳು ಬಹಳ ಸುಂದರವಾಗಿದ್ದವು ಮತ್ತು ಗಣಿತದಲ್ಲಿ ಹಾಗೂ ಲೆಕ್ಕದಲ್ಲಿ ಅವನು ಪ್ರವೀಣನಾಗಿದ್ದನು. ಹೀಗಿದ್ದರೂ ಅವನು ಈ ಕೆಲಸವನ್ನು ತನ್ನ ಘನತೆಗಿಂತ ಚಿಕ್ಕದೆಂದು ಪರಿಗಣಿಸಿದ್ದನು. ಅಲ್ಲದೆ ಭಾವೀ ಐಶ್ವರ್ಯದ ಬಗ್ಗೆ ದೃಢವಾಗಿಯೂ ಇದ್ದನು. ಇಷ್ಟೊಂದು ಅಲ್ಪ

ಕೆಲಸಕ್ಕೆ ಅವನೊಮ್ಮೆ ಸೇರಿದ್ದಾನೆಂಬುದನ್ನು ತಿಳಿಯಗೊಡಲು ಅವನಿಗೆ ಮನಸ್ಸಿಲ್ಲದುದರಿಂದ ಅವನು ತನ್ನ ಹೆಸರನ್ನು ಬದಲಿಸಿದನು. ನನ್ನ ಹೆಸರನ್ನು ಇಟ್ಟುಕೊಂಡು ನನಗೊಂದು ಗೌರವ ತೋರಿಸಿದನು. ಯಾಕೆಂದರೆ ಕೆಲವೇ ದಿವಸಗಳಲ್ಲಿ ಅವನು ನನಗೆ ಬರೆದ ಪತ್ರದಲ್ಲಿ ತಾನು ಒಂದು ಚಿಕ್ಕ ಹಳ್ಳಿಯಲ್ಲಿ (ಬರ್ಕಷಾಯರಿನಲ್ಲಿ-ಇಲ್ಲಿಯೇ ಅವನು ವಾರಕ್ಕೆ ಆರು ಪೆನ್ನಿಗಳ ಮೇಲೆ ಹತ್ತೋ ಅಥವಾ ಹನ್ನೆರಡೊ ಹುಡುಗರಿಗೆ ಓದು—ಬರೆಹ ಹೇಳಿಕೊಡುತ್ತಿದ್ದನೆಂದು ನನಗೆನಿಸುತ್ತದೆ) ನೆಲೆಸಿದ್ದೇನೆ, ಮಿಸೆಸ್ ಟಿ—ಯನ್ನು ನನ್ನ ದೇಖರೇಖಿ ನೋಡಿಕೊಳ್ಳಲು ಶಿಫಾರಸು ಮಾಡಿ, ನಾನು ಅವನಿಗೆ 'ಮಿಸ್ಟರ್ ಫ್ರ್ಯಾಂಕ್ಲಿನ್ ಸ್ಕೂಲ್ ಮಾಸ್ಟರ್'—ಇಂಥ ವಿಳಾಸಕ್ಕೆ ಪತ್ರ ಹಾಕಬೇಕೆಂದು ಇಚ್ಛಿಸಿದ್ದನು.

ಅವನು ಆಗಾಗ ನನಗೆ ಬರೆಯುತ್ತಾ ಇದ್ದನು. ಅವನು ಆಗ ನಿರ್ಮಿಸುತ್ತಿದ್ದ ಒಂದು ಪುರಾಣ ಕಾವ್ಯದ ದೊಡ್ಡ-ದೊಡ್ಡ ಮಾದರಿಪ್ರತಿಗಳನ್ನು ನನ್ನ ಸಲಹೆ-ಸೂಚನೆ ಹಾಗೂ ತಿದ್ದುಪಡಿಗಳಿಗೆ ನನಗೆ ಕಳುಹಿಸುತ್ತಿದ್ದನು. ಇವುಗಳನ್ನು ನಾನು ಅವನಿಗೆ ಕಾಲ-ಕಾಲಕ್ಕೆ ಕಳುಹಿಸುತ್ತಿದ್ದೆನು. ಆದರೆ ಅವನ ಈ ವ್ಯವಹಾರವನ್ನು ನಿಲ್ಲಿಸುವಂತೆ ನಾನು ಪ್ರಯತ್ನಿಸಿದ್ದುಂಟು. ಅದೇ ಆಗ ಯಂಗನ ಹಾಸ್ಯೋಕ್ತಿಗಳ ಗ್ರಂಥವೊಂದು ಪ್ರಕಟವಾಗಿತ್ತು. ಅದರ ಹೆಚ್ಚಿನ ಭಾಗವನ್ನೆಲ್ಲ ಪ್ರತಿಮಾಡಿ ನಾನು ಅವನಿಗೆ ಕಳುಹಿಸಿದ್ದೆನು. ಯಾವ ಧೈರ್ಯದಿಂದಲೂ ಮುಂದುವರೆಯಲಾರದ ಕಾವ್ಯದೇವತೆಯನ್ನು ಆರಾಧಿಸುವ ಮೂರ್ಖತನವನ್ನು ಬಹಳ ಚೆನ್ನಾಗಿ ಅದರಲ್ಲಿ ಬಯಲಿಗೆಳೆಯಲಾಗಿತ್ತು. ಎಲ್ಲವೂ ನಿರರ್ಥಕವಾಯಿತು. ಪದ್ಯದ ಕಾಗದಗಳು ಪ್ರತಿ ಟಪ್ಪಾಲಿಗೂ ಬರತೊಡಗಿದವು. ಇದೇ ಹೊತ್ತಿನಲ್ಲಿ ಅವನ ಮೂಲಕ ಮಿಸೆಸ್ ಟಿ—ಯು ಅವಳ ಮಿತ್ರರನ್ನು ಮತ್ತು ವ್ಯವಹಾರವನ್ನು ಕಳೆದುಕೊಂಡಳು. ಆಗಾಗ ತೊಂದರೆ ಪಡುತ್ತಲೂ ಇದ್ದಳು. ನನ್ನನ್ನು ಕರೆಕಳುಹಿಸುತ್ತಿದ್ದಳು. ನನ್ನ ಕೈಯಿಂದ ಉಳಿಸಲು ಸಾಧ್ಯವಾದಷ್ಟು ಹಣವನ್ನು ಅವಳು ಸಾಲವಾಗಿ ಪಡೆಯುತ್ತಿದ್ದಳು. ಹೀಗೆ ಅವಳಿಗೆ ನಾನು ಸಹಕರಿಸಬೇಕಾಗಿತ್ತು. ಅವಳ ಗೆಳೆತನವು ನನಗೆ ಬಹಳ ಹಿಡಿಸಿತು. ಅಲ್ಲದೆ ಆ ಕಾಲದಲ್ಲಿ ಯಾವ ಧಾರ್ಮಿಕ ನಿರ್ಬಂಧನೆಗೆ ಒಳಗಾಗದೆ ಇರುವುದರಿಂದ ಮತ್ತು ಅವಳಿಗೆ ನನ್ನ ಬಗ್ಗೆ ಇರುವ ಮಹತ್ವವನ್ನು ಲೆಕ್ಕಹಾಕಿ ನಾನು ಸಲುಗೆಯನ್ನು ಹೆಚ್ಚಿಸಹತ್ತಿದೆನು (ಇನ್ನೊಂದು ತಪ್ಪು ಹೆಜ್ಜೆ). ಆದರೆ ಅವಳು ಇದನ್ನು ಯೋಗ್ಯವಾದ ತಿರಸ್ಕಾರದಿಂದ

ದೂರ ತಳ್ಳುತ್ತಿದ್ದಳು. ನನ್ನ ಈ ನಡತೆಯನ್ನು ಅವಳು ಅವನಿಗೆ ತಿಳಿಯ ಪಡಿಸಿದಳು. ಇದು ನಮ್ಮಿಬ್ಬರ ಸ್ನೇಹವನ್ನು ಒಡೆಯಲಿಕ್ಕೆ ಕಾರಣವಾಯಿತು. ಹೀಗೆ ಅವನು ಮತ್ತೊಮ್ಮೆ ಲಂಡನಿಗೆ ಮರಳಿದಾಗ ನನಗೆ ನಿಯಮಿಸಿದ್ದ, ನಾನು ಮಾಡಬೇಕಾಗಿದ್ದ ಉಪಕಾರಗಳನ್ನೆಲ್ಲ ರದ್ದುಮಾಡಿದ್ದೇನೆಂದು ತಾನು ತಿಳಿದುಕೊಂಡಿದ್ದೇನೆಂಬುದನ್ನು ನನಗೆ ಗೊತ್ತುಪಡಿಸಿದನು. ಆದುದರಿಂದ ನಾನು ಅವನಿಗೆ ಸಾಲವಾಗಿ ಕೊಟ್ಟ ಅಥವಾ ಅವನಿಗಾಗಿ ಕೊಟ್ಟ ಹಣವನ್ನು ತಿರುಗಿ ಪಡೆದುಕೊಳ್ಳುವುದು ಅಸಂಭವವೆಂದು ನನಗೆ ಕಂಡಿತು. ಏನಿದ್ದರೂ ಇದು ಆಗ ಅವನು ಸಂಪೂರ್ಣ ಅಸಮರ್ಥನಾ ಗಿರುವುದರಿಂದ ನನಗೆ ಹೆಚ್ಚಿನ ಪರಿಣಾಮದ್ದೆಂದು ಅನಿಸಲಿಲ್ಲ. ಅಂತೇ ಅವನ ಗೆಳೆತನವನ್ನು ಕಳೆದುಕೊಂಡುದರಿಂದ ನನ್ನ ತಲೆಯ ಮೇಲಿಂದ ದೊಡ್ಡ ಭಾರ ಇಳಿಸಿದಂತಾಯಿತು. ಈಗ ನಾನು ತುಸು ಹಣವನ್ನು ಮುಂಗಡವಾಗಿ ಪಡೆದುಕೊಳ್ಳುವುದಕ್ಕೆ ಯೋಚಿಸತೊಡಗಿದೆನು. ಮತ್ತು ಉತ್ತಮ ಕೆಲಸವನ್ನು ಅಪೇಕ್ಷಿಸಿ ನಾನು ಪಾಮರ್ ಅವರಲ್ಲಿ ಬಿಟ್ಟು ಅದಕ್ಕೂ ದೊಡ್ಡ ಮುದ್ರಣಾಲಯದಲ್ಲಿ—ಲಿಂಕನ್ಸ ಇನ್‌ಫೀಲ್ಡ್ಸದ ಹತ್ತಿರದ ವಾಟ್ಸ್ ಅವರಲ್ಲಿ—ಕೆಲಸಕ್ಕೆ ಹೋದೆನು. ಇಲ್ಲಿ ನಾನು ಮಿಕ್ಕ ನನ್ನ ಲಂಡನಿನ ವಾಸ್ತವ್ಯದ ಕಾಲವನ್ನೆಲ್ಲ ಕಳೆದನು.

ಈ ಮುದ್ರಣಾಲಯದಲ್ಲಿ ನಾನು ಮೊದಲಿಗೆ ಸೇರಿದೊಡನೆ ಪ್ರೆಸ್ಸಿನಲ್ಲಿ ಕೆಲಸಕ್ಕೆ ತೊಡಗಿದೆನು. ಯಾಕೆಂದರೆ ಅಮೆರಿಕಾದಲ್ಲಿಯ ಹಾಗೆ ನನಗೆ ಶಾರೀರಕ ವ್ಯಾಯಾಮದ ಅಗತ್ಯವಿದೆಯೆಂದು ಅನಿಸಿತು. ಅಲ್ಲಿ ಪ್ರೆಸ್ಸಿನ ಕೆಲಸದಲ್ಲಿ ಕಂಪೋಸು ಮಾಡುವುದೂ ಕೂಡಿರುತ್ತದೆ. ನಾನು ಕೇವಲ ನೀರು ಕುಡಿಯುತ್ತಿದ್ದೆ. ಮಿಕ್ಕ ಸುಮಾರು ನೂರು ಕೆಲಸಗಾರರು ಬೀರ್ ಕುಡಿಯುವ ರಾಕ್ಷಸರಾಗಿದ್ದರು. ಸಂದರ್ಭ ಒದಗಿದಾಗ ನಾನು ಪ್ರತಿ ಯೊಂದು ಕೈಯಲ್ಲಿ ದೊಡ್ಡ ದೊಡ್ಡ ಫಾರ್ಮುಗಳ ಟೈಪುಗಳನ್ನು ಹಿಡಿದು ಕೊಂಡು ಮೆಟ್ಟಲುಗಳ ಮೇಲೆ-ಕೆಳಗೆ ಹೋಗುತ್ತಿದ್ದೆನು. ಆಗ ಮಿಕ್ಕವರು ಮಾತ್ರ ಎರಡೂ ಕೈಯಲ್ಲಿ ಒಂದೇ ಹಿಡಿದುಕೊಂಡು ಹೋಗುತ್ತಿದ್ದರು. ಇದರಿಂದ ಮತ್ತು ಮಿಕ್ಕ ಪ್ರಸಂಗಗಳಿಂದ ಅವರು ಈ ವಾಟರ್ ಅಮೆರಿಕನ್—ಅವರು ನನ್ನನ್ನು ಹೀಗೆ ಕರೆಯುತ್ತಿದ್ದರು—ಖಡಕ್ ಬೀರ್ ಕುಡಿಯುತ್ತಿರುವ ತಮಗಿಂತ ಹೆಚ್ಚು ಬಲಶಾಲಿಯಾಗಿರುವುದನ್ನು ನೋಡಿ ಬೆಕ್ಕಸ ಬೆರಗಾಗುತ್ತಿದ್ದರು! ಕೆಲಸಗಾರರಿಗೆ ಅದರ ಸರಬರಾಯಿ ಮಾಡಲು ನಮ್ಮಲ್ಲಿ ಯಾವಾಗಲೂ ಒಬ್ಬ ಗಡಂಗಿನ ಹುಡುಗನಿರುತ್ತಿದ್ದನು. ಪ್ರೆಸ್ಸಿನ ನನ್ನ

ಸಂಗಡಿಗನು ದಿನಾಲೂ ಉಪಾಹಾರದ ಮೊದಲು ಒಂದು ಪಿಂಟ್, ಬೆಳಗ್ಗಿನ
ಉಪಹಾರದ ಬ್ರೆಡ್ ಮತ್ತು ಗಿಣ್ಣಿನೊಡನೆ ಒಂದು ಪಿಂಟ್, ಒಂದುಪಿಂಟ್
ಉಪಾಹಾರ ಹಾಗೂ ಮಧ್ಯಾಹ್ನದ ಊಟದ ನಡುವೆ, ಮಧ್ಯಾಹ್ನದ
ಊಟಕ್ಕೆ ಒಂದು ಪಿಂಟ್, ಮಧ್ಯಾಹ್ನದ ಮೇಲೆ ಸುಮಾರು ಆರು
ಗಂಟೆಯ ಹೊತ್ತಿಗೆ ಒಂದು ಪಿಂಟ್ ಮತ್ತು ಇನ್ನೊಂದು ಪಿಂಟ್ ತನ್ನ
ದಿನದ ಕೆಲಸ ಮುಗಿದೊಡನೆ ಕುಡಿಯುತ್ತಿದ್ದನು. ಅದು ಹೇಯವಾದ
ಪದ್ಧತಿಯೆಂದು ನಾನು ಬಗೆದಿದ್ದೆನು. ಆದರೆ ಖಡಕ್ಕಾದ (Strong)
ಬೀರನ್ನು ಕಷ್ಟದ ಕೆಲಸಕ್ಕೆ ಕುಡಿಯುವುದು ಅಗತ್ಯವೆಂದು ಅವನು
ತಿಳಿದುಕೊಂಡಿದ್ದನು. ಬೀರಿನಿಂದ ದೊರೆಯಬಹುದಾದ ಶಕ್ತಿಯು
ಅದನ್ನು ತಯಾರಿಸುವ ನೀರಿನಲ್ಲಿ ಕರಗಿರುವ ಕಾಳಿನ ಅಥವಾ
ಬಾರ್ಲಿಯ ಹಿಟ್ಟಿಗೆ ಅನುಗುಣವಾಗಿರುತ್ತದೆಂಬುದನ್ನು ನಾನು ಅವನಿಗೆ
ಮನವರಿಕೆ ಮಾಡಲು ಪ್ರಯತ್ನಿಸಿದ್ದೆನು. ಒಂದು ಪೆನ್ನಿಯ ಬ್ರೆಡ್ಡಿನಲ್ಲಿ
ಹೆಚ್ಚು ಹಿಟ್ಟಿದೆ. ಆದುದರಿಂದ ಅವನು ಅದನ್ನು ಒಂದು ಪಿಂಟ್ ನೀರಿ
ನೊಡನೆ ತಿಂದರೆ ಅದು ಅವನಿಗೆ ಒಂದು ಕ್ವಾರ್ಟ್ ಬೀರಿಗಿಂತ ಹೆಚ್ಚಿನ
ಶಕ್ತಿಯನ್ನು ಕೊಡುತ್ತದೆಂದು ಹೇಳಿದೆನು. ಏನಿದ್ದರೂ ಅವನು ಕುಡಿದೇ
ಕುಡಿಯುತ್ತಿದ್ದ. ಪ್ರತಿ ಶನಿವಾರ ರಾತ್ರಿ ತನ್ನ ಸಂಬಳದಿಂದ ನಾಲ್ಕು
ಅಥವಾ ಐದು ಶಿಲ್ಲಿಂಗುಗಳನ್ನು ಆ ಬುರುಗಿಸಿದ ಮದ್ಯಕ್ಕೆ ಕೊಡಬೇಕಾಗು
ತ್ತಿತ್ತು. ಈ ಖರ್ಚಿನಿಂದ ನಾನು ಬಲುದೂರವಾಗಿದ್ದೆನು. ಹೀಗೆ ಈ ಬಡ
ಪ್ರೇತಗಳು ಯಾವಾಗಲೂ ತಮ್ಮ ಕೀಳು ಬಾಳನ್ನು ಸಾಗಿಸುತ್ತಾರೆ.

ಕೆಲವು ವಾರಗಳ ತರುವಾಯ ವಾಟ್ಸನು ನನ್ನನ್ನು ಕಂಪೋಸ್
ಕೋಣೆಗೆ ಸೇರಲು ಅಪೇಕ್ಷಿಸಿದನು. ಕಾರಣ ನಾನು ಪ್ರೆಸ್ಸಿನವರನ್ನು
ಬಿಟ್ಟು ಹೋಗಬೇಕಾಯಿತು. ಕಂಪೋಸಿಟರುಗಳು ನನ್ನಿಂದ ಐದು
ಶಿಲ್ಲಿಂಗಿನ ಕುಡಿತದ ಖುಷಿಯನ್ನು ಯಾಚಿಸಿದರು. ಇದು ನನಗೆ ಭಾರವೆಂದು
ಅನಿಸಿತು, ಯಾಕಂದರೆ ನನಗೆ ಬಹಳ ಕಡಿಮೆ ಸಂಬಳ ಸಿಗುತ್ತಿತ್ತು.
ಒಡೆಯರು ಕೂಡಾ ಹಾಗೆ ಬಗೆದು ನಾನು ಅದನ್ನು ಕೊಡದಂತೆ ಮಾಡಿ
ದರು. ಎರಡು ಮೂರುವಾರಗಳ ತನಕ ನಾನು ಹೊರಗೆ ನಿಲ್ಲಬೇಕಾಗಿ
ಬಂದಿತು. ಹೀಗೆ ನಾನೊಬ್ಬ ಬಹಿಷ್ಕೃತ ಜೀವಿಯಾಗಿ ಪರಿಗಣಿಸಲ್ಪಟ್ಟೆನು.
ನನಗೆ ಅನೇಕ ಖಾಸಗಿ ಕಿರುಕುಳಗಳು ನಡೆದುವು. ನನ್ನ ಸೋರ್ಟ್
(Sorts)ಗಳನ್ನು ಒಟ್ಟುಮಾಡುವುದು, ನನ್ನ ಪೇಜುಗಳ ಕ್ರಮ ಬದಲಿಸು
ವುದು, ನನ್ನ ಅಚ್ಚು ಹಾಕಲಿರುವ ವಿಷಯಗಳನ್ನು ಹಾಳುಮಾಡುವುದು-

ಮೊದಲಾದ ಅನೇಕ ಕಿರುಕುಳಗಳು ನಾನು ಸ್ವಲ್ಪ ಕೋಣೆಯಿಂದ ಹೊರಗೆ ಹೋದೊಡನೆ ನಡೆಯುತ್ತಿದ್ದವು. ಇದರ ದೂರು ಮಾತ್ರ ಪ್ರೆಸ್ಸಿನ ದೆವ್ವದ ಮೇಲೆ ಬೀಳುತ್ತಿತ್ತು. ಅಂತೇ ನಿಯಮಿತವಾಗಿ ಪ್ರವೇಶ ಮಾಡದವರ ಮೇಲೆ ಅದು ಧಾಳಿಮಾಡುತ್ತದೆಂದು ಅವರು ಹೇಳುತ್ತಿದ್ದರು. ಒಡೆಯರ ರಕ್ಷಣೆಯಿದ್ದರೂ ಕೂಡ ನಾನು ಅವರೊಡನೆ ಹೊಂದಿಕೊಂಡು ಹಣ ಗೊಡುವ ಕೃಪೆ ಮಾಡಬೇಕಾಯಿತು. ಒಬ್ಬನು ಸಂಗಡಿಗರೊಡನೆ ಸದಾ ದಿನ ತೆಗೆಯುವಾಗ ಅತೃಪ್ತಿಯಿಂದ ನಡೆದರೆ ಆಗುವ ಮೂರ್ಖತನವೇ ನೆಂಬುದು ನನಗೆ ಮನವರಿಕೆಯಾಯಿತು.

ಈಗ ಮಾತ್ರ ನಾನು ಅವರೊಡನೆ ಒಳ್ಳೆಯ ರೀತಿಯಿಂದ ನಡೆದು ಕೊಳ್ಳುತ್ತಿದ್ದೇನೆ ಮತ್ತು ಬೇಗನೆ ಸಾಕಷ್ಟು ವರ್ಚಸ್ಸನ್ನು ಗಳಿಸಿದ್ದೆನು. ಅಂತೇ ನಾನು ಅವರ ಚರ್ಚಿನ ಕಾಯಿದೆಗಳಲ್ಲಿ (chappel laws)* ಕೆಲವೊಂದು ಬದಲಾವಣೆಗಳನ್ನು ಮಂಡಿಸಿದೆನು ಮತ್ತು ಯಾವ ವಿರೋಧ ವನ್ನೂ ಲೆಕ್ಕಿಸದೆ ಅವುಗಳನ್ನು ನಡೆಸಿಕೊಂಡು ಹೋದುದಾಯಿತು. ನನ್ನ ಉದಾಹರಣೆಯಿಂದ ಅವರಲ್ಲಿ ಹೆಚ್ಚಿನ ಭಾಗದವರೆಲ್ಲ ತಮ್ಮ ಗೊಂದಲದ ಬೀರಿನ ಉಪಹಾರವನ್ನು ಬಿಟ್ಟರು. ನೆರೆಮನೆಯಿಂದ ಬ್ರೆಡ್ ಗಿಣ್ಣು ಹಾಗೂ ಒಂದು ದೊಡ್ಡ ಬಟ್ಟಲಿನ ಕುದಿಯುವ ಅಂಬಲಿ— ಮೆಣಸು ಸಿಂಪಡಿಸಿದ್ದು ಮತ್ತು ಬ್ರೆಡ್ಡಿನ ತುಂಡು ಹಾಕಿದ್ದು —ಹಾಗೂ ಒಂದು ಸ್ವಲ್ಪ

* "ಕೆಲಸಗಾರರಿಂದ ಮುದ್ರಣಾಲಯವು ಯಾವಾಗಲೂ ಚರ್ಚ್ (chappel) ಎಂದು ಕರೆಯಲ್ಪಡುತ್ತಿತ್ತು. ಇದರ ಮೂಲವು ಬಹುಶಃ ಮೊಟ್ಟ ಮೊದಲಿಗೆ ಇಂಗ್ಲೆಂಡಿನಲ್ಲಿ ಒಂದು ಹಳೆಯ ಚರ್ಚನ್ನು ಮುದ್ರಣಾಲಯವಾಗಿ ಪರಿವರ್ತಿಸಿದುದರಿಂದ ಬಂದಿರಬೇಕು. ಅಂತೇ ಆ ಹೆಸರು ಪರಂಪರೆಯಿಂದ ಉಳಿದುಕೊಂಡಿರಬೇಕು. ಯಾಂತ್ರಿಕ ಕೆಲಸಗಾರರಲ್ಲಿ ಕೆಲಸಕ್ಕೆ ಸೇರುವ ಹಾಗೂ ನೆಲೆಗೊಳ್ಳುವ ಕರಾರುಗಳಲ್ಲಿದ್ದ 'ಕುಡಿಯುವ ಖುಷಿ'ಯು ಮುದ್ರಕರಲ್ಲಿಯೂ ಬಂದಿರಬೇಕೆಂದು ಹೇಳಬಹುದು. ಹೀಗೆ ಸ್ವಲ್ಪ ಸಂಚಾರಿ ಉದ್ಯೋಗಿಯು ಮುದ್ರಣಾಲಯವನ್ನು ಪ್ರವೇಶಿಸುವ ಹೊತ್ತಿಗೆ ಚರ್ಚಿನ ಒಳಿತಿಗಾಗಿ ಒಂದು ಅಥವಾ ಹೆಚ್ಚಿನ ಗ್ಯಾಲನ್ ಬೀರಿಗೆ ಹಣ ಕೊಡುವ ಸಂಪ್ರದಾಯವಿತ್ತು. ಈ ಸಂಪ್ರದಾಯ ಮೂವತ್ತು ವರುಷಗಳ ಹಿಂದಿನಿಂದ ರೂಢಿಬಾಹಿರವಾಗಿ ಹೋಗಿರು ತ್ತದೆ. ಇದನ್ನು ಯುನೈಟೆಡ್ ಸ್ಟೇಟ್ಸ್‌ನಲ್ಲಿ ಬಹಳ ಯೋಗ್ಯವಾಗಿ ಸಂಪೂರ್ಣ ತ್ಯಜಿಸಿದ್ದಾಗಿದೆ".—ಡಬ್ಲ್ಯು.ಟಿ.ಎಫ್.

ಬೆಣ್ಣೆ ಹಾಕಿದ್ದು—ಅವರಿಗೆ ನನ್ನ ಮೂಲಕ ಒಂದು ಪಿಂಟ್ ಬೀರಿನ ಕ್ರಯಕ್ಕೆ—ಅಂದರೆ ಮೂರು ಅರ್ಧ-ಪೆನ್ನಿಗೆ ಸಿಗುವುದಕ್ಕೆ ಹತ್ತಿತು. ಇದು ಹೆಚ್ಚು ಸುಖದಾಯಕವಾದ ಹಾಗೂ ಬಹಳ ಅಗ್ಗದ ಉಪಾಹಾರವಾಗಿತ್ತು ಮತ್ತು ಅವರ ತಲೆಯನ್ನು ಸ್ವಚ್ಛವಾಗಿ ಇಡುತ್ತಿತ್ತು. ಇತ್ತ ದಿನವಿಡೀ ಬೀರಿನ ಸೀಸೆಗಳೊಡನೆ ಸ್ಪರ್ಧೆ ನಡೆಸುತ್ತಿದ್ದವರು ಆಗಾಗ ಗಡಂಗಿಗೆ ಸಾಲ ಮಾಡಿ ಹಣ ಕೊಡುವುದನ್ನು ನಿಲ್ಲಿಸಿ, ಬೀರ್ ದೊರಕಿಸಲು ನನ್ನ ವರ್ಚಸ್ಸನ್ನು ಉಪಯೋಗಿಸುತ್ತಿದ್ದರು. ಯಾಕೆಂದರೆ ಅವರ ದೀಪವು ನಂದಿ ಹೋಗಿತ್ತೆಂದು ಅವರು ಅದಕ್ಕೆ ತಮ್ಮ ಮಾತಿನಲ್ಲಿ ಹೇಳುತ್ತಿದ್ದರು. ಶನಿವಾರದ ದಿನ ರಾತ್ರಿ ನಾನು ಸಂಬಳದ ಮೇಜಿನ ಹತ್ತಿರ ಕಾದು ಕುಳಿತುಕೊಂಡು ಅವರ ಪರವಾಗಿ ಜಾಮೀನು ನಿಂತು ಹಣವನ್ನ ಕೂಡಿಸುತ್ತಿದ್ದೆ. ಕೆಲವೊಮ್ಮೆ ಅವರ ಲೆಕ್ಕಕ್ಕೆ ಒಂದು ವಾರಕ್ಕೆ ಸುಮಾರು ಮೂವತ್ತು ಶಿಲ್ಲಿಂಗುಗಳನ್ನು ತೆರಬೇಕಾಗುತ್ತಿತ್ತು. ಇದರಿಂದ ನಾನೊಬ್ಬ ಸಮರ್ಥ ಶಾಬ್ದಿಕ ವಿಡಂಬನಗಾರನೆಂದು ಹೆಸರಾದುದರಿಂದ ಸಮಾಜದಲ್ಲಿ ನನ್ನ ವರ್ಚಸ್ಸನ್ನು ಬಲಗೊಳಿಸಿತು. ನನ್ನ ಸತತ ಹಾಜರಿಯಿಂದಾಗಿ (ನಾನು ಎಂದೂ ಸೋಮವಾರದ ವ್ರತವನ್ನು ಆಚರಿಸುತ್ತಿದ್ದಿಲ್ಲ) ನಾನು ಒಡೆಯನಿಗೆ ಮೆಚ್ಚಾದೆ ಕಂಪೋಸ್ ಮಾಡುವುದರಲ್ಲಿ ನನ್ನ ಅಸ್ಸಾಧೃಶವಾದ ಕಂಪೋಸು ಚುರುಕಿನಿಂದಾಗಿ ನಾನು ಆತುರದ ಕೆಲಸಗಳನ್ನು ಮಾಡಲು ಹೋಗುವ ಪ್ರಸಂಗ ಬಂತು. ಸಾಮಾನ್ಯವಾಗಿ ಇದಕ್ಕೆ ಉತ್ತಮ ಸಂಬಳ ಕೊಡಲಾಗುತ್ತಿತ್ತು. ಆದುದರಿಂದ ಈಗ ನಾನು ಯೋಗ್ಯ ರೀತಿಯಿಂದ ದಿನ ಕಳೆಯಹತ್ತಿದೆನು.

ಲಿಟ್ಲ್ ಬ್ರಿಟನಿನ ನನ್ನ ವಸತಿಯು ತೀರಾ ಮೂಲೆಯಲ್ಲಿದ್ದುದರಿಂದ ರೋಮಿಷ್ ಚಪಲಿನ ಎದುರುಗಡೆಯಲ್ಲಿ ಡ್ಯೂಕ್ ಸ್ಟ್ರೀಟಿನಲ್ಲಿ ಇನ್ನೊಂದು ವಸತಿಯನ್ನು ದೊರಕಿಸಿಕೊಂಡೆನು. ಇದು ಇಟಾಲಿಯನ್ ಬಂಡಸಾಲೆಯೊಂದರ ಎರಡು ಜೊತೆ ಮೆಟ್ಟಲು – ಸಾಲುಗಳ ಹಿಂದುಗಡೆಯಲ್ಲಿತ್ತು. ಒಬ್ಬಳು ವಿಧವೆ ಹೆಣ್ಣುಮಗಳು ಆ ಮನೆಯನ್ನು ನಡೆಸುತ್ತಿದ್ದಳು. ಅವಳಿಗೊಬ್ಬಳು ಮಗಳು ಮತ್ತು ಒಂದು ಹೆಣ್ಣಾಳು ಇದ್ದರು. ಒಬ್ಬ ಸಂಚಾರಿ ಕೆಲಸಗಾರನು ಆ ಬಂಡಸಾಲೆಯನ್ನು ನೋಡಿಕೊಳ್ಳುತ್ತಿದ್ದನು. ಆದರೆ ಅವನ ವಾಸ್ತವ್ಯ ಮಾತ್ರ ಬೇರೆ ಕಡೆಯಲ್ಲಿತ್ತು. ನಾನು ಈ ಹಿಂಧಕ್ಕೆ ವಾಸವಾಗಿದ್ದ ಮನೆಗೆ ನನ್ನ ನಡತೆಯನ್ನು ತಿಳಿದುಕೊಳ್ಳಲು ಒಬ್ಬನನ್ನು ಕಳುಹಿಸಿದಮೇಲೆ ಅವಳು ನನಗೆ ಪ್ರತಿವಾರಕ್ಕೆ ಅದೇ ಬಾಡಿಗೆಗೆ—ಮೂರು

ಶಿಲ್ಲಿಂಗ್ ಆರು ಪೆನ್ನಿಗೆ—ಅಲ್ಲಿ ವಸತಿಯನ್ನು ಕೊಡಲು ಒಪ್ಪಿದಳು. ಆ ಮನೆಯಲ್ಲಿ ವಸತಿಯಿದ್ದವರಿಂದ ಅವರ ಕಾವಲನ್ನೂ ಅಪೇಕ್ಷಿಸಿದುದರಿಂದ ಅಷ್ಟು ಅಗ್ಗಕ್ಕೆ ಮನೆ ಕೊಟ್ಟಿದ್ದೇನೆಂದು ಅವಳು ಹೇಳಿದಳು. ಅವಳು ವಿಧವೆ, ದೊಡ್ಡ ಹೆಣ್ಣುಮಗಳು, ಧರ್ಮಾಧಿಕಾರಿಯ ಮಗಳಾದುದರಿಂದ ಪ್ರೊಟೆಸ್ಟೆಂಟಳಾಗಿ ಬೆಳೆದವಳು. ಆದರೆ ಅವಳ ಗಂಡನಿಂದ ಕೆಥೋಲಿಕ್ ಪಂಥಕ್ಕೆ ಪರಿವರ್ತಿಸಲ್ಪಟ್ಟಿದ್ದಳು. ಅವನನ್ನೂ ಬಹಳ ಗೌರವವಾಗಿ ಸ್ಮರಿಸುತ್ತಿದ್ದಳು. ಒಳ್ಳೆಯ ವರ್ಚಸ್ಸಿನ ಜನರೊಡನೆ ಜೀವಿಸುತ್ತಿದ್ದಳು. ಅವರ ಬಗ್ಗೆ ಸಾವಿರಾರು ಉಪಕಥೆಗಳನ್ನು, ಎರಡನೆಯ ಚಾರ್ಲ್ಸನ ಕಾಲದಷ್ಟು ಹಿಂದಿನವುಗಳನ್ನು ಅರಿತಿದ್ದಳು. ದೇಹದ ಗಂಟುಗಳಲ್ಲಿ (gout) ಉಂಟಾಗುವ ನೋವಿನಿಂದಾಗಿ ಅವಳ ಮೊಣಕಾಲುಗಳು ಕುಂಟಾಗಿದ್ದವು. ಆದುದರಿಂದ ಅವಳು ಕೋಣೆಯ ಹೊರಗೆ ಬಹಳ ಕ್ವಚಿತ್ತಾಗಿ ನುಸುಳುತ್ತಿದ್ದಳು. ಕೆಲವೊಮ್ಮೆ ಸಂಗಾತಿಗಳನ್ನು ಬಯಸುತ್ತಿದ್ದಳು. ಅವಳ ಜೊತೆಯಲ್ಲಿರಲು ನನಗೆ ತುಂಬ ಆನಂದವಾಗುತ್ತಿತ್ತು. ಅವಳ ಮನಸ್ಸಿಗೆ ಬೇಕೆಂದೆನಿಸಿದಾಗ ನಾನು ಅವಳಿಗಾಗಿ ಒಂದು ಸಂಜೆಯನ್ನು ಕಳೆಯುವುದು ಖಂಡಿತವಾಗಿತ್ತು. ನಮ್ಮ ರಾತ್ರಿಯೂಟವೆಂದರೆ ಕೇವಲ ಅರ್ಧ ಎಂಕೊವಿ (anchovy) ಮೀನು ಒಬ್ಬೊಬ್ಬರಿಗೆ, ತೀರ ಚಿಕ್ಕ ಬ್ರೆಡ್ಡಿನ ತುಂಡು ಮತ್ತು ಬೆಣ್ಣೆ ಮತ್ತು ಇಬ್ಬರಿಗೂ ಅರ್ಧ ಪಿಂಟ್ ಸೆರ ಇಷ್ಟೆ. ಆದರೆ ವಿನೋದ ಮಾತ್ರ ಅವಳ ಸಂಭಾಷಣೆಯಲ್ಲಿರುತ್ತಿತ್ತು. ನಾನು ಯಾವಾಗಲೂ ನಿಯಮಿತ ಸಮಯವನ್ನು ಎಲ್ಲದಕ್ಕೂ ಇಟ್ಟುಕೊಂಡುದರಿಂದ ಮತ್ತು ಅವರ ಮನೆಯವರಿಗೆ ಯಾವ ತೊಂದರೆಯನ್ನು ಕೊಡದಿರುವುದರಿಂದ ನನ್ನನ್ನು ಬಿಡಲಿಕ್ಕೆ ಅವಳಿಗೆ ಅಪೇಕ್ಷೆಯಿಲ್ಲದಂತಾಯಿತು. ಕಾರಣ, ನನಗೆ ತಿಳಿದುಬಂದ, ನನ್ನ ಕೆಲಸದ ಹತ್ತಿರವೇ ವಾರಕ್ಕೆ ಎರಡು ಶಿಲ್ಲಿಂಗ್ ಬಾಡಿಗೆಯಿರುವ, ವಾಸ್ತವ್ಯದ ಕುರಿತು ಅವಳೊಡನೆ ಪ್ರಸ್ತಾಪವೆತ್ತಿದಾಗ ಅವಳು ಅಸಮ್ಮತಿಯನ್ನು ಸೂಚಿಸಿದಳು. ಅಲ್ಲದೆ ನಾನೀಗ ಉದ್ದೇಶಪೂರ್ವಕ ಹಣ ಉಳಿಸಲು ಪ್ರಯತ್ನಿಸುತಿದ್ದೆನು. ಆದರೆ ಇನ್ನು ಮುಂದಕ್ಕೆ ಅವಳೂ ನನಗೆ ವಾರಕ್ಕೆ ಎರಡು ಶಿಲ್ಲಿಂಗ್ ಬಾಡಿಗೆ ಕಡಿಮೆಮಾಡುತ್ತೇನೆಂದು ಹೇಳಿದಳು. ಹೀಗೆ ನಾನು ಲಂಡನಿನಲ್ಲಿರುವ ತನಕ ಅವಳಲ್ಲಿ ಒಂದು ಶಿಲ್ಲಿಂಗ್ ಆರು ಪೆನ್ನಿನಂತೇ ಬಾಡಿಗೆತೆತ್ತು ಉಳಿದುಕೊಂಡಿಷ್ಟೆ.

ಅವಳ ಮನೆಯ ಉಪ್ಪರಿಗೆಯ ಕೋಣೆಯಲ್ಲಿ ಎಪ್ಪತ್ತು ವರುಷಗಳ

ಅವಿವಾಹಿತ ಹೆಣ್ಣು ಮಗಳು ವಾಸವಾಗಿದ್ದಳು. ಭಾರೀ ನಿವೃತ್ತ ರೀತಿಯಲ್ಲಿ ಅವಳ ಜೀವನವಿತ್ತು. ಅವಳ ಬಗ್ಗೆ ನನ್ನ ಮನೆಯ ಒಡತಿಯು ಈ ಕೆಳಗಿನ ಮಾಹಿತಿಯನ್ನು ಕೊಟ್ಟಳು : ಅವಳು ರೋಮನ್ ಕೆಥೋಲಿಕ್ ಪಂಥದವಳು. ತರುಣಿಯಿದ್ದಾಗಲೇ ಪರದೇಶಕ್ಕೆ ಕಳುಹಿಸಲ್ಪಟ್ಟಳು. ಒಂದು ಸನ್ಯಾಸಿನಿಯರ ಮಠದಲ್ಲಿ ಸನ್ಯಾಸಿಯಾಗುವ ಉದ್ದೇಶದಿಂದ ವಾಸಮಾಡಿದ್ದಳು. ಆದರೆ ಆ ಪ್ರದೇಶವು ಅವಳಿಗೆ ಒಗ್ಗದ ಮೂಲಕ ಅವಳು ಇಂಗ್ಲೆಂಡಿಗೆ ಮರಳಿದಳು. ಇತ್ತ ಇಲ್ಲಿ ಸನ್ಯಾಸಿನಿಯರ ಮಠವಿಲ್ಲದುದರಿಂದ, ಅವಳು ಸನ್ಯಾಸಿನಿಯ ಜೀವನ ಸಾಗಿಸುತ್ತೇನೆಂದು ಪ್ರಮಾಣ ಮಾಡಿದ್ದರಿಂದ. ಆ ಪರಿಸ್ಥಿತಿಯಲ್ಲಿ ಹೇಗೆ ನಡೆಯಲಿಕ್ಕೆ ಸಾಧ್ಯವಿದೆಯೋ ಹಾಗೆಲ್ಲ ನಡೆಯುತ್ತಿದ್ದಳು. ಅದೇ ರೀತಿಯಲ್ಲಿ ತನ್ನ ಜೀವನ ಸಾಗಿಸಲು ವರುಷಕ್ಕೆ ಕೇವಲ ಹನ್ನೆರಡು ಪೌಂಡುಗಳನ್ನು ಉಳಿದು ಮಿಕ್ಕ ತನ್ನೆಲ್ಲ ಆಸ್ತಿಯನ್ನು ಧರ್ಮಶಾಸನ ಮಾಡಿ ದಾನವಿತ್ತಿದ್ದಳು. ಅಲ್ಲದೆ ಈ ಹಣದಿಂದಲೂ ಕೂಡಾ ಅವಳು ಸಾಕಷ್ಟನ್ನು ಧರ್ಮದಾನಕ್ಕೆ ಕೊಟ್ಟು ಕೇವಲ ನೀರು–ಅಂಬಲಿಯಿಂದ ತನ್ನ ಹೊಟ್ಟೆ ತುಂಬಿಸಿಕೊಂಡು ಜೀವಿಸುತ್ತಿದ್ದಳು. ಅದನ್ನು ಕುದಿಸಲಿಕ್ಕಷ್ಟೇ ಬೆಂಕಿ ಉಪಯೋಗಿಸುತ್ತಿದ್ದಳು. ಅವಳು ಆ ಉಪ್ಪರಿಗೆಯ ಕೋಣೆಯಲ್ಲಿ ಅನೇಕ ವರುಷಗಳ ತನಕ ವಾಸವಾಗಿದ್ದಳು. ಅವಳ ಕೋಣೆಯ ಕೆಳಗಿನ ಮನೆಗೆ ಅನುಕ್ರಮವಾಗಿ ಬರುವ ಕೆಥೋಲಿಕ್ ಬಾಡಿಗೆದಾರರಿಂದ ಉಚಿತವಾಗಿ ಅವಳಿಗೆ ಅಲ್ಲಿ ವಾಸವಾಗಿರಲು ಅಪ್ಪಣೆ ದೊರೆಯುತ್ತಿತ್ತು. ಯಾಕೆಂದರೆ ಅವಳು ಅಲ್ಲಿ ಇರುವುದು ಶುಭಲಕ್ಷಣವೆಂದು ಅವರು ನಂಬಿದ್ದರು. ಅವಳ ತಪ್ಪು ಒಪ್ಪುಗಳನ್ನು ಕೇಳಲಿಕ್ಕೆ ಪ್ರತಿ ದಿನವೂ ಅಲ್ಲಿಗೊಬ್ಬ ಧರ್ಮಗುರು ಸಂದರ್ಶನವೀಯುತ್ತಿದ್ದನು. "ಅವಳು ಜೀವಿಸುತ್ತಿರುವ ರೀತಿಯಲ್ಲಿ ಅವಳ ತಪ್ಪುಒಪ್ಪುಗಳನ್ನು ಕೇಳುವ ಗುರುವಿಗೆ ಅಷ್ಟೊಂದು ಕೆಲಸ ಕೊಡಲು ಹೇಗೆ ಸಾಧ್ಯವೆಂದು ನಾನು ಅವಳನ್ನು ಕೇಳಿದ್ದೇನೆ."–ಎಂದು ನನ್ನ ನೆಲದೊಡತಿ ನನಗೆ ಹೇಳಿದ್ದಳು. "ಓ ! ದುಷ್ಟವಿಚಾರಗಳನ್ನು ತಪ್ಪಿಸುವುದು ಅಸಾಧ್ಯ" ಎಂದು ಆ ಸನ್ಯಾಸಿನಿ ಹೇಳಿದ್ದಳಂತೆ. ಅವಳನ್ನು ಒಮ್ಮೆ ಸಂದರ್ಶಿಸಲು ನನಗೆ ಅಪ್ಪಣೆಯಾಗಿತ್ತು. ಅವಳು ಪ್ರಸನ್ನಳೂ ವಿನಯಶೀಲಳೂ ಆಗಿದ್ದು ಉಲ್ಲಾಸಯುಕ್ತವಾಗಿ ಸಂಭಾಷಣೆ ಮಾಡುತ್ತಿದ್ದಳು. ಕೋಣೆ ಸ್ವಚ್ಛವಾಗಿತ್ತು. ಆದರೆ ಒಂದು ಹೊಜಿ, ಶಿಲುಬೆಗೇರಿಸಿದ ಕ್ರಿಸ್ತನಿಂದ ಕೂಡಿದ ಒಂದು ಮೇಜು ಹಾಗೂ ಒಂದು ಪುಸ್ತಕ ಮತ್ತು ನನಗೆ ಕೂಡಲು ನೀಡಿದ ಒಂದು ಸ್ಟೂಲು

ಹೊರತಾಗಿ ಬೇರೆ ಯಾವ ಗೃಹಕೃತ್ಯದ ಸಾಮಾನುಗಳೂ ಇರಲಿಲ್ಲ. ಅಂತೇ ಕರವಸ್ತ್ರದಿಂದ ಶೋಭಿಸುತ್ತಿದ್ದ ಸೇಂಟ್ ವೆರೋನಿಕಾಳ ಚಿತ್ರವು ಚಿಮಣಿಯ ಮೇಲೆ ಇತ್ತು. ಅದರ ಕರವಸ್ತ್ರದಲ್ಲಿ ರಕ್ತವೊಸರುವ ಕ್ರಿಸ್ತನ ಮುಖದ ಅದ್ಭುತ ಚಿತ್ರವಿತ್ತು. ಅದನ್ನು ಬಹಳ ಗಂಭೀರವಾಗಿ ಆವಳು ನನಗೆ ವಿವರಿಸಿ ಹೇಳಿದಳು. ಅವಳು ನೋಡಲಿಕ್ಕೆ ಸಪ್ಪಗೆ ಕಾಣು ತ್ತಿದ್ದಳು. ಆದರೆ ರೋಗಗ್ರಸ್ತಳಾಗಿ ಮಾತ್ರವೆಂದೂ ಇರಲಿಲ್ಲ. ಅಲ್ಲದೆ ಎಷ್ಟು ಚಿಕ್ಕ ಉತ್ಪನ್ನದಿಂದ ಜೀವನ ಹಾಗೂ ಆರೋಗ್ಯವನ್ನು ಸಮತೂಕ ದಿಂದ ಸಾಗಿಸ ಬಹುದೆಂಬುದಕ್ಕೆ ನಾನು ಇನ್ನೊಂದು ಉದಾಹರಣೆಯನ್ನು ಇದರಿಂದ ಕೊಡುತ್ತೇನೆ.

ವಾಟ್ಸನ ಮುದ್ರಣಾಲಯದಲ್ಲಿ ವೈಗೇಟ್ ಎಂಬೊಬ್ಬ ತರುಣ ಬುದ್ಧಿ ವಂತ ಮನುಷ್ಯನೊಡನೆ ನಾನು ಗೆಳೆತನ ಮಾಡಿಕೊಂಡೆನು. ಶ್ರೀಮಂತ ಬಂಧುಗಳ ಮೂಲಕ ಇವನು ಹೆಚ್ಚಿನ ಮುದ್ರಕರಿಗಿಂತ ಒಳ್ಳೆಯ ರೀತಿ ಯಲ್ಲಿ ಶಿಕ್ಷಣ ಪಡೆದಿದ್ದನು ಮತ್ತು ತಕ್ಕಮಟ್ಟಿನ ಲೆಟಿನ್ ಭಾಷಜ್ಞನಾಗಿ ದ್ದನು. ಫ್ರೆಂಚ್ ಮಾತನಾಡುತ್ತಿದ್ದನು. ಹಾಗೂ ಓದನ್ನು ಬಹಳ ಮೆಚ್ಚಿದವನಾಗಿದ್ದನು ಎರಡು ಸಲ ನದಿಗೆ ಹೋಗಿ ನಾನು ಅವನಿಗೆ ಮತ್ತು ಅವನ ಗೆಳೆಯನಿಗೆ ಈಜಲಿಕ್ಕೆ ಕಲಿಸಿದೆನು. ಅವರು ಬೇಗನೆ ಒಳ್ಳೆಯ ಈಜುಗಾರರಾದರು. ಕೊಬೇಜು ಮತ್ತು ಡಾನ್ ಸಾಲ್ಟೆರೋನ ವಿಚಿತ್ರ ವಸ್ತುಗಳನ್ನು ನೋಡಲು ನೀರಿನಿಂದಲೆ ಚೆಲ್ಸಿಗೆ ಹೋಗಿದ್ದ ಊರಿನ ಕೆಲವು ಗೃಹಸ್ಥರಿಗೆ ಅವರು ನನ್ನ ಪರಿಚಯ ಮಾಡಿಕೊಟ್ಟರು. ನಾವು ಮರಳಿದಾಗ, ಸಂಗಡಿಗರ ಅಪೇಕ್ಷೆಯ ಮೇರೆಗೆ ನಾನು ಪೋಷಾಕು ತೆಗೆದು ನದಿಯಲ್ಲಿ ಜಿಗಿದೇ ಬಿಟ್ಟೆನು. ನನ್ನ ಸಂಗಡಿಗರ ಕುತೂಹಲವನ್ನು ವೈಗೇ ಟನು ಕೆರಳಿಸಿದ್ದನು. ಅಂತೇ ಚೆಲ್ಸೀಯ ಹತ್ತಿರದಿಂದ ಬ್ಲೇಕ್‌ಫ್ರೀಯರ ತನಕ ನೀರಿನ ಆಡಿಯಲ್ಲಿ ಮತ್ತು ಮೇಲ್ಗಡೆಯಲ್ಲಿ ಅನೇಕ ತರಹದ ಕಸರತ್ತು ಗಳನ್ನು ಮಾಡುತ್ತ ಈಜಾಡಿಕೊಂಡೇ ಹೋದೆನು. ಅವುಗಳಲ್ಲಿ ನವೀನತೆ ಯನ್ನು ಕಂಡ ಅವರಿಗೆಲ್ಲ ಆದು ಅಚ್ಚರಿಯನ್ನುಂಟುಮಾಡಿ ಆನಂದ ಪಡಿ ಸಿತು.

ನಾನು ಚಿಕ್ಕ ಹುಡುಗನಿದ್ದಾಗಿನಿಂದ ಈ ವ್ಯಾಯಾಮದಿಂದ ಆನಂದಿ ಸಿದ್ದಾಗಿದೆ ಮತ್ತು ಥೇವನೋಟನ ಎಲ್ಲಾ ಅಂಗವಿನ್ಯಾಸಗಳನ್ನು ಅಭ್ಯಸಿಸಿ ರೂಢಿಸಿದ್ದೇನೆ ಹಾಗೂ ಸುಲಭ, ಮತ್ತು ಉಪಯುಕ್ತವಾದ ಕೆಲವೊಂದು ಸ್ವರಚನೆಗಳನ್ನೂ ಕೂಡಿಸಿದ್ದೇನೆ ಇವುಗಳನ್ನೆಲ್ಲ ನಾನು ಮಂಡಳಿಯವರಿಗೆ

ಪ್ರದರ್ಶಿಸುವ ಪ್ರಸಂಗವನ್ನೊದಗಿಸಿದೆನು. ಅವರ ಮೆಚ್ಚಿಕೆಯಿಂದ ತುಂಬಾ ಹೊಗಳಲ್ಪಟ್ಟೆನು. ಇತ್ತ ಈ ವಿದ್ಯೆಯಲ್ಲಿ ಪ್ರವೀಣನಾಗಬೇಕೆಂದು ಅಪೇಕ್ಷೆಯುಳ್ಳ ವೈಗೇಟನು ಈ ಮೂಲಕ ನನ್ನನ್ನು ಹೆಚ್ಚು ಹೆಚ್ಚು ಹಚ್ಚಿ ಕೊಳ್ಳತೊಡಗಿದನು. ಅಭ್ಯಾಸದ ಸಮತೆಯ ಮೂಲಕ ಕೂಡ ನಮ್ಮಲ್ಲಿ ಅನ್ಯೋನ್ಯತೆ ಉಂಟಾಯಿತು. ಕೆಲಕಾಲದ ನಂತರ, ನಾವು ನಮ್ಮ ಕೆಲಸದಿಂದ ಎಲ್ಲಿಡೆಯಲ್ಲೂ ನಮ್ಮ ಖರ್ಚು ನೋಡಿಕೊಳ್ಳುತ್ತ ಒಟ್ಟಿಗೆ ಯೂರೋಪಿನ ಆದ್ಯಂತ ಸಂಚಾರ ಕೈಕೊಳ್ಳುವುದೆಂಬ ಸೂಚನೆ ಯನ್ನು ಮಾಡಿದನು. ಒಮ್ಮೆ ನಾನು ಈ ಮಾತಿಗೆ ಒಪ್ಪಿದ್ದೆನು. ಆದರೆ ನನ್ನ ಪರಮಮಿತ್ರನಾದ ಮಿ। ಡೆನ್‌ಹ್ಯಾಮನೊಡನೆ ವಿರಾಮದ ವೇಳೆಯಲ್ಲಿ ಒಂದು ಗಂಟೆ ಸಮಯ ಕಳೆಯುವ ರೂಢಿಯಲ್ಲಿದ್ದ ನಾನು ಅವನಿಗೆ ಈ ವಿಷಯ ಹೇಳಿದಾಗ ಅವನು ನನ್ನನ್ನು ಅದರಿಂದ ಹಿಂಜರಿಯುವಂತೆ ಮಾಡಿ ದನು. ಕೇವಲ ಪೆನ್ಸಿಲ್‌ವಾನಿಯಾಕ್ಕೆ ಮರಳುವುದನ್ನು ಮಾತ್ರ ವಿಚಾರಿಸ ಬೇಕೆಂದು ಅವನು ನನಗೆ ಸಲಹೆ ಕೊಟ್ಟನು. ಈಗ ಅವನು ಹಾಗೆ ಹೋಗು ವವನಿದ್ದನು.

ಈ ಯೋಗ್ಯ ಮನುಷ್ಯನ ಒಂದು ಗುಣವನ್ನು ನಾನು ದಾಖಲೆ ಮಾಡಲೇ ಬೇಕು. ಅವನು ಹಿಂದಕ್ಕೆ ಬ್ರಿಸ್ಟೇಲಿನಲ್ಲಿ ವ್ಯವಹಾರದಲ್ಲಿದ್ದನು. ಆದರೆ ಅನೇಕ ಜನರ ಸಾಲದಲ್ಲಿ ಬಿದ್ದು ಸೋತುಹೋದನು. ಸಾಲದ ಕೆಲ ವೊಂದು ಅಂಶವನ್ನು ಕೊಟ್ಟು ಅಮೆರಿಕಾಕ್ಕೆ ತೆರಳಿದನು. ಅಲ್ಲಿ ವ್ಯಾಪಾ ರಸ್ಥನಾಗಿ ವ್ಯವಹಾರದಲ್ಲಿ ಬಹಳ ಜಾಣ್ಮೆಯಿಂದ ನಡೆದುಕೊಂಡು ಕೆಲವೇ ವರುಷಗಳೊಳಗೆ ಅಪಾರ ಹಣ ಗಳಿಸಿದನು. ನನ್ನೊಡನೆ ಹಡಗಿನಲ್ಲಿ ಇಂಗ್ಲೆಂಡಿಗೆ ಮರಳಿದೊಡನೆ ಅವನು ತನ್ನ ಹಳೆಯ ಸಾಲಗಾರರನ್ನು ಒಂದು ವಿನೋದಕೂಟಕ್ಕೆ ಆಹ್ವಾನಿಸಿದನು. ಇದರಲ್ಲಿ ಅವರು ಸರಳತನದಿಂದ ತನ್ನೊಡನೆ ನಡೆದುಕೊಂಡು ಸಹಕರಿಸಿದ್ದಕ್ಕಾಗಿ ಅವರಿಗೆ ಉಪಕಾರಸ್ಮರಣೆ ಮಾಡಿದನು. ಅಂತೇ ಅವರೆಲ್ಲ ಕೇವಲ ಸತ್ಕಾರ ಬಿಟ್ಟು ಬೇರೆ ಏನೂ ಸಿಗುತ್ತದೆಂದು ನೆನೆಸದಿದ್ದಾಗ ಪ್ರತಿಯೊಬ್ಬರೂ ಮೊಟ್ಟಮೊದಲಿಗೆ ಪ್ಲೇಟು ಸರಿಸಿದೊಡನೆ ಅದರ ಅಡಿಯಲ್ಲಿ ಅವರವರಿಗೆ ಕೊಡಲಿಕ್ಕೆ ಬಾಕಿ ಉಳಿದ ಹಣಕ್ಕೆ ಹಾಗೂ ಅದರ ಬಡ್ಡಿಗೆ ಬ್ಯಾಂಕಿನ ಚೆಕ್ಕನ್ನು ಕಂಡರು.

ಈಗ ತಾನು ಫಿಲಡೆಲ್ಫಿಯಾಕ್ಕೆ ಹೋಗುವ ಸಿದ್ಧತೆಯಲ್ಲಿದ್ದೇನೆ ಮತ್ತು ಅಲ್ಲಿ ಒಂದು ಉಗ್ರಾಣವನ್ನು ತೆರೆಯುವುದಕ್ಕಾಗಿ ಅಪಾರ ಸಾಮಾನುಗಳನ್ನು ಒಯ್ಯಬೇಕಾಗಿದೆಯೆಂದು ಅವನು ನನಗೆ ಹೇಳಿದನು.

ಅವನು ನನ್ನನ್ನು ತನ್ನ ಲೆಕ್ಕದ ಪುಸ್ತಕ ನೋಡಿಕೊಳ್ಳುವ ಕ್ಲಾರ್ಕ್ ಎಂದು ಕರೆದೊಯ್ಯುವ ವಿಚಾರದಲ್ಲಿದ್ದನು. ಈ ಕೆಲಸದಲ್ಲಿ ಅವನು ನನಗೆ ಕಲಿಸಲಿಕ್ಕೂ ಇತ್ತು. ಅವನ ಕಾಗದಪತ್ರಗಳನ್ನು ಪ್ರತಿಮಾಡುವುದೂ ಮತ್ತು ಅವನ ಉಗ್ರಾಣದಲ್ಲಿ ವ್ಯವಹಾರ ನೋಡಿಕೊಳ್ಳುವುದೂ ನನ್ನ ಕೆಲಸವಾಗಿತ್ತು. ಅಲ್ಲದೆ ವಾಣಿಜ್ಯ ವ್ಯವಹಾರವನ್ನು ನಾನು ರೂಢಿಸಿಕೊಂಡೊಡನೆ ಅವನು ನನ್ನನ್ನು ಹಿಟ್ಟು ಮತ್ತು ಬ್ರೆಡ್ ಮೊದಲಾದ್ದನ್ನು ತುಂಬಿಸಿದ ಹಡಗಿನಲ್ಲಿ ವೆಸ್ಟ್ ಇಂಡೀಸಿಗೆ ಕಳುಹಿಸಿ ನನ್ನ ಸ್ಥಾನವನ್ನು ಹೆಚ್ಚಿಸುವುದಾಗಿ ಹೇಳಿದನು. ಅಲ್ಲಿ ನನಗೆ ಆ ಮೂಲಕ ಬೇರೆಯವರಿಂದ ಕಮಿಷನ್ ದೊರೆಯುತ್ತದೆ. ಅದು ಲಾಭದಾಯಕವಾದದ್ದು. ಅದನ್ನು ನಾನು ಒಳ್ಳೆಯ ರೀತಿಯಿಂದ ನಡೆಸಿಕೊಂಡು ಹೋದರೆ ಅದರಿಂದ ನಾನು ಸುಖವಾಗಿ ನೆಲೆಗೊಳ್ಳಬಹುದೆಂದೂ ಹೇಳಿದನು. ಈ ವಿಷಯ ನನಗೆ ಬಹಳ ಸಂತೋಷವನ್ನುಂಟು ಮಾಡಿತು. ಯಾಕೆಂದರೆ ಲಂಡನ್ ನನಗೆ ಬೇಸರಿಕೆ ಹುಟ್ಟಿಸಿತ್ತು ಮತ್ತು ಪೆನ್ಸಿಲ್ವಾನಿಯಾದಲ್ಲಿ ನಾನು ಕಳೆದ ಸುಖವಾದ ದಿನಗಳ ನೆನಪು ನನಗಾಗುತ್ತಿತ್ತು. ಹಾಗೂ ಅದನ್ನು ಇನ್ನೊಮ್ಮೆ ನೋಡಲು ಇಚ್ಛೆಯುಂಟಾಗುತ್ತಿತ್ತು. ಆದುದರಿಂದ ವರುಷಕ್ಕೆ ಐವತ್ತು ಪೌಂಡುಗಳ ಕರಾರಿನಮೇಲೆ ನಾನು ಆ ಕೂಡಲೆ ಒಪ್ಪಿಕೊಂಡೆನು. ಪೆನ್ಸಿಲ್ವಾನಿಯಾದ ಹಣವು ನಾನು ಕಂಪೋಸಿಟರನಾಗಿ ದೊರಕಿಸುತ್ತಿದ್ದುದಕ್ಕಿಂತ ಕಡಿಮೆಯಾಗಿತ್ತೆಂಬುದೇನೋ ನಿಜ. ಆದರೆ ಉತ್ತಮವಾದ ಪ್ರತೀಕ್ಷೆಗಳು ಮಾತ್ರವಿದ್ದವು.

ಈಗ ನಾನು ತಿಳಿದಂತೆ ಮುದ್ರಣಾಲಯದಿಂದ ಕೊನೆಯವರೆಗೂ ಹೊರಗೆ ಬಂದಂತಾಗಿತ್ತು. ಅಂತೇ ಈಗಿನ ನನ್ನ ಹೊಸ ವ್ಯವಹಾರದಲ್ಲಿ ತೊಡಗಿದ್ದೆನು. ಮಿಸ್ಟರ್ ಡೆನ್‌ಹ್ಯಾಮನೊಡನೆ ಅನೇಕ ತರಹದ ಸಾಮಾನುಗಳನ್ನು ಕೊಳ್ಳಲು ದಿನದಿನವೂ ವ್ಯಾಪಾರಸ್ಥರಲ್ಲಿಗೆ ಹೋಗುವುದು, ಅವುಗಳು ಯೋಗ್ಯವಾಗಿ ಪ್ಯಾಕ್ ಮಾಡಲ್ಪಟ್ಟಿವೆಯೆಂಬುದನ್ನು ನೋಡಿಕೊಳ್ಳುವುದು, ಚಿಕ್ಕಪುಟ್ಟಕೆಲಸಗಳನ್ನು ಮಾಡುವುದು, ಮುಕ್ಕಾಮಿಗೆ ಸಾಮಾನು ಕಳುಹಿಸಲು ಕೆಲಸಗಾರರನ್ನು ಕೂಡಿಸುವುದು, ಮೊದಲಾದ ಕೆಲಸಗಳನ್ನು ಮಾಡುತ್ತಿದ್ದೆ. ಹೀಗೆ ಎಲ್ಲ ಸಾಮಾನುಗಳು ಹಡಗಿನಲ್ಲಿ ಸಿದ್ಧವಾದೊಡನೆ ನನಗೆ ಕೆಲವು ದಿವಸಗಳ ಬಿಡುವು ದೊರೆಯಿತು. ಈ ಬಿಡುವಿನ ದಿವಸಗಳಲ್ಲಿ ಒಂದು ದಿನ ಒಮ್ಮೆ ನಾನು ಕೇವಲ ಹೆಸರಿನಿಂದ ಕೇಳಿಬಲ್ಲ ಸರ್ ವಿಲಿಯಂ ವಿಂಡ್‌ಹ್ಯಾಂ ಎಂಬ ದೊಡ್ಡ ಮನುಷ್ಯರಿಂದ ನನಗೆ ಕರೆ ಬಂದಿತು. ನಾನು

ಅವರನ್ನು ಕಾಣಲು ನಿಂತುದಾಯಿತು. ಅವರು ಹೇಗೋ ಏನೋ ನಾನು ಚೆಲ್ಸಿಯಿಂದ ಬ್ಲ್ಯಾಕ್ ಫ್ರಿಯರ್ಸ್‌ದತನಕ ಈಜಾಡಿಹೋದದ್ದನ್ನು ಮತ್ತು ನಾನು ಕೆಲವು ತಾಸುಗಳಲ್ಲಿ ವೈಗೇಟ್ ಮತ್ತು ಇನ್ನೊಬ್ಬ ತರುಣನಿಗೆ ಈಜು ಕಲಿಸಿದ್ದನ್ನು ಕೇಳಿದ್ದರು. ದೂರ ಪ್ರವಾಸಕ್ಕೆ ಹೊರಡಲಿದ್ದ ಇಬ್ಬರು ಮಗಂದಿರು ಅವರಿಗಿದ್ದರು. ಅವರಿಗೆ ಮೊದಲು ಈಜಲಿಕ್ಕೆ ಕಲಿಸಬೇಕೆಂದು ಅವರು ಅಪೇಕ್ಷಿಸಿದ್ದರು. ಅಂತೇ ನಾನು ಅವರಿಬ್ಬರಿಗೆ ಈಜು ಕಲಿಸಿದ್ದಾದರೆ ಅವರು ನನ್ನ ಮನಸ್ಸನ್ನು ತೃಪ್ತಿಪಡಿಸುತ್ತೇನೆಂಬ ಸೂಚನೆ ಕೊಟ್ಟರು. ಅವರಿನ್ನೂ ಪೇಟೆಗೆ ಬಂದಿರಲಿಲ್ಲ. ನನ್ನ ವಾಸ್ತವ್ಯ ಕೂಡಾ ನಿರ್ದಿಷ್ಟವಾಗಿರಲಿಲ್ಲ. ಆದುದರಿಂದ ನಾನು ಆ ಕೆಲಸವನ್ನು ಕೈಕೊಳ್ಳುವುದು ಅಸಾಧ್ಯವಾಗಿತ್ತು. ಆದರೆ ಈ ಘಟನೆಯಿಂದ ಮಾತ್ರ – ಒಂದುವೇಳೆ ನಾನು ಇಂಗ್ಲಂಡಿನಲ್ಲಿ ಉಳಿದುಕೊಂಡು ಒಂದು ಈಜುವ ಸಾಲೆಯನ್ನು ತೆರೆದರೆ ನಾನು ಸಾಕಷ್ಟು ಹಣ ಮಾಡಬಹುದೆಂದು ನನಗೆ ಹೊಳೆಯಿತು ಹೀಗೆ ಇದು ನನಗೆ ಇಷ್ಟು ಬಲವಾಗಿ ತೋಚಿತಲ್ಲಾ–ಈ ಆಲೋಚನೆ ಒಂದು ವೇಳೆ ನನಗೆ ಮೊದಲು ಬಂದಿದ್ದರೆ ಬಹುಶಃ ನಾನು ಇಷ್ಟು ಬೇಗನೆ ಅಮೆರಿಕಾಕ್ಕೆ ತೆರಳುತ್ತಿದ್ದಿಲ್ಲ. ಅನೇಕ ವರುಷಗಳ ತರುವಾಯ ನನಗೆ ಮತ್ತು ನಿಮಗೆ ಅರ್ಲ ಆಫ್ ಅಗ್ರೆಮೊಂಟ್ ಆಗುವ ಈ ಸರ್‌ವಿಲಿಯಂ ವಿಂಡ್‌ಹ್ಯಾಂರ ಪುತ್ರರೊಬ್ಬರೊಡನೆ ಕೆಲವೊಂದು ಮಹತ್ವದ ವಿಷಯವುಂಟು. ಅದನ್ನು ನಾನು ಅದಕ್ಕೆ ಅವಕಾಶ ಬಂದಾಗ ವಿವರಿಸುತ್ತೇನೆ.

ಹೀಗೆ ನಾನು ಲಂಡನಿನಲ್ಲಿ ಹದಿನೆಂಟು ತಿಂಗಳನ್ನು ಕಳೆದೆನು. ಹೆಚ್ಚಿನ ನನ್ನ ಕಾಲವನ್ನೆಲ್ಲ ನಾನು ಎಡೆಬಿಡದೆ ದುಡಿಯುವುದರಲ್ಲಿ ಕಳೆದೆನು. ಬಹಳ ಕಡಿಮೆ ಕಾಲವನ್ನು ನಾಟಕಗಳನ್ನು ನೋಡುವುದರಲ್ಲಿ ಮತ್ತು ಪುಸ್ತಕಗಳನ್ನು ಓದುವುದರಲ್ಲಿ ಹೊರತಾಗಿ ಬೇರಾವುದಕ್ಕೂ ಕಾಲಹರಣ ಮಾಡಿರಲಿಲ್ಲ. ನನ್ನ ಮಿತ್ರ ರಾಲ್ಫ್ ನನ್ನನ್ನು ಬಡವನನ್ನಾಗಿ ಮಾಡಿದ್ದನು. ಅವನು ನನಗೆ ಸುಮಾರು ಇಪ್ಪತ್ತೇಳು ಪೌಂಡು ಕೊಡುವುದಿತ್ತು. ಅದನ್ನು ನಾನು ಈಗ ಹಿಂದೆ ಪಡೆಯುವ ಹಾಗಿರಲಿಲ್ಲ, ನನ್ನ ಸಂಪಾದನೆಯ ದೃಷ್ಟಿಯಿಂದ ನೋಡಿದರೆ ಭಾರೀ ದೊಡ್ಡ ರಖಂ ಎಂದೇ ಹೇಳಬೇಕು! ಅವನನ್ನು ನಾನು ಪ್ರೇಮದಿಂದ ಕಾಣುತ್ತಿದ್ದೆನು. ಹೀಗಿದ್ದರೂ ಅವನಲ್ಲಿ ಅನೇಕ ಉತ್ತಮ ಗುಣಗಳಿದ್ದವು. ನಾನು ಸಾಕಷ್ಟು ಹಣಗಳಿಸಬಹುದಾಗಿತ್ತು. ಆದರೆ ನಾನು ಕೆಲವು ಬುದ್ಧಿವಂತರ ಗೆಳೆತನವನ್ನು ಮಾತ್ರ ಗಳಿಸಿದ್ದೆನು. ಅವರ ಮಾತುಕತೆ ನನಗೆ ತುಂಬಾ ಲಾಭದಾಯಕವಾಗಿತ್ತು. ಅಲ್ಲದೆ

ನಾನು ಸಾಕಷ್ಟು ಓದಿದ್ದೇನೆ.

ನಾವು ೧೭೨೬ ಜುಲೈ ೨೩ರಂದು ಗ್ರೇವಸೆಂಡಿನಿಂದ ಹಡಗು ಪಯಣ ಬೆಳಸಿದೆವು. ಜಲಯಾನದ ಘಟನೆಗಳಿಗೆ ನಾನು ನನ್ನ ಪತ್ರಿಕೆ (journal) ನೋಡಲು ನಿರ್ದೇಶಿಸುತ್ತೇನೆ. ಅಲ್ಲಿ ಅವುಗಳೆಲ್ಲ ಸೂಕ್ಷ್ಮವಾಗಿ ಹೆಣೆದು ಕೊಂಡಿರುವುದನ್ನು ಕಾಣಬಹುದು. ಬಹುಶಃ ಆ ಪತ್ರಿಕೆಯಲ್ಲಿ ಮುಖ್ಯವಾದ ಭಾಗವೆಂದರೆ ಅದರ 'ಯೋಜನೆ' (plan). ಅದನ್ನು ನಾನು ಸಮುದ್ರದಲ್ಲಿ ರಚಿಸಿದ್ದೆನು. ನನ್ನ ಭಾವೀ ಜೀವನದ ನಡತೆಯನ್ನು ರೂಪಿಸುವುದಕ್ಕಾಗಿ ನಾನು ಅದನ್ನು ತಯಾರಿಸಿದ್ದಾಗಿದೆ. ನಾನು ತರುಣನಾಗಿದ್ದಾಗ ರಚಿಸಿರುವುದರಿಂದ ಅದು ಹೆಚ್ಚು ಮಹತ್ವದ್ದೆಂದು ಹೇಳಬೇಕು. ಆದರೂ ಕೂಡ ಬಹಳ ಪ್ರಾಮಾಣಿಕತನದಿಂದ ವೃದ್ಧಾಪ್ಯದಲ್ಲಿಯೂ ಅದಕ್ಕೆ ಅನುಗುಣವಾಗಿ ನಡೆದುಕೊಂಡು ಹೋದದ್ದಾಗಿದೆ.

ಅಕ್ಟೋಬರ್ ೧೧ರಂದು ನಾವು ಫಿಲಡೆಲ್ಫಿಯಾದಲ್ಲಿ ನೆಲೆಯೂರಿದೆವು. ಅಲ್ಲಿ ನಾನು ಅನೇಕ ಬದಲಾವಣೆಗಳನ್ನು ಕಂಡೆನು. ಕೈಥ್ ಈಗ ಗವರ್ನರನಾಗಿರಲಿಲ್ಲ. ಮೇಜರ್ ಗೋರ್ಡನ್‌ರು ಅವನನ್ನು ಪದಚ್ಯುತಿಗೊಳಿಸಿದ್ದರು. ಸಾಮಾನ್ಯ ನಾಗರಿಕನು ನಡೆದುಹೋಗುವಂತೆ ನಾನು ಅವನನ್ನು ರಸ್ತೆಯಲ್ಲಿ ಕಂಡೆನು. ನನ್ನನ್ನು ನೋಡಿದೊಡನೆ ಅವನಿಗೆ ತುಸು ನಾಚಿಕೆಯೆನಿಸಿದಂತೆ ಕಂಡಿತು. ಆದರ ಏನನ್ನು ಹೇಳದೆ ನಡೆದುಹೋದನು. ನನ್ನ ಪತ್ರವು ಮುಟ್ಟಿದನಂತರ ನನ್ನ ಪುನರಾಗಮನದ ಕುರಿತು ಅವಳ ಮಿತ್ರರು ನಿರಾಸೆಪಡಿಸದೆ, ರೋಜರ್ಸ್ ಎಂಬೊಬ್ಬ ಕುಂಬಾರನೊಡನೆ ಮದುವೆಯಾಗಲು ಅವಳನ್ನು ಒಲಿಸದೆ ಇರುತ್ತಿದ್ದರೆ ನಾನು ಕೂಡಾ ಮಿಸ್ ರೀಡಳನ್ನು ನೋಡಿದೊಡನೆ ಅಷ್ಟೇ ನಾಚಿಕೆ ಪಡಬೇಕಾಗುತ್ತಿತ್ತು. ಅವಳ ಮದುವೆ ನಾನು ಊರಲ್ಲಿ ಇಲ್ಲದಾಗ ನಡೆದಿತ್ತು. ಆದರೂ ಅವನೊಡನೆ ಅವಳೆಂದೂ ಸುಖವಾಗಿರಲಿಲ್ಲ. ಅಂತೇ ಅವನಿಂದ ಬೇಗನೆ ದೂರವಾದಳು. ಅವನೊಡನೆ ಕೂಡಲು ನಿರಾಕರಿಸಿಯೋ ಅಥವಾ ಅವನ ಹೆಸರನ್ನು ಇಟ್ಟುಕೊಳ್ಳಲು ಒಪ್ಪದೆಯೋ ಅವಳು ಹಾಗೆ ಮಾಡಿದ್ದಳು. ಅವನಿಗೆ ಇನ್ನೊಬ್ಬಳು ಹೆಂಡತಿಯಾಗಿದ್ದಾಳೆಂದು ಈಗ ಹೇಳಲಾಗುತಿತ್ತು. ಅತ್ಯುತ್ತಮ ಕಲಸಗಾರ ಅವನಾಗಿದ್ದರೂ ಅವನು ನಿರರ್ಥಕ ಜೀವಿಯಾಗಿದ್ದನು. ಅವನ ಈ ಅಸ್ಯಾದೃಶ ವೃತ್ತಿಕೌಶಲ್ಯವು ಅವಳ ಮಿತ್ರರ ಮನಸ್ಸನ್ನು ಮರುಳುಗೊಳಿಸಿತ್ತು. ಅವನು ಸಾಲದಲ್ಲಿ ಬಿದ್ದು, ೧೭೨೭ರಲ್ಲಿ ಅಥವಾ ೧೭೨೮ರಲ್ಲಿ ಓಡಿಹೋದನು. ವೆಸ್ಟ್

ಇಂಡೀಸಿಗೆ ಹೋದದ್ದಾಯಿತು. ಅಲ್ಲಿಯೇ ಸ್ವರ್ಗಸ್ಥನಾದನು. ಕೈಮರ ನಿಗೆ ಒಳ್ಳೆಯ ಮನೆ, ಸ್ಟೇಷನರಿ ಸಾಮಾನುಗಳಿಂದ ಸಾಕಷ್ಟು ಚೆನ್ನಾಗಿ ತುಂಬಿದ್ದ ಒಂದು ಅಂಗಡಿ ಇತ್ತು. ಹೇರಳ ಹೊಸ ಟೈಪುಗಳು ಮತ್ತು ಒಳ್ಳೆಯವರು ಒಬ್ಬರೂ ಇಲ್ಲದಿದ್ದರೂ ಅನೇಕ ಕೆಲಸಗಾರರು ಅವನಲ್ಲಿ ದ್ದರು ಹೀಗೆ ಭಾರೀ ವ್ಯವಹಾರ ನಡೆಯುವಂತೆ ಕಾಣುತ್ತಿತ್ತು.

ಮಿಸ್ಟರ್ ಡೆನ್‌ಹ್ಯಾಮನು ವಾಟರ್ ಸ್ಟ್ರೀಟಿನಲ್ಲಿ ಒಂದು ಸ್ಟೋರನ್ನು ತೆರೆದನು. ಅಲ್ಲಿ ನಮ್ಮ ಸಾಹಿತ್ಯ – ಸಾಮಗ್ರಿಗಳನ್ನೆಲ್ಲ ಹೊರಗೆ ಹಾಕಿದೆವು. ನಾನು ಎಡೆಬಿಡದೆ ವ್ಯವಹಾರ ನೋಡಿಕೊಳ್ಳಹತ್ತಿದೆನು. ಲೆಕ್ಕ ಪತ್ರಗಳನ್ನು ಅಭ್ಯಾಸಮಾಡಿಕೊಂಡು ಸ್ವಲ್ಪ ಕಾಲದಲ್ಲೇ ಮಾರುವ ಕೆಲಸದಲ್ಲಿ ಪ್ರವೀಣನಾದೆನು. ನಾವಿಬ್ಬರೂ ಒಟ್ಟಿಗೆ ಒಂದೆಡೆಯಲ್ಲೇ ಊಟ ವಸತಿಯನ್ನು ಮಾಡಿದೆವು. ತಂದೆಯಂತೆ ಅವನು ನನಗೆ ಸಲಹೆ ನೀಡುತ್ತಿದ್ದನು. ನನ್ನ ಮೇಲೆ ಅವನಿಗೆ ಪ್ರಾಮಾಣಿಕವಾದ ಆದರವಿತ್ತು. ನಾನು ಅವನಿಗೆ ಗೌರವ ತೋರಿಸಿ ಅವನನ್ನು ಪ್ರೇಮದಿಂದ ನೋಡುತ್ತಿದ್ದೆನು. ಹೀಗೆ ನಾವಿಬ್ಬರೂ ಬಹಳ ಸುಖಸಂತೋಷದಿಂದ ಕಾಲಕಳೆಯಬಹುದಾಗಿತ್ತು. ಆದರೆ ೧೭೨೬-೨೭ರ ಫೆಬ್ರುವರಿ ತಿಂಗಳ ಪ್ರಾರಂಭದಲ್ಲಿ ನಾವಿಬ್ಬರೂ ಕೂಡಿಯೇ ಬೇನೆ ಬಿದ್ದೆವು. ಆಗ ನಾನು ಅದೇ ಇಪ್ಪತ್ತೊಂದನೆ ವರುಷವನ್ನು ದಾಟಿದ್ದೆನು. ನನ್ನ ಅಸ್ವಸ್ಥತೆಗೆ ಪ್ಲುರಿಸಿಯು ಕಾರಣವಾಗಿತ್ತು. ಅದು ಹೆಚ್ಚು ಕಡಿಮೆ ನನ್ನನ್ನು ಯಮಲೋಕದ ಹತ್ತಿರಕ್ಕೆ ಒಯ್ದಿತ್ತು. ನಾನು ಬಹಳ ಕಷ್ಟಪಟ್ಟೆನು ನನ್ನ ಮನಸ್ಸಿನಲ್ಲಿದ್ದ ಗುರಿಯನ್ನು ನಾನು ತೋರದಾಯಿತು. ನಾನು ಅಸ್ವಸ್ಥದಿಂದ ಎದ್ದಾಗ ಸಾಕಷ್ಟು ನಿರಾಸೆಯಿಂದಿದ್ದೆನು. ಆಗಾಗ ನಾನು ಆ ಕಠಿಣದ ಕೆಲಸಗಳನ್ನೆಲ್ಲ ತಿರುಗಿ ಮಾಡಬೇಕಲ್ಲಾ–ಎಂದು ಕೆಲಮಟ್ಟಿಗೆ ದುಃಖಿಸುತ್ತಲೂ ಇದ್ದೆನು. ಅವನ ಬೇನೆ ಯಾವುದಿತ್ತೆಂದು ನನಗೆ ಮರೆತಿದೆ. ಅವನನ್ನು ಅದು ದೀರ್ಘ ಕಾಲದ ತನಕ ಮಲಗಿಸಿತ್ತು. ಅಂತೇ ಕಟ್ಟ–ಕಡೆಗೆ ಅವನನ್ನು ಒಯ್ದೇ ಬಿಟ್ಟಿತು. ಅವನು ತನ್ನ ಪ್ರೇಮದ ಸ್ಮರಣಾರ್ಥವಾಗಿ ನನಗೆ ಅಲಿಖಿತ ಮರಣಶಾಸನವಾಗಿ ಒಂದು ಚಿಕ್ಕ ಆಸ್ತಿಯನ್ನು ಬಿಟ್ಟುಹೋಗಿದ್ದನು. ಹೀಗೆ ನನ್ನನ್ನು ಇನ್ನೊಮ್ಮೆ ವಿಶಾಲ ಜಗತ್ತಿನಲ್ಲಿ ಬಿಟ್ಟು ಹೋದನು. ಇತ್ತ ಅವನ ವಾರಸುದಾರರಿಂದ ಸ್ಟೋರು ನಡೆಸಲ್ಪಡುತ್ತಿತ್ತು. ಅಂತೇ ಅವನ ಕೈಕೆಳಗಿನ ನನ್ನ ಕೆಲಸ ಕೊನೆಗೊಂಡಿತು.

ಈಗ ಫಿಲಡೆಲ್ಫಿಯಾದಲ್ಲಿ ನನ್ನ ಭಾವ ಹೋಮ್ಸ ಇದ್ದವನು ನಾನು

ಮರಳಿ ನನ್ನ ವ್ಯವಹಾರಕ್ಕೇ ತೊಡಗಬೇಕೆಂದು ಉಪದೇಶ ಮಾಡಿದನು. ಇತ್ತ ಕೈಮರನು ಕೂಡ ಈ ವರುಷ ಹೆಚ್ಚು ಸಂಬಳ ಕೊಡುವ ಆಶ್ವಾಸನ ತೋರಿಸಿ ಅವನಲ್ಲಿಗೆ ಹೋಗಿ ಪ್ರಿಂಟಿಂಗ್ ಪ್ರೆಸ್ಸಿನ ಆಡಳಿತ ನೋಡಿಕೊಳ್ಳು ವಂತೆ ಮರುಳು ಮಾಡಿದನು. ನಾನು ಹೋದರೆ ಅವನು ತನ್ನ ಸ್ಟೇಷನರಿ ಅಂಗಡಿಯನ್ನು ನೋಡಲಿಕ್ಕೆ ಒಳ್ಳೆಯದಾಗುತ್ತದೆಂದು ಹೇಳಿದನು. ಅವನ ಹೆಂಡತಿಯಿಂದ ಮತ್ತು ಅವಳ ಮಿತ್ರರಿಂದ ಅವನ ಬಗ್ಗೆ ಒಂದು ಕೆಟ್ಟ ಸ್ವಭಾವದ ಕುರಿತು ನಾನು ಕೇಳಿದ್ದೆನು. ಅಂತೇ ಅವನೊಡನೆ ಇನ್ನು ಹೆಚ್ಚಿನ ಸಖ್ಯ ಇಟ್ಟುಕೊಳ್ಳುವ ಇಚ್ಛೆ ನನಗಿರಲಿಲ್ಲ. ನಾನು ಬೇರೆ ಒಬ್ಬ ವ್ಯಾಪಾರಿಯ ಕಾರಕೂನನ ಕೆಲಸ ನೋಡಲು ಪ್ರಯತ್ನಿಸಿದೆನು. ಆದರೆ ಯಾವುದೂ ಕೂಡಲೆ ದೊರೆಯದೆ ನಾನು ಕೈಮರನ ಬಳಿಗೆ ಇನ್ನೊಮ್ಮೆ ಹೋದೆನು. ಅವನ ಮುದ್ರಣಾಲಯದಲ್ಲಿ ನಾನು ಈ ಕೆಲಸಗಾರ ರನ್ನೆಲ್ಲ ಕಂಡೆನು: ಹ್ಯೂಮರ್‌ಡಿತ್ ಎಂಬೊಬ್ಬ ಮೂವತ್ತು ವರುಷ ಪ್ರಾಯದ ವೇಲ್ಸ ಪೆನ್ಸಿಲ್ವಾನಿಯನ್ ಇದ್ದನು. ಹಳ್ಳಿಯ ಕೆಲಸಕ್ಕೆ ತರ ಬೇತಿಯಾಗಿದ್ದವನು. ಪ್ರಾಮಾಣಿಕ, ತಿಳುವಳಿಕೆಯುಳ್ಳ ಹಾಗೂ ದೃಢ ವಾದ ನಿರೀಕ್ಷಣಾ ಶಕ್ತಿಯುಳ್ಳ ಮನುಷ್ಯನಾಗಿದ್ದು ತುಸು ಓದುವ ನಾದವೂ ಅವನಿಗಿತ್ತು. ಆದರೆ ಕುಡಿತಕ್ಕೆ ಬಲಿಬಿದ್ದಿದ್ದನು. ಸ್ಟೀಫನ್ ಪೋಟ್ಸ ಎಂಬೊಬ್ಬ ಹಳ್ಳಿಯ ಮನುಷ್ಯನು ತುಂಬು ವಯಸ್ಸಿನವನು ಅದೇ ಕೆಲಸಕ್ಕೆ ತರಬೇತಿಯಾದವನು. ಅಸಾಮಾನ್ಯವಾದ ಶಕ್ತಿಗಳಲ್ಲಿದ್ದ ಅವನಲ್ಲಿ ಅಮೋಘ ಹಾಸ್ಯ ಹಾಗೂ ನಗು ಸೂಸುತ್ತಿತ್ತು. ಆದರೆ ತುಸು ಸೋಮಾರಿಯಾಗಿದ್ದನು. ಇವರನ್ನು ಅವನು ವಾರಕ್ಕೆ ಬಹಳ ಕಡಿಮೆ ಸಂಬಳ ವಿತ್ತು ಇಟ್ಟುಕೊಂಡಿದ್ದನು. ಅಂತೇ ಅವರು ತಮ್ಮ ವ್ಯವಹಾರದಲ್ಲಿ ಸುಧಾರಣೆಯನ್ನು ತೋರಿಸಿದರೆ ಮೂರು ತಿಂಗಳಿಗೊಮ್ಮೆ ಒಂದು ಶಿಲ್ಲಿಂಗ್ ಸಂಬಳವನ್ನು ಅವರಿಗೆ ಹೆಚ್ಚಿಸಲಾಗುತ್ತಿತ್ತು. ಅಲ್ಲದೆ ಈ ಹೆಚ್ಚಿನ ಸಂಬಳ ಇನ್ನು ಕೊಡಲಾಗುವುದೆಂಬ ನಿರೀಕ್ಷೆಯಿಂದಲೆ ಅವನು ಅವರನ್ನೆಲ್ಲ ತನ್ನಲ್ಲಿಗೆ ಎಳೆದುಕೊಂಡದ್ದಾಗಿತ್ತು. ಮೆರ್ಡಿತನು ಪ್ರೆಸ್ಸಿನಲ್ಲಿ ಕೆಲಸ ಮಾಡಬೇಕಾ ಗಿತ್ತು. ಬುಕ್-ಬೈಂಡಿಗ್ ಕೆಲಸವನ್ನು ಪೋಟ್ಸ ನೋಡಿಕೊಳ್ಳುತ್ತಿದ್ದನು. ಇವರಿಬ್ಬರಿಗೂ ಕರಾರಿನ ಪ್ರಕಾರ ಈ ಕೆಲಸಗಳನ್ನು ತನಗೆ ಅವುಗಳ ಗಂಧ ವಿರ್ಲದಿದ್ದರೂ ಕಲಿಸಬೇಕಾಗಿತ್ತು. ಜಾನ್-ಎಂಬೊಬ್ಬ ಹುಂಬ ಐರಿಷನು ಯಾವ ಕೆಲಸಕ್ಕೂ ರೂಢಿಯಾಗದವನೂ ಇದ್ದನು. ನಾಲ್ಕು ವರುಷಗಳ ತನಕ ಕೆಲಸಮಾಡಿಸಿಕೊಳ್ಳಲು ಒಂದು ಹಡಗದ ಕ್ಯಾಪ್ಟನನ ಕೈಯಿಂದ

ಕೈಮರನು ಇವನನ್ನು ಕ್ರಯಕ್ಕೆ ಪಡೆದುಕೊಂಡಿದ್ದನು. ಅವನು ಕೂಡ ಒಬ್ಬ ಮುದ್ರಣಾಲಯದ ಮನುಷ್ಯನಾಗಬೇಕಾದವನು. ಇದೇ ರೀತಿಯಲ್ಲಿ ಜಾರ್ಜ್ ವೆಬ್ ಎಂಬೊಬ್ಬ ಆಕ್ಸ್‌ಫರ್ಡ ವಿದ್ವಾಂಸನ ಸೇವೆಯನ್ನೂ ಅವನು ಖರೀದಿ ಮಾಡಿದ್ದನು. ಅವನನ್ನು ಇತ್ತೀಚೆಗೆ ಕಂಪ್ರೋಜಿಟರನನ್ನಾಗಿ ಮಾಡುವ ಉದ್ದೇಶವಿತ್ತು. ಡೇವಿಡ್ ಹೆರಿ ಎಂಬೊಬ್ಬ ಹಳ್ಳಿಯ ಹುಡುಗ ನನ್ನು ಅವನು ತರಬೇತಿಗಾಗಿ ತೆಗೆದುಕೊಂಡಿದ್ದನು.

ಅವನು ಎಂದಿನಂತೆ ಕೊಡುವ ಸಂಬಳಕ್ಕಿಂತ ಇಷ್ಟೊಂದು ಹೆಚ್ಚು ಸಂಬಳಕ್ಕೆ ಅವನು ನನ್ನನ್ನು ಕೆಲಸಕ್ಕಿಟ್ಟುಕೊಳ್ಳುವ ಉದ್ದೇಶವೇನೆಂಬುದು ನನಗೆ ಬೇಗನೆ ತಿಳಿದುಬಂದಿತು. ಯಾಕೆಂದರೆ ಈ ಕಚ್ಚಾ ಕಡಿಮೆ ಸಂಬಳದ ಕೆಲಸಗಾರರನ್ನು ನನ್ನ ಮೂಲಕ ಯೋಗ್ಯ ಕೆಲಸಗಾರರನ್ನಾಗಿ ಮಾಡುವುದಾಗಿತ್ತು. ಅಂತೇ ನಾನು ಅವರಿಗೆ ಕಲಿಸಿ ಅವರು ತರಬೇತಿಹೊಂದಿದೊಡನೆ ಅವರೆಲ್ಲರೂ ಅವನ ನಿರ್ಬಂಧನೆಗೆ ಒಳಪಟ್ಟಿರುವುದರಿಂದ ನಾನು ಇಲ್ಲದೆ ಅವನು ಕೆಲಸ ಸಾಗಿಸಬಹುದಾಗಿತ್ತು. ಏನೇ ಆಗಲಿ, ನಾನು ಮಾತ್ರ ಉಲ್ಲಾಸದಿಂದ ಕೆಲಸಕ್ಕೆ ತೊಡಗಿದೆನು. ಎತ್ತರತೆತ್ತರವಾಗಿದ್ದ ಅವನ ಮುದ್ರಣಾಲಯವನ್ನು ಒಂದು ಕ್ರಮಕ್ಕೆ ತಂದಿರಿಸಿದೆನು. ಅಂತೇ ಅವನ ಸೇವಕರನ್ನು ಸಾವಕಾಶವಾಗಿ ಅವರ ಕೆಲಸಕ್ಕೆ ಲಕ್ಷ್ಯಕೊಡುವಂತೆ ಮತ್ತು ಅದನ್ನು ಉತ್ತಮ ರೀತಿಯಲ್ಲಿ ಮಾಡುವಂತೆ ನೋಡಿಕೊಳ್ಳುತ್ತಿದ್ದೆನು.

ಕ್ರಯಕ್ಕೆ ಪಡೆದ ಸೇವಕರಲ್ಲಿ ಒಬ್ಬ ಆಕ್ಸ್‌ಫರ್ಡ ವಿದ್ವಾಂಸನನ್ನು ಕಾಣುವುದೆಂದರ ವಿಷಮ ಸಂಗತಿಯೇ ಆಗಿತ್ತು. ಅವನು ಇನ್ನೂ ಹದಿನೆಂಟು ವರುಷಕ್ಕಿಂತ ಹೆಚ್ಚು ವಯಸ್ಸಿನವನಾಗಿರಲಿಲ್ಲ. ಅವನು ತನ್ನ ಜೀವನದ ಬಗ್ಗೆ ಈ ಕೆಳಗಿನ ಮಾಹಿತಿಯನ್ನು ತಾನೇ ಕೊಟ್ಟನು. ಅವನು ಗ್ಲೊಸೆಸ್ಟರ್‌ನಲ್ಲಿ ಹುಟ್ಟಿದನು. ಅಲ್ಲಿನ ವ್ಯಾಕರಣ–ಸಾಲೆಯಲ್ಲಿ ಶಿಕ್ಷಣ ಪಡೆದನು. ಅಲ್ಲಿನ 'ವಿಟ್ಟೀ ಕ್ಲಬ್ಬ'(witty club)ನಲ್ಲಿ ಅವರು ನಾಟಕಗಳನ್ನು ಪ್ರದರ್ಶಿಸಿದಾಗ ಅವನು ಆ ವಿದ್ವಾಂಸರಲ್ಲಿ ತನ್ನ ಪಾತ್ರವನ್ನು ಅಭಿನಯಿಸುವುದರಲ್ಲಿ ನೈಜವಾದ ಮೇಲ್ಮೆಯನ್ನು ಹೊಂದಿದನು. ಅಲ್ಲದೆ ಕೆಲವೊಂದು ಚಿಕ್ಕ ಪುಟ್ಟ ನಾಟಕಗಳನ್ನು ಗದ್ಯದಲ್ಲೂ ಪದ್ಯದಲ್ಲೂ ಬರೆದಿದ್ದನು. ಅವುಗಳು ಗ್ಲೊಸೆಸ್ಟರ್ ವರ್ತಮಾನ ಪತ್ರಗಳಲ್ಲಿ ಪ್ರಕಟವಾಗಿದ್ದುವು. ಆ ನಂತರ ಅವನು ಆಕ್ಸ್‌ಫರ್ಡಿಗೆ ಕಳುಹಿಸಲ್ಪಟ್ಟಿದ್ದನು. ಅಲ್ಲಿ ಅವನು ಒಂದು ವರುಷ ಸಾಗಿಸಿದ್ದನು. ಆದರೆ ಸಾಕಷ್ಟು ತೃಪ್ತಿದಾಯಕ

ಪರಿಸ್ಥಿತಿಯಿಲ್ಲದ್ದರಿಂದ ಮತ್ತು ಲಂಡನಿನ ಎಲ್ಲಾ ವಸ್ತುಗಳನ್ನೂ ನೋಡುವ ಅಪೇಕ್ಷೆಯಿಂದ ನಟನಾಗಿಬಿಟ್ಟನು. ಕೊನೆಗೆ ಮೂರು ತಿಂಗಳಿಗೆ ಅವನಿಗೆ ಸಲ್ಲತಕ್ಕ ಹಣ ಹದಿನೈದು ಗಿನಿಗಳು-ಸಂದವು. ತನ್ನ ಸಾಲವನ್ನು ತೀರಿಸುವ ಬದಲು ಅವನು ಪೇಟೆಯಿಂದ ಹೊರಗೆ ಹೋಗಿಬಿಟ್ಟನು. ತನ್ನ ಗೌನನ್ನು ಫರ್ನಿ ಗಂಟಿನಲ್ಲಿ ಅಡಗಿಸಿಟ್ಟು, ಅದನ್ನು ಅನಂತರ ಲಂಡನಿಗೆ ಒಯ್ದನು. ಅಲ್ಲಿ ಅವನಿಗೆ ಬುದ್ಧಿ ಹೇಳುವ ಯಾವ ಗೆಳೆಯರೂ ಇಲ್ಲದ್ದರಿಂದ ಅವನು ಕೆಟ್ಟ ಗೆಳೆಯರ ಸಹವಾಸಕ್ಕೆ ಬಿದ್ದನು. ಕೂಡಲೆ ತನ್ನಲ್ಲಿದ್ದ ಗಿನಿಗಳನ್ನು ಖರ್ಚು ಮಾಡಿದನು. ನಟರೊಡನೆ ತನ್ನ ಪರಿಚಯ ಮಾಡಿಕೊಳ್ಳಲು ಯಾವ ದಾರಿಯನ್ನೂ ಕಾಣದೆ ನಿರ್ಗತಿಕನಾಗಲು ತನ್ನ ಅರಿವೆಗಳನ್ನು ಅಡವು ಇಟ್ಟನು. ಹೊಟ್ಟೆಗೆ ಬ್ರೆಡ್ಡು ದೊರೆಯದಾಯಿತು. ಹಸಿದ ಹೊಟ್ಟೆಯಿಂದ ಬೀದಿಗಳಲ್ಲಿ ಅಲೆದಾಡುವಾಗ, ಮುಂದೇನು ಮಾಡಬೇಕೆಂದು ತೋಚದಾಗ; ಮೋಸದಿಂದ ದಂಡಿಗೆ ಸೇರಿಸುವವನೊಬ್ಬನ ಕರಪತ್ರವು ಅವನ ಕೈಗೆ ಸಿಕ್ಕಿತು. ಅಮೇರಿಕಾದಲ್ಲಿ ಕೆಲಸಮಾಡಲು ಸಿದ್ಧವಿದ್ದವರಿಗೆ ಕೂಡಲೆ ಸುಖ-ಸೌಕರ್ಯ ಪ್ರೋತ್ಸಾಹ ನೀಡಲಾಗುವುದೆಂದು ಅದರಲ್ಲಿ ಬರೆದಿತ್ತು. ಅವನು ನೇರವಾಗಿ ಅಲ್ಲಿಗೆ ಹೋಗಿ, ಕರಾರು ಪತ್ರಗಳಿಗೆ ದಸ್ಕತ್ತು ಹಾಕಿಯೇ ಬಿಟ್ಟನು. ಅಂತೇ ಅವನು ಹಡಗಿಗೆ ಹಾಕಲ್ಪಟ್ಟನು ಅದರಲ್ಲಿ ಸಾಗಿಹೋದದ್ದಾಯಿತು. ತನ್ನ ಪರಿಸ್ಥಿತಿ ಏನಾಗಿದೆಯೆಂಬುದರ ಬಗ್ಗೆ ಮಿತ್ರರಿಗೆ ಒಂದು ಸಾಲು ಕೂಡಾ ಅವನು ಬರೆಯಲಿಲ್ಲ. ಅವನು ಚತುರನೂ, ಕುಶಲನೂ, ಒಳ್ಳೆ ಸ್ವಭಾವದವನೂ ಮತ್ತು ಮೋಜಿನ ಗೆಳೆಯನೂ ಆಗಿದ್ದನು. ಆದರೆ ಸೋಮಾರಿ, ವಿಚಾರಹೀನ ಮತ್ತು ಶುದ್ಧ ಮೂರ್ಖನೂ ಸಹ ಆಗಿದ್ದನು.

ಐರಿಷ್ ಮನುಷ್ಯನಾದ ಜಾನನು ಬೇಗನೆ ಪಲಾಯನ ಮಾಡಿದನು. ಉಳಿದವರ ಜೊತೆಯಲ್ಲಿ ನಾನು ಬಹಳ ಚೆನ್ನಾಗಿ ಕೂಡಿಕೊಂಡು ಜೀವಿಸಲಿಕ್ಕೆ ತೊಡಗಿದೆನು. ಯಾಕೆಂದರೆ ಅವರೆಲ್ಲ ನನ್ನನ್ನು ತುಂಬ ಗೌರವಿಸುತ್ತಿದ್ದರು. ಕಾರಣವೆಂದರೆ,ಕೈಮರನು ಅವರಿಗೆ ಕಲಿಸಲು ಅಯೋಗ್ಯನಾಗಿದ್ದಾನೆಂಬುದು ಅವರಿಗೂ ಕಂಡುಬಂದಿತ್ತು ಮತ್ತು ಪ್ರತಿದಿನವೂ ಅವರು ನನ್ನಿಂದ ಏನಾದರೂ ಹೊಸದನ್ನು ಕಲಿಯುತ್ತಿದ್ದರು. ಶನಿವಾರದ ದಿವಸ ನಾವು ಎಂದೂ ಕೆಲಸ ಮಾಡುತ್ತಿರಲಿಲ್ಲ. ಅದು ಕೈಮರನ ಸಬ್ಬತ್ (Sabbath) ದಿವಸವಾಗಿತ್ತು. ಹೀಗೆ ಎರಡು ದಿವಸಗಳು ನನಗೆ ಓದಲಿಕ್ಕೆ ಇದ್ದವು. ಪೇಟೆಯಲ್ಲಿನ ಬುದ್ಧಿವಂತ ಜನರೊಡನೆ ನನ್ನ ಪರಿಚಯವು

ಹೆಚ್ಚಾಯಿತು. ಕೈಮರನು ಕೂಡಾ ನನ್ನನ್ನು ಅಪರಿಮಿತ ಆದರ–ಅಭಿಮಾನಗಳಿಂದ ನೋಡಿಕೊಳ್ಳಹತ್ತಿದನು. ಅಂತೇ ಈಗ ನನ್ನನ್ನು ವರ್ನನ್‌ನ ಸಾಲದ ಹೊರತಾಗಿ ಬೇರೆ ಯಾವುದೂ ಕಾಡಿಸಲಿಕ್ಕಿರಲಿಲ್ಲ. ಇಲ್ಲಿಯವರೆಗೆ ನಾನು ಕೇವಲ ಬಡ ಅರ್ಥಶಾಸ್ತ್ರಕಾರನಾಗುದರಿಂದ ಆ ಸಾಲವನ್ನು ಸಂದಾಯ ಮಾಡಲಿಕ್ಕೆ ಸಾಧ್ಯವಾಗಿರಲಿಲ್ಲ. ಹೀಗಿದ್ದರೂ ಅವನು ನನ್ನ ಮೇಲೆ ದಯದೋರಿ ಅದನ್ನು ಕೇಳುವ ಗೋಜಿಗೆ ಬಂದಿರಲಿಲ್ಲ.

ನಮ್ಮ ಮುದ್ರಣಾಲಯದಲ್ಲಿ ಆಗಾಗ ಸೋರ್ಟಗಳು (Sorts) ಬೇಕಾಗುತ್ತಿದ್ದವು. ಅಮೇರಿಕಾದಲ್ಲಿ ಅಕ್ಷರ-ಕಾರ್ಖಾನೆ (letter-founder) ಇರಲಿಲ್ಲ. ಲಂಡನಿನ ಜೇಮ್ಸರ ಕಾರ್ಖಾನೆಯಲ್ಲಿ ಟೈಪುಗಳನ್ನು ಹೊಯ್ಯುವುದು ನಾನು ನೋಡಿದ್ದೆನು. ಆದರೆ ಆಗರ ಪದ್ಧತಿಯನ್ನು ಹೆಚ್ಚು ಲಕ್ಷ್ಯಕೊಟ್ಟು ನೋಡಿರಲಿಲ್ಲ. ಹೀಗಿದ್ದರೂ ನಾನು ಈಗ ಒಂದು ಪಡಿಯಚ್ಚನ್ನು ತಯಾರಿಸಿದೆನು. ದೊಡ್ಡದೊಡ್ಡ ಸಿಪಾಯಿಗಳಲ್ಲಿ ತುಂಬಿಸಿಟ್ಟ ಅಕ್ಷರಗಳ ಉಪಯೋಗವನ್ನು ಮಾಡಿಕೊಂಡೆವು. ಸೀಸದಲ್ಲಿ ಮುದ್ರಣಾಕ್ಷರದ ಅಚ್ಚುಗಳನ್ನು ಹೊಯಿಸಿದೆವು. ಹೀಗೆ ನಾಕಷ್ಟು ತೃಪ್ತಿಕರವಾಗುವ ರೀತಿಯಲ್ಲಿ ಎಲ್ಲಾ ಕೊರತೆಗಳನ್ನು ನೀಗಿಸಿಕೊಂಡದ್ದಾಯಿತು. ಸಂದರ್ಭಾನುಸಾರ ನಾನು ಕೂಡ ಅನೇಕ ವಸ್ತುಗಳನ್ನು ಕೊರೆದದ್ದಾಯಿತು. ಮಸಿಯನ್ನು ನಾನು ತಯಾರಿಸಿದ್ದೇನೆ. ನಾನು ಕೂಡ ಒಬ್ಬ ಉಗ್ರಾಣದ ಮನುಷ್ಯನಷ್ಟೆ. ಎಲ್ಲವೂ ನನ್ನಲ್ಲಿತ್ತು. ಸ್ವಲ್ಪದರಲ್ಲೇ ಹೇಳುವುದಾದರೆ ಪ್ರತಿಯೊಂದು ಕೆಲಸವನ್ನೂ ಮಾಡುವ ವ್ಯಕ್ತಿ ನಾನಾಗಿದ್ದೆ.

ಆದರೆ ಮಿಕ್ಕ ಜನಗಳು ವ್ಯವಹಾರದಲ್ಲಿ ಸುಧಾರಿಸಿದುದರಿಂದ ನಾನೆಷ್ಟು ಕೆಲಸ ಮಾಡಿದರೂ ಕೂಡ ನನ್ನ ಕೆಲಸಗಳಿಗೆ ದಿನದಿಂದ ದಿನಕ್ಕೆ ಮಹತ್ವ ಕಡಿಮೆಯಾಗಲಾರಂಭಿಸಿತು. ಅಂತೇ ಕೈಮರನು ನನ್ನ ದ್ವಿತೀಯ ತ್ರೈಮಾಸಿಕದ ಸಂಬಳವನ್ನು ಕೊಡುವಾಗ ಅವನು ಅದು ಬಹಳ ಹೆಚ್ಚಾಗುತ್ತದೆಂದು ನನಗೆ ತಿಳಿಯಪಡಿಸಿದನು. ಅಲ್ಲದೆ ನಾನು ಅದನ್ನು ಕಡಿಮೆ ಮಾಡಬೇಕೆಂದೂ ಹೇಳಿದುದಾಯಿತು. ಕ್ರಮೇಣ ಅವನ ಆದರ ಕಡಿಮೆಯಾಯಿತು. ಒಡೆತನದ ದರ್ಬಾರು ನನ್ನ ಮೇಲೆ ನಡೆಸಹತ್ತಿದನು. ಆಗಾಗ ನನ್ನಲ್ಲಿ ತಪ್ಪು ಹುಡುಕತೊಡಗಿದನು. ಜಗಳಗಂಟನಾದ ಅವನು ರಂಪವೆಬ್ಬಿಸಲು ಸಿದ್ಧನಾಗಿಯೇಬಿಟ್ಟನು. ಹೀಗಿದ್ದರೂ ನಾನು ಸಾಕಷ್ಟು ತಾಳ್ಮೆಯಿಂದಲೇ ನಡೆದೆನು. ಇದಕ್ಕೆ ಅವನ ಹದಗೆಟ್ಟ ವಾತಾವರಣವು ಕಾಸು ಕಾರಣವಾಗಿರಬೇಕೆಂದು ನಾನು ಹಾಗೆ ವರ್ತಿಸುತ್ತಿದ್ದೆನು. ಕಟ್ಟ

ಕಡೆಗೆ ಒಂದು ಕ್ಷುಲ್ಲಕ ವಿಷಯವು ನಮ್ಮ ಸಂಬಂಧವನ್ನು ಕಡಿದು ಬಿಟ್ಟಿತು. ಯಾಕೆಂದರೆ ಕೋರ್ಟಿನ ಹತ್ತಿರ ಒಂದು ದೊಡ್ಡ ಜೊಬ್ಬೆ ಎದ್ದಾಗ ನಾನು ಕಿಟಕಿಯಿಂದ ತಲೆ ಹೊರಗೆ ಹಾಕಿ ಏನು ಸಂಗತಿಯೆಂಬುದನ್ನು ನೋಡಿದೆನು. ಕೈಮರನು ಬೀದಿಯಲ್ಲಿದ್ದುದರಿಂದ ಮೇಲೆ ನೋಡಿದವನು ನನ್ನನ್ನು ಕಂಡನು. ದೊಡ್ಡ ಬಾಯಿ ಮಾಡಿ ನನ್ನನ್ನು ಒದರಿ ಸಿಟ್ಟಿನ ಧ್ವನಿಯಲ್ಲಿ ನನ್ನ ಕೆಲಸ ನೋಡಲು ಹೇಳಿದನು. ಕೆಲವು ದೂಷಣೆಯ ಬೈಗಳನ್ನೂ ಬೈದನು. ಬಹಿರಂಗವಾಗಿ ಆಡಿದ ಅವನ ಮಾತುಗಳು ನನ್ನನ್ನು ತುಂಬ ರೇಗಿಸಿದವು. ಅದೇ ಹೊತಿನಲ್ಲಿ ಹೊರಗೆ ನೋಡುತ್ತಿದ್ದ ನೆರೆಹೊರೆಯವರೇ ಅವನು ನನ್ನನ್ನು ಹೇಗೆ ನಡೆಸಿಕೊಂಡನೆಂಬುದಕ್ಕೆ ಸಾಕ್ಷಿಯೆನ್ನಬೇಕು. ಆ ಕೂಡಲೆ ಅವನು ಮೇಲಕ್ಕೆ ಹತ್ತಿ ಮುದ್ರಣಾಲಯಕ್ಕೆ ಬಂದನು. ಜಗಳವನ್ನು ಹಚ್ಚಿಯೇಬಿಟ್ಟನು. ಎರಡೂ ಕಡೆಯಿಂದ ಮಾತುಗಳಾದವು. ನಾವು ಕರಾರು ಮಾಡಿದಂತೆ ಅವನು ಒಂದು ತ್ರೈಮಾಸಿಕದ ಎಚ್ಚರಿಕೆಯನ್ನು(Warning) ನನಗೆ ಕೊಟ್ಟೇಬಿಟ್ಟನು ಅಷ್ಟು ದೀರ್ಘದ ಎಚ್ಚರಿಕೆಯನ್ನು ಕೊಡಲಿಕ್ಕೆ ಕೂಡ ಅವನಿಗೆ ಯಾವ ಹಂಗೂ ಇಲ್ಲವೆಂದೂ ಹೇಳಿದನು. ಅವನ ಯಾವ ಹಂಗೂ ಅನಾವಶ್ಯಕ ಮತ್ತು ನಾನು ಅದೇ ಕ್ಷಣಕ್ಕೆ ಬಿಟ್ಟುಹೋಗುತ್ತೇನೆಂದು ಅವನಿಗೆ ಹೇಳಿದೆನು. ಹೀಗೆ ಹೇಳಿದವನೆ ನನ್ನ ಹ್ಯಾಟನ್ನು ತೆಗೆದುಕೊಂಡು ಧಡಧಡನೆ ಬಾಗಿಲಿನಿಂದ ಹೊರಗೆ ಇಳಿದು ಹೋದೆನು. ಮೆರ್ಡಿತನನ್ನು ಮಾತ್ರ ಹೊರ ಬರಲು ಹೇಳಿದ್ದೆನು. ಅವನನ್ನೂ ನಾನು ಕೆಳಗೆ ಕಂಡುದಾಯಿತು. ನಾನು ಬಿಟ್ಟು ಬಂದ ಕೆಲವು ವಸ್ತುಗಳನ್ನು ನೋಡಿಕೊಂಡು ನನ್ನ ವಸತಿಗೃಹಕ್ಕೆ ಅವುಗಳನ್ನು ತರಲಿಕ್ಕೆ ಹೇಳಿದೆನು.

ಅದೇ ಪ್ರಕಾರ ಮೆರ್ಡಿತನು ಸಂಜೆಗೆ ಬಂದನು. ಆಗ ನಾವು ನನ್ನ ವಿಷಯವನ್ನೆಲ್ಲ ಮಾತಾಡಿ ಮುಗಿಸಿದೆವು. ಅವನು ನನ್ನ ಬಗ್ಗೆ ಭಾರೀ ಗೌರವ ಇಟ್ಟುಕೊಂಡಿದ್ದನು. ಅವನು ಇನ್ನೂ ಅಲ್ಲಿಯೇ ಇರುವಾಗ ನಾನು ಮುದ್ರಣಾಲಯವನ್ನು ಬಿಟ್ಟು ಹೋಗುವುದು ಅವನಿಗೆ ಬಹಳ ಅಸಮಾಧಾನವಾಗಿತ್ತು. ನನ್ನ ಜನ್ಮಸ್ಥಳಕ್ಕೆ ಮರಳುವುದನ್ನು ಅವನು ನಿಲ್ಲಿಸಲು ಸಾಕಷ್ಟು ಹೇಳಿಕೊಂಡನು. ನಾನು ಊರಿಗೆ ಹೋಗುವ ವಿಚಾರದಲ್ಲಿದ್ದೆನು. ಕೈಮರನಲ್ಲಿ ಇದ್ದುದೆಲ್ಲವೂ ಸಾಲದಲ್ಲಿ ಮುಳುಗಿ ಹೋಗಿದೆಯೆಂದು ನನಗೆ ಅವನು ಗೊತ್ತು ಮಾಡಿದನು. ಅವನ ಸಾಲಗಾರರು ಅಸಮಾಧಾನಗೊಳ್ಳಹತ್ತಿದ್ದಾರೆ. ಅವನು ಅಂಗಡಿಯನ್ನು ಬಹಳ ಕಷ್ಟ

ದಿಂದ ನಡೆಸುತ್ತಿದ್ದಾನೆ. ನಗದಿ ಹಣಕ್ಕೆ ಆಗಾಗ ಲಾಭವಿಲ್ಲದೆಯೂ ಸಾಮಾನು ಮಾರುತ್ತಿದ್ದಾನೆ. ಅಲ್ಲದೆ ಲೆಕ್ಕವಿಡದೆಯೂ ಹಾಗೇ ಆಗಾಗ ಬಾಯಿಮಾತಿನಲ್ಲಿ ನಂಬುತ್ತಿದ್ದಾನೆ. ಆದುದರಿಂದ ಅವನು ಖಂಡಿತಕ್ಕೂ ಕೆಳಗೆ ಬೀಳುತ್ತಾನೆ. ಆದ್ದರಿಂದ ನನಗೆ ಲಾಭ ಸಿಗುವ ಒಂದು ಸ್ಥಳವು ಸಿಗುತ್ತದೆಂದು ಅವನು ನನಗೆ ಹೇಳಿದನು ನನ್ನ ಹಣದ ಅಡಚಣೆಯನ್ನು ನಾನು ಮುಂದೆ ಹಾಕಿದೆನು. ಆಗ ಅವನು ತನ್ನ ತಂದೆಯವರಿಗೆ ನನ್ನ ಬಗ್ಗೆ ಒಳ್ಳೆಯ ಅಭಿಪ್ರಾಯವಿದೆಯೆಂಬುದನ್ನು ನನಗೆ ತಿಳಿಯಪಡಿಸಿದನು. ಮತ್ತು ಅವರಿಬ್ಬರೊಳಗೆ ನಡೆದ ಕೆಲವೊಂದು ಮಾತುಕತೆಗಳಿಂದ ನಾನು ಅವನೊಡನೆ ಪಾಲಿಗೆ ಸೇರಿದರೆ ನಮ್ಮಿಬ್ಬರನ್ನು ವ್ಯವಹಾರಕ್ಕೆ ತೊಡಗಿಸಲು ಅವರು ಹಣ ಕೊಡುವುದು ಖಂಡಿತವೆಂಬುದನ್ನೂ ನನಗೆ ಹೇಳಿದನು. "ಕೈಮರನೊಡನೆ ನಾನು ಇರತಕ್ಕ ಅವಧಿಯು ಈ ವಸಂತ ಋತುವಿನಲ್ಲಿ ಕೊನೆಗೊಳ್ಳುತ್ತದೆ. ಆ ಹೊತ್ತಿನೊಳಗಾಗಿ ನಾವು ಲಂಡನಿನಿಂದ ನಮ್ಮ ಪ್ರೆಸ್ ಮತ್ತು ಟೈಪುಗಳನ್ನು ತರಿಸಿಡಬಹುದು. ನಾನು ಕಲಾಕುಶಲ ನಲ್ಲವೆಂಬ ತಿಳುವಳಿಕೆ ನನಗುಂಟು. ನೀನು ಒಪ್ಪಿದರೆ ನಿನ್ನ ವ್ಯವಹಾರ ಕುಶಲತೆಯು ನನ್ನ ಸಾಹಿತ್ಯ–ಸಾಮಗ್ರಿಗಳ ಸಂಗ್ರಹಕ್ಕೆ ಸರಿಯೆನಿಸಿಸ ಬಹುದು. ನಾವಿಬ್ಬರೂ ಲಾಭವನ್ನು ಸರಿಯಾಗಿ ಹಂಚಿಕೊಳ್ಳೋಣ." ಎಂದು ಅವನು ಹೇಳಿದನು.

ಯೋಜನೆ ಏನೋ ಒಪ್ಪತಕ್ಕದ್ದಾಗಿತ್ತು. ಅಂತೇ ನಾನು ಸಮ್ಮತಿಸಿದೆನು. ಅವನ ತಂದೆಯವರು ಪೇಟೆಯಲ್ಲಿದ್ದರು. ಅದನ್ನು ಅವರೂ ಒಪ್ಪಿಯಾಯಿತು. ಅವರ ಮಗನ ಮೇಲೆ ನನ್ನ ಅದ್ಭುತ ವರ್ಚಸ್ಸು ಇರುವುದನ್ನು ಅವರು ಹೆಚ್ಚು ಹೆಚ್ಚು ಕಂಡಂತೆ ಅದರಿಂದ ಅವನ ಸೆರೆ ಕುಡುಕತನವು ಕ್ರಮೇಣ ನಿಂತು ಹೋಗುವುದೆಂದೂ ಅವರು ತಿಳಿದಿದ್ದರು. ಹೀಗೆ ನಾವಿಬ್ಬರೂ ಒಟ್ಟಿಗೆ ಇರತೊಡಗಿದೊಡನೆ ಅವನ ಈ ಕೆಟ್ಟ ಚಟವು ಸಂಪೂರ್ಣ ಅಳಿದುಬಿಡುತ್ತದೆಂದು ಅವರು ಆಶಿಸಿದ್ದರು. ತಂದೆಯವರ ಕೈಯಲ್ಲಿ ನಾನೊಂದು ಯಾದಿಯನ್ನು ಕೊಟ್ಟೆನು. ಅವರು ಅದನ್ನು ಒಬ್ಬ ವ್ಯಾಪಾರಿಗೆ ಕೊಟ್ಟರು. ಸರಿ, ಸಾಮಗ್ರಿಗಳನ್ನು ತರಿಸುವುದಕ್ಕೆ ಹೇಳಿಯಾಯಿತು. ಎಲ್ಲ ಸಾಹಿತ್ಯ ಸಾಮಗ್ರಿಗಳು ಬಂದು ಮುಟ್ಟುವ ತನಕ ಈ ವಿಷಯ ಗೌಪ್ಯವಾಗಿಡಬೇಕಾಗಿತ್ತು. ಈ ಅವಧಿಯಲ್ಲಿ ಸಾಧ್ಯವಾದರೆ ಬೇರೆ ಮುದ್ರಣಾಲಯದಲ್ಲಿ ನನಗೆ ಕೆಲಸವೂ ದೊರೆಯಬೇಕಾಗಿತ್ತು. ಆದರೆ ಅಲ್ಲಿ ನನಗೆ ಕೆಲಸ ಸಿಗಲಿಲ್ಲ. ಆದುದರಿಂದ್ದ ಕೆಲದಿವಸಗಳ ತನಕ ನಾನು ಸೋಮಾ

ರಿಯಾಗಿ ಉಳಿದೆನು. ಆಗೊಮ್ಮೆ ಕೈಮರನು ನ್ಯೂಜೆರ್ಸಿಯಲ್ಲಿ ಕಾಗದದ ಹಣ ಮುದ್ರಿಸುವ ಕೆಲಸ ಪಡೆಯುವ ಪ್ರತೀಕ್ಷೆಯಿಂದ ಇದ್ದನು ಈ ಕೆಲಸಕ್ಕೆ ಬೇಕಾದ ಆಕಾರಗಳನ್ನು (cuts) ಮತ್ತು ವಿವಿಧ ಟೈಪುಗಳನ್ನು ನಾನೊಬ್ಬನಷ್ಟೆ ಸಿದ್ಧಪಡಿಸಬಹುದಾಗಿತ್ತು. ಹೀಗೆ ನನ್ನನ್ನು ಬ್ರೆಡ್‌ಫೋರ್ಡನು ಕೆಲಸಕ್ಕೆ ಸೇರಿಸಿಕೊಂಡು ತನ್ನ ವ್ಯವಹಾರವನ್ನು ಪಡೆದುಕೊಂಡಾನೆಂದುಭಾವಿಸಿ ಕೈಮರನು ನನಗೊಂದು ನಯವಾದ ಮಾತುಗಳ ಆದರಪತ್ರವನ್ನು ಕಳುಹಿಸಿದನು. ಯಾವುದೋ ಒಂದು ಕ್ಷಣಿಕ ಭಾವನೆಯ ಕಾರಣದಿಂದ ಹಳೆಯ ಗೆಳೆಯರು ಕೇವಲ ನಾಲ್ಕು ಮಾತುಗಳಿಗೆ ಒಡೆದು ಹೋಗಬಾರದೆಂದೂ ನಾನು ಹಿಂದಿರುಗಿ ಅವನಲ್ಲಿಗೆ ಹೋಗಬೇಕೆಂದೂ ಅದರಲ್ಲಿ ಅಪೇಕ್ಷೆಪಟ್ಟಿದ್ದನು. ನನ್ನ ದಿನ ನಿತ್ಯದ ಸಲಹೆಗಳ ಮೂಲಕ ಅವನಿಗೆ ನಾಕಷ್ಟು ಸುಧಾರಣೆ ಮಾಡಿಕೊಳ್ಳಲಿಕ್ಕೆ ಆಗುತ್ತದೆಂದು ಮರ್ಡಿತನೂ ಅಲ್ಲಿಗೆ ಹೋಗಿ ಕೆಲಸಕ್ಕೆ ಒಪ್ಪಲು ಕೇಳಿಕೊಂಡನು. ಆದುದರಿಂದ ನಾನು ಪುನಃ ಕೆಲಸಕ್ಕೆ ಸೇರಿದೆನು. ಮೊದಲಿಗಿಂತ ಬಹಳ ಒಳ್ಳೆಯ ರೀತಿಯಿಂದ ಕೆಲಕಾಲದ ತನಕ ನಾವು ವರ್ತಿಸಿಕೊಂಡೆವು. ನ್ಯೂಜೆರ್ಸಿಯ ಕೆಲಸವನ್ನು ದೊರಕಿಸಿಕೊಂಡನು. ಅದಕ್ಕೇ ಒಂದು ಕೋಪರ್‌ಪ್ಲೇಟ ಮುದ್ರಣ (copper plate press)ವನ್ನು ಸಿದ್ಧಪಡಿಸುವ ಹಂಚಿಕೆ ಹಾಕಿದೆನು. ಇದು ಆ ದೇಶದಲ್ಲಿ ಮೊಟ್ಟ ಮೊದಲಿಗೆ ಕಾಣುವಂತಹದಾಗಿತ್ತು. ಹುಂಡಿಗಳಿಗೆ (bills) ನಾನು ಅನೇಕ ತರಹದ ಕುಸುರಿನ ಕೆಲಸಗಳನ್ನು ಮಾಡಿದೆನು. ನಾವಿಬ್ಬರೂ ಒಟ್ಟಿಗೆ ಬರ್ಲಿಂಗ್‌ಟನ್ನಿಗೆ ಹೋದೆವು. ಅಲ್ಲಿ ಎಲ್ಲವನ್ನೂ ತೃಪ್ತಿಕರವಾಗಿ ನಿರ್ವಹಿಸಿಕೊಟ್ಟದ್ದಾಯಿತು. ಈ ಕೆಲಸಕ್ಕೆ ಅವನಿಗೆ ಹೇರಳ ಹಣ ದೊರೆತಿತು. ಇದರಿಂದ ಅವನು ಸಾಲದಿಂದ ಭಾರವಾದ ತಲೆಯನ್ನು ಎಷ್ಟೋ ಹಗುರಮಾಡಿಕೊಳ್ಳಲು ತುಂಬ ಅನುಕೂಲ ಮಾಡಿದಂತಾಯಿತು.

ಬರ್ಲಿಂಗ್‌ಟನ್ನಿನಲ್ಲಿ ನಾನು ಪ್ರಾಂತದ ಅನೇಕ ಪ್ರತಿಷ್ಠಿತ ಜನರೊಡನೆ ಪರಿಚಯ ಮಾಡಿಕೊಂಡೆನು. ಅವರಲ್ಲಿ ಅನೇಕರನ್ನು ಒಂದು ಆಯೋಗಕ್ಕೆ ಅಸೆಂಬ್ಲಿಯವರು ನೇಮಿಸಿ ನಮ್ಮ ಪ್ರೆಸ್ಸನ್ನು ನೋಡಲು ಒಪ್ಪಿಸಿದ್ದರು. ಅವರು ಕ್ರಾಯ್ದೆಯಿಂದ ಎಷ್ಟು ಬಿಲ್ಲುಗಳನ್ನು ಮುದ್ರಿಸಲಿಕ್ಕಿತ್ತೋ ಅಷ್ಟನ್ನು ಮಾತ್ರ ಮುದ್ರಿಸುತ್ತಾರೋ ಇಲ್ಲವೋ ಎಂಬುದನ್ನು ಎಚ್ಚರಿಕೆಯಿಂದ ನೋಡಬೇಕಾಗಿತ್ತು. ಹೀಗಾಗಿ ಪಾಳಿ ಪ್ರಕಾರ ಅವರು ಎಡೆಬಿಡದೆ ನಮ್ಮೊಡನೆ ಇರುತ್ತಿದ್ದರು. ಸಾಮಾನ್ಯವಾಗಿ ಅಲ್ಲಿ ಹಾಜರಿ

ಇರುತ್ತಿದ್ದವರು ತಮ್ಮ ಸಂಗಡ ಒಬ್ಬೊಬ್ಬ ಮಿತ್ರರನ್ನು ಕರೆದುಕೊಂಡು ಬರುತ್ತಿದ್ದರು. ಓದಿನಿಂದಾಗಿ ನನ್ನ ಮನಸ್ಸು ಕೈಮುರನದಕ್ಕಿಂತ ಹೆಚ್ಚು ಪಕ್ವವಾದದ್ದರಿಂದ ನನ್ನ ಸಂಭಾಷಣೆಯು ಅಧಿಕ ಬೆಲೆ ಬಾಳುವಂತಹದ್ದಾಗಿತ್ತೆಂದು ನನಗೆನಿಸುತ್ತದೆ. ಅವರು ನನ್ನನ್ನು ತಮ್ಮ ಮನೆಗಳಿಗೆ ಕರೆದೊಯ್ಯುತ್ತಿದ್ದರು. ಮತ್ತು ತಮ್ಮ ಮಿತ್ರರಿಗೆ ನನ್ನ ಪರಿಚಯ ಮಾಡಿಕೊಡುತ್ತಲೂ ಇದ್ದರು. ಹೀಗೆ ನನಗೆ ಸಾಕಷ್ಟು ಆದರಾತಿಥ್ಯವನ್ನು ತೋರಿಸುತ್ತಿದ್ದರು. ಇತ್ತ ಅವನು ಒಡೆಯನಾಗಿದ್ದರೂ ಕೂಡ ಸ್ವಲ್ಪ ತಿರಸ್ಕರಿಸಲ್ಪಡುತ್ತಿದ್ದನು. ನಿಜವಾಗಿ ಹೇಳುವುದಾದರೆ ಅವನೊಬ್ಬ ತಿಳಿಗೇಡಿ ಮನುಷ್ಯ. ಸಾಮಾನ್ಯ ಜೀವನದ ವಿಷಯ ಅವನಿಗೆ ಕೊಂಚವೂ ತಿಳಿಯದು. ಅಂಗೀಕೃತ ಅಭಿಪ್ರಾಯಗಳನ್ನು ಕ್ರೂರವಾಗಿ ಖಂಡಿಸುವುದರಲ್ಲಿ ಬಹಳ ಒಲವು ಅವನಿಗಿತ್ತು. ತೀರ ಗತಿಗೆಟ್ಟ ಅವಲಕ್ಷಣಗಳಿಂದ ಕೂಡಿದ ಕುರೂಪಿಯಾಗಿದ್ದನು. ಧಾರ್ಮಿಕ ವಿಷಯಗಳಲ್ಲಿ ಬಹಳ ಹುರುಪುಳ್ಳವನು. ಅದೇ ಪ್ರಕಾರ ತುಸು ಠಕ್ಕನೂ ಅಹುದು.

ಅಲ್ಲಿ ಸುಮಾರು ಮೂರು ತಿಂಗಳುಗಳ ತನಕ ನಾವು ಇದ್ದೆವು ಆ ಕಾಲದಲ್ಲಿ ನಾನು ಪರಿಚಯ ಮಾಡಿಕೊಂಡ ಮಿತ್ರರ ಹೆಸರುಗಳನ್ನು ಎಣಿಸಬಹುದು. ಜಡ್ಜ ಎಲೆನ್, ಪ್ರಾಂತ್ಯದ ಸೆಕ್ರೆಟರಿಯಾದ ಸ್ಯಾಮುವಲ್ ಬಸ್ಟಿಲ್, ಐಸ್ಯಾಕ್ ಪಿಯರ್‌ಸನ್, ಜೋನೆಫ್ ಕೂಪರ್ ಮತ್ತು ಅನೇಕ ಸ್ಮಿತ್‌ರು, ಅಸೆಂಬ್ಲಿಯ ಮೆಂಬರುಗಳ, ಹಾಗೂ ಸರ್ವೇಯರ್ ಜನರಲ್‌ರಾದ ಐಸ್ಯಾಕ್ ಡಿಕೌ ಅವರು. ಕೊನೆಯವರು ಒಬ್ಬ ಚತುರ ಹಾಗೂ ಧೂರ್ತ ಮುದಿ ವ್ಯಕ್ತಿ. ಇಟ್ಟಂಗಿ ಮಾಡುವವರಲ್ಲಿ ತರುಣರಿದ್ದಾಗ ಮಣ್ಣಿನ ಚಕ್ರ ತಿರುಗಿಸುತ್ತ ತನ್ನ ಜೀವನವನ್ನು ಪ್ರಾರಂಭಿಸಿದೆನೆಂದು ಅವರು ನನಗೆ ಹೇಳಿದ್ದರು. ವಯಸ್ಸು ಮೀರಿದ ಮೇಲೆ ಬರೆಯಲಿಕ್ಕೆ ಕಲಿತರು. ಸರ್ವೆಯರುಗಳ ಕೂಡ ಚೈನು ಹೊತ್ತರು. ಅವರು ಇವರಿಗೆ ಸರ್ವೆ ಮಾಡಲು ಕಲಿಸಿಕೊಟ್ಟರು. ಈಗ ಅವರು ತಮ್ಮ ಸತತ ದುಡಿಮೆಯಿಂದ ಒಂದು ಒಳ್ಳೆಯ ಆಸ್ತಿಯನ್ನು ಮಾಡಿದ್ದಾರೆ. ಅಂತೇ ಅವರು "ನೀನು ಬೇಗನೆ ಈ ಮನುಷ್ಯನನ್ನು ಅವನ ವ್ಯವಹಾರದಿಂದ ಹೊರದೂಡಿ ಅದರಿಂದಲೇ ಫಿಲಡೆಲ್ಫಿಯಾದಲ್ಲಿ ಸಾಕಷ್ಟು ಐಶ್ವರ್ಯವಂತನಾಗುತ್ತಿಯೆಂಬ ಭವಿಷ್ಯ ನನಗೆ ಕಾಣಿಸುತ್ತದೆ." ಎಂದು ಹೇಳಿದ್ದರು. ಆಗ ನಾನು ಅಲ್ಲಿಯಾಗಲಿ ಅಥವಾ ಬೇರೆ ಎಲ್ಲಿಯಾಗಲಿ ವ್ಯವಹಾರ ಮಾಡುವ ನನ್ನ ಇಚ್ಛೆಯಬಗ್ಗೆ ಅವರಿಗೆ ಯಾವ ಸುದ್ದಿಯೂ ಗೊತ್ತಿರಲಿಲ್ಲ. ಈ ಗೆಳೆಯ

ರೆಲ್ಲ ನನಗೆ ಅನಂತರ ಬಹಳ ಉಪಯೋಗಕ್ಕೆ ಬಿದ್ದಿದ್ದಾರೆ. ಯಾಕೆಂದರೆ ಪ್ರಸಂಗಾನುಸಾರ ನಾನು ಅವರಲ್ಲಿ ಕೆಲವರಲ್ಲಿಗೆ ಹೋಗುವ ಕಾಲವೊದಗಿತ್ತು. ಅವರೆಲ್ಲ ತಾವು ಬದುಕಿರುವಲ್ಲಿಯು ತನಕ ನನ್ನಮೇಲೆ ಆದರ ವ್ಯಕ್ತಗೊಳಿಸುತ್ತಲೇ ಇದ್ದರು.

ವ್ಯವಹಾರದಲ್ಲಿ ಇಳಿದು ಸಾರ್ವಜನಿಕರಲ್ಲಿ ನಾನು ಕಾಣಿಸಿಕೊಳ್ಳುವುದನ್ನು ಬರೆಯುವುದಕ್ಕಿಂತ ಮೊದಲು ಆಗ ನನ್ನ ಮನಸ್ಸಿನ ಪರಿಸ್ಥಿತಿಯು ಧಾರ್ಮಿಕ ತತ್ವಗಳ ಬಗ್ಗೆ ಮತ್ತು ನೀತಿಗಳ ಬಗ್ಗೆ ಹೇಗಿತ್ತೆಂಬುದನ್ನು ನಿಮಗೆ ತಿಳಿಯಪಡಿಸುವುದು ಒಳ್ಳೆಯದಾಗಬಹುದು. ಇವುಗಳು ನನ್ನ ಭಾವೀಜೀವನದ ಘಟನೆಗಳಮೇಲೆ ಎಷ್ಟರಮಟ್ಟಿಗೆ ತಮ್ಮ ಪ್ರಭಾವ ಬೀರಿದವೆಂಬುದನ್ನು ನೀವು ನೋಡಬಹುದಷ್ಟೆ. ನನ್ನ ಪಾಲಕರು ಬೇಗನೆ ಧಾರ್ಮಿಕ ಮುದ್ರೆಯನ್ನು ನನ್ನ ಮನದ ಮೇಲೆ ಒತ್ತಿದ್ದರು; ಚಿಕ್ಕಂದಿನಿಂದ ಮತಭೇದದ ವಿಷಯದಲ್ಲಿ ನನ್ನನ್ನು ಶ್ರದ್ಧೆಯಿಂದ ಸಾಕಿದ್ದಾಗಿತ್ತು. ಆದರೆ ನಾನಿನ್ನೂ ಹದಿನೈದು ವರುಷದವನಾಗುತ್ತಿದ್ದಾಗಲೇ ಅನೇಕ ತತ್ವಗಳ ನಡತೆಯ ಬಗ್ಗೆ ನಾನು ಸಂಶಯ ತಾಳಲಿಕ್ಕೆ ಹತ್ತಿದೆನು. ಯಾಕೆಂದರೆ ನಾನು ಓದಿದ್ದ ಪುಸ್ತಕಗಳಲ್ಲಿ ಅವುಗಳನ್ನು ವಿವಾದಕ್ಕೊಳಪಡಿಸಿದ್ದನ್ನು ನಾನು ಕಂಡಿದ್ದೆ. ಪ್ರವಚನ(Revelation)ದ ಬಗ್ಗೆಯೇ ನಾನು ಸಂಶಯ ಪಡಲಿಕ್ಕೆ ತೊಡಗಿದೆನು ಆಸ್ತಿಕತ್ವದ ವಿರುದ್ಧವಿದ್ದ ಕೆಲಪುಸ್ತಕಗಳು ನನ್ನ ಕೈಗೆ ಬಿದ್ದುವು. ಅವುಗಳು ಬೋಯ್ಲನ ಉಪನ್ಯಾಸಗಳಲ್ಲಿ ಬೋಧಿಸಲ್ಪಟ್ಟ ಪ್ರವಚನಗಳ ತಿರುಳೆಂಬುದು ತಿಳಿದುಬಂದಿತು. ಅವುಗಳು ಯಾವ ಉದ್ದೇಶದಿಂದ ಬರೆಯಲ್ಪಟ್ಟಿದ್ದವೋ ಅವುಗಳ ವಿರುದ್ಧವಾದ ಪರಿಣಾಮವನ್ನು ನನ್ನ ಮೇಲೆ ಉಂಟುಮಾಡಿದವು ಯಾಕೆಂದರೆ ವಿರೋಧಿಸಲ್ಪಟ್ಟವೆಂದು ಉದ್ಧರಿಸಲಾದ ಆಸ್ತಿಕರ ವಾದಗಳು ನನ್ನ ಮನಸ್ಸಿಗೆ ಖಂಡನೆಗಳಿಗಿಂತ ಹೆಚ್ಚು ಬಲವಾಗಿ ಕಂಡುಬಂದವು. ಸ್ವಲ್ಪದರಲ್ಲೆ ಹೇಳುವುದಾದರೆ ನಾನು ಬೇಗನೆ ಆಸ್ತಿಕನಾದೆನು. ನನ್ನ ವಾದಗಳು ಕೆಲವರನ್ನು ದುರ್ಮಾರ್ಗಕ್ಕೆ ಒಯ್ಯುವಂತಾದವು: ಮುಖ್ಯವಾಗಿ ಅಂದರೆ ಕೊಲಿನ್ಸ ಮತ್ತು ರಾಲ್ಫ್. ಆದರೆ ಇಬ್ಬರೂ ಆಮೇಲೆ ಸ್ವಲ್ಪವೂ ಪಶ್ಚಾತ್ತಾಪ ಪಡದೆ ನನಗೆ ಕೇಡು ಮಾಡಿದುದರಿಂದ ಮತ್ತು ನನ್ನ ಬಗ್ಗೆ ಕೈತನ ವರ್ತನೆಗಳನ್ನು ಪರ್ಯಾಲೋಚಿಸಿ (ಇವನು ಸಹ ಮತ್ತೊಬ್ಬ ಸ್ವತಂತ್ರ ವಿಚಾರಿ) ಹಾಗೂ ವರ್ನನ್ ಮತ್ತು ಮಿಸ್ ರೀಡ್ ಇವರ ಬಗ್ಗ ಸ್ವತಃ ನಾನು ನಡೆದ ರೀತಿ – ಇದು ಕೆಲಸಮಯದಲ್ಲಿ ನನಗೆ ದೊಡ್ಡ ಕಷ್ಟಕ್ಕೆ ಗುರಿ ಮಾಡಿತ್ತು – ಇವುಗಳನ್ನೆಲ್ಲ

ನೆನೆದು ನಾನು ಈ ತತ್ತ್ವದಲ್ಲಿ ಸಂಶಯ ಪಡಲು ಹತ್ತಿದೆನು. ಇದು ನಿಜವಾಗಿದ್ದರೂ ಬಹಳ ಉಪಯುಕ್ತವಾದುದಾಗಿರಲಿಲ್ಲ. ನನ್ನ ಲಂಡನ್ ಕರಪತ್ರಿಕೆಯಲ್ಲಿ ಅದರ ಆದರ್ಶವಾಕ್ಯವಾಗಿ ಡ್ರೈಡನ್‌ನ ಈ ಸಾಲುಗಳಿದ್ದುವು:

ಯಾವುದು ಇದೆಯೋ – ಇದ್ದುದೇ ಸರಿ. ಅರೆಗಣ್ಣಿನ ಮನುಜನಾದರೂ ಕೂಡ
ಸರಪಣಿಯ ಒಂದು ಭಾಗವನ್ನಷ್ಟೆ ಕಾಣುವನು – ತೀರ ಹತ್ತಿರದ ಗೋಣಸನ್ನು:
ಅವನ ಕಣ್ಣುಗಳು ಸಮತೂಕದ ತೊಲೆಯ ಕಾಣವು, ಅದು ನಮ್ಮೆಲ್ಲರನ್ನೆಲ್ಲ ಉನ್ನತದಲ್ಲಿದ್ದು ತೂಗುತಿಹುದು.

ಅಂತೇ ದೇವರ ಗುಣಗಳಿಂದ, ಅವನ ಅನಂತ ಜ್ಞಾನ, ಕಲ್ಯಾಣ ಹಾಗೂ ಶಕ್ತಿಯಿಂದಾಗಿ ಜಗತ್ತಿನಲ್ಲಿ ಯಾವುದೂ ತಪ್ಪಿನದಿರಲಾರದೆಂದು ನಾನು ನಿರ್ಧರಿಸಿದೆನು. ಅಲ್ಲದೆ ಸುಗುಣ ದುರ್ಗುಣಗಳು ಕೇವಲ ಟೊಳ್ಳು ಪ್ರಭೇದಗಳು. ಅಂಥ ಯಾವ ವಿಷಯವು ಅಸ್ತಿತ್ವದಲ್ಲಿ ಇಲ್ಲ. ನಾನೊಮ್ಮೆ ಯೋಚಿಸಿದಂತೆ ಈಗ ಅವುಗಳು ಅಂಥ ಬುದ್ಧಿವಂತಿಕೆಯ ಕಾರ್ಯಗಳೆಂದು ನನಗೆ ಕಂಡುಬರಲಿಲ್ಲ. ಮತ್ತು ಅಧ್ಯಾತ್ಮ ವಿದ್ಯೆಯ ತರ್ಕದಲ್ಲಿ ರೂಢವಾಗಿರುವ ಹಾಗೆ ನನ್ನ ವಾದದಲ್ಲಿ ಅದನ್ನು ಸಂಪೂರ್ಣ ಕೆಡಿಸಲು ಯಾವುದಾದರೂ ಅಗೋಚರವಾದ ತಪ್ಪು ನುಸುಳಲಿಲ್ಲ ಎಂಬುದರ ಬಗ್ಗೆ ನಾನೇ ಸಂಶಯಗ್ರಸ್ತನಾದೆನು.

ಜೀವನದ ಪರಮಸುಖಕ್ಕಾಗಿ ಸತ್ಯ, ಸರಳತನ ಹಾಗೂ ವಿಶ್ವಾಸ, ಮನುಷ್ಯರ ಪರಸ್ಪರ ವ್ಯವಹಾರದತ್ತ ಅತ್ಯಗತ್ಯವಾದವುಗಳೆಂದು ನಾನು ದೃಢಪಡಿಸಿಕೊಂಡಿದ್ದೆನು. ನನ್ನ ಜೀವಮಾನದಲ್ಲೆಲ್ಲ ರೂಢಿಸಿಕೊಳ್ಳುವುದಕ್ಕೆ ನಾನು ಲಿಖಿತ ನಿಯಮಗಳನ್ನು ಸಿದ್ಧಗೊಳಿಸಿದೆನು. ಅವುಗಳು ಇನ್ನೂ ನನ್ನ ಟಿಪ್ಪಣಿ ಪುಸ್ತಕದಲ್ಲಿವೆ. ಪ್ರವಚನಗಳ ಅಧೀನದಲ್ಲಿ ಕೂಡ ನಾನು ಇರಲಿಲ್ಲ. ಆದರೆ ಕೆಲವೊಂದು ಕೃತ್ಯಗಳು ಅದರಿಂದ ನಿಷೇಧಿಸಲ್ಪಟ್ಟುವೆಂದು ಕೆಟ್ಟದಾಗಲಾರವು, ಅಥವಾ ಅದು ಅವುಗಳನ್ನು ಬೋಧಿಸುತ್ತವೆಂದೊಡನೆ ಒಳ್ಳೆಯವುಗಳಲ್ಲ - ಆದರೂ ಕೂಡ ಬಹುಶಃ ಈ ಕೃತ್ಯಗಳನ್ನು ನಿಷೇಧಿಸಿರುವುದು ಯಾಕೆಂದರೆ ಅವುಗಳು ನಮಗೆ ಹಿತಕರವಾದವುಗಳಲ್ಲವೆಂದು ಅಥವಾ ಎಲ್ಲಾ ಸುತ್ತಮುತ್ತಣ ವಿಷಯಗಳನ್ನು ಗಣನೆಗೆ ತಂದಾಗ ಕೆಲವೊಂದು ಕೃತ್ಯಗಳು ಅವುಗಳ ಗುಣಧರ್ಮದಿಂದಲೇ ನಮಗೆ ಹಿತಕರವಾಗಿವೆಯೆಂದು ಬೋಧಿಸಲ್ಪಟ್ಟಿರಬೇಕೆಂಬ ಒಂದು ಅಭಿಪ್ರಾಯವನ್ನು ನಾನು ಇಟ್ಟುಕೊಂಡಿ

ದ್ದೆನು. ಅಂತೇ ಆ ದೇವನ ಅಮೃತ ಹಸ್ತದೊಡನೆ ಈ ವಿಶ್ವಾಸವು ಅಥವಾ ಯಾವುದೋ ಒಂದು ರಕ್ಷಕ ದೇವತೆ ಅಥವಾ ಆಕಸ್ಮಿಕವಾದ ಅನುಕೂಲ ಪರಿಸ್ಥಿತಿ ಮತ್ತು ಘಟನೆಗಳು ಅಥವಾ ಇವೆಲ್ಲವುಗಳು ಒಟ್ಟಿಗೆ ಈ ತಾರುಣ್ಯದ ಅಪಾಯಕರ ಕಾಲದಿಂದ ಮತ್ತು ನನ್ನ ಧಾರ್ಮಿಕ ಶಿಥಿಲ ನಂಬಿಕೆಗೆ ಅನುಗುಣವಾದ ಯಾವ ಇಚ್ಛಿತ ಘೋರ ಅನೀತಿಯನ್ನು ಅಥವಾ ದುಷ್ಕೃತ್ಯವನ್ನು ಮಾಡದೆ, ನನ್ನ ತಂದೆಯವರ ಕಣ್ಣ ಮುಂದಿನಿಂದ ಮತ್ತು ಅವರ ಉಪದೇಶದಿಂದ ಬಹುದೂರವಿದ್ದುಕೊಂಡು ಸಂಕಟಪ್ರಾಯವಾದ ಸನ್ನಿವೇಶಗಳಲ್ಲಿ ನನ್ನ ಅಪರಿಚಿತರೊಡನೆ ಕಲವೊಮ್ಮೆ ಸೇರಿಕೊಂಡಾಗ ನನ್ನನ್ನು ರಕ್ಷಿಸಿವೆಯೆನ್ನಬೇಕು. ಇಚ್ಛಿತವೆಂದು ನಾನು ಹೇಳುತ್ತೇನೆ, ಯಾಕೆಂದರೆ ನಾನು ನಮೂದಿಸಿರುವ ಸನ್ನಿವೇಶಗಳಲ್ಲಿ ನನ್ನ ತಾರುಣ್ಯದಿಂದಾಗಿ, ಅನುಭವಹೀನತೆಯಿಂದಾಗಿ ಮತ್ತು ಬೇರೆಯವರ ಠಕ್ಕುತನದಿಂದಾಗಿ ಏನೋ ಒಂದು ತರದ ಆವಶ್ಯಕತೆ ಅಡಗಿರುತ್ತವೆ; ಆದುದರಿಂದ ಜಗತ್ತಿನೊಡನೆ ವ್ಯವಹಾರ ಮಾಡಲು ನಾನೊಬ್ಬ ಸಹನೀಯ ಗುಣವುಳ್ಳ ವ್ಯಕ್ತಿಯಾಗಿದ್ದೇನೆ. ನಾನು ಇದನ್ನು ಯೋಗ್ಯವಾಗಿ ಗೌರವಿಸಿದ್ದೇನೆ ಮತ್ತು ಇದನ್ನು ಇಟ್ಟುಕೊಂಡು ನಡೆಯಲು ನಿರ್ಧರಿಸಿದ್ದೇನೆ.

ನಾವು ಫಿಲಡೆಲ್ಫಿಯಾಕ್ಕೆ ಹೋಗಿ ಮುಟ್ಟಿದಾಗ ಲಂಡನಿನಿಂದ ಹೊಸ ಟೈಪುಗಳು ಬಂದು ಅಲ್ಲಿಗೆ ಮುಟ್ಟಿ ಬಹಳ ದಿವಸಗಳಾಗಿರಲಿಲ್ಲ. ನಾವು ಕೈಮರನೊಡನೆ ಎಲ್ಲ ವ್ಯವಹಾರ ಮುಗಿಸಿದ್ದೆವು. ಅಂತೇ ಅವನಿಗೆ ಈ ವಿಷಯ ತಿಳಿಯುವುದಕ್ಕಿಂತ ಮುಂಚೆ ಅವನ ಅನುಮತಿ ಪಡೆದೇ ನಾವು ಅವನಲ್ಲಿಂದ ಬಿಟ್ಟು ಬಂದಿದ್ದೆವು. ಮಾರುಕಟ್ಟೆಯ ಹತ್ತಿರ ಬಾಡಿಗೆಗೆ ಒಂದು ಮನೆ ನಮಗೆ ಸಿಕ್ಕಿತು. ಬಾಡಿಗೆಯನ್ನು ಕಡಿಮೆಮಾಡುವುದಕ್ಕೋಸ್ಕರ ಥೊಮಸ್ ಗೋಡ್‌ಫ್ರೇ ಎಂಬೊಬ್ಬ ಕಿಟಕಿಗೆ ಕನ್ನಡಿ ಹಚ್ಚುವ ಸಂಸಾರಿಗನನ್ನು ನಮ್ಮ ಪಾಲುಗಾರನಾಗಿ ಮನೆಯಲ್ಲಿ ಸೇರಿಸಿಕೊಂಡೆವು. ಆಗ ಅದರ ಬಾಡಿಗೆಯು ಕೇವಲ ಒಂದು ವರುಷಕ್ಕೆ ಇಪ್ಪತ್ತನಾಲ್ಕು ಪೌಂಡುಗಳಾಗಿದ್ದುವು. ಅದು ಎಪ್ಪತ್ತಕ್ಕೆ ಕೊಡಲ್ಪಟ್ಟಿದ್ದು ನನಗೆ ಬಹಳ ಹಿಂದೆ ಗೊತ್ತಿತ್ತು. ಅವನು ಆ ಮನೆಯ ಬಾಡಗೆಯ ಸಾಕಷ್ಟು ಪಾಲನ್ನು ನಮಗೆ ಕೊಡಬೇಕಾಗಿತ್ತು. ನಾವು ಮಾತ್ರ ಅವನಲ್ಲಿ ಊಟಕ್ಕೆ ಇರುವುದಾಗಿತ್ತು. ಜಾರ್ಜ್ ಹೌಸ್ ಎಂಬೊಬ್ಬ ನನ್ನ ಮಿತ್ರನು ತನಗೆ ದಾರಿಯಲ್ಲಿ ಸಿಕ್ಕಿದ ಮುದ್ರಕನನ್ನು ಕೇಳುತ್ತಿದ್ದ ಒಬ್ಬ ಹಳ್ಳಿಯವನನ್ನು ನಮ್ಮಲ್ಲಿಗೆ ಕರೆದುಕೊಂಡು ತಂದಿರುವನು. ಅವನು ನಮ್ಮಲ್ಲಿಗೆ ಬಂದಾಗ

ನಾವಿನ್ನೂ ಅದೇ ನಮ್ಮ ಅಕ್ಷರಗಳನ್ನು ಬಿಚ್ಚುತ್ತಿದ್ದೆವಷ್ಟೆ ಮತ್ತು ಮುದ್ರಣಾಲಯವನ್ನು ಕ್ರಮದಂತೆ ಹೊಂದಿಸಬೇಕಾಗಿತ್ತಷ್ಟೆ. ನಮ್ಮ ನಗದಿ ಹಣವೆಲ್ಲ ಈಗಾಗಲೇ ವಿವಿಧ ಸಾಹಿತ್ಯ-ಸಾಮಗ್ರಿಗಳನ್ನು ಕೊಂಡುಕೊಳ್ಳಲೇ ಬೇಕಾದುದರಿಂದ ಅದಕ್ಕಾಗಿ ಖರ್ಚಾಗಿತ್ತು. ಹೀಗಾಗಿ ಈ ಹಳ್ಳಿಗನ ಐದು ಶಿಲ್ಲಿಂಗುಗಳು ನಮ್ಮ ಪ್ರಥಮ ಫಲಪ್ರಾಪ್ತಿಯಾಗಿತ್ತು. ಮತ್ತು ಇಷ್ಟು ಸಮಯೋಚಿತವಾಗಿ ಬಂದಿತ್ತಲ್ಲಾ—ಅದರಿಂದ ನಾನು ಆನಂತರ ಗಳಿಸಿದ ಯಾವ ಕ್ರೌನಿ (crown)ನಿಂದ ಕೂಡ ನನಗೆ ಅಷ್ಟು ಸಂತೋಷವುಂಟಾಗಲಿಲ್ಲ. ಅಲ್ಲದೆ ನನ್ನಲ್ಲಿ ಹೌಸನ ಬಗ್ಗೆ ಹುಟ್ಟಿದ ಉಪಕಾರಸ್ಮರಣೆಯು ಯಾವಾಗಲೂ ತರುಣ ಮೊದಲಿಗರಿಗೆ ನೆರವಾಗಲಿಕ್ಕೆ ಸಿದ್ಧವಾಗಿರಬಹುದಾಗಿತ್ತೆಂಬುದಾಗಿತ್ತು.

ಪ್ರತಿಯೊಂದು ದೇಶದಲ್ಲೂ ಆದರ ವಿನಾಶದ ಕುರಿತು ಕಣಿ ಹೇಳುವ ದುಃಶಕುನಗಾರರು ಇರುತ್ತಾರೆ. ಅಂಥವನೊಬ್ಬನು ಆಗ ಫಿಲಡೆಲ್ಫಿಯಾದಲ್ಲಿ ವಾಸವಾಗಿದ್ದನು. ಪ್ರತಿಷ್ಠಿತ ವ್ಯಕ್ತಿಯಾದ ಅವನು ಹಿರಿಯನಾಗಿದ್ದು ಅವನಲ್ಲಿ ಬುದ್ಧಿವಂತಿಕೆಯ ಲಕ್ಷಣಗಳಿದ್ದುವು ಮತ್ತು ಬಹಳ ಕಠೋರ ರೀತಿಯಲ್ಲಿ ಮಾತಾಡುತ್ತಿದ್ದನು. ಅವನ ಹೆಸರು ಸಾಮ್ಯುವಲ್ ಮಿಕೆಲ್ ಎಂದಿತ್ತು. ಈ ಗೃಹಸ್ಥನು ನನಗೆ ಅಪರಿಚಿತನು. ಒಂದು ದಿನ ನನ್ನ ಬಾಗಿಲಲ್ಲಿ ಬಂದು ನಿಂತುಕೊಂಡು, ಇತ್ತೀಚೆಗೆ ಹೊಸ ಮುದ್ರಣಾಲಯುವನ್ನು ತೆರೆದ ತರುಣನು ನಾನೇ—ಏನೆಂದು ಕೇಳಿದನು. ಹೌದೆಂದು ಉತ್ತರಿಸಿದಾಗ ಅವನು—ನನಗೆ ಬಹಳ ಕೆಡುಕೆನಿಸುತ್ತಿದೆ; ಯಾಕಂದರೆ ಇದೊಂದು ಭಾರೀ ಖರ್ಚಿನ ಕೆಲಸ ಮತ್ತು ಖರ್ಚು ಕೂಡ ಮುಳುಗಿ ಹೋದೀತು; ಕಾರಣವೇನಂದರೆ ಫಿಲಡೆಲ್ಫಿಯಾವು ಮುಳುಗುವ (sinking) ದೇಶ; ಜನರು ಈಗಾಗಲೆ ದಿವಾಳಿ ತೆಗೆದಿದ್ದಾರೆ ಅಥವಾ ಅದರ ಹತ್ತಿರ ಬಂದಿದ್ದಾರೆ. ತೋರಿಕೆಗೆ ಎಲ್ಲವೂ ವಿರುದ್ಧವಾಗಿ ಕಾಣುತ್ತಿದೆ, ಹೊಸ ಹೊಸ ಕಟ್ಟಡ ಮತ್ತು ಬಾಡಿಗೆಯ ಏರುವಿಕೆ ಮೊದಲಾದುವುಗಳು —ಅವನ ನಿಶ್ಚಿತ ಜ್ಞಾನಕ್ಕೆ—ಭ್ರಾಂತಿಕರವಾದುವುಗಳು-ಯಾಕಂದರೆ ವಸ್ತುತಃ ಅವುಗಳು ನಮ್ಮನ್ನು ನಾಶಮಾಡುವ ಘಟಕಗಳೆಂದು ಅವನು ಹೇಳಿದನು. ಅಂತೇ ಅವನು ಈಗ ಇರುವ ಅಥವಾ ಇನ್ನು ಸಂಭವಿಸಲಿರುವ ದುರ್ದೈವದ ಘಟನೆಗಳ ಬಗ್ಗೆ ಸುವಿಸ್ತೃತವಾಗಿ ನನಗೆ ಹೇಳಿದನು ಮತ್ತು ದುಃಖದಲ್ಲಿ ನನ್ನನ್ನು ಅರ್ಧ ಮುಳುಗಿಸಿದನು. ನಾನು ಈ ಉದ್ಯೋಗದಲ್ಲಿ ತೊಡಗುವುದಕ್ಕಿಂತ ಮೊದಲು ಅವನನ್ನು ನಾನು ಕಂಡಿದ್ದರೆ ಬಹುಶಃ ನಾನದನ್ನು

ಎಂದೂ ಕೈಕೊಳ್ಳುತ್ತಿರಲಿಲ್ಲ. ಈ ಮನುಷ್ಯನು ಅನೇಕ ವರುಷಗಳಿಂದ ಈ ಜೀರ್ಣವಾಗುತ್ತಿರುವ ಸ್ಥಳದಲ್ಲಿ ವಾಸಿಸುತ್ತಿದ್ದನು. ಆದರೆ ಅಲ್ಲಿ ಮನೆ ಕೊಳ್ಳಲು ನಿರಾಕರಿಸುತ್ತ ಒಂದೇ ರೀತಿಯಿಂದ ತನ್ನ ವಾಕ್ಕಾಂಡವ ವಾಡುತ್ತ ಇದ್ದನು. ಯಾಕಂದರೆ ಎಲ್ಲವೂ ನಾಶವಾಗುತ್ತದೆಂದು ಅವನು ಹೇಳುತ್ತಿದ್ದನಷ್ಟೆ. ಕಟ್ಟಕಡೆಗೆ ಅವನು ತನ್ನ ದುಃಶಕುನವನ್ನು ಹೇಳ ಲಿಕ್ಕೆ ವೊದಲುಮಾಡಿದಾಗಿನಿಂದ ಐದು ಪಟ್ಟು ಹೆಚ್ಚು ಕ್ರಯಕ್ಕೆ ಒಂದು ಮನೆಯನ್ನು ಅವನು ಕೊಳ್ಳುವುದನ್ನು ನೋಡುವ ಸೌಭಾಗ್ಯವು ನನಗೆ ಒದಗಿತು.

ಕಳೆದ ವರುಷ ಹೇಮಂತ ಋತುವಿನಲ್ಲಿ ಪರಸ್ಪರ ಸುಧಾರಣೆಯ ಸಂಬಂಧವಾಗಿ ನಾನು ನನ್ನ ಬುದ್ಧಿವಂತ ಗೆಳೆಯರನ್ನು ಕೂಡಿಸಿ ನಿರ್ಮಿಸಿದ ಮಂಡಳಿಯನ್ನು ನಾನು ಈ ವೊದಲೇ ಹೇಳಬೇಕಾಗಿತ್ತು. ಅದನ್ನು ನಾವು ಜಂಟೊ (Junto) ಎಂದು ಕರೆಯುತ್ತಿದ್ದೆವು. ನಾವು ಪ್ರತಿ ಶುಕ್ರವಾರ ಸಂಜೆ ಒಂದೆಡೆ ಸೇರುತ್ತಿದ್ದೆವು. ನಾನು ರಚಿಸಿದ ತತ್ವಗಳ ಪ್ರಕಾರ ಪ್ರತಿಯೊಬ್ಬ ಸದಸ್ಯನೂ ಅವನ ಪಾಳಿ ಬಂದಾಗ ಮಂಡಳಿಯವರು ಚರ್ಚಿಸುವುದಕ್ಕಾಗಿ ಒಂದು ಅಥವಾ ಅದಕ್ಕಿಂತ ಹೆಚ್ಚು ಪ್ರಶ್ನೆಗಳನ್ನು ನೀತಿಯ, ರಾಜ್ಯಶಾಸ್ತ್ರದ ಅಥವಾ ನೈಸರ್ಗಿಕ ತತ್ವಜ್ಞಾನದ ವೇಲೆ ತಯಾ ರಿಸಿಕೊಂಡು ಬರಬೇಕಾಗಿತ್ತು ; ಮತ್ತು ಮೂರು ತಿಂಗಳಲ್ಲಿ ಒಮ್ಮೆ ಅವನಿಗೆ ಇಚ್ಛೆಯಿದ್ದ ಯಾವ ವಿಷಯದ ವೇಲಾದರೂ ಒಂದು ಪ್ರಬಂಧವನ್ನು ರಚಿಸಿಕೊಂಡು ಬಂದು ಅಲ್ಲಿ ಓದಬೇಕಾಗಿತ್ತು. ನಮ್ಮ ಚರ್ಚಾಕೂಟವು ಒಬ್ಬ ಅಧ್ಯಕ್ಷನ ನೇತೃತ್ವದಲ್ಲಿ ನಡೆಯುವುದಿತ್ತು. ಅಲ್ಲದೆ ಸತ್ಯವನ್ನು ದೃಢಚಿತ್ತದಿಂದ ಅರಸುತ್ತ, ವಾದದ ವೇಲಿನ ಒಲವಿಲ್ಲದೆ ಅಥವ ಯಶಸ್ಸಿನ ಅಪೇಕ್ಷೆಯಿಲ್ಲದೆ ಈ ಚರ್ಚಾಕೂಟವು ನಡೆಸಲ್ಪಡುತ್ತಿತ್ತು. ಅಂತೇ ಆತುರತೆಯನ್ನು ತಪ್ಪಿಸುವುದಕ್ಕಾಗಿ ಅಭಿಪ್ರಾಯದ ಸಿಧ್ಧಾರವನ್ನು ಸೂಚಿಸುವ ಎಲ್ಲಾ ಅಭಿವ್ಯಕ್ತಿಗಳನ್ನು ಅಥವಾ ನೇರವಾದ ವಿರೋಧಾ ಭಾಸಗಳನ್ನು ಕೆಲ ಕಾಲದ ತನಕ ಕಾಯ್ದೆ ಪ್ರಕಾರ ಬಂದು ಮಾಡಲಾಗಿತ್ತು. ಮತ್ತು ಅಲ್ಪ ಹಣದ ರೂಪದ ದಂಡದ ಮೂಲಕ ನಿಷೇಧಿಸಲ್ಪಡಲಾಗಿತ್ತು.

ಪ್ರಥಮ ಸದಸ್ಯರುಗಳೆಂದರೆ ಜೋಸೆಫ್ ಬ್ರಿಯಂಟ್ನಾಲ್ ಎಂಬೊಬ್ಬ ದಸ್ತಾವೇಜ ವೊದಲಾದ ಕಾಗದಪತ್ರಗಳನ್ನು ಪ್ರತಿ ಮಾಡುವವನು; ಒಳ್ಳೆಯ ಸ್ವಭಾವದ, ಸೆಲುಗೆಯ, ಮಧ್ಯಮ ವಯಸ್ಸಿನವನು ಮತ್ತು ಪದ್ಯದ ಬಹು ದೊಡ್ಡ ಪ್ರೇಮಿಯಾಗಿದ್ದು ತನಗೆ ದೊರೆತುದೆಲ್ಲವನ್ನು

ಓದುವವನು ಹಾಗೂ ಸಮಾಧಾನಕರವಾಗಿ ತುಸು ಬರವಣಿಗೆಯನ್ನು ನಡೆಸುತ್ತಿದ್ದವನು; ಅಲ್ಲದೆ ಚಿಕ್ಕ ಪುಟ್ಟ ಆಭರಣಗಳ ವಿಷಯದಲ್ಲಿ ಅತ್ಯಂತ ಬುದ್ಧಿವಂತನಿದ್ದು ಸಂಭಾಷಣೆಯಲ್ಲಿ ಒಳ್ಳೆಯ ತಿಳುವಳಿಕೆಯುಳ್ಳವನೂ ಆಗಿದ್ದನು

ಥೋಮಸ್ ಗೋಡ್‌ಫ್ರೇ ಎಂಬೊಬ್ಬನು ಗಣಿತವನ್ನು ಸ್ವಂತವಾಗಿ ರೂಢಿಸಿಕೊಂಡು ತನ್ನ ಕ್ಷೇತ್ರದಲ್ಲಿ ಬಹಳ ದೊಡ್ಡವನಾಗಿದ್ದನು. ಈಗ 'ಹಡ್ಲೇಸ್ ಕ್ವಾಡ್ರಾಂಟ್' (Hadley's Quadrant) ಎಂದು ಕರೆಯಲ್ಪಡುತ್ತಿದ್ದುದರ ಶೋಧಕನು. ಆದರೆ ಅವನ ಕ್ಷೇತ್ರದ ಹೊರಗೆ ಅವನಿಗೆ ಹೆಚ್ಚಿಗೇನೂ ಗೊತ್ತಿರಲಿಲ್ಲ. ಉಲ್ಲಾಸದಾಯಕ ಗೆಳೆಯನೂ ಆವನಾಗಿರಲಿಲ್ಲ. ನಾನು ಕಂಡ ಅನೇಕ ಮಹಾ ಗಣಿತಜ್ಞರಂತೆ ಏನು ಹೇಳಿದರೂ ಅದರಲ್ಲಿ ಅವನು ಸಾರ್ವತ್ರಿಕ ಸತ್ಯವನ್ನು ಇಚ್ಛಿಸುತ್ತಿದ್ದನು ಅಥವಾ ಯಾವಾಗಲೂ ನಿರಾಕರಿಸುತ್ತಿದ್ದನು ಅಥವಾ ಚಿಕ್ಕ ಪುಟ್ಟ ವಿಷಯಗಳನ್ನು ವಿಂಗಡಿಸುತ್ತ ಸಂಭಾಷಣೆಯನ್ನು ಹದಗೆಡಿಸುತ್ತಿದ್ದನು. ಅವನು ಬೇಗನೆ ನಮ್ಮನ್ನು ಬಿಟ್ಟು ಹೋದನು.

ನಿಕೊಲಸ್ ಸ್ಕಲ್ ಎಂಬೊಬ್ಬ ಸರ್ವೆಯರ್, ಬಳಿಕ ಸರ್ವೆಯರ್ ಜನರಲ್ ಆಗಿದ್ದನು. ಇವನು ಪುಸ್ತಕ ಪ್ರೇಮಿಯಾಗಿದ್ದು ಕೆಲವೊಮ್ಮೆ ಪದ್ಯಗಳನ್ನು ರಚಿಸುತ್ತಿದ್ದನು.

ವಿಲಿಯಂ ಪಾರ್ಸನ್ಸನು ಸಮಗಾರನಾಗಿ ಬೆಳೆದಿದ್ದರೂ ಓದಿನಲ್ಲಿ ತುಂಬಾ ಅಭಿರುಚಿಯುಳ್ಳವನಾಗಿದ್ದು ನಾಕಷ್ಟು ಗಣಿತದ ಜ್ಞಾನವನ್ನು ಸಂಪಾದಿಸಿದ್ದನು. ಅದನ್ನು ಅವನು ಮೊದಲಿಗೆ ಹಸ್ತ ಜ್ಯೋತಿಷ ಶಾಸ್ತ್ರದ ದೆಸೆಯಿಂದ ಅಭ್ಯಾಸ ಮಾಡಿದ್ದನು. ಆ ಬಗ್ಗೆ ಅವನು ನಗೆಗೀಡಾದನು. ಅವನು ಕೂಡಾ ಸರ್ವೇಯರ್-ಜನರಲ್ ಆಗಿದ್ದನು.

ವಿಲಿಯಂ ಮೊಗ್ರಿಡ್ಜ ಎಂಬೊಬ್ಬ ಬಡಗಿ. ಅತ್ಯುತ್ತಮ ಯಾಂತ್ರಿಕನು. ಅಂತೇ ಘನ ತಿಳುವಳಿಕೆಯುಳ್ಳ ವ್ಯಕ್ತಿಯೂ ಆಗಿದ್ದ.

ಹ್ಯೂ ಮರ್ಡಿತ್, ಸ್ಟೀಫನ್ ಪೋಟ್ಸ್ ಮತ್ತು ಜಾರ್ಜ ವೆಬ್ಬ—ಇವರ ಚಿತ್ರಣವನ್ನು ನಾನು ಈ ಮೊದಲೆ ಕೊಟ್ಟಿದ್ದೇನೆ.

ರೋಬರ್ಟ್ ಗ್ರೇಸ್ ಎಂಬೊಬ್ಬ ತರುಣನು ಸ್ವಲ್ಪ ಶ್ರೀಮಂತನಾಗಿದ್ದು ಉದಾರಿಯೂ, ಉಲ್ಲಾಸ ಮನೋವೃತ್ತಿಯುವನೂ ಮತ್ತು ವಿನೋದಿಯೂ ಅಲ್ಲದೆ ತನ್ನ ಮಿತ್ರರನ್ನೂ ಮತ್ತು ಶ್ಲೇಷೆಯನ್ನೂ ಪ್ರೀತಿಸುವವನಾಗಿದ್ದನು.

ಮತ್ತು ವಿಲಿಯಂ ಕೋಲ್ಮನನು ಆಗ ಒಬ್ಬ ವ್ಯಾಪಾರಿಯ ಕಾರಕೂನನಾಗಿದ್ದು ಸುಮಾರು ನನ್ನ ವಯಸ್ಸಿನವನಾಗಿದ್ದನು. ಅವನಿಗೆ ಶಾಂತ ಹಾಗೂ ಸ್ವಚ್ಛವಾದ ತಲೆಯಿತ್ತು. ಅತ್ಯುತ್ತಮ ಹೃದಯ ಅವನದು. ಅಂತೇ ನಾನು ಇಲ್ಲಿಯ ತನಕ ಕಂಡ ಮನುಷ್ಯರಲ್ಲೆ ಅತ್ಯುಚ್ಚ ನೀತಿವಂತ ಅವನಾಗಿದ್ದನು. ಆನಂತರ ಅವನು ಪ್ರತಿಷ್ಠಿತ ವ್ಯಾಪಾರಿಯಾದನು. ಅಂತೇ ನಮ್ಮ ಪ್ರಾಂತೇಯ ಜಜ್ಜರಲ್ಲಿ ಅವನೂ ಒಬ್ಬನಾಗಿ ಹೋದನು. ಅವನ ಮರಣದ ತನಕ ತಡೆಯಿಲ್ಲದೆ ನಮ್ಮ ಗೆಳೆತನ ಮುಂದುವರೆದಿತ್ತು—ನಾಲ್ವತ್ತು ವರುಷಗಳ ಮೇಲೆಯೂ ಗೆಳೆತನ ಬೆಳೆದಿತ್ತು. ಹೀಗೆ ನಮ್ಮ ಮಂಡಳಿಯು ಅಷ್ಟು ಕಾಲದವರೆಗೂ ನಡೆದುಕೊಂಡು ಹೋಗಿತ್ತು. ಆ ಪ್ರಾಂತದಲ್ಲಿ ಆಗ ಅಸ್ತಿತ್ವದಲ್ಲಿದ್ದ ತತ್ವಜ್ಞಾನದ, ನೀತಿಯ, ಮತ್ತು ರಾಜ್ಯಶಾಸ್ತ್ರದ ಅತ್ಯುತ್ತಮ ಸಾಲೆಯು ಅದಾಗಿತ್ತು. ಯಾಕಂದರೆ ಮುಂದಿನ ವಾರದ ಚರ್ಚೆಯಲ್ಲಿ ಓದಲಿದ್ದ ನಮ್ಮ ಸಮಸ್ಯೆಗಳು ಅನೇಕ ವಿಷಯಗಳನ್ನು ಬಹಳ ಜಾಗ್ರತೆಯಿಂದ ಓದುವಂತೆ ನಮ್ಮನ್ನು ನಿರ್ಬಂಧಿಸುತ್ತಿದ್ದವು. ಹಾಗಿದ್ದರೆ ಮಾತ್ರ ನಾನು ಯಥೋಚಿತವಾಗಿ ಮಾತಾಡಬಹುದಾಗಿತ್ತು- ಮತ್ತು ಇಲ್ಲಿ ಕೂಡ ನಾವು ಸಂಭಾಷಣೆಯ ಯೋಗ್ಯ ನಡತೆಗಳನ್ನು ತಿಳಿದುಕೊಳ್ಳುತ್ತಿದ್ದೆವು. ನಮ್ಮ ತತ್ವಗಳಲ್ಲಿ ಎಲ್ಲವನ್ನೂ ಅಭ್ಯಸಿಸಿದ್ದಾದರೆ ಅದು ನಮ್ಮೊಳಗಿನ ಘರ್ಷಣೆಯನ್ನು ತಪ್ಪಿಸುವಂತಹದ್ದಾಗಿತ್ತು. ಈ ಕಾರಣದಿಂದಲೇ ನಮ್ಮ ಮಂಡಳಿಯು (club) ಬಹಳ ಕಾಲದವರೆಗೆ ನಡೆದು ಬಂದಿತ್ತು. ಇದರ ಬಗ್ಗೆ ನಾನು ಇಲ್ಲಿಂದ ಮುಂದೆ ಆಗಾಗ ಹೇಳುವ ಪ್ರಸಂಗಗಳು ಒದಗುತ್ತವೆ.

ಆದರೆ ಇಲ್ಲಿ ಅದರ ವೃತ್ತಾಂತವನ್ನು ನಾನು ಕೊಡುವ ಕಾರಣವೆಂದರೆ ಅದರ ಬಗ್ಗೆ ನನಗಿದ್ದ ಅಭಿರುಚಿಯನ್ನು ವ್ಯಕ್ತಪಡಿಸುವುದಕ್ಕಾಗಿ. ಇವರಲ್ಲಿ ಪ್ರತಿಯೊಬ್ಬರೂ ನಮಗೆ ವ್ಯವಹಾರವನ್ನು ಒದಗಿಸಿಕೊಡಲು ಪ್ರಯತ್ನಿಸುತ್ತಿದ್ದರು. ಮುಖ್ಯವಾಗಿ ಬ್ರೆಂಟಾಲನು ಕ್ವ್ಯಾಕರ್ಸ್‌ರಿಂದ ನಮಗೆ ಅವರ ನಲ್ವತ್ತು ಹಾಳಗಳಷ್ಟು ಇತಿಹಾಸವನ್ನು ಮುದ್ರಿಸಲಿಕ್ಕೆ ಕೆಲಸ ದೊರಕಿಸಿಕೊಟ್ಟನು. ಉಳಿದುದನ್ನು ಮಾತ್ರ ಕೈಮರ ಮಾಡುವುದಾಗಿತ್ತು. ಇದರ ಬಗ್ಗೆ ನಾವು ಬಹಳ ತ್ರಾಸುಪಟ್ಟು ದುಡಿಯಬೇಕಾಯಿತು. ಯಾಕಂದರೆ ಕ್ರಯ ಬಹಳ ಅಗ್ಗವಾಗಿತ್ತು. ಪ್ರೊ ಪಾಟ್ರಿಯಾ (pro patria size) ಆಕಾರದಲ್ಲಿ ಪೈಕಾ ಟೈಪಿನಲ್ಲಿ, ದೀರ್ಘ ಪ್ರ್ಯಾಮರಿ ಟಿಪ್ಪಣಿಯುಳ್ಳ ಹಾಳೆಗಳಾಗಿದ್ದುವು. ದಿವಸಕ್ಕೆ ಅದರ ಒಂದು

ಹಾಳೆಯನ್ನು (sheet) ನಾನು ಕಂಪೋಸ್ ಮಾಡುತ್ತಿದ್ದೆನು. ಮರ್ಡಿತನು ಕೂಡಾ ಅದರ ಕೆಲಸ ಮಾಡುತ್ತಿದ್ದನು. ಕೆಲವೊಮ್ಮೆ ನಾವು ಕೆಲಸ ಮಾಡುತ್ತ ರಾತ್ರಿ ಹನ್ನೊಂದು ಗಂಟೆಯ ತನಕವೂ ಇರುತ್ತಿದ್ದೆವು. ಕೆಲವೊಮ್ಮೆ ಅದಕ್ಕೂ ಹೆಚ್ಚು ಹೊತ್ತಾಗುತ್ತಿತ್ತು. ಮರುದಿವಸದ ಕೆಲಸಕ್ಕೆ ನಾನು ಹಂಚಿಕೆಯನ್ನು (distribution) ಮಾಡಿ ಮುಗಿಸುವುದರೊಳಗೆ ನಮ್ಮ ಗೆಳೆಯರು ತಂದ ಚಿಕ್ಕ ಪುಟ್ಟ ಕೆಲಸಗಳನ್ನು ನಿರ್ವಹಿಸಿ ಕೊಡಬೇಕಾದುದರಿಂದ ನಾವು ತಡವಾಗಿ ಕೆಲಸ ಬಿಡಬೇಕಾಗುತ್ತಿತ್ತು. ಆದರೆ ಪ್ರತಿದಿನ ಆ ಹಾಳೆಯ ಒಂದು ಅಡಿಯಷ್ಟನ್ನು ಕಂಪೋಸ್ ಮಾಡಲೇಬೇಕೆಂದು ನಾನು ದೃಢವಾಗಿ ನಿರ್ಧರಿಸಿದ್ದೆನು. ಹೀಗಿರಲು ಒಂದು ದಿನ ರಾತ್ರಿ ನಾನು ಕಂಪೋಸ್ ಮಾಡಿದ ಹಾಳೆಗಳನ್ನು ಜೋಡಿಸಿಟ್ಟು ನನ್ನ ದಿನದ ಕೆಲಸ ಮುಗಿಯಿತೆಂದು ಎಣಿಸಿದಾಗ, ಅವುಗಳಲ್ಲಿ ಒಂದು ಅಕಸ್ಮಾತ್ತಾಗಿ ಒಡೆದು ಹೋಯಿತು. ಹೀಗಾಗಿ ಎರಡು ಪೇಜುಗಳು ಎತ್ತರತೆತ್ತರ (pi) ಆದವು. ಆ ಕೂಡಲೆ ನಾನು ಅವುಗಳನ್ನು ಹಂಚಿ (distributed) ಮಲಗುವ ಮುಂಚೆ ಅದನ್ನು ಪುನಃ ಕಂಪೋಸ್ ಮಾಡಿ ಮುಗಿಸಿದೆನು. ನಮ್ಮ ನೆರೆಹೊರೆಯವರಿಗೆ ಈ ದುಡಿಮೆ ಕಂಡುದರಿಂದ ನಮಗೆ ಗುಣ–ಗೌರವಗಳು ದೊರೆಯಲಿಕ್ಕೆ ಹತ್ತಿದವು. ಮುಖ್ಯವಾಗಿ–ವ್ಯಾಪಾರಿಗಳ 'ಎವೆರಿನೈಟ್ ಕ್ಲಬ್' (Every-night club) ನಲ್ಲಿ ಒಂದು ಹೊಸ ಮುದ್ರಣಾಲಯವು ತೆರೆಯುವುದಿದೆಯೆಂಬ ಪ್ರಸ್ತಾಪವನ್ನು ನನಗೆ ಹೇಳಲಾಗಿತ್ತು. ಸಾಮಾನ್ಯವಾಗಿ ಅದು ಅಯಶಸ್ವಿಯಾಗುವುದೆಂಬ ಅಭಿಪ್ರಾಯವಿತ್ತು. ಯಾಕಂದರೆ–ಊರಲ್ಲಿ ಈಗಾಗಲೆ ಕೈಮರ್ ಮತ್ತು ಬ್ರೆಡ್‌ಫೋರ್ಡ್–ಇಬ್ಬರು ಮುದ್ರಕರಿದ್ದಾರೆ. ಆದರೆ ಡಾಕ್ಟರ್ ಬಾಯರ್ಡ (ಇವರನ್ನು ನಾನು ಮತ್ತು ನೀವು ಅನೇಕ ವರುಷಗಳ ನಂತರ ಅವರ ಹುಟ್ಟಿದೂರಾದ ಸ್ಕಾಟ್‌ಲಂಡಿನ ಸೈಂಟ್ ಅಂಡ್ರ್ಯೂಸ್‌ದಲ್ಲಿ ಕಾಣುವುದಾಗಿತ್ತು) ಮಾತ್ರ ವಿರುದ್ಧ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. "ಆ ಫ್ರಾಂಕ್ಲಿನ್ನನ ದುಡಿಮೆಗೆ ಸರಿಗಟ್ಟುವಂಥ ದುಡಿಮೆಯನ್ನು ನಾನು ಇದುವರೆಗೆ ನೋಡಿಲ್ಲ. ನಾನು ಕ್ಲಬ್ಬಿನಿಂದ ಮನೆಗೆ ಹೋಗುವ ಹೊತ್ತಿಗೂ ಅವನು ಕೆಲಸದಲ್ಲಿರುವುದನ್ನು ನೋಡುತ್ತೇನೆ. ಅಲ್ಲದೆ ಅವನು ಪುನಃ ಅವನ ನೆರೆಹೊರೆಯವರು ಹಾಸಿಗೆ ಬಿಟ್ಟು ಏಳುವ ಮುಂಚೆ ಅವನು ಕೆಲಸಕ್ಕೆ ತೊಡಗುತ್ತಾನೆ" ಎಂದು ಅವರು ಹೇಳಿದರು. ಇದು ಉಳಿದವರ ಮನಸ್ಸಿಗೂ ನಾಟಿತು. ಆನಂತರ ಬೇಗನೆ ಅವರಲ್ಲಿ ಒಬ್ಬರಿಂದ ನಮಗೆ

ಸಾಹಿತ್ಯ ಸಾಮುಗ್ರಿಗಳನ್ನು ಒದಗಿಸುತ್ತೇವೆಂಬ ಹೇಳಿಕೆಯೂ ಬಂದಿತು. ಆದರೆ ನಾವಿನ್ನೂ ಅಂಗಡಿಯ ವ್ಯವಹಾರದಲ್ಲಿ ತೊಡಗಲು ನಿರ್ಧರಿಸಿರಲಿಲ್ಲ.

ಬಹಳ ಮುಖ್ಯವಾಗಿ ಮತ್ತು ಹೆಚ್ಚು ಸ್ವತಂತ್ರವಾಗಿ ನಾನು ಈ ದುಡಿಮೆಯನ್ನು—ನನ್ನ ಸ್ವಸ್ತುತಿಯಾಗಿ ಇದು ಕಂಡರೂ ಕೂಡ ಹೇಳುತ್ತಿದ್ದೇನೆ. ಯಾಕಂದರೆ ನನ್ನ ವಂಶದವರು ಇದನ್ನು ಓದಿದಾಗ ಈ ಗುಣದ ಉಪಯೋಗವನ್ನು—ನನ್ನ ಪರವಾಗಿ ಈ ಸಂಬಂಧದ ಆದ್ಯಂತವೆಲ್ಲ ಆದ ಪರಿಣಾಮದಿಂದ—ತಿಳಿದುಕೊಂಡಾರು.

ಜಾರ್ಜ್ ವೆಬ್ಬನು ಒಬ್ಬಳು ಹೆಣ್ಣು ಮಗಳ ಮಿತ್ರತ್ವ ದೊರಕಿಸಿದ್ದನು. ಇದರಿಂದಾಗಿ ಅವನಿಗೆ ಕ್ರೈಮರನ ಕೆಲಸದಿಂದ ಅವನು ವಿರಾಮ ಪಡೆಯುವ ಅನುಕೂಲವಾಯಿತು. ಹೀಗಾಗಿ ಅವನು ಈಗ ನಮ್ಮಲ್ಲಿಗೆ ಬಂದು ಕೆಲಸಗಾರ (Journeyman)ನ ಸ್ಥಾನಕ್ಕೆ ಅರಿಕೆಮಾಡಿಕೊಂಡನು. ಆಗ ನಾವು ಅವನನ್ನು ಕೆಲಸಕ್ಕೆ ಇಟ್ಟುಕೊಳ್ಳಲು ಸಾಧ್ಯವಿರಲಿಲ್ಲ. ಆದರೆ ನಾನು ಮಾತ್ರ ಅವನಿಗೆ ಮೂರ್ಖತನದಿಂದ, ನಾನು ಒಂದು ವೃತ್ತ ಪತ್ರಿಕೆಯನ್ನು ಬೇಗನೆ ಹೊರಡಿಸಲಿಚ್ಛಿಸಿದ್ದೇನೆಂದೂ ಮತ್ತು ಆಗ ಅವನಿಗೆ ನಾನು ಕೆಲಸ ಕೊಡಬಹುದೆಂದೂ ಈ ವಿಷಯ ಗುಟ್ಟಾಗಿಡಬೇಕೆಂದೂ ತಿಳಿಸಿದೆನು. ಆಗ ಹೊರಡುತ್ತಿದ್ದ ಏಕಮಾತ್ರ ವೃತ್ತಪತ್ರಿಕೆಯೆಂದರೆ ಬ್ರೆಡ್‌ಫೋರ್ಡ್ ಮುದ್ರಿಸುತ್ತಿದ್ದದ್ದು-ಕ್ಷುಲ್ಲಕ ವಿಷಯದಿಂದ ಕೂಡಿ ಅದು ಬಹಳ ಬೇಜವಾಬ್ದಾರಿಯಿಂದ ನಡೆಸಲ್ಪಡುತ್ತಿತ್ತು. ಒಂದಿಷ್ಟೂ ವಿನೋದದಾಯಕವಾಗಿರಲಿಲ್ಲ. ಹೀಗಿದ್ದರೂ ಕೂಡ ಅವನಿಗೆ ಅದು ಲಾಭದಾಯಕವಾಗಿತ್ತು. ಆದುದರಿಂದ ಒಳ್ಳೆಯ ಪತ್ರಿಕೆಗೆ ಯೋಗ್ಯ ಪ್ರೋತ್ಸಾಹ ದೊರೆಯುದೆ ಇರಲಾರದೆಂದು ನಾನು ಬಗೆದು-ಈ ನಿರೀಕ್ಷೆಯ ಮೇಲೆ ನಾನು ಅದರ ಯಶಸ್ಸನ್ನು ನಂಬಿದ್ದೆನು ಇದನ್ನೆ ಅವನಿಗೆ ಹೇಳಿದೆನು. ಇದನ್ನು ಕೈಮರನಿಗೆ ಹೇಳಬಾರದೆಂದು ನಾನು ವೆಬ್ಬನಿಗೆ ಕೇಳಿಕೊಂಡಿದ್ದೆನು. ಆದರೆ ಅವನು ಹೇಳಿಬಿಟ್ಟದ್ದನು. ಆಕೂಡಲೆ, ನನಗಿಂತ ಮೊದಲೇ ಆಗಬೇಕೆಂದು, ತನ್ನದೇ ಒಂದು ಪತ್ರಿಕೆ ಹೊರಡಿಸುವ ಸೂಚನೆಗಳನ್ನು ಕೈಮರ್ ಜಾಹೀರು ಮಾಡಿದನು. ಅದರಲ್ಲಿ ವೆಬ್ಬನನ್ನು ಕೆಲಸಕ್ಕೆ ನೇಮಿಸಿದನು. ನಾನು ಇದರಿಂದ ರೇಗಿದೆನು. ಅಂತೇ ಅವರನ್ನು ಪ್ರತಿಭಟಿಸಲು, ಇನ್ನೂ ನಮ್ಮ ಪತ್ರಿಕೆಯನ್ನು ಹೊರಡಿಸಲಿಕ್ಕೆ ಸಾಧ್ಯವಿಲ್ಲದ್ದರಿಂದ, ಬ್ರೆಡ್‌ಫೋರ್ಡನ ಪತ್ರಿಕೆಗೆ ನಾನು "ಅವಿಶ್ರಾಂತ ಆಸಾಮಿ" (Busy Body) ಎಂಬ ತಲೆಬರಹದ ಕೆಳಗೆ ಅನೇಕ ಲೇಖನಗಳನ್ನು

ಬರೆದೆನು. ಇದನ್ನು ಕೆಲವು ತಿಂಗಳುಗಳ ತನಕ ಬ್ರೆಯಂಟ್ನಾಲನು ಮುಂದುವರಿಸಿದ್ದನು. ಈ ಉಪಾಯದಿಂದ ಸಾರ್ವಜನಿಕರ ಲಕ್ಷ್ಯವು ಈ ಪತ್ರಿಕೆಗೆ ಕೇಂದ್ರೀಕೃತವಾಯಿತು. ಅಂತೇ ಕೈಮರನ ಸೂಚನೆಗಳನ್ನು ನಾವು ಹಾಸ್ಯಕ್ಕೆ ಗುರಿ ಮಾಡಿ ನಿಂದಿಸುತ್ತ ಅಲಕ್ಷಿಸಿಬಿಟ್ಟೆವು. ಆದರೂ ಕೂಡಾ ಅವನು ತನ್ನ ಪತ್ರಿಕೆಯನ್ನು ಪ್ರಾರಂಭಿಸಿಯೇ ಬಿಟ್ಟನು. ವರುಷದ ಒಂಭತ್ತು ತಿಂಗಳುಗಳ ತನಕ ಹೇಗಾದರೂ ಅದನ್ನು ಕೇವಲ ತೊಂಭತ್ತು ಚಂದಾದಾರರ ಜೊತೆಗೆ ಸಾಗಿಸಿಕೊಂಡು ಬಂದು ಆ ನಂತರ ಬಹಳ ಅಲ್ಪ ಹಣಕ್ಕೆ ಅದನ್ನು ಅವನು ನನಗೆ ಮಾರಿಬಿಟ್ಟನು. ಇತ್ತ ಕೆಲ ಕಾಲದ ವರೆಗೆ ನಾನು ಅದನ್ನು ನಿರ್ವಹಿಸಿಕೊಂಡು ಹೋಗಲು ಸಿದ್ಧ ವಿದ್ದ ಕಾರಣ ನೇರವಾಗಿ ಆದನ್ನು ನನ್ನ ವಶಕ್ಕೆ ತೆಗೆದುಕೊಂಡೆನು. ಕೆಲವೇ ವರುಷಗಳಲ್ಲಿ ಅದು ನನಗೆ ಅತ್ಯಧಿಕ ಲಾಭದಾಯಕವಾಗಿ ಪರಿಣಮಿಸಿತು.

ನಮ್ಮ ಪಾಲುಗಾರಿಕೆ ಇನ್ನು ಮುಂದುವರಿದಿದ್ದರೂ ನಾನು ಪ್ರಥಮ ಪುರುಷದಲ್ಲೇ ಬರೆಯುವುದು ಯೋಗ್ಯವೆಂದು ನನಗೆನಿಸುತ್ತದೆ. ಯಾಕಂದರೆ, ವಸ್ತುತಃ ವ್ಯವಹಾರದ ಸಂಪೂರ್ಣ ಕಾರ್ಯ ನನ್ನ ಮೇಲೆ ಬಿದ್ದಿತ್ತು. ಮರ್ಡಿತನೇನು ಕಂಪೋಸಿಟರನಲ್ಲ. ಅವನು ಕೇವಲ ಬಡ ಮುದ್ರಣಾಲಯದ ಕೆಲಸಗಾರ. ಅಂತೇ ಅವನಿಗೆ ಅಮಲೇರದಿರುವುದು ಬಹಳ ಕಡಿಮೆ. ನನ್ನ ಮಿತ್ರರು ಅವನ ಸಂಗಡ ನಾಸಿಟ್ಟುಕೊಂಡ ಸಂಬಂಧಕ್ಕೆ ದುಃಖಿಸಿದ್ದುಂಟು. ಆದರೆ ನಾನು ಮಾತ್ರ ಅದರಲ್ಲೆ ಒಳ್ಳೆಯದನ್ನು ಕಾಣಬೇಕಾಗಿತ್ತು.

ನಮ್ಮ ಮೊದಲಿನ ಪತ್ರಿಕೆಗಳು ಪ್ರಾಂತದಲ್ಲಿನ ಈ ವರೆಗಿನ ಎಲ್ಲಾ ಪತ್ರಿಕೆಗಳಿಗಿಂತ ಉತ್ತಮ ರೀತಿಯಲ್ಲಿ ಹೊರಬಿದ್ದವು. ಒಳ್ಳೆಯ ಟೈಪು ಗಳು ಹಾಗೂ ಒಳ್ಳೆಯ ಮುದ್ರಣ ನಮ್ಮ ಪತ್ರಿಕೆಯದಾಗಿತ್ತು. ಆದರೆ ಆಗ ಗವರ್ನರ್ ಬರ್ನೆಟ ಮತ್ತು ಮೆಸಾಚ್ಯುಸೆಟ್ಸ್ ಎಸೆಂಬ್ಲಿಯ ನಡುವೆ ನಡೆಯುತ್ತಿದ್ದ ವಿವಾದದ ಕುರಿತು ಬರೆದ ನನ್ನ ಧೈರ್ಯದ ಅಭಿಪ್ರಾಯ ಪ್ರತಿಷ್ಠಿತ ಜನರ ಮನಸ್ಸಿಗೆ ನಾಟಿತು. ಇದರಿಂದ ಪತ್ರಿಕೆಯ ಆಡಳಿತ ಗಾರ ಹಾಗೂ ಪತ್ರಿಕೆಯ ಬಗ್ಗೆ ಹೆಚ್ಚು ಮ್ಯಾತುಕತೆ ನಡೆಯುವ ಪ್ರಸಂಗ ಒದಗಿತು. ಕೆಲವೇ ವಾರುಗಳಲ್ಲಿ ಅವರೆಲ್ಲ ನಮ್ಮ ಚಂದಾದಾರರಾಗುವ ಸಂದರ್ಭವೇ ಕೂಡಿ ಬಂದಾಯಿತು.

ಇವರ ದಾರಿಯನ್ನು ಅನೇಕರು ಹಿಂಬಾಲಿಸಿದರು. ಸತತವಾಗಿ

ನಮ್ಮ ಚಂದಾದಾರರ ಸಂಖ್ಯೆ ಏರುತ್ತ ಹೋಯಿತು. ಏನೋ ಒಂದಿಷ್ಟು ಬರೆಯಲಿಕ್ಕೆ ಕಲಿತುದರ ಪ್ರಥಮ ಫಲವು ಇದೇ ಆಗಿತ್ತು. ಮತ್ತೊಂದು ಫಲವೆಂದರೆ-ಪ್ರತಿಷ್ಠಿತ ಜನರು, ಓದು ಬರೆಯಲಿಕ್ಕೆ ಬರುವವರೆಲ್ಲರ ಕೈಯಲ್ಲಿಯೂ ಈಗ ಪತ್ರಿಕೆ ನಲಿದಾಡುವುದನ್ನು ಕಂಡು, ನನಗೆ ಪ್ರೋತ್ಸಾಹ ಕೊಟ್ಟು ಖುಣಿಯಾಗುವುದು ಒಳ್ಳೆಯದೆಂದು ಬಗೆದರು. ಬ್ರೆಡ್‌ಫೋರ್ಡನು ಇನ್ನೂ ಕೂಡ ಮತದಾರರ ಯಾದಿಗಳನ್ನು, ಕಾಯ್ದೆಗಳನ್ನು ಮತ್ತು ಬೇರೆ ಸಾರ್ವಜನಿಕ ವ್ಯವಹಾರದ ಕಾಗದಪತ್ರಗಳನ್ನು ಮುದ್ರಿಸುತ್ತಲೇ ಇದ್ದನು. ಅವನು ಒಮ್ಮೆ ಸಭೆಯುವರು (House) ಗವರ್ನರನಿಗೆ ಕೊಡುವ ಭಾಷಣವನ್ನು ಮುದ್ರಿಸಿದ್ದನು. ಬಹಳ ತಪ್ಪುತಡೆಗಳಿಂದ ಕೂಡಿದ ರೀತಿಯಲ್ಲಿ ಅದು ಮುದ್ರಣಗೊಂಡಿತ್ತು. ನಾವು ಅದನ್ನು ಶುದ್ಧವಾಗಿ ಮತ್ತು ಚಂದವಾಗಿ ಪುನರ್ಮುದ್ರಿಸಿಕೊಟ್ಟೆವು. ಅಂತೇ ಪ್ರತಿಯೊಬ್ಬ ಮೆಂಬರನಿಗೂ ಒಂದು ಪ್ರತಿಯನ್ನು ಕಳುಹಿಸಿಕೊಟ್ಟೆವು. ಅವರಿಗೆ ಈ ವ್ಯತ್ಯಾಸವು ತಿಳುವಳಿಕೆಗೆ ಬಂದಿತು. ಇದರಿಂದ ಸಭೆಯಲ್ಲಿ ನಮ್ಮ ಕಡೆಯ ಜನರ ಮತವು ಬಲಗೊಂಡಿತು. ಮುಂಬರುವ ವರುಷದ ತಮ್ಮ ಮುದ್ರಕರೆಂದು ಅವರೆಲ್ಲ ನಮಗೇ ಮತದಾನ ಮಾಡಿದರು.

ಸೌಧದಲ್ಲಿನ ನನ್ನ ಮಿತ್ರರ ಪೈಕಿ ನಾನು ಈ ಮೊದಲೆ ಪ್ರಸ್ತಾಪಿಸಿದ್ದ ಮಿಸ್ಟರ್ ಹೆಮಿಲ್ಟನ್ ಅವರನ್ನು ಮರೆಯಬಾರದು. ಅವರು ಆಗ. ಇಂಗ್ಲಂಡಿನಿಂದ ಮರಳಿ ಬಂದಿದ್ದರು. ಅವರಿಗೆ ಅಲ್ಲೊಂದು ಸ್ಥಳವಿತ್ತು ಈ ಪ್ರಸಂಗದಲ್ಲಿ ಅವರೂ ಈ ಮೊದಲು ಅನೇಕ ಸಲ ಮಾಡಿದಂತೆ ನನ್ನ ಪರವಾಗಿ ಬಹಳ ಆಸ್ಥೆ ವಹಿಸಿದ್ದರು. ಹೀಗೆ ಅವರು ತಮ್ಮ ಅವಸಾನದ ತನಕ ತಮ್ಮ ವರದ ಹಸ್ತವನ್ನು ನನಗೆ ನೀಡಿದ್ದರು.*

ಈ ಕಾಲಕ್ಕೆ ಮಿಸ್ಟರ್ ವರ್ನನನು ನಾನು ಅವನಿಗೆ ಕೊಡತಕ್ಕ ಸಾಲದ ವಿಚಾರವನ್ನು ನನಗೆ ತಿಳಿಯಪಡಿಸಿದನು. ಆದರೆ ಅಂಥ ತರಾಟೆ ಮಾಡಲಿಲ್ಲ. ಅವನಿಗೊಂದು ಚಾತುರ್ಯದಿಂದ ಕೃತಜ್ಞತೆಯ ಪತ್ರವನ್ನು ಬರೆದೆನು. ಅವನು ನನಗೆ ತೋರಿಸಿದ ತಾಳ್ಮೆಯನ್ನು ತುಸು ದೀರ್ಘವಾಗಿಯೇ ಬಣ್ಣಿಸಿದೆನು. ಅಂತೇ ನಾನು ಶಕ್ತನಾದೊಡನೆ ಬಡ್ಡಿ ಸಹಿತ ಅವನ ಮೊಬಲಗನ್ನು ಹೃತ್ಪೂರ್ವಕ ವಂದನೆಗಳೊಂದಿಗೆ ಸಂದಾಯಮಾಡಿ

---

*ಅವರ ಮಗನಿಗೆ ನಾನು ಒಮ್ಮೆ ೫೦೦ ಪೌಂಡುಗಳನ್ನು ದೊರಕಿಸಿ ಕೊಟ್ಟಿದ್ದೆ. (ಮಾರ್ಜಿನಿನ ಟಿಪ್ಪಣಿ)

ದೆನು. ಹೀಗಾಗಿ ಎಡವಿದ ತಪ್ಪು ಕೆಲಮಟ್ಟಿಗಾದರೂ ಸರಿಪಡಿಸಿಕೊಂಡ ಹಾಗಾಯಿತು.

ಆದರೆ ಈಗ ಮತ್ತೊಂದು ತೊಂದರೆ ನನಗೆ ಬಂದೊದಗಿತು. ಅದು ಒದಗುತ್ತದೆಂದು ಎಣಿಸಲು ನನಗೆ ಯಾವ ಕಾರಣವೂ ಊಹಿಸಲಿಕ್ಕಿರಲಿಲ್ಲ. ಶ್ರೀಯುತ ಮೆರ್ಡಿತರ ತಂದೆಯವರು ನಮ್ಮ ಮುದ್ರಣಾಲಯದ ಹಣ ಕೊಡುವವರಾಗಿದ್ದರು. ನನಗೆ ಅವರು ಹಾಗೆ ಭರವಸೆ ಕೊಟ್ಟಿದ್ದರು. ಅದೇ ಪ್ರಕಾರ ಅವರಿಂದ ಕೇವಲ ನೂರು ಪೌಂಡಿನ ನೋಟುಗಳನ್ನು ಕೊಡಲಿಕ್ಕೆ ಸಾಧ್ಯವಾಗಿತ್ತು. ಅಷ್ಟನ್ನು ಕೊಟ್ಟಿದ್ದರು. ಅಂತೇ ಇನ್ನೂ ನೂರು ಪೌಂಡು ವ್ಯಾಪಾರಿಗೆ ಕೊಡಲಿಕ್ಕೆ ಉಳಿದಿತ್ತು, ಅವನು ತುಂಬ ರೇಗಿ ಬಿಟ್ಟು ನಮ್ಮೆಲ್ಲರ ಮೇಲೆ ಖಟ್ಲೆ ಮಾಡಿದನು. ನಾವು ಜಾಮೀನು ಕೊಟ್ಟೆವು. ಆದರೆ ಸಕಾಲದ ಹಣ ಪಾವತಿಮಾಡದಿದ್ದರೆ ಖಟ್ಲೆಯು ಮುಗಿದು—ತೀರ್ಮಾನವಾಗುತ್ತದೆಂದು ನಮಗೆ ಕಂಡು ಬಂದಿತು. ಮತ್ತು ಸಾಲದ ಸಂದಾಯಕ್ಕಾಗಿ ನಮ್ಮ ಪ್ರೆಸ್ಸು ಹಾಗೂ ಟೈಪುಗಳು ಬಹುಶಃ ಅರ್ಧ ಕ್ರಯಕ್ಕೆ ಮಾರಲ್ಪಟ್ಟರೆ ನಮ್ಮ ಜೊತೆಗೆ ನಮ್ಮ ಆಶಾದಾಯಕವಾದ ಪ್ರತೀಕ್ಷೆಗಳೂ ನಾಶವಾಗಬಹುದಾಗಿತ್ತು.

ಈ ದುಃಖದಲ್ಲಿ ನನ್ನ ಇಬ್ಬರು ಮಿತ್ರರು ಪ್ರತ್ಯೇಕವಾಗಿ ತಮಗೆ ಗೊತ್ತಿಲ್ಲದೆ ನನ್ನಲ್ಲಿಗೆ ಬಂದರು. ಅವರ ದಯಾಗುಣವನ್ನು ನಾನೆಂದೂ ಮರೆತಿಲ್ಲ ಮತ್ತು ಯಾವ ಸಂಗತಿಯನ್ನಾದರೂ ನೆನಪಿಗೆ ತರುವಾಗ ಅದನ್ನು ನಾನು ಮರೆಯಲಾರೆ. ನನ್ನಿಂದ ಯಾವ ಯಾಚನೆಯನ್ನೂ ಪಡೆ ಯದೆ ಅವರು ನನಗೆ ಸಾಧ್ಯವಿದ್ದರೆ ಸಂಪೂರ್ಣ ವ್ಯವಹಾರವನ್ನೆ ನನ್ನ ಕೈಗೆ ತೆಗೆದುಕೊಳ್ಳುವಷ್ಟು ಹಣವನ್ನು ಕೊಡಲು ಇಬ್ಬರೂ ಸಿದ್ಧರಿದ್ದರು. ಆದರೆ ನಾನು ಮೆರ್ಡಿತನೊಡನೆ ಪಾಲುಗಾರಿಕೆಯನ್ನು ಮುಂದುವರಿಸುವುದು ಅವರಿಗೆ ಸೇರಿಕೆಯಿರಲಿಲ್ಲ. ಅವರು ಹೇಳಿದ ಹಾಗೆ-ಅವನು ಆಗಾಗ ಕುಡಿದು ಬೀದಿಯಲ್ಲಿ ಅಲೆದಾಡುತ್ತಿದ್ದನು ಮತ್ತು ಕೀಳು ಆಟಗಳನ್ನು ಗಡಂಗಿನಲ್ಲಿ ಆಡುತ್ತಿದ್ದದ್ದು ನಮಗೆ ಬಹಳ ಅಪಮಾನಕರವಾಗಿತ್ತು. ಈ ಇಬ್ಬರು ಗೆಳೆಯರೆಂದರೆ ವಿಲಿಯಂ ಕೋಲ್ಮನ್ ಮತ್ತು ರೋಬರ್ಟ ಗ್ರೇಸ್ ಎಂಬುವರು. ನಮ್ಮ ಕರಾರಿನಲ್ಲಿನ ಯಾವ ಅಂಶವನ್ನೂ ಪೂರ್ತಿಮಾಡದೆ ನಾನು ಮೆರ್ಡಿತನಿಂದ ಬೇರ್ಪಟ್ಟು ಬರುವುದು ನನ್ನಿಂದ ಆಗಲಾರದೆಂದು ಅವರಿಗೆ ಹೇಳಿದೆನು. ಯಾಕಂದರೆ, ಅವರು ಗೈದ ಕಾರ್ಯದಿಂದಾಗಿ ನಾನು ಅವರಿಗೆ ಅತ್ಯಂತ ಋಣಿಯಾಗಿದ್ದೇನೆ ಮತ್ತು ಅವರಿನ್ನೂ ಸಾಧ್ಯವಿದ್ದರೆ

ಮಾಡಬಹುದಾದ ಸಹಾಯಕ್ಕೂ ನಾನು ಆಭಾರಿಯಾಗಿದ್ದೇನೆಂದು ನನಗನಿಸಿತು. ಆದರೆ ಕೊನೆಗೂ ಅವರು ತಮ್ಮ ಕಾರ್ಯದಲ್ಲಿ ಸೋತರೆ ನಮ್ಮ ಪಾಲುಗಾರಿಕೆಯು ಬಗೆಹರಿಯಲೇ ಬೇಕು. ಆಮೇಲೆ ಮಾತ್ರ ನನ್ನ ಗೆಳೆಯರ ಸಹಾಯವನ್ನು ಪಡೆಯಲಿಕ್ಕೆ ನಾನು ಸ್ವತಂತ್ರನಾಗಿದ್ದೇನೆಂದು ಅವರಿಗೆ ತಿಳಿಯಪಡಿಸಿದೆನು.

ಹೀಗೆ ಕೆಲ ಸಮಯದ ತನಕ ವಿಷಯವು ತಣ್ಣಗಾಗಿಯೆ ಉಳಿಯಿತು. ಆನಂತರ ನಾನು ನನ್ನ ಪಾಲುಗಾರನಿಗೆ. "ನಿಮ್ಮ ಈ ಕಾರ್ಯದಲ್ಲಿ ನೀನು ಭಾಗವಹಿಸಿದುದರಿಂದ ನಿನ್ನ ತಂದೆಯವರು ಅತೃಪ್ತರಾಗಿರಬಹುದು. ನಿನಗೊಬ್ಬನಿಗೆ ಕೊಡಬಹುದಾದುದನ್ನು ನನಗೂ-ನಿನಗೂ ಕೊಡಲಿಕ್ಕೆ ಅವರಿಗೆ ಮನಸ್ಸಿರಲಿಕ್ಕಿಲ್ಲ. ಒಂದುವೇಳೆ ಸಂಗತಿ ಹೀಗಾಗಿದ್ದರೆ-ನನಗದನ್ನು ಹೇಳಿಬಿಡು. ನಾನು ಸಂಪೂರ್ಣ ಹಕ್ಕನ್ನು ನಿನಗೊಪ್ಪಿಸಿ ಬಿಡುತ್ತೇನೆ ಮತ್ತು ನನ್ನ ವ್ಯವಹಾರ ನಾನು ನೋಡಿಕೊಳ್ಳಲು ಹೋಗುತ್ತೇನೆ" ಎಂದು ಹೇಳಿದೆನು. "ಬೇಡ, ನನ್ನ ತಂದೆಯವರು ನಿಜಕ್ಕೂ ನಿರಾಸೆಗೊಂಡಿದ್ದಾರೆ ಮತ್ತು ಸತ್ಯನಾಗಿಯೂ ಹಣ ಕೊಡಲು ಅಶಕ್ತರಾಗಿರುವರು. ಇನ್ನೂ ಹೆಚ್ಚು ಅವರಿಗೆ ತ್ರಾಸ ಕೊಡಲಿಕ್ಕೆ ನನಗೆ ಮನಸ್ಸಿಲ್ಲ. ಈ ವ್ಯವಹಾರಕ್ಕೆ ನಾನು ಯೋಗ್ಯನಾಗಿರುವುದಿಲ್ಲವೆಂದು ನನಗೆ ಕಂಡು ಬಂದಿದೆ. ನಾನು ರೈತನಾಗಿ ಬೆಳೆದವನು. ಪೇಟೆಗೆ ಬಂದು ಬಿದ್ದದ್ದು ನನ್ನ ಮೂರ್ಖತನವೆಂದೇ ಹೇಳಬೇಕು. ಈ ಮೂವತ್ತು ವರುಷ ಪ್ರಾಯದಲ್ಲಿ ಹೊಸ ಉದ್ಯೋಗವನ್ನು ಕಲಿಯಲು ಶಿಷ್ಯನಾಗಿ ದುಡಿಯಲಿಕ್ಕೆ ಸೇರಿಕೊಂಡದ್ದು ಹೆಡ್ಡತನವೇ. ನಮ್ಮ ವೆಲ್ಸ್ ಜನರಲ್ಲಿ ಅನೇಕರು ಉತ್ತರ ಕರೋಲಿನಾಕ್ಕೆ ಹೋಗಿ ನೆಲೆಸುವವರಿದ್ದಾರೆ. ಅಲ್ಲಿ ಭೂಮಿ ಬಹಳ ಅಗ್ಗವಾಗಿದೆ. ಅವರೊಡನೆ ಹೋಗಲು ನನಗೆ ಮನಸ್ಸುಂಟು. ನನ್ನ ಹಿಂದಿನ ಉದ್ಯೋಗವನ್ನು ಮಾಡಬೇಕೆಂದು ಯೋಚಿಸಿದ್ದೇನೆ. ನಿನಗೆ ಸಹಾಯ ನೀಡಲು ನಿನ್ನ ಗೆಳೆಯರು ದೊರೆತಾರು. ನೀನು ಕಂಪನಿಯ ಸಾಲವನ್ನು ನಿನ್ನ ಮೇಲೆ ವಹಿಸಿಕೊಂಡು, ನನ್ನ ತಂದೆಯವರು ಆಗಾವು ಕೊಟ್ಟ ನೂರು ಪೌಂಡುಗಳನ್ನು ಮರಳಿ ಕೊಟ್ಟು; ನನ್ನ ಸ್ವಂತದ ಸಾಲಗಳನ್ನು ಸಂದಾಯ ಮಾಡಿದರೆ ಮತ್ತು ನನಗೆ ಮೂವತ್ತು ಪೌಂಡುಗಳನ್ನು ಮತ್ತು ಒಂದು ಹೊಸ ಕುದುರೆ ತಡಿ (Saddle) ಕೊಟ್ಟುದಾದರೆ ನಾನು ಪಾಲುಗಾರಿಕೆಯ ಹಕ್ಕು ಬಿಟ್ಟುಕೊಡುತ್ತೇನೆ ಮತ್ತು ಎಲ್ಲವನ್ನೂ ನಿನ್ನ ವಶಕ್ಕೆ ಕೊಡುತ್ತೇನೆ." ಎಂದು ಅವನು ಹೇಳಿದನು. ಈ ಯೋಜ

ನೆಗೆ ನಾನು ಒಪ್ಪಿದೆನು. ಇದನ್ನು ಬರವಣಿಗೆಯಲ್ಲಿ ಸಿದ್ಧಪಡಿಸಿದ್ದಾಯಿತು. ದಸ್ಕತ್ತು ಹಾಕಿಸಿ ಕೂಡಲೆ ಸೀಲು ಒತ್ತಿಸಿದ್ದು ಆಯಿತು. ಅವನು ಕೇಳಿದುದನ್ನು ನಾನು ಅವನಿಗೆ ಕೊಟ್ಟೆನು. ಅನಂತರ ಬೇಗನೆ ಅವನೂ ಕರೋಲಿನಾಕ್ಕೆ ಹೋದನು. ಅಲ್ಲಿಂದ ಮುಂದಿನ ವರುಷ ಅವನು ನನಗೆ ಪ್ರದೀರ್ಘವಾದ ಪತ್ರಗಳನ್ನು ಕಳುಹಿಸಿದನು. ಅದರಲ್ಲಿ ಆ ನಾಡಿನ ಹವೆ, ಮಣ್ಣು, ಒಕ್ಕಲುತನ ಮೊದಲಾದವುಗಳ ಬಗ್ಗೆ ಅತ್ಯುತ್ತಮವಾದ ವೃತ್ತಾಂತವಿತ್ತು. ಯಾಕಂದರೆ, ಆ ವಿಷಯಗಳಲ್ಲಿ ಅವನು ಸಾಕಷ್ಟು ಬುದ್ಧಿವಂತನಾಗಿದ್ದನು. ವೃತ್ತಪತ್ರದಲ್ಲಿ ನಾನು ಅವುಗಳನ್ನು ಮುದ್ರಿಸಿದೆನು. ಅವುಗಳು ವಾಚಕರಿಗೆ ಮಹದಾನಂದವನ್ನು ಒದಗಿಸಿದವು.

ಅವನು ಹೋದೊಡನೆ ನಾನು ನನ್ನ ಇಬ್ಬರು ಗೆಳೆಯರಿದ್ದಲ್ಲಿಗೆ ಹೋದೆನು. ಇತ್ತ ಇಬ್ಬರಲ್ಲಿ ಯಾವನಿಗೂ ಅಯೋಗ್ಯ ತಾರತಮ್ಯವನ್ನು ತೋರಿಸದಿರುವುದಕ್ಕಾಗಿ ನಾನು ಇಬ್ಬರಿಂದಲೂ ಅವರವರು ನನಗೆ ಕೊಡಲಿಕ್ಕೆ ಬಂದ ಅರ್ಧ-ಅರ್ಧ ಹಣವನ್ನು, ಅಂದರೆ ನನಗೆ ಒಬ್ಬನಿಂದಲೇ ಬೇಕಾಗಬಹುದಾದ್ದನ್ನು ಪಡೆದುಕೊಂಡು, ಕಂಪನಿಯ ಸಾಲವನ್ನು ತೀರಿಸಿಬಿಟ್ಟೆನು. ಅಂತೇ ನನ್ನ ಹೆಸರಿನಲ್ಲೆ ವ್ಯವಹಾರ ತೊಡಗಿಸಿದ್ದಾಯಿತು. ಪಾಲುಗಾರಿಕೆಯು ರದ್ದು ಮಾಡಲಾಗಿದೆಯೆಂದು ಜಾಹೀರಾತೂ ಮಾಡಿದ್ದಾಯಿತು. ಇದು ಸುಮಾರು ೧೭೨೯ ರ ಹತ್ತಿರ-ಯಾ-ಅದೇ ವರುಷದಲ್ಲಿಯೆಂದು ನನಗನಿಸುತ್ತದೆ.

ಈ ಹೊತ್ತಿನಲ್ಲಿ ಹೆಚ್ಚು ಕಾಗದದ ಹಣ (Paper money) ಕ್ಕಾಗಿ ಜನರಲ್ಲಿ ಆತುರವುಂಟಾಗಿತ್ತು. ಪ್ರಾಂತದಲ್ಲಿ ಇನ್ನೂ ಕೇವಲ ಹದಿನೈದು ಸಾವಿರ ಪೌಂಡುಗಳಷ್ಟೆ ಇದ್ದವು. ಅಂತೇ ಅವು ಕೂಡ ಬೇಗನೆ ಕ್ರಮೇಣ ಕಾಣೆಯಾಗಬೇಕಾಗಿದ್ದವು. ಶ್ರೀಮಂತ ಜನರು ಒಂದಿಷ್ಟೂ ಹಣ ಹೆಚ್ಚು ಕೂಡಿಸಲು ವಿರೋಧ ವ್ಯಕ್ತಪಡಿಸಿದ್ದರು. ನ್ಯೂ ಇಂಗ್ಲಂಡಿನಲ್ಲಿ ಆದಂತೆ ಅದರ ಮೌಲ್ಯ ಕಡಿಮೆಯಾಗುವುದೆಂಬ ಭಾವನೆಯಿಂದ ಮತ್ತು ಅದರಿಂದ ಎಲ್ಲ ಸಾಲಗಾರರು ನಷ್ಟಕ್ಕೊಳಗಾಗುವರೆಂಬ ತಿಳಿವಳಿಕೆಯಿಂದ ಅವರೆಲ್ಲ ಕಾಗದದ ಹಣಕ್ಕೆ ವಿರೋಧಿಗಳಾಗಿದ್ದರು. ಈ ವಿಷಯವನ್ನು ನಾವು ನಮ್ಮ ಜಂಟೋದಲ್ಲಿ ಚರ್ಚಿಸಿದ್ದೇವೆ. ಅಲ್ಲಿ ನಾನು ಅಧಿಕ (addition) ಪಕ್ಷದಲ್ಲಿದ್ದೆನು. ಯಾಕಂದರ ೧೭೨೩ ರಲ್ಲಿ ಪ್ರಥಮ ಹಣದ ಮೊಬಲಗನ್ನು ಸ್ವಲ್ಪ ಹೆಚ್ಚು ಮಾಡಿದುದರಿಂದ ವ್ಯವಹಾರ ಉದ್ಯೋಗಗಳೂ ಹೆಚ್ಚಾದುವೆಂದು ಖಾತ್ರಿಪಟ್ಟಿದ್ದೆನು. ಅಂತೇ ಜನ

ಸಂಖ್ಯೆಯೂ ಹೆಚ್ಚಾಗಿತ್ತು. ಈಗ ಎಲ್ಲಾ ಹಳೆಯ ಮನೆಗಳಲ್ಲಿ ಜನ ವಸತಿ ಇತ್ತು. ಅನೇಕ ಹೊಸ ಮನೆಗಳನ್ನು ಕಟ್ಟಲಾಗಿತ್ತು. ಇತ್ತ ನಾನು ಮೊಟ್ಟ ಮೊದಲನೆಯ ಸಲ ನನ್ನ ಬ್ರೆಡ್ಡಿನ ಸುರುಳಿಯನ್ನು ತಿನ್ನುತ್ತ ಫಿಲಡಲ್ಫಿಯಾದ ಬೀದಿಗಳಲ್ಲಿ ತಿರುಗಾಡುತ್ತಿದ್ದಾಗ ಎರಡನೆ ಮತ್ತು ಮೊದಲನೇ ಬೀದಿಗಳ ನಡುವಿನ ವಾಲ್‌ನಟ್ ಸ್ಟ್ರೀಟಿನಲ್ಲಿ ಮನೆಗಳಿಗೆಲ್ಲ ಅವುಗಳ ಬಾಗಿಲಲ್ಲಿ "ಬಾಡಿಗೆಗೆ ಕೊಡಲ್ಪಡುತ್ತದೆ" ಎಂಬ ಬರೆಹವನ್ನು ನಾನು ಕಂಡಿದ್ದು ನನ್ನ ನೆನಪಿಗೆ ಬಂದಿತು. ಇವೇ ರೀತಿಯಲ್ಲಿ ಚಸ್ಟನಟ್ ಸ್ಟ್ರೀಟ್ ಮತ್ತು ಮಿಕ್ಕ ಬೀದಿಗಳಲ್ಲೂ ಕಂಡು ಬರುತ್ತಿತ್ತು. ಇದರಿಂದಾಗಿ ಪಟ್ಟಣದ ಜನರು ಒಬ್ಬರ ತರುವಾಯ ಒಬ್ಬರಂತೆ ಊರು ಬಿಟ್ಟು ಹೋಗುತ್ತಿದ್ದಾರೆಂದು ನಾನು ತಿಳಿದುಕೊಳ್ಳುವ ಹಾಗಾಗಿತ್ತು.

ನಮ್ಮ ಚರ್ಚಾಕೂಟಗಳು ನನ್ನಲ್ಲಿ ಎಷ್ಟು ಪರಿಣಾಮವನ್ನುಂಟು ಮಾಡಿದುವೆಂದರೆ ನಾನೊಂದು ಅನಾಮಿಕ ಕರಪುಸ್ತಕವನ್ನು ಬರೆದು ಮುದ್ರಿಸಿದೆನು. ಅದರ ಹೆಸರು "ಕಾಗದದ ಹಣದ ಗುಣಧರ್ಮ ಹಾಗೂ ಅವಶ್ಯಕತೆ" (Nature and Necessity of Paper Money) ಎಂದಾಗಿತ್ತು. ಸಾರ್ವತ್ರಿಕವಾಗಿ ಇದನ್ನು ಸಾಮಾನ್ಯ ಜನರೆಲ್ಲ ಬಹಳ ಆದರದಿಂದ ಬರಮಾಡಿಕೊಂಡರು. ಆದರೆ ಶ್ರೀಮಂತ ಜನರು ಅದನ್ನು ಮೆಚ್ಚಲಿಲ್ಲ. ಯಾಕಂದರೆ ಅದು ಹೆಚ್ಚು ಹಣಕ್ಕಾಗಿ ಎದ್ದ ಆತುರವನ್ನು ಹೆಚ್ಚಿಸಿ ಬಲಪಡಿಸಿತ್ತು. ಅಂತೇ ಅವರಲ್ಲಿ ಈ ವಿಷಯದ ಮೇಲೆ ಉತ್ತರ ಕೊಡಲು ಲೇಖಕರೇ ಇಲ್ಲದುದರಿಂದ ಅವರ ವಿರೋಧವು ಶಿಥಿಲಗೊಂಡಿತು. ನನ್ನ ವಿಷಯವನ್ನೆ ಸಭೆಯಲ್ಲಿನ ಬಹು ಜನರು ಗ್ರಹಿಸಿಕೊಂಡರು. ಅಲ್ಲಿನ ನನ್ನ ಗೆಳೆಯರು, ನಾನೂ ಸ್ವಲ್ಪ ಸೇವೆಗೆ ಪಾತ್ರನಾಗಿರುವುದನ್ನು ನೆನೆದು, ಹಣವನ್ನು ಮುದ್ರಿಸುವ ಉದ್ಯೋಗವನ್ನು ನನಗೆ ದೊರಕಿಸಿಕೊಟ್ಟು ಬಹುಮಾನಿಸುವುದು ಯೋಗ್ಯವೆಂದು ಬಗೆದರು. ಇದು ಒಳ್ಳೆಯ ಲಾಭದಾಯಕವಾದ ಕೆಲಸ ಮತ್ತು ನನಗೆ ಬಹು ದೊಡ್ಡ ಉಪಕಾರವಾಗಿತ್ತು. ನಾನು ಬರೆಯಲಿಕ್ಕೆ ಸಮರ್ಥನಾಗಿರುವುದರ ಇನ್ನೊಂದು ಅನುಕೂಲ ಇದಾಗಿತ್ತು.

ಕಾಲಾನುಸಾರವಾಗಿ ಮತ್ತು ಅನುಭವದಿಂದ ಈ ಕಾಗದದ ಹಣ ಉಪಯುಕ್ತವಾಗಿ ಕಂಡು ಬಂದು ಆಮೇಲೆ ಎಂದೂ ಇದು ಹೆಚ್ಚಿನ ವಿವಾದಕ್ಕೆ ಗುರಿಯಾಗಲಿಲ್ಲ. ಇದರ ಮೊತ್ತವು ಬಹು ಬೇಗನೆ ಐವತ್ತೈದು

ಸಾವಿರ ಪೌಂಡುಗಳಿಗೂ ಮುಟ್ಟಿತು. ತರುವಾಯ ೧೭೩೯ ರಲ್ಲಿ ಎಂಬತ್ತು ಸಾವಿರ ಪೌಂಡುಗಳಿಗೆ ಬೆಳೆಯಿತು. ಅನಂತರ ಯುದ್ಧಕಾಲದಲ್ಲಿ ಇದು ಹೆಚ್ಚಾಗುತ್ತ ಆಗುತ್ತ ಮುನ್ನೂರ ಐವತ್ತು ಸಾವಿರ ಪೌಂಡುಗಳಿಗೂ ಮುಟ್ಟಿತು. ವ್ಯವಹಾರ, ಕಟ್ಟಡಗಳು ಮತ್ತು ಜನವಸತಿ ಅದೇ ರೀತಿಯಲ್ಲಿ ಒಂದೇ ಸವನೆ ಹೆಚ್ಚಾಗುತ್ತಲೇ ಇತ್ತು. ಆದರೂ ಕೂಡ ನಾನು ಈಗ ಮಾತ್ರ ಕೆಲವೊಂದು ನಿಯಮಿತ ಸಂಖ್ಯೆಗಿಂತ ಹೆಚ್ಚಿಗೆಗೆ ಏರಿಸುವುದು ಅಪಾಯಕರವೆಂದು ತಿಳಿದಿದ್ದೇನೆ.

ಆಮೇಲೆ ನಾನು ಬಹುಬೇಗನೆ ನನ್ನ ಗೆಳೆಯ ಹೆಪಿಲ್ಟನ್ನರ ಮೂಲಕ ನ್ಯೂಕ್ಯಾಸಲ್ ಕಾಗದದ ಹಣ ಮುದ್ರಿಸುವ ಕೆಲಸ ದೊರಕಿಸಿಕೊಂಡೆನು. ಇದು ನಾನು ಆಗ ತಿಳಿದುಕೊಂಡಂತೆ ಇನ್ನೊಂದು ಲಾಭದಾಯಕ ಕೆಲಸ. ಚಿಕ್ಕ ಪರಿಸ್ಥಿತಿಯಲ್ಲಿರುವವರಿಗೆ ಚಿಕ್ಕಪುಟ್ಟ ಸಂಗತಿಗಳು ಬಹು ದೊಡ್ಡದಾಗಿ ಕಾಣಿಸುತ್ತವೆ. ಹೀಗೆ ಇವುಗಳು ನನ್ನ ಮಟ್ಟಿಗೆ ನಿಜವಾಗಿಯೂ ಬಹಳ ಲಾಭಕರವಾಗಿದ್ದುವೆಂದೇ ಹೇಳಬೇಕು. ಯಾಕಂದರೆ ಅವುಗಳು ನನಗೆ ಬಹು ದೊಡ್ಡ ಪ್ರೋತ್ಸಾಹದ ಸಂಗತಿಗಳಾಗಿದ್ದವು. ಅವರು ನನಗೆ ಆ ಸರಕಾರದ ಕಾಯ್ದೆ ಹಾಗೂ ಮತದಾರರ ಯಾದಿಗಳನ್ನು ಮುದ್ರಿಸುವ ಕೆಲಸವನ್ನು ದೊರಕಿಸಿಕೊಟ್ಟರು. ಈ ಕೆಲಸವು ನಾನು ವ್ಯವಹಾರ ನಡೆಸುತ್ತಿರುವಲ್ಲಿಯ ತನಕ ನನ್ನ ಕೈಯಲ್ಲೇ ಉಳಿದುಕೊಂಡು ಬಂದಿತ್ತು.

ಈಗ ನಾನು ಚಿಕ್ಕದೊಂದು ಸ್ಟೇಷನರಿ ಅಂಗಡಿಯನ್ನು ತೆರೆದೆನು. ಅದರಲ್ಲಿ ನಮ್ಮವರಲ್ಲಿ ದೊರಕಬಹುದಾದ ಅತಿ ಶುದ್ಧವಾದ ಎಲ್ಲಾ ಬಗೆಯ ಠಸ್ಸೆಯ ಕಾಗದಗಳನ್ನು (Stamp-Paper) ಮಾರಲಿಕ್ಕೆ ಇಟ್ಟಿದ್ದೆನು. ಈ ವಿಷಯದಲ್ಲಿ ನನ್ನ ಗೆಳೆಯ ಬ್ರೆಯಂಟಾಲನ ಸಲಹೆ ಪಡೆಯುತ್ತಿದ್ದೆನು. ನನ್ನಲ್ಲಿ ಕಾಗದ, ಚರ್ಮದ ಕಾಗದ (Parchment) ಖಾತೆ, ಕಿರ್ದಿ—ಪುಸ್ತಕ ಇತ್ಯಾದಿಗಳೆಲ್ಲ ಇದ್ದವು. ನನಗೆ ಇಂಗ್ಲೆಂಡಿನಲ್ಲಿ ಪರಿಚಯವಿದ್ದ ಒಬ್ಬ ವೈಟ್‌ಮೇಷ್ ಎಂಬ ಕಂಪೋಸಿಟರನು ಈಗ ನನ್ನಲ್ಲಿಗೆ ಬಂದು ಸೇರಿಕೊಂಡು ನನ್ನೊಡನೆ ಸತತವಾಗಿ ಮತ್ತು ಮೈಮುರಿದು ದುಡಿಯಲಿಕ್ಕೆ ತೊಡಗಿದನು. ಅಂತೇ ಎಕ್ವಿಲಾರೋಸನ ಮಗನನ್ನು ನಾನು ತರಬೇತಿಗೆ ತೆಗೆದುಕೊಂಡಿದ್ದೆನು.

ಮುದ್ರಣಾಲಯಕ್ಕಾಗಿ ನಾನು ಮಾಡಿದ ಸಾಲವನ್ನು ಈಗ ಕ್ರಮೇಣ ಸಂದಾಯ ಮಾಡಲಿಕ್ಕೆ ತೊಡಗಿದೆನು. ವ್ಯವಹಾರಸ್ಥನಾಗಿ ನನ್ನ ಗುಣ ಮತ್ತು ಗಾಂಭೀರ್ಯವನ್ನು ಕಾಪಾಡಿಕೊಳ್ಳುವುದಕ್ಕಾಗಿ ನಾನು ಕೇವಲ

ನೈಜವಾಗಿಯೂ ಸತತಕರ್ಮ ಮಾಡಿ ಮಿತವ್ಯಯದಿಂದ ಇರುವುದಕ್ಕೆ ಎಚ್ಚರ ವಹಿಸಿದೆ. ಅದರ ವಿರುದ್ಧವಿದ್ದ ಎಲ್ಲಾ ನಡತೆಗಳನ್ನೂ ಬಿಟ್ಟುಬಿಟ್ಟೆನು. ಸಾದಾ ರೀತಿಯಲ್ಲಿ ಪೋಷಾಕು ಮಾಡುತ್ತಿದ್ದೆನು. ಸೋಮಾರಿತನದ ಯಾವ ವಿನೋದ ಸ್ಥಳಗಳಲ್ಲೂ ನಾನು ಕಾಣಲಿಕ್ಕೆ ಸಿಗುತ್ತಿರಲಿಲ್ಲ. ನಾನೆಂದೂ ಮೀನು ಹಿಡಿಯಲಿಕ್ಕೆ ಅಥವಾ ಶಿಕಾರಿಗೆ ಹೋಗುತ್ತಿದ್ದಿಲ್ಲ. ಆದರೆ ಪುಸ್ತಕವೊಂದು ಮಾತ್ರ ಕೆಲವೊಮ್ಮೆ ನನ್ನನ್ನು ಕೆಲಸದಿಂದ ಭ್ರಷ್ಟಗೊಳಿಸುತ್ತಿತ್ತು. ಆದರೆ ಅದು ಮಾತ್ರ ಕ್ವಚಿತ್ತಾಗಿ ಮತ್ತು ಕಾಣದಂತ ಅಚ್ಚುಕಟ್ಟಾಗಿ ನಡೆಯುವುದರಿಂದ ಯಾವ ದೂಷಣೆಗೂ ಅವಕಾಶವೊದಗುತ್ತಿರಲಿಲ್ಲ. ಅಂತೇ ನಾನು ನನ್ನ ವ್ಯವಹಾರದಿಂದ ದೂರವಿರುವುದಿಲ್ಲವೆಂಬುದನ್ನು ತೋರಿಸಲು ಕೆಲವೊಮ್ಮೆ ಭಂಡಸಾಲೆಗಳಿಂದ ಕೊಂಡ ಪೇಪರನ್ನು ಕೈಬಂಡಿಯಲ್ಲಿ ಹಾಕಿ ಬೀದಿಯಿಂದ ದೂಡಿಕೊಂಡು ಮನೆಗೆ ತರುತ್ತಿದ್ದೆನು. ಹೀಗೆ ದುಡಿಮೆಗಾರನೆಂದೂ, ಮಿತವ್ಯಯದವನೆಂದೂ ಮತ್ತು ಕೊಂಡ ಸಾಮಾನಿನ ಕ್ರಯವನ್ನುವೊದಲೇ ಕೊಡುವ ತರುಣ ವ್ಯಕ್ತಿಯೆಂದೂ ಖ್ಯಾತಿಪಡೆದ ಮೇಲೆ ಸ್ಟೇಷನರಿ ಸಾಮಾನುಗಳನ್ನು ರಪ್ತು ಮಾಡುತ್ತಿದ್ದ ವ್ಯಾಪಾರಿಗಳು ನನ್ನ ನಿಯಮಿತ ವ್ಯಾಪಾರವನ್ನು ಕೇಳಿಕೊಳ್ಳುತ್ತಿದ್ದರು ಮತ್ತು ಬೇರೆಯವರು ನನಗೆ ಪುಸ್ತಕಗಳ ಸರಬರಾಯಿ ಮಾಡಲು ಕೇಳಿಕೊಂಡರು. ಹೀಗೆ ನಾನು ಲೀಲಾಜಾಲವಾಗಿ ವ್ಯವಹಾರ ಸಾಗಿಸಿದೆನು. ಇತ್ತ ಕೈಮರನ ಖ್ಯಾತಿ ಮತ್ತು ವ್ಯವಹಾರ ದಿನದಿಂದ ದಿನಕ್ಕೆ ಇಳಿಯತೊಡಗಿತ್ತು. ಕಟ್ಟಕಡೆಗೆ ಅವನು ತನ್ನ ಸಾಲಗಾರನನ್ನು ಸಮಾಧಾನ ಮಾಡಲು ಮುದ್ರಣಾಲಯವನ್ನು ಬಲಾತ್ಕಾರದಿಂದ ಮಾರಬೇಕಾಗಿ ಬಂದಿತು. ಅವನು ಬಾರ್ಬಡೋಸಿಗೆ ಹೋದನು. ಅಲ್ಲಿ ಕೆಲ ಸಮಯದ ತನಕ ಬಹಳ ಬಡತನದಲ್ಲಿ ಜೀವಿಸಿದನು.

ಅವನಿಂದ ತರಬೇತಿ ಪಡೆಯುತ್ತಿದ್ದ, ಡೆವಿಡ್ ಹೆರ್ರಿ ಎಂಬುವನು ಅವನ ಸಾಹಿತ್ಯ-ಸಾಮುಗ್ರಿಗಳನ್ನು ಕೊಂಡುಕೊಂಡು ಅವನ ಸ್ಥಳದಲ್ಲೆ ಫಿಲಡೆಲ್ಫಿಯಾದಲ್ಲಿ ನೆಲೆವೂರಿದನು. ಈ ಹೆರ್ರಿಗೆ ನಾನು ಕೈಮರನಲ್ಲಿದ್ದಾಗ ಕೆಲಸವನ್ನು ಕಲಿಸಿದ್ದೆನು. ಇವನು ಬಹಳ ದೊಡ್ಡ ಪ್ರತಿಸ್ಪರ್ಧಿಯಾಗುತ್ತಾನೆಂದು ನಾನು ಮೊಗಲಿಗೆ ಬಗೆದಿದ್ದೆನು. ಯಾಕಂದರೆ ಅವನ ಗೆಳೆಯರು ಬಹಳ ಸಮರ್ಥರು ಮತ್ತು ಇವನ ಅಪರಿಮಿತ ಹಿತಚಿಂತಕರೂ ಆಗಿದ್ದರು. ಆದುದರಿಂದ ನಾನು ಅವನಿಗೆ ಪಾಲುಗಾರಿಕೆಯನ್ನು ನೀಡುವ ಯೋಜನೆ ಮಾಡಿದೆನು. ಆದರೆ ಸುದೈವದಿಂದ ಅವನು ನನ್ನನ್ನು ಜರೆದು

ಅದನ್ನು ನಿರಾಕರಿಸಿದನು. ಅವನು ತುಂಬ ಹೆಮ್ಮೆಯವನು, ಸದ್ಗೃಹಸ್ಥ ನಂತೆ ಪೋಷಾಕು ಧರಿಸಿ ದರ್ಬಾರಿನಿಂದ ಜೀವನ ನಡೆಸುತ್ತಿದ್ದು, ಹೊರಗೆ ಹೆಚ್ಚಿನ ಮನೋರಂಜನೆ-ವಿನೋದಾದಿಗಳನ್ನು ಅನುಭವಿಸುತ್ತ, ಸಾಲದಲ್ಲಿ ಬಿದ್ದು ತನ್ನ ವ್ಯವಹಾರವನ್ನು ಅಲಕ್ಷಿಸುತ್ತಿದ್ದನು. ಹೀಗಾಗಿ ಅವನ ವಹಿವಾಟುಗಳೆಲ್ಲ ಕೈಬಿಟ್ಟು ಹೋದವು. ಕೊನೆಗೆ ಏನು ಮಾಡಲಿಕ್ಕೂ ದಾರಿಕಾಣದೆ ಪ್ರಿಂಟಿಂಗ್ ಪ್ರೆಸ್ಸನ್ನು ಸಂಗಡ ತೆಗೆದುಕೊಂಡು ಬಾರ್ಬ ಡೋಸಿಗೆ ಕೈಮರನನ್ನು ಹಿಂಬಾಲಿಸಿದನು. ಅಲ್ಲಿ ಈ ಶಿಷ್ಯನು ತನ್ನ ಮೊದಲಿನ ಒಡೆಯ (Master) ನನ್ನು ಕೆಲಸಗಾರ (journeyman) ನನ್ನಾಗಿ ನೇಮಿಸಿದನು. ಅಲ್ಲಿ ಅವರಿಬ್ಬರೂ ಪದೇ ಪದೇ ಜಗಳ ಕಾಯು ತ್ತಿದ್ದರು. ಹೆರ್ರಿಯು ಸತತ ಸಾಲದಲ್ಲಿಯೇ ಇರಹತ್ತಿದನು. ಕಟ್ಟಕಡೆಗೆ ತನ್ನ ಟೈಪುಗಳನ್ನು ಮಾರಿಕೊಂಡು ಮೊದಲಿನ ಹಳ್ಳಿಯ ಕೆಲಸ ಮಾಡಲು ಪೆನ್ಸಿಲ್ವಾನಿಯಾಕ್ಕೆ ಮರಳಬೇಕಾಯಿತು. ಅವುಗಳನ್ನು ಕೊಂಡ ಮನುಷ್ಯನು ಅವುಗಳ ಉಪಯೋಗ ಮಾಡಲು ಕೈಮ ರನನ್ನು ಕೆಲಸಕ್ಕೆ ಇಟ್ಟುಕೊಂಡನು. ಆದರೆ ಕೆಲವು ವರುಷಗಳಲ್ಲಿ ಅವನು ತೀರಿಕೊಂಡನು.

ಈಗ ಫಿಲಡೆಲ್ಫಿಯಾದಲ್ಲಿ ಬ್ರೆಡ್‌ಫೋರ್ಡ ಮುದುಕನ ಹೊರತಾಗಿ ಬೇರೆ ಯಾವ ಪ್ರತಿಸ್ಪರ್ಧಿಯೂ ಉಳಿದಿರಲಿಲ್ಲ. ಇವನು ಶ್ರೀಮಂತ ಹಾಗೂ ಸುಖಜೀವಿಯಾಗಿದ್ದು, ನಡುಗುವ ಕೈಗಳಿಂದ ಎಂದಾದರೊಮ್ಮೆ ಒಂದಿಷ್ಟು ಅಚ್ಚುಹಾಕುವ ಕೆಲಸ ಮಾಡುತ್ತಿದ್ದನು. ಆದರೆ ವ್ಯವಹಾರ ದೊರಕಿಸಿ ಕೊಳ್ಳುವುದಕ್ಕೆ ಅಷ್ಟೇನು ಆತುರಪಡುತ್ತಿರಲಿಲ್ಲ. ಆದರೂ ಕೂಡ ಅವನು ಅಂಚೆ ಮನೆಯನ್ನು ನಡೆಸುತ್ತಿದ್ದ ಕಾರಣ ಅವನಿಗೆ ಸುದ್ದಿಗಳನ್ನು ಪಡೆ ಯಲು ಅತ್ಯುತ್ತಮ ಅನುಕೂಲತೆಗಳಿವೆಯೆಂದು ತಿಳಿಯಲಾಗಿತ್ತು. ಅವನ ಪತ್ರಿಕೆಯು ಜಾಹೀರಾತನ್ನು ಪ್ರಸಿದ್ಧಿಸುವುದರಲ್ಲಿ ಅತ್ಯುತ್ತಮವಾಗಿತ್ತೆಂದೂ ಗ್ರಹಿಸಲಾಗುತ್ತಿತ್ತು. ಹೀಗೆ ಅವನಿಗೆ ಅನೇಕ ಹೆಚ್ಚಿನ ಜಾಹೀರಾತುಗಳು ಸಿಗುತ್ತಿದ್ದವು. ಇದು ನನಗೆ ಪ್ರತಿಕೂಲವೂ ಆಗಿತ್ತು. ಯಾಕಂದರೆ ನಾನು ಪತ್ರಿಕೆಯನ್ನು ಅಂಚೆಮೂಲಕ ಕಳುಹಿಸಿದರೂ, ಸುದ್ದಿಗಳನ್ನು ಅಲ್ಲಿಂದಲೇ ಪಡೆದರೂ ಕೂಡ ಸಾರ್ವಜನಿಕರ ಅಭಿಪ್ರಾಯ ಮಾತ್ರ ತದ್ವಿರುದ್ಧವಿತ್ತು. ಟಪ್ಪಾಲನ್ನೊಯ್ಯುವ ಕುದುರೆ ಸವಾರರಿಗೆ (rider) ನಾನು ಲಂಚಕೊಟ್ಟು ಅವುಗಳನ್ನು ಕಳುಹಿಸುತ್ತಿದ್ದೇನೆಂದೂ, ಅವರು ಗುಪ್ತವಾಗಿ ಅವುಗಳನ್ನು ಒಯ್ಯುತ್ತಿದ್ದಾರೆಂದೂ ಅವರು ಭಾವಿಸಿದ್ದರು. ಇದನ್ನು ನಿಷೇಧಿಸಲಿಕ್ಕೆ ಬ್ರೆಡ್‌ಫೋರ್ಡನೂ ಸಾಕಷ್ಟು ನಿರ್ದಯಿಯಾಗಿ

ದ್ದನು. ಇದು ನನ್ನ ಮಟ್ಟಿಗೆ ತುಸು ಕೋಪವನ್ನು ಕೆರಳಿಸಿತು. ಇದರ ಬಗ್ಗೆ ಅವನನ್ನು ಬಹಳ ಕ್ಷುಲ್ಲಕನೆಂದು ಬಗೆದೆನು ಮತ್ತು ನಾನು ಅವನ ಸ್ಥಾನಕ್ಕೆ ಬಂದಾಗ ಇದನ್ನು ಅನುಸರಿಸದಂತೆ ಬಹಳ ಎಚ್ಚರವನ್ನೂ ವಹಿಸಿದ್ದನು.

ಇಲ್ಲಿಯ ತನಕ ನಾನು ಗೋಡ್ಫ್ರೀಯ ಸಂಗಡ ವಸತಿ ಹೂಡಿದ್ದೆನು. ಅವನು ನನ್ನ ಮನೆಯ ಒಂದು ಭಾಗದಲ್ಲಿ ತನ್ನ ಹೆಂಡತಿ-ಮಕ್ಕಳ ಸಂಗಡ ವಾಸವಾಗಿದ್ದನು. ಮತ್ತು ಒಂದು ಪಾರ್ಶ್ವದಲ್ಲಿ ಅವನು ತನ್ನ ಕಿಟಕಿ ಬಾಗಿಲುಗಳಿಗೆ ಕಾಜು ವಗ್ಯೆರೆ ಹಚ್ಚುವ ಕೆಲಸ ಮಾಡಲು ಉಪಯೋಗಿಸುತ್ತಿದ್ದನು. ಅದು ಅವನ ಅಂಗಡಿಯಾಗಿತ್ತು. ಆದರೆ ಅವನು ಯಾವಾಗಲೂ ತನ್ನ ಗಣಿತಶಾಸ್ತ್ರದಲ್ಲಿ ತಲ್ಲೀನನಾಗಿರುವುದರಿಂದ ಅವನು ಮಾಡುತ್ತಿದ್ದ ಕೆಲಸ ಬಹಳ ಕಡಿಮೆಯಾಗಿತ್ತು. ಮಿಸೆಸ್ ಗೋಡ್ಫ್ರೀಯು ತನ್ನ ಸಂಬಂಧಿಕರ ಮಗಳ ಜೊತೆಗೆ ನನಗೊಂದು ವಿವಾಹ ಮಾಡುವ ಯೋಜನೆ ಹೂಡಿದಳು. ಹುಡುಗಿ ಅವಳ ಮಟ್ಟಿಗೆ ಬಹಳ ಯೋಗ್ಯಳಾಗಿದ್ದುದರಿಂದ, ಈ ಯಜಮಾನಿಯು ನನ್ನ ವತಿಯಿಂದ ಖಂಡಿತವಾದ ಕೂಟವು ಜರಗುವ ತನಕ, ನಮ್ಮಿಬ್ಬರನ್ನು ಒಟ್ಟಿಗೆ ಕೂಡಿಸುವ ಸಂದರ್ಭಗಳನ್ನು ಆಗಾಗ ಒದಗಿಸುತ್ತಿದ್ದಳು. ಆಗಾಗ ರಾತ್ರಿಯೂಟಕ್ಕೆ ನನ್ನನ್ನು ಆಮಂತ್ರಿಸಿ ಮತ್ತು ನಮ್ಮಿಬ್ಬರನ್ನು ಒಟ್ಟಿಗೆ-ಕಟ್ಟಕಡೆಗೆ ವಿವರಣೆಯ ಹೊತ್ತು ಬರುವ ತನಕ ಬಿಟ್ಟು-ತ ಮುಖಿ ಜನರು ನನಗೆ ಪ್ರೋತ್ಸಾಹ ಕೊಟ್ಟರು. ಮಿಸೆಸ್ ಗೋಡ್ಫ್ರೀಯು ನಮ್ಮ ಚಿಕ್ಕ ಒಪ್ಪಂದವನ್ನು ನಿರ್ವಹಿಸಿದಳು. ಮುದ್ರಣಾಲಯದ ಬಗ್ಗೆ ಇನ್ನೂ ಉಳಿದಿರುವ ಸಾಲವನ್ನು ಅವರ ಮಗಳು ತುಂಬಿಸಲಿಕ್ಕೆ ಹಣ ಕೊಡಬೇಕಾಗುವುದೆಂದು ನಾನು ಅವಳಿಗೆ ತಿಳಿಯಪಡಿಸಿದೆನು. ಆ ಸಾಲವು ಆಗ ನೂರು ಪೌಂಡುಗಳಿಗಿಂತ ಹೆಚ್ಚಿರಲಿಲ್ಲವೆಂದು ನನಗೆನಿಸುತ್ತದೆ. ಅವರಲ್ಲಿ ಅಷ್ಟು ಹಣ ಕೊಡಲಿಕ್ಕೆ ಇಲ್ಲವೆಂದು ಅವಳು ಸುದ್ದಿ ತಂದಳು. ಅವರು ತಮ್ಮ ಮನೆಯನ್ನು ಲೋನ್-ಆಫೀಸಿನಲ್ಲಿ ಅಡವು ಹಾಕಬಹುದೆಂದು ನಾನು ಹೇಳಿದೆನು. ಕಲವು ದಿನಗಳ ನಂತರ ಅವರು ಈ ಸಂಬಂಧವನ್ನು ಒಪ್ಪಿರುವುದಿಲ್ಲವೆಂದು ಇದಕ್ಕೆ ಉತ್ತರ ಬಂದಿತು. ಅಂತೇ ಬ್ರೆಡ್‌ಫೋರ್ಡನೊಡನೆ ಕೇಳಿಕೊಂಡ ತರುವಾಯ ಮುದ್ರಣದ ವ್ಯವಹಾರವು ಲಾಭದಾಯಕವಾಗಿರುವುದಿಲ್ಲ; ಟೈಪುಗಳು ಬಹು ಬೇಗನೆ ಹಾಳಾಗಿ ಹೋಗುತ್ತವೆ ಮತ್ತು ಹೆಚ್ಚಿಗೆ ಬೇಕಾಗುತ್ತವೆ ; ಎಸ್. ಕೈಮರ್ ಮತ್ತು ಡಿ. ಹೆರ್‍ರಿ ಇಬ್ಬರ ಹಿಂದೆ ಮತ್ತೊಬ್ಬರು ಅಯಶಸ್ವಿಯಾದರು,

ಮತ್ತು ಕ್ಷಿಪ್ರದಲ್ಲಿ ನಾನು ಅವರನ್ನು ಹಿಂಬಾಲಿಸಬಹುದು; ಎಂದು ತಿಳಿದು ಬಂದಿತ್ತು. ಆದುದರಿಂದ ಆ ಮನೆಯಿಂದ ನಿಷೇಧಿಸಲ್ಪಟ್ಟೆನು ಮತ್ತು ಮಗಳನ್ನು ಮುಚ್ಚಿಡಲಾಯಿತು.

ಇದು ನಿಜವಾಗಿಯೂ ಭಾವನೆಯ ಬದಲಾವಣೆಯೋ ಅಥವಾ ನಾವು ಪ್ರೇಮಪಾಶದಲ್ಲಿ ಸಿಲುಕಿ ಬಹಳ ದೂರ ಸೆಳೆದೊಯ್ಯಲ್ಪಟ್ಟುದರಿಂದ ಮರಳಿ ಸಂಬಂಧವನ್ನು ಮುರಿಯಲಾರೆವೆಂಬ ವಿಚಾರದಿಂದ ನಾವು ಕದ್ದು ಮದುವೆ ಮಾಡಿಕೊಳ್ಳುತ್ತೇವೆ—ಹೀಗಾದರೆ ಅವರಿಗೆ ತಾವು ಕೊಡ ಲಿಕ್ಕೆ ಇಚ್ಛಿಸಿದಷ್ಟನ್ನು ಕೊಡಲು ಅಥವಾ ಕೊಡದಿರಲು ಸ್ವಾತಂತ್ರ್ಯ ದೊರಕಿದಂತಾಗುತ್ತದೆಂದು ಬಗೆದು ಹೂಡಿದ ಕಪಟವೋ ಏನೋ, ನನಗೆ ತಿಳಿದಿರಲಿಲ್ಲ. ಆದರೆ ಎರಡನೆಯ ವಿಷಯವನ್ನು ಕುರಿತು ನಾನು ಸಂಶಯ ತಾಳಿದೆನು. ನಾನು ಅದರ ಬಗ್ಗೆ ರೇಗಿದೆನು. ಅಂತೇ ಆಮೇಲೆ ಅತ್ತ ಕಾಲು ಹಾಕಲಿಲ್ಲ. ಮಿಸೆಸ್ ಗೋಡ್ಫ್ರೆ ಅನಂತರ ಒಂದಿಷ್ಟು ಅನುಕೂಲವಾದ ವೃತ್ತಾಂತವನ್ನು ಆವರ ವ್ಯವಸ್ಥೆಯ ಬಗ್ಗೆ ಹೇಳಿದಳು. ಅವಳು ನನ್ನನ್ನು ಅತ್ತ ಪುನಃ ಸೆಳೆಯಬಹುದಾಗಿತ್ತು. ಆದರ ಇನ್ನು ಮುಂದೆ ಸಂಸಾರದ ಜೊತೆಗೆ ನನಗೆ ಯಾವ ಸಂಬಂಧವೂ ಬೇಡವೆಂಬ ನನ್ನ ನಿರ್ಧಾರವನ್ನು ನಾನು ಖಂಡಿತವಾಗಿ ವ್ಯಕ್ತಪಡಿಸಿದೆನು. ಗೋಡ್ಫ್ರೇ ದಂಪತಿಗಳು ಸಿಟ್ಟಿ ನಿಂದ ಇದಕ್ಕೆ ಪ್ರತಿಕ್ರಿಯೆ ತೋರಿಸಿದರು. ನಮ್ಮಲ್ಲಿ ವೈಮನಸ್ಸುಂಟಾ ಯಿತು. ಅವರು ಇಡೀ ಮನೆಯನ್ನು ನನಗೆ ಬಿಟ್ಟು ನನ್ನ ಮನೆಯಿಂದ ಹೊರಟುಹೋದರು. ಇತ್ತ ನಾನು ಇನ್ನು ಮುಂದೆ ಯಾವ ಸಹವಸತಿ ಯವರನ್ನು ಸ್ವೀಕರಿಸಿಕೊಳ್ಳಬಾರದೆಂದು ನಿರ್ಧರಿಸಿದೆನು.

ಆದರೆ ಈ ಘಟನೆಯಿಂದ ನನ್ನ ವಿಚಾರಗಳು ವಿವಾಹದತ್ತ ತೆರಳಿ ದವು. ಆದುದರಿಂದ ನಾನು ಸುತ್ತಮುತ್ತಲಿಲ್ಲ ಮತ್ತು ಬೇರೆ ಸ್ಥಳಗಳಲ್ಲಿ ಸಂಬಂಧದ ಪ್ರಸ್ತಾಪಗಳನ್ನು ಮಾಡಿದೆನು. ಆದರೆ ಮುದ್ರಕನ ವ್ಯವಹಾರವು ಸಾಮಾನ್ಯವಾಗಿ ಬಡತನದ್ದೆಂದು ಪರಿಗಣಿಸಲ್ಪಟ್ಟಿದೆಯೆಂದು ಬೇಗನೆ ತಿಳಿದುಬಂದಿತು. ಅಂತೇ ನನಗೆ ಅಯೋಗ್ಯಳೆಂದು ತಿಳಿದವಳ ಹೊರ ತಾಗಿ ಬೇರೆ ಯಾವ ಮಡದಿಯಿಂದಲೂ ನಾನು ಹಣವನ್ನು ಆಪೇಕ್ಷಿಸಲಿಕ್ಕಾ ಗುತ್ತಿರಲಿಲ್ಲ. ಅಂಕೆಯಲ್ಲಿಡಲು ಅಸಾಧ್ಯವಾದ ತಾರುಣ್ಯದ ಕಾಮ ದಿಂದಾಗಿ ಇದೇ ಹೊತ್ತಿನಲ್ಲಿ ನಾನು ನನ್ನ ದಾರಿಯಲ್ಲಿ ಎದುರಾದ ಕೀಳು ಹೆಂಗಸರೊಡನೆ ಒಳಬೇಟೆಗೆ ತುತ್ತಾಗಬೇಕಾಯಿತು. ಇದಕ್ಕೆ ಬಹಳ ಖರ್ಚು ತಗಲುತ್ತಿತ್ತು ಮತ್ತು ದೊಡ್ಡ ಅನಾನುಕೂಲವೂ ಒದಗುತ್ತಿತ್ತು.

ಇದಲ್ಲದೆ ಆರೋಗ್ಯಕ್ಕೆ ಸತತವಾದ ಅಪಾಯುವು ಆ ಒಂದು ರೋಗದಿಂದ ಇದ್ದೇ ಇತ್ತು. ನಾನು ಬಹಳ ದೊಡ್ಡ ಪುಣ್ಯದಿಂದ ಅದರಿಂದ ಪಾರಾದರೂ ಆ ವಿಷಯದಲ್ಲಿ ನಾನು ಎಲ್ಲಕ್ಕಿಂತಲೂ ಹೆಚ್ಚು ಹೆದರುತ್ತಿದ್ದೆನು. ಹಳೆಯ ಗುರುತಿನಿಂದಾಗಿ ಮತ್ತು ನೆರೆಹೊರೆಯವರಾಗಿದ್ದ ಮೂಲಕ ಮಿಸೆಸ್ ರೀಡಳ ಮನೆಯವರೊಡನೆ ನನ್ನ ಗೆಳೆತನದ ಪತ್ರವ್ಯವಹಾರ ನಡೆದೇ ಇತ್ತು. ನಾನು ಅವರ ಮನೆಯಲ್ಲಿ ಮೊದಲಿಗೆ ವಸತಿ ಹೂಡಿದಂದಿನಿಂದ ಅವರೆಲ್ಲರಿಗೂ ನನ್ನ ಬಗ್ಗೆ ಆದರವಿತ್ತು. ಆಗಾಗ ನನ್ನನ್ನು ಅವರಲ್ಲಿಗೆ ಆಮಂತ್ರಿಸುತ್ತಿದ್ದರು ಮತ್ತು ಅವರ ಕಾರಭಾರಗಳ ಕುರಿತು ನನ್ನ ಸಲಹೆ ಕೇಳುತ್ತಿದ್ದರು. ಈ ವಿಷಯದಲ್ಲಿ ನಾನು ಕೆಲವೊಮ್ಮೆ ಅವರ ಸೇವೆಗೆ ಪಾತ್ರನಾಗುತ್ತಲೂ ಇದ್ದೆನು. ಬಡ ಮಿಸ್ ರೀಡಳ ಪರಿಸ್ಥಿತಿ ನೋಡಿ ನನಗೆ ಕರುಣೆ ಹುಟ್ಟಿತು. ಅವಳು ಸಾಮಾನ್ಯವಾಗಿ ಧೈರ್ಯಗುಂದಿಸಲ್ಪಟ್ಟವಳಾಗಿದ್ದು, ಸಿರ್ವಿಣ್ಣತೆಯಿಂದ ಯಾರ ಸಹವಾಸವನ್ನೂ ಬಯಸುವವಳಾಗಿರಲಿಲ್ಲ. ನಾನು ಲಂಡನಿನಲ್ಲಿದ್ದಾಗ ನನ್ನ ನಿರ್ಲಿಪ್ತತೆ ಮತ್ತು ಅಸ್ಥಿರತೆಗಳು ಅವಳ ದುಃಖಕ್ಕೆ ಬಹುಮಟ್ಟಿಗೆ ಕಾರಣವೆಂದು ನಾನು ಬಗೆದಿದ್ದೆನು. ಆದರೆ ನನಗಿಂತ ಹೆಚ್ಚಿನ ತಪ್ಪು ಅವಳಲ್ಲಿಯೇ ಇದೆಯೆಂದು ತಿಳಿದುಕೊಳ್ಳುವಷ್ಟು ಅವಳ ತಾಯಿ ಒಳ್ಳೆಯವಳಾಗಿದ್ದಳು. ಯಾಕೆಂದರೆ ನಾನು ಲಂಡನಿಗೆ ಹೋಗುವ ಮೊದಲು ಅವಳೇ ನಮ್ಮ ಮದುವೆಯನ್ನು ತಡೆದಿದ್ದಳು ಮತ್ತು ನಾನಿಲ್ಲದಾಗ ಬೇರೆ ಸಂಬಂಧವನ್ನು ಮಾಡಿಕೊಳ್ಳಲು ಅವಳಿಗೆ ಒತ್ತಾಯ ಮಾಡಿದ್ದಳು. ನಮ್ಮ ಪರಸ್ಪರ ಪ್ರೀತಿಯು ಮರಳಿ ಕೊನರಿತು. ಆದರೆ ಈಗ ನಮ್ಮ ಕೂಡುವಿಕೆಗೆ ಬಹಳ ದೊಡ್ಡ ತಕರಾರುಗಳಿದ್ದವು. ಸಂಬಂಧವೇ ಅಸಾಧ್ಯವೆಂದು ಪರಿಗಣಿಸಲಾಯಿತು. ಆ ತರುವಾಯದ ಹೆಂಡತಿಯೊಬ್ಬಳು ಇಂಗ್ಲೆಂಡಿನಲ್ಲಿ ಜೀವಿಸಿದ್ದಾಳೆಂದು ಹೇಳಲಾಯಿತು. ಆದರೆ ಅವಳು ಅಷ್ಟೊಂದು ದೂರವಿದ್ದುದರಿಂದ ಇದನ್ನು ಸುಲಭವಾಗಿ ಸಾಧಿಸಲಿಕ್ಕಾಗಲಿಲ್ಲ. ಅಂತೇ ಅವನ ಮರಣದ ವರದಿಯಿದ್ದರೂ ಅದೇನು ಖಂಡಿತವಾದುದಾಗಿರಲಿಲ್ಲ. ಒಂದು ವೇಳೆ ಇದು ನಿಜವಾಗಿದ್ದರೂ ಅವನು ಬಹಳ ಸಾಲ ಬಿಟ್ಟು ಹೋಗಿದ್ದನು. ಅದನ್ನು ಅವನ ಉತ್ತರಾಧಿಕಾರಿಯು ತೀರಿಸಲಿಕ್ಕೆ ಸಮರ್ಥನಾಗಿರಬೇಕಾಗಿತ್ತು. ಏನಿದ್ದರೂ ಇಷ್ಟೆಲ್ಲ ಕಷ್ಟಗಳ ಮಧ್ಯದಲ್ಲಿಯು ನಾವು ಧೈರ್ಯಮಾಡಿ ಮುಂದುವರಿದೆವು ಅಂತೇ ೧೭೩೦ ಸೆಪ್ಟೆಂಬರ ೧ ರಂದು ನಾನು ಅವಳನ್ನು ನನ್ನ ಹೆಂಡತಿಯಾಗಿ ಸ್ವೀಕರಿಸಿದೆನು. ನಾವು ಆಲೋಚಿಸಿದ್ದ ಕಷ್ಟನಷ್ಟಗಳೂ ನಮಗೆ ಒದಗಿ ಬರಲಿಲ್ಲ.

ಅವಳು ಒಳ್ಳೆಯ ಮತ್ತು ನಂಬಿಕೆಯ ಸಹಚಾರಿಣಿಯೆಂಬುದನ್ನು ಸಿದ್ಧ ಪಡಿಸಿದಳು. ನನ್ನ ಅಂಗಡಿಯನ್ನು ನಡೆಸುತ್ತ ನನಗೆ ಬಹಳ ಸಹಕರಿಸು ತ್ತಿದ್ದಳು. ನಾವಿಬ್ಬರೂ ಒಟ್ಟಿಗೆ ಬೆಳೆದೆವು. ಅಂತೇ ಯಾವಾಗಲೂ ಪರಸ್ಪರ ರನ್ನು ಸುಖದಿಂದಿಡಲು ಇಬ್ಬರೂ ಬಹಳ ಪ್ರಯತ್ನಪಡುತ್ತಿದ್ದೆವು. ಹೀಗೆ ನನ್ನಿಂದ ಸಾಧ್ಯವಿದ್ದಷ್ಟು ಮಟ್ಟಿಗೆ ನಾನು ಬಹು ದೊಡ್ಡ ತಪ್ಪನ್ನು ತಿದ್ದಿಕೊಂಡೆನು

ಸುಮಾರು ಇದೇ ಕಾಲಕ್ಕೆ ನಮ್ಮ ಕ್ಲಬ್ಬಿನ ಸಭೆಯು ಹೊಟೇಲಿನಲ್ಲಿ ಜರುಗುತ್ತಿದ್ದಿಲ್ಲ. ಬದಲು ಅದಕ್ಕೋಸ್ಕರ ಪ್ರತ್ಯೇಕಿಸಲ್ಪಟ್ಟ ಮಿಸ್ಟರ್ ಗ್ರೇಸರ ಒಂದು ಕೋಣೆಯಲ್ಲಿ ಅದು ಜರಗುತ್ತಿತ್ತು. ಈ ಬಗ್ಗೆ ನಾನು ಒಂದು ಠರಾವು ತಂದಿದ್ದೆನು. ಅದರಂತೆ ನಮ್ಮ ಪ್ರಶ್ನೆಗಳ ಚರ್ಚೆ ನಡೆಯು ವಾಗ ಪುಸ್ತಕಗಳನ್ನು ಆಗಾಗ ಸಹಾಯಕ್ಕೆ ಸಾದರಪಡಿಸಬೇಕಾಗುತ್ತದೆ. ಆದುದರಿಂದ ನಾವು ಎಲ್ಲಿ ಸೇರುವೆವೋ ಅಲ್ಲಿಯೇ ಅವುಗಳನ್ನು ಇಡುವುದು ಅನುಕೂಲವಾಗಿತ್ತು. ಪ್ರಸಂಗ ಬಿದ್ದಾಗ ಅವುಗಳನ್ನು ನೋಡಬಹುದಾ ಗಿತ್ತು. ಹೀಗೆ ನಮ್ಮ ಪುಸ್ತಕಗಳನ್ನೆಲ್ಲ ಒಂದು ಸಾಮಾನ್ಯ ವಾಚನಾಲಯ ದಲ್ಲಿ ಕಲೆ ಹಾಕಿ ಅವುಗಳನ್ನೆಲ್ಲ ಒಂದೆಡೆಯಲ್ಲಿ ಇಡಲು ಒಪ್ಪಿದುದರಿಂದ ನಮಗೆ ಮಿಕ್ಕ ಎಲ್ಲ ಸದಸ್ಯರ ಪುಸ್ತಕಗಳನ್ನು ಉಪಯೋಗಿಸುವ ಲಾಭವೂ ದೊರೆಯುತ್ತಿತ್ತು. ಹೀಗಿದ್ದರೆ ಒಬ್ಬನಲ್ಲೇ ಅಷ್ಟೆಲ್ಲ ಪುಸ್ತಕಗಳು ಇದ್ದಷ್ಟು ಲಾಭದಾಯಕವಾಗಿತ್ತು. ಇದಕ್ಕೆ ಮೆಚ್ಚಿ ಒಪ್ಪಿದ್ದು ಆಯಿತು. ಅಂತೇ ಕೋಣೆಯ ಒಂದು ಮೂಲೆಯನ್ನು ನಮ್ಮಿಂದ ಕೊಡಲಿಕ್ಕೆ ಸಾಧ್ಯವಾದ ಉತ್ತಮ ಪುಸ್ತಕಗಳಿಂದ ತುಂಬಿಸಿದೆವು. ನಾವು ಎಣಿಸಿದಷ್ಟು ದೊಡ್ಡ ಸಂಖ್ಯೆಯಲ್ಲಿ ಪುಸ್ತಕಗಳಿರಲಿಲ್ಲ. ಆದರೆ ಅವುಗಳು ಮಾತ್ರ ಬಹಳ ಪ್ರಯೋಜನಕಾರಿಯಾಗಿದ್ದವು. ಆದರೂ ಕೂಡ ಅವುಗಳ ಬಗ್ಗೆ ಯೋಗ್ಯ ಗಮನವಿಲ್ಲದ್ದರಿಂದ ಕೆಲವೊಂದು ಅನಾನುಕೂಲತೆಗಳು ಉಂಟಾಗುತ್ತಿದ್ದವು. ಸುಮಾರು ಒಂದು ವರ್ಷದಲ್ಲಿ-ಸಂಗ್ರಹವು ವಿಂಗಡಿಸಲ್ಪಟ್ಟಿತು. ಅಂತೇ ಪ್ರತಿಯೊಬ್ಬನೂ ತನ್ನ ಪುಸ್ತಕಗಳನ್ನು ಮರಳಿ ಮನೆಗೆ ಕೊಂಡುಹೋದು ದಾಯಿತು.

ಇತ್ತ ನಾನು ಈಗ ಸಾರ್ವಜನಿಕ ಮಾದರಿಯ ನನ್ನ ಪ್ರಥಮ ಯೋಜನೆಯನ್ನು ಹೂಡಿದೆನು. ಅದೆಂದರೆ ಒಂದು ಚಂದಾ ಹಣದ ವಾಚ ನಾಲಯದ ಯೋಜನೆ. ನಾನೇ ಎಲ್ಲಾ ಘಟನಾವಳಿಯನ್ನು ರೂಪಿಸಿ ದೆನು ಮತ್ತು ಯೋಗ್ಯವಾದ ರೂಪಗಲ್ಲಿ ನಮ್ಮ ಮಹಾ ದೇಶಪಾಂಡೆಯಾದ

ಬ್ರೊಕ್ಡೆನ್ನನ ಕೈಯಿಂದ ಪ್ರತಿರೂಪಿಸಿಕೊಂಡೆನು. ನಮ್ಮ "ಜಂಟೊ,"ದ ಗೆಳೆಯರ ಸಹಾಯದಿಂದ ಪ್ರಾರಂಭಕಾರ್ಯಕ್ಕೆ ನಾಲ್ವತ್ತು ಶಿಲ್ಲಿಂಗಿನಂತೆ, ಹಾಗೂ ವರುಷಂಪ್ರತಿ ಹತ್ತು ಶಿಲ್ಲಿಂಗಿನಂತೆ ಐವತ್ತು ವರುಷಗಳ ತನಕ ಕೊಡುವ ಐವತ್ತು ಸದಸ್ಯರನ್ನು ದೊರಕಿಸಿಕೊಂಡದ್ದಾಯಿತು. ಅಷ್ಟು ವರುಷಗಳ ತನಕ ನಮ್ಮ ಸಂಸ್ಥೆಯು ನಡೆಯುವುದಾಗಿತ್ತು. ನಮ್ಮ ಸಂಸ್ಥೆಯ ಸಂಖ್ಯೆಯು ನೂರಕ್ಕೆ ಏರಿದುದರಿಂದ ನಾವು ಅನಂತರ ಒಂದು ಶಾಸನ ಪತ್ರ ವನ್ನು (Charter) ಪಡೆವೆವು. ಈಗ ಅಸಂಖ್ಯಾಕವಿರುವ ಉತ್ತರ ಅಮೆರಿಕನ್ ಚಂದಾ ವಾಚನಾಲಯಗಳಿಗೆ ನಮ್ಮದು ಮಾತೃಸಂಸ್ಥೆಯಾ ಗಿತ್ತೆನ್ನಬೇಕು. ತನ್ನಷ್ಟಕ್ಕೆ ಅದು ಬಹು ದೊಡ್ಡ ಸ್ಥಾನ ಪಡೆಯಿತು ಮತ್ತು ಸತತ ಅಭಿವೃದ್ಧಿ ಹೊಂದುತ್ತಲೇ ಇತ್ತು. ಈ ವಾಚನಾಲಯಗಳು ಅಮೆರಿಕನರ ಸಾಮಾನ್ಯ ಸಂಭಾಷಣೆಯನ್ನು ಸುಧಾರಿಸಿವೆ ಮತ್ತು ಸಾಮಾನ್ಯ ವ್ಯವಹಾರಸ್ಥನನ್ನು ಮತ್ತು ಬೇಸಾಯಗಾರನನ್ನು ಮಿಕ್ಕನಾಡಿನ ಹೆಚ್ಚಿನ ಗೃಹಸ್ಥರಷ್ಟು ಬುದ್ಧಿವಂತರನ್ನಾಗಿ ಮಾಡಿವೆ ಹಾಗೂ ಬಹುಶಃ ಕೆಲ ಮಟ್ಟಿಗೆ ವಸಾಹತುಗಳು ಅಷ್ಟೊಂದು ಸಾರ್ವತ್ರಿಕವಾಗಿ ವಹಿಸಿದ ತಮ್ಮ ಹಕ್ಕು-ಬಾಧ್ಯತೆಗಳ ನಿಲುವಿಗೆ ಸಹಾಯ ಮಾಡಿರುತ್ತವೆಯೆನ್ನಬಹುದು.

ಜ್ಞಾಪಕ ಟಿಪ್ಪಣಿ :—ಮೊದಲಿಗೆ ವ್ಯಕ್ತಪಡಿಸಿದ ಉದ್ದೇಶದ ಕುರಿತು ಇಲ್ಲಿಯ ತನಕ ಎಲ್ಲವನ್ನೂ ಬರೆದುದಾಯಿತು. ಆದುದರಿಂದ ಬೇರೆಯವರಿಗೆ ಯಾವ ಮಹತ್ವವೂ ಎನಿಸದ ಅನೇಕ ಚಿಕ್ಕ-ಪುಟ್ಟ ಸಾಂಸಾ ರಿಕ ಉಪಕಥೆಗಳು ಸೇರಿಕೊಂಡಿವೆ. ಇನ್ನು ಮುಂದೆ ಇರತಕ್ಕಂಥದ್ದನ್ನು ಮಾತ್ರ ಈ ಪತ್ರಗಳಲ್ಲಿರುವ ಉಪದೇಶಕ್ಕೆ ಅನುಗುಣವಾಗಿ ಅನೇಕ ವರುಷ ಗಳ ತರುವಾಯ ಬರೆಯಲಾಗಿರುತ್ತದೆ. ಮತ್ತು ಅದೇ ಪ್ರಕಾರ ಸಾರ್ವ ಜನಿಕರಿಗೆ ಸಂಬಂಧಪಟ್ಟದ್ದು ಆಗಿರುತ್ತದೆ. ಕ್ರಾಂತಿಯ (Revolution) ವಿಷಯಗಳು ಮಾತ್ರ ಅಡೆ-ತಡೆಯ ಪ್ರಸಂಗಗಳನ್ನು ಒದಗಿಸಿರುತ್ತವೆ.

## ನನ್ನ ಜೀವನದ ಟಿಪ್ಪಣಿಗಳುಳ್ಳ ಏಬೆಲ್ ಜೇಮ್ಸ್‌ರ ಪತ್ರ (ಪ್ಯಾರಿಸ್ಸಿನಲ್ಲಿ ಪಡೆದದ್ದು)

"ನನ್ನ ಪ್ರಿಯ ಹಾಗೂ ಪೂಜ್ಯ ಮಿತ್ರನೇ: ನಿನಗೆ ಬರೆಯಬೇಕೆಂದು ನಾನು ಆಗಾಗ ಅಪೇಕ್ಷಿಸಿದ್ದುಂಟು. ಆದರ ಆ ಪತ್ರವು ಬ್ರಿಟಿಷರ ಕೈಗೆ ಬಿದ್ದೀತೆಂದು ಮತ್ತು ಯಾವ ಮುದ್ರಕನಾಗಲಿ ಇಲ್ಲವೆ ಕಾರ್ಯಾತುರನಾದ ಮನುಷ್ಯನಾಗಲಿ ಅದರಲ್ಲಿನ ವಿಷಯದ ಕೆಲಭಾಗವನ್ನು ಮುದ್ರಿಸಬಹುದೆಂಬ

ಅಳುಕಿನಿಂದ ಹಾಗೂ ನನ್ನ ಮಿತ್ರನಿಗೆ ಕಷ್ಟ ಒದಗಿಸಬಹುದು ಮತ್ತು ನನ್ನ ಮೇಲೆ ಆರೋಪ ಹೊರಿಸಲ್ಪಡಬಹುದೆಂದು ಬಗೆದು ಅದನ್ನು ನೆರವೇರಿಸಲಿಕ್ಕೆ ಸಾಧ್ಯವಾಗಲಿಲ್ಲ.

"ಕೆಲ ಕಾಲದ ಹಿಂದೆ ನನಗೆ ಆಶ್ಚರ್ಯ ಹುಟ್ಟಿಸುವಂತೆ, ಸುಮಾರು ಇಪ್ಪತ್ತ ಮೂರು ಹಾಳೆಗಳು ನಿನ್ನದೇ ಕೈಬರೆಹದಲ್ಲಿ ಬರೆದವುಗಳು ನನ್ನ ಕೈಗೆ ಬಿದ್ದವು. ಅದರಲ್ಲಿ ನಿನ್ನ ಪಾಲಕತನದ ಹಾಗೂ ನಿನ್ನ ಜೀವನದ ವೃತ್ತಾಂತವು ಅಡಕವಾಗಿತ್ತು. ಅದನ್ನು ನಿನ್ನ ಮಗನ ವಿಳಾಸಕ್ಕೆ ಬರೆಯಲಾಗಿತ್ತು. ೧೭೩೦ರಲ್ಲಿ ಅದು ಕೊನೆಗೊಂಡಿತ್ತು. ಬರಹದಂತೆ ಅದರಲ್ಲಿ ಟಿಪ್ಪಣಿಗಳೂ ಇದ್ದವು. ಅದರ ಒಂದು ಪ್ರತಿಯನ್ನು ನಿನಗೆ ಕಳುಹಿಸಿದ್ದೇನೆ. ಅದನ್ನು ನೀನು ಮುಂದಿನ ಅವಧಿಯ ತನಕ ಬೆಳೆಸಿದರೆ ಅದು ನಿನಗೆ ಒಂದು ಸಾಧನವಾಗಬಹುದೆಂಬ ನಿರೀಕ್ಷೆಯುಂಟು. ಮೊದಲನೆಯ ಎರಡನೆಯ ಭಾಗಗಳನ್ನು ಒಟ್ಟಿಗೆ ಕೂಡಿಸಬಹುದು. ಅಂತೇ ಒಂದುವೇಳೆ ನೀನು ಅದನ್ನು ಈವರೆಗೆ ಮುಂದುವರಿಸದೇ ಇದ್ದರೂ ಕೂಡ ಮುಂದಕ್ಕೆ ನೀನು ಕಾಲಹರಣ ಮಾಡುವುದಿಲ್ಲೆಂದೂ ನಾನು ಆಶಿಸಿದ್ದೇನೆ. ಧರ್ಮಬೋಧಕನು ನಮಗೆ ಹೇಳುವ ಹಾಗೆ ಜೀವನವು ಅಸ್ಥಿರವಾದದ್ದು. ಅಂತೇ ಒಂದು ವೇಳೆ ದಯಾಮಯನೂ, ಧರ್ಮಿಷ್ಟನೂ ಮತ್ತು ಪರೋಪಕಾರಿಯೂ ಆದ ಬೆಂಜಮಿನ್ ಫ್ರಾಂಕ್ಲಿನ್ನನು ಅಷ್ಟೊಂದು ಮನೋಹರವಾದ ಮತ್ತು ಮಹತ್ವದ ಕೃತಿಯನ್ನು, ಕೆಲವು ಮಂದಿಗಷ್ಟೆ ಅಲ್ಲದೆ ಮಿಲಿಯಗಟ್ಟಲೆ ಮಂದಿಗೆ ಉಪಯೋಗವುಳ್ಳ ಹಾಗೂ ಆನಂದವೊದಗಿಸುವ ಕೃತಿಯನ್ನು, ನೀಡದೆ ನಷ್ಟವುಂಟಾದರೆ ಜಗತ್ತು ಏನೆಂದು ಹೇಳಬಹುದು? ಆ ಮಾದರಿಯಲ್ಲಿನ ವರ್ಚಸ್ವೀ ಬರಹಗಳು ತರುಣರ ಮನಸ್ಸಿನ ಮೇಲೆ ಅದ್ಭುತ ಪರಿಣಾಮವನ್ನುಂಟು ಮಾಡುತ್ತವೆ. ಅಂತೇ ಸಾರ್ವಜನಿಕ ಮಿತ್ರನ ಪತ್ರಿಕೆಗಳಂತೆ ಇಷ್ಟು ಸರಳವಾಗಿ ನನಗೆ ಬೇರೆಲ್ಲಿಯೂ ಕಂಡಿಲ್ಲ. ಅದು ಹೆಚ್ಚು-ಕಡಿಮೆ ಅಗೋಚರವಾಗಿ ಈ ಪತ್ರಿಕೋದ್ಯಮಿಯಷ್ಟು ಉತ್ತಮನೂ ಪ್ರಸಿದ್ಧನೂ ಆಗಲು ಪ್ರಯತ್ನಿಸುವ ನಿರ್ಧಾರದತ್ತ ತರುಣನನ್ನು ಒಯ್ಯುತ್ತದೆ. ಉದಾಹರಣಾರ್ಥವಾಗಿ, ನಿನ್ನದು ಪ್ರಕಟವಾದಾಗ (ಮತ್ತು ಅದೆಂದೂ ಹಾಗೆ ಆ ವಿಷಯದಲ್ಲಿ ಅಯಶಸ್ವಿಯಾಗದೆಂದು ನನಗೆನಿಸುತ್ತದೆ) ನಿನ್ನ ತಾರುಣ್ಯದ ಪ್ರಥಮದಲ್ಲಿನ ಶ್ರಮವನ್ನು ಮತ್ತು ಸ್ವಾತ್ರ ಭೋಗವನ್ನು ಸಮಾನಗೊಳಿಸುವುದರತ್ತ ತರುಣನ ಮನಸ್ಸನ್ನು ಸೆಳೆಯುತ್ತದೆ. ಆ ವರ್ಗದಲ್ಲಿ ಅಂಥ ಕೃತಿಗೆ ಎಷ್ಟು ಪೂಜ್ಯತೆಯುಂಟು! ಅಮೆರಿ

ಕನ್ ತರುಣರಲ್ಲಿ, ಯಾವನಲ್ಲಾದರೂ ನಿನ್ನಷ್ಟು ಬಹು ದೊಡ್ಡ ಶ್ರಮದ ಚೈತನ್ಯವು ಮತ್ತು ಎಳೆತನದಲ್ಲಿನ ವ್ಯವಹಾರದ ಲಕ್ಷ್ಯವು, ಮಿತವ್ಯಯವು, ಮತ್ತು ಮಿತಭೋಗವು, ಜೀವಂತವಿದ್ದವನಲ್ಲಿ ಅಥವಾ ಅವರಲ್ಲಿ ಅನೇಕ ರನ್ನು ಒಟ್ಟಿಗೆ ಕೂಡಿಸಿದರೂ ಕೂಡಾ ಅವರಲ್ಲಿ, ಕಂಡು ಬಂದೀತೆಂದು ನನಗೆನಿಸುವುದಿಲ್ಲ. ಜಗತ್ತಿನಲ್ಲಿ ಕಾರ್ಯಕ್ಕೆ ಅದಕ್ಕಿಂತ ಬೇರೆ ಯಾವ ಗುಣವಾಗಲಿ ಅಥವಾ ಉಪಯೋಗವಾಗಲಿ ಇರಬಹುದೆಂದು ನಾನು ತಿಳಿದಿರುವುದಿಲ್ಲ. ಅದಕ್ಕಿಂತಲೂ ಹೆಚ್ಚಿನದೆಂದರೆ-ಮೊದಲನೆಯದಾಗಿ ಅದಕ್ಕೆ ಸಮಾನವಾದುದು ಬೇರಾವುದೂ ನನಗೆ ಗೊತ್ತಿರುವುದಿಲ್ಲ, ಅದಕ್ಕೆ ಅಷ್ಟೊಂದು ಮಹತ್ವವಿದೆ."

ಈ ಹಿಂದಿನ ಪತ್ರ ಹಾಗೂ ಅದರ ಜೊತೆಗಿರುವ ಟಿಪ್ಪಣಿಗಳನ್ನು ಒಬ್ಬ ಮಿತ್ರನಿಗೆ ತೋರಿಸಲಾಗಿ, ನಾನು ಅವನಿಂದ ಈ ಕೆಳಗಿನದನ್ನು ಪಡೆದೆನು :

## ಮಿಸ್ಟರ್ ಬೆಂಜಮಿನ್ ಒಘನರ ಪತ್ರ

ಪ್ಯಾರಿಸ್,
೩೧ ಜನವರಿ ೧೭೮೩.

"ಮಾನ್ಯ ಪ್ರಿಯನೆ : ನಿನ್ನ ಜೀವನದ ಪ್ರಮುಖ ಘಟನೆಗಳ ವಿವರಣೆ ಯುಳ್ಳ ಹಾಳೆಗಳನ್ನು ನಾನು ಓದಿದಾಗ, ನಿನಗೆ ನಾನೊಂದು ಪತ್ರ ವನ್ನು ಬರೆದು ಕಳುಹಿಸುತ್ತೇನೆ, ಅದನ್ನು ಯಾಕೆ ಪೂರ್ಣಗೊಳಿಸಿ ಪ್ರಸಿದ್ಧಿಸಬೇಕೆಂಬುದರ ಕಾರಣಗಳನ್ನು ನಿನಗೆ ಹೇಳುತ್ತೇನೆ. ನಿನಗೆ ಅವುಗಳನ್ನು ತಿರುಗಿ ಕಳುಹಿಸಿದ ನಿನ್ನ ಕ್ವ್ಯಾಕರ್ ಮಿತ್ರನೂ ಹಾಗೆ ಬಯ ಸಿದ್ದಾನೆ. ಅನೇಕ ಕಾರ್ಯವಿಶೇಷಗಳು ಕೆಲಕಾಲದ ಹಿಂದೆ ಈ ಪತ್ರ ವನ್ನು ಬರೆಯುದಂತೆ ತಡೆದಿದ್ದುವು. ಅಂತೇ ಇದಕ್ಕೆ ಏನಾದರೂ ನಿರೀಕ್ಷೆ ಯುಂಟೋ ಇಲ್ಲವೋ ಎಂಬುದು ನನಗೆ ಗೊತ್ತಿಲ್ಲ. ಏನಿದ್ದರೂ ಕೂಡ ಈಗ ವಿರಾಮ ದೊರೆತುದರಿಂದ ನಾನು ಬರವಣಿಗೆಯಲ್ಲಿ ತೊಡಗಿ ನನ್ನ ಮಟ್ಟಿಗೆ ಅಭಿರುಚಿ ಅಭ್ಯಾಸಗಳನ್ನಾದರೂ ಪಡೆಯಬಹುದಾಗಿದೆ. ಆದರೆ ನಾನು ಬಳಸಬಹುದಾದ ಶಬ್ದಗಳಿಂದ ನಿನ್ನ ನಿಲುವಿನ ವ್ಯಕ್ತಿಯು ರೇಗಿ ಕೊಳ್ಳಲಿಕ್ಕೆ ಎಡೆಯುಂಟು. 'ನಿನ್ನಷ್ಟು ದೊಡ್ಡವನು ಮತ್ತು ಒಳ್ಳೆಯವನು ಆದರೆ ಆತ್ಮವಿಶ್ವಾಸವಿಲ್ಲದವನೂ ಆದ ವ್ಯಕ್ತಿಯನ್ನು ನಾನು ಹೇಗೆ ಸಂಬೋ ಧಿಸುತ್ತೇನೆಂಬುದನ್ನು ಮಾತ್ರ ಹೇಳಬಲ್ಲೆನು. ಅವನಿಗೆ ನಾನು ಹೀಗೆ ಹೇಳ

ಬಹುದು—ಮಾನ್ಯನೇ, ನಿನ್ನ ಜೀವನದ ವೃತ್ತಾಂತವನ್ನು ಕೆಳಗಿನ ಉದ್ದೇಶಗಳ ಮೂಲಕ ಕೇಳಿಕೊಳ್ಳುತ್ತೇನೆ: ನಿನ್ನ ವೃತ್ತಾಂತವು ಇಷ್ಟು ಘನವಾದದ್ದಲ್ಲಾ—ಅದನ್ನು ನೀನು ಕೊಡದಿದ್ದರೆ ಬೇರೆಯವನು ಯಾವನಾದರೂ ಅದನ್ನು ಖಂಡಿತವಾಗಿಯೂ ಕೊಡುತ್ತಾನೆ. ಅಂತೇ ನೀನೇ ಸ್ವತಃ ವಿಷಯವನ್ನು ಕೈಕೊಂಡರೆ ಎಷ್ಟು ಒಳ್ಳೆಯದಾದೀತೋ ಅಷ್ಟೇ ಕೆಡಕು ಬಹುಶಃ ಹಾಗೆ ಮಾಡದಿರುವುದರಿಂದ ಸಂಭವಿಸೀತು. ಅದೇ ಪ್ರಕಾರ, ನಿನ್ನ ದೇಶದ ಆಂತರಿಕ ಸ್ಥಿತಿಗತಿಗಳ ಪರಿಚಯವನ್ನೂ ಕೊಡಬಹುದಾಗಿದೆ. ಇದರಿಂದಾಗಿ ಅಲ್ಲಿಗೆ ಗುಣವಂತರಾದ ಮತ್ತು ದಯಾವಂತರಾದ ನಿವಾಸಿಗಳನ್ನು ಸಾಕಷ್ಟು ರೀತಿಯಿಂದ ಆಹ್ವಾನಿಸಿದಂತಾಗುವುದು. ಅಂಥ ಸುದ್ದಿಯನ್ನು ಅವರು ಪಡೆಯುವ ಆತುರವನ್ನು ಮತ್ತು ನಿನ್ನ ಕೀರ್ತಿಯ ಮಹತ್ತನ್ನು ಗಣನೆಗೆ ತಂದುಕೊಂಡರೆ ಅದಕ್ಕೆ ನಿನ್ನ ಆತ್ಮಕಥೆಗಿಂತ ಹೆಚ್ಚು ಸಮರ್ಥವಾದ ಪ್ರಚಾರವು ಬೇರೆ ಯಾವುದೂ ಇದೆಯೆಂದು ನನಗನಿಸುವುದಿಲ್ಲ. ಉನ್ನತಿಗೇರುವ ವ್ಯಕ್ತಿಗಳಿಗೆ ಸಂಭವಿಸುವಂತಹದೆಲ್ಲಾ ನಿನ್ನ ವರ್ತನೆಗಳಿಗೆ ಮತ್ತು ಸ್ಥಿತಿಗತಿಗೆ ಸಾಕಷ್ಟು ಸೂಕ್ಷ್ಮವಾಗಿ ಸಂಬಂಧವಿರುತ್ತದೆ. ಈ ದೃಷ್ಟಿಯಿಂದ ಮಾನವನ ಸ್ವಭಾವದ ಹಾಗೂ ಸಮಾಜದ ನೈಜವಾದ ನ್ಯಾಯಾಧೀಶನಿಗೆ ಸೀಝರ್ ಮತ್ತು ಟಾಸಿಟಸ್‌ರ ಬರವಣಿಗೆಗಳು ಹೆಚ್ಚು ಕುತೂಹಲಕಾರಿಯಾದಾವೆಂದು ನನಗನಿಸುವುದಿಲ್ಲ. ಆದರೆ ಭಾವೀ ಮಹಾ ಪುರುಷರನ್ನು ನಿರ್ಮಿಸುವುದರಲ್ಲಿ ನಿನ್ನ ಜೀವನವು ನೀಡುವಂಥ ಸದವಕಾಶವನ್ನು ಮತ್ತು ನಿನ್ನ ಪುಸ್ತಕ 'ಸದ್ಗುಣ ಕಲೆ' (Art of Virtue)ಯ (ಇದನ್ನು ನೀನು ಪ್ರಕಟಿಸಲು ತಯಾರಿಸಿರುತ್ತಿ) ದೃಷ್ಟಿಯಲ್ಲಿ ವೈಯಕ್ತಿಕ ಹಾಗೂ ಸಾಮಾಜಿಕ ಸುಖವನ್ನು ಹೆಚ್ಚಿಸುವ ಕಾರ್ಯವನ್ನು ಪರಿಗಣಿಸಿದರೆ, ನಾನು ಮೇಲೆ ಹೇಳಿದವುಗಳೆಲ್ಲ ಚಿಕ್ಕಪುಟ್ಟ ಕಾರಣಗಳೇ ಆಗಿವೆ, ಮಾನ್ಯನೇ. ನಾನು ಸೂಚಿಸುವ ಎರಡು ಕೃತಿಗಳು ಮುಖ್ಯವಾಗಿ ನಮ್ಮ ಆಡಳಿತೆಯನ್ನು ಮತ್ತು ಸ್ವಶಿಕ್ಷಣದ ಮಾದರಿಯನ್ನು ನೀಡುತ್ತವೆ. ಸಾಲೆಯ ಮತ್ತು ಮಿಕ್ಕ ಶಿಕ್ಷಣಗಳು ಸತತವಾಗಿ ಸುಳ್ಳು ತತ್ವಗಳ ಮೇಲೆ ಸಾಗಿರುತ್ತವೆ. ಮತ್ತು ತಪ್ಪು ದಾರಿಯತ್ತ ಗುರಿಯಿಟ್ಟ ಬೀಭತ್ಸ ಸಾಧನದಂತೆ ತೋರುತ್ತವೆ. ಆದರೆ ನಿನ್ನ ಸಾಧನವು ಸರಳವಾದದ್ದು. ಅಂತೇ ಗುರಿ ಕೂಡಾ ನೈಜವಾದದ್ದು. ಉಚಿತವಾದ ಮಾರ್ಗಗಳನ್ನು ನಿರ್ಧರಿಸುವುದರಲ್ಲಿ ಮತ್ತು ಯೋಗ್ಯವಾದ ದಾರಿಯನ್ನು ಜೀವನಕ್ಕೆ ತೋರಿಸಲು ಸಿದ್ಧವಾಗುವುದರಲ್ಲಿ ಪಾಲಕರು ಮತ್ತು ತರುಣ ವ್ಯಕ್ತಿಗಳು ನಿರ್ಗತಿಕರಾಗಿ ಬೇರೆ

ಯುವರ ಪಾಲಾಗುವುದುಂಟು. ಆದರೆ ಈ ಗುಟ್ಟು ಅನೇಕ ಜನರ ವೈಯಕ್ತಿಕ ಬಲದಲ್ಲಿಯೇ ಅಡಕವಾಗಿದೆಯೆಂಬ ನಿನ್ನ ಶೋಧನೆಯು ಅಮೂಲ್ಯವಾದದ್ದು! ವೈಯುಕ್ತಿಕ ವರ್ತನೆಯ ಮೇಲಿನ ವರ್ಚಸ್ಸು ಜೀವನದಲ್ಲಿ ತಡವಾಗಿ ಬಿದ್ದರೆ ಅದು ಕೇವಲ ತಡವಾದ ವರ್ಚಸ್ಸು ಮಾತ್ರವಲ್ಲದೆ ದುರ್ಬಲವಾದ ವರ್ಚಸ್ಸೂ ಆಗಿರುತ್ತದೆ. ತಾರುಣ್ಯದಲ್ಲಿ ನಾವು ನಮ್ಮ ಪ್ರಮುಖ ಅಭ್ಯಾಸ ಮತ್ತು ದೌರ್ಬಲ್ಯಗಳನ್ನು ನೆಲಗೊಳಿಸುತ್ತೇವೆ; ತಾರುಣ್ಯದಲ್ಲಿ ನಾವು ನಮ್ಮ ಉದ್ಯೋಗವನ್ನು, ಸಾಧನೆಯನ್ನು ಮತ್ತು ಮದುವೆಯನ್ನು ಮಾಡಿಕೊಳ್ಳುತ್ತೇವೆ. ಆದುದರಿಂದ ತಾರುಣ್ಯದಲ್ಲಿ ಸ್ಥಿತ್ಯಂತರ ಹೊಂದುವುದಾಗಿರುತ್ತದೆ. ಮುಂದಿನ ಜನಾಂಗದ ಶಿಕ್ಷಣವನ್ನು ಕೂಡ ತಾರುಣ್ಯದಲ್ಲಿ ಕೊಡಲಾಗುತ್ತದೆ. ವೈಯಕ್ತಿಕ ಹಾಗೂ ಸಾಮಾಜಿಕ ಸ್ವಭಾವವು ತಾರುಣ್ಯದಲ್ಲಿ ನಿರ್ಧರಿಸಲ್ಪಡುವುದಾಗಿರುತ್ತದೆ. ಅಂತೇ ಜೀವನದ ಅವಧಿಯು ಕೂಡಾ ತಾರುಣ್ಯದಿಂದ ಮುದಿತನದ ತನಕವೇ ಇರುತ್ತದೆ. ಜೀವನವು ಸುವ್ಯವಸ್ಥಿತವಾಗಿ ತಾರುಣ್ಯದಿಂದಲೇ ಪ್ರಾರಂಭವಾಗಬೇಕು. ಅದಕ್ಕಿಂತ ಮುಖ್ಯವಾಗಿ ಅಂದರೆ—ನಾವು ನಮ್ಮ ಪ್ರಮುಖ ಧ್ಯೇಯಗಳನ್ನು ಗೊತ್ತುಪಡಿಸುವುದಕ್ಕಿಂತ ಮುಂಚೆ, ಅದು ಮೊದಲಿಸುತ್ತದೆಂದು ಹೇಳಬಹುದು. ಆದರೆ ನಿನ್ನ ಸ್ವಚರಿತ್ರೆಯು ಕೇವಲ ಆತ್ಮ ಶಿಕ್ಷಣವನ್ನು ಕೊಡುವುದಲ್ಲದೆ ಬುದ್ಧಿವಂತ ಮನುಷ್ಯನಿಗೆ ತಕ್ಕುದಾದ ಶಿಕ್ಷಣವನ್ನು ನೀಡುತ್ತದೆ. ಅಲ್ಲದೆ ಅತಿ ಬುದ್ಧಿವಂತ ಮನುಷ್ಯನು ಬೆಳಕನ್ನು ದೊರಕಿಸಿಕೊಂಡು ತನ್ನ ಪ್ರಗತಿಯನ್ನು ಸಾಧಿಸಿಕೊಳ್ಳುವನು. ಅಂದರೆ ಮತ್ತೊಬ್ಬ ಬುದ್ಧಿವಂತನ ಗುಣವನ್ನು ಅವನು ನೋಡಿಕೊಂಡು ಅದನ್ನು ರೂಢಿಸಿಕೊಳ್ಳುತ್ತಾನೆ. ಅಂತೇ ಅನಾದಿ ಕಾಲದಿಂದಲೂ ಈ ಪ್ರಮುಖ ವಿಷಯದಲ್ಲಿ ಹೆಚ್ಚು ಕಡಿಮೆ ಯಾವ ಸಹಾಯಕನೂ ಇಲ್ಲದೆ, ನಮ್ಮ ಜನಾಂಗದವರು ಕತ್ತಲಲ್ಲಿ ಎಡವಿ ಬೀಳುತ್ತಿರುವುದನ್ನು ನಾವು ನೋಡುತ್ತಿದ್ದಾಗ, ದುರ್ಬಲ ಜನರು ಯಾಕೆ ಅಂಥ ಸಹಾಯಗಳನ್ನು ಕಳೆದುಕೊಳ್ಳಬೇಕು? ಮಾನ್ಯನೇ, ಹಾಗಾದರೆ ತಂದೆಯಂದಿರಿಗೂ ಮಕ್ಕಳಿಗೂ ಎಸಗಬೇಕಾದ ಕಾರ್ಯವೆಷ್ಟಿದೆ ಎಂಬುದನ್ನು ತೋರಿಸಿಕೊಡು, ಮತ್ತು ನಿನ್ನಂತಾಗಲು ಎಲ್ಲಾ ಬುದ್ಧಿವಂತರನ್ನು ಆಹ್ವಾನಿಸು ಮತ್ತು ಮಿಕ್ಕ ಜನರೆಲ್ಲ ಬುದ್ಧಿವಂತರಾಗುವಂತೆ ನೋಡು. ರಾಜಕಾರಣಿಗಳು ಮತ್ತು ಸೈನಿಕರು ಮಾನವ ಜನಾಂಗಕ್ಕೆ ಎಷ್ಟು ಕ್ರೂರವಾಗಿರಬೇಕೆಂಬುದನ್ನು ಮತ್ತು ತಮ್ಮ ಪರಿಚಯಸ್ಥರಿಗೆ ಘನ ವ್ಯಕ್ತಿಗಳು ಎಷ್ಟು ಹುಚ್ಚುಚ್ಚಾಗಿ ಇರ

ಬೇಕೆಂಬುದನ್ನು ನಾವು ನೋಡಿದಾಗ, ಶಾಂತ ಹಾಗೂ ಸೌಮ್ಯ ಸ್ವಭಾವದ ಉದಾಹರಣೆಗಳನ್ನು ಅನೇಕರು ಅನುಸರಿಸುವುದು ಹಿತಕರವೆಂದು ಕಾಣುತ್ತದೆ. ಅಂತೇ ಘನ ವ್ಯಕ್ತಿಯಾಗಿ ಮತ್ತು ವೈರತ್ವದಿಂದ ಸಾಧುವಾಗಿ, ಮತ್ತು ಸದ್ಗೃಹಸ್ಥನಾಗಿ-ಹೀಗೆ ಒಂದಕ್ಕೊಂದು ಹೊಂದಿಕೆಯಾಗುವಂತೆ ಇರುವುದನ್ನು ನೋಡಲು ಎಷ್ಟು ಸರಿಯೆನಿಸುತ್ತದೆ.

"ಚಿಕ್ಕ-ಪುಟ್ಟ ವೈಯಕ್ತಿಕ ಘಟನೆಗಳನ್ನು ನೀನು ಕೂಡ ನಿವೇದಿಸಲಿಕ್ಕೇ ಬೇಕಾಗಿರುವುದರಿಂದ ಅವುಗಳು ಸಾಕಷ್ಟು ಪ್ರಯೋಜನಕಾರಿಯಾಗಿವೆ. ಯಾಕಂದರೆ ಸಾಮಾನ್ಯವಾದ ವಿಷಯಗಳಲ್ಲಿ ಕೂಡ ಎಲ್ಲಕ್ಕಿಂತಲೂ ಮಿಗಿಲಾಗಿ ನಾವು ವಿವೇಕದ ತತ್ವಗಳನ್ನು ಬಯಸುತ್ತೇವೆ. ಅಂತೇ ಅವುಗಳನ್ನು ನೀನು ಪಾಲಿಸಿರುವಿ ಎಂಬುದನ್ನು ನೋಡಲು ಕುತೂಹಲವೆನಿಸುವುದು. ದೂರದರ್ಶಿತ್ವದಿಂದ ಚತುರರಾಗುವ ಅವಕಾಶಕೊಡಲು ಅದು ಬಹಳ ಮಟ್ಟಿಗೆ ಜೀವನದ ಒಂದು ಬಗೆಯ ಬೀಗದ ಕೈ ಆಗಿರುತ್ತದೆ. ಅಂತೇ ಒಮ್ಮೆ ತಮಗೆ ಎಲ್ಲಾ ಜನರು ವಿವರಿಸಿರುವಂಥ ಅನೇಕ ವಿಷಯಗಳನ್ನು ವಿವರಿಸಲಿಕ್ಕೂ ಅದು ಸಹಾಯಕಾರಿಯಾಗಿದೆ. ತನ್ನ ಸ್ವಂತದ ಅನುಭವಕ್ಕೆ ತೀರ ಹತ್ತಿರವಾದ ವಿಷಯವೆಂದರೆ ಬೇರೆ ಜನರ ಆಗುಹೋಗುಗಳನ್ನು ನಮ್ಮ ಮುಂದೆ ಕುತೂಹಲದಾಯಕವಾದ ಆಕಾರದಲ್ಲಿಡುವುದು ಆಗಿರುತ್ತದೆ. ಇದು ಖಂಡಿತವಾಗಿಯೂ ನಿನ್ನ ಲೇಖನಿಯಿಂದ ನಡೆಯುತ್ತದೆ. ನಮ್ಮ ಕಾರ್ಯ ಹಾಗೂ ವ್ಯವಸ್ಥೆಗಳಿಗೆ ಮನ ಹೊಗದೆ ಬಿಡದಿರುವ ಸರಳತೆ ಮತ್ತು ಮಹತ್ವ ಒಂದಿಷ್ಟಾದರೂ ದೊರೆಯುವುದು. ಅಂತೇ ನೀನು ಅವುಗಳನ್ನು–ರಾಜಕಾರಣದಲ್ಲಿ ಅಥವಾ ತತ್ವಜ್ಞಾನದಲ್ಲಿ ಚರ್ಚೆಗಳನ್ನು ನಡೆಸುತ್ತಿರುವಾಗ ಅಪೂರ್ವವಾಗಿ ಪಾಲಿಸಿಕೊಂಡು ಹೋದಂತೆ ಪಾಲಿಸುತ್ತೀಯೆಂದು ನನಗೆ ಖಂಡಿತವಾಗಿರುತ್ತದೆ. ಮಾನವ ಜೀವನದ ಪ್ರಯೋಗ ಮತ್ತು ಪದ್ಧತಿ(ಅದರ ಮಹತ್ವ ಮತ್ತು ತಪ್ಪುಗಳನ್ನು ಪರಿಗಣಿಸಿ) ಗಳಿಗಿಂತ ಹೆಚ್ಚು ಯೋಗ್ಯವಾದುದೇನು ಬೇಕು?

"ಕೆಲವು ಜನರು ಕಾಣದಂತೆ ಗುಹಾಧ್ಯಕ್ಷರಾಗಿರುತ್ತಾರೆ. ಬೇರೆ ಕೆಲರು ಕಾಲ್ಪನಿಕ ಭವಿಷ್ಯತ್ತನ್ನು ನಂಬಿರುತ್ತಾರೆ. ಮತ್ತು ಮಿಕ್ಕವರು ದುರ್ವಿದ್ಯೆಗಳಲ್ಲಿ ಬುದ್ಧಿವಂತರಾಗಿರುತ್ತಾರೆ. ಆದರೆ ಮಾನ್ಯನೇ, ನೀನು ಮಾತ್ರ ಒಂದೇ ಪ್ರಕಾರವಾಗಿ ಯಾವುದು ವಿವೇಕವುಳ್ಳದ್ದು, ಉಪಯೋಗವುಳ್ಳದ್ದು ಮತ್ತು ಉತ್ತಮವಾದುದಿದೆಯೋ ಅದನ್ನೇ ನಿನ್ನ ಕೈಕೆಳಗೆ ಬಳಸುವಿಯೆಂದು ನನಗೆ ಖಂಡಿತವುಂಟು. ನಿನ್ನ ಜೀವನದ

ವೃತ್ತಾಂತವನ್ನು ನೀನೇ ಬರೆದುದು (ಇದಕ್ಕೆ ಅನುಗುಣವಾದ ಪಾತ್ರ ಡಾ. ಫ್ರ್ಯಾಂಕ್ಲಿನ್ನನದೆಂದು ಪರಿಗಣಿಸುತ್ತೇನೆ. ಅದು ಮಾತ್ರ ಸ್ವಭಾವದ ವಿಷಯದಲ್ಲಿ ಮತ್ತು ವೈಯಕ್ತಿಕ ಇತಿಹಾಸದ ವಿಷಯದಲ್ಲೂ ಸರಿಹೊಂದುತ್ತದೆ) ನಿನಗೆ ನಿನ್ನ ಸ್ವಂತ ಕೃತಿಯ ಬಗ್ಗೆ ಯಾವ ಅಪಮಾನವೂ ಇಲ್ಲವೆಂದು ತೋರಿಸಿಕೊಡುತ್ತದೆ. ಈ ಸ್ವಂತ ಕೃತಿಯಲ್ಲಿ ಅತ್ಯಂತ ಮಹತ್ವದ್ದಾಗಿದ್ದರೂ ಕೂಡ ನೀನು ಸಿದ್ಧಪಡಿಸಿದಂತೆ ಸುಖ-ಸಂತೋಷಕ್ಕೆ, ಸದ್ಗುಣಕ್ಕೆ ಅಥವಾ ಘನತೆಗೆ ಎಲ್ಲಾ ಮೂಲವು ಎಷ್ಟು ಅಲ್ಪ ಆವಶ್ಯಕತೆಯುಳ್ಳದ್ದಾಗಿರುತ್ತದೆ. ಕಾರಣವಿಲ್ಲದೆ ಅದಕ್ಕನುಗುಣವಾದ ಯಾವ ಕಾರ್ಯವೂ ಜರಗದಿರುವಂತೆ-ಮಾನ್ಯನೇ, ಸ್ವತಃ ನೀನೇ ಹೂಡಿದ ಯೋಜನೆಯಿಂದ ನೀನು ಖ್ಯಾತಿವಂತನಾದುದನ್ನು, ನಾವು ಕಂಡುಕೊಳ್ಳಬಹುದು. ಅದೇ ರೀತಿಯಲ್ಲಿ ಕಾರ್ಯಸಿದ್ಧಿಯು ಅಭಿನಂದನಾರ್ಹವಾಗಿದ್ದರೂ ಕೂಡ ಕಾರಣಗಳು ಮಾತ್ರ ಬುದ್ಧಿಯಿಂದ ಮಾಡುವದು ಸರಳವಾದವುಗಳು. ಅಂದರೆ ಅವುಗಳ ಪ್ರಕೃತಿ, ಸದ್ಗುಣ, ವಿವೇಕ ಮತ್ತು ಅಭ್ಯಾಸದ ಮೇಲೆ ಅವಲಂಬಿಸಿದವುಗಳು. ಮತ್ತೊಂದು ವಿಷಯ ಸಿದ್ಧಾಂತವಾದುದೆಂದರೆ-ಜಗತ್ತಿನ ರಂಗಭೂಮಿಯನ್ನು ಕಾಣಲು ಪ್ರತಿಯೊಬ್ಬ ಮನುಷ್ಯನು ಕಾದು ಕೂಡಬೇಕಾದುದರ ಔಚಿತ್ಯ. ನಮ್ಮ ಮನಸ್ಸಿನ ಆತುರಗಳೆಲ್ಲ ಒಂದೇ ಕ್ಷಣದ ಮೇಲೆ ಕೇಂದ್ರೀಕೃತವಾಗಿರುವುದರಿಂದ, ಮೊದಲನೆಯ ಕ್ಷಣಕ್ಕೆ ಇನ್ನು ಹೆಚ್ಚಿನ ಕ್ಷಣಗಳು ಹಿಂಬಾಲಿಸಲಿಕ್ಕಿವೆಯೆಂಬುದನ್ನು ಮರೆಯಲಿಕ್ಕೆ ನಾವು ಸಮರ್ಥರಾಗಿದ್ದೇವೆ. ಅಂತೇ ಮನುಷ್ಯ ಕೂಡ ಅಖಂಡ ಜೀವನಕ್ಕೆ ಹೊಂದಿಕೆಯಾಗುವಂತೆ ತನ್ನ ಗುಣಗಳನ್ನು ವ್ಯವಸ್ಥೆಯಲ್ಲಿಡಬೇಕು. ನಿನ್ನ ಪ್ರಶಂಸೆಯು ನಿನ್ನ ಜೀವನಕ್ಕೆ ಹೊಂದಿಕೊಂಡಿದ್ದಂತೆ ಕಾಣುತ್ತವೆ. ನಿನ್ನ ಜೀವನದಲ್ಲಿ ಗತಿಸುವ ಕ್ಷಣಗಳು ಮೂರ್ಖವಾದ ಆತುರತೆಯಿಂದ ಅಥವಾ ದುಃಖದಿಂದ ಕಷ್ಟದಾಯಕವಾಗಿರುವುದರ ಬದಲು, ಸಂತೃಪ್ತಿ ಮತ್ತು ಸಂತೋಷದಿಂದ ತುಂಬಿ ತುಳುಕುತ್ತಿವೆ. ಅಂಥ ಗುಣಗಳು ಸದಾಚಾರವನ್ನು ರೂಢಿಸಿರುವವರಿಗೆ ಮತ್ತು ತಾಳ್ಮೆಯೇ ಕೆಲವೊಮ್ಮೆ ಗುಣವಿಶೇಷವಾಗಿರುವಂಥ ಬೇರೆ ನೈಜವಾದ ಘನ ವ್ಯಕ್ತಿಗಳ ಉದಾಹರಣೆಗಳ ಮೂಲಕ ನೈತಿಕ ಆಶ್ರಯವನ್ನು ಪಡೆದಿರುವವರಿಗೆ ಬಹಳ ಸುಲಭವಾಗಿವೆ. ಮಾನ್ಯನೇ, ನಿನ್ನ ಕ್ವ್ಯಾಕರ್ ಬಾತ್ಮಿದಾರನು (ಇಲ್ಲಿ ಕೂಡಾ ನಾನು ಪುನಃ ನನ್ನ ಪತ್ರದ ವಿಷಯವು ಡಾ. ಫ್ರ್ಯಾಂಕ್ಲಿನನಿಗೆ ಹೊಂದಿಕೊಳ್ಳುತ್ತದೆಂದು

ತಿಳಿದುಕೊಂಡಿದ್ದೇನೆ। ನಿನ್ನ ಮಿತವ್ಯಯ, ಸತತಕರ್ಮ ಮತ್ತು ಮಿತ ಭೋಗವನ್ನು ಪ್ರಶಂಸೆ ಮಾಡಿದ್ದಾನೆ. ಇದನ್ನು ಎಲ್ಲಾ ತರುಣರಿಗೆ ಮಾದರಿ ಯೆಂದು ಪರಿಗಣಿಸಲಾಗಿದೆ. ಆದರೆ ಅವನು ನಿನ್ನ ನಮ್ರತೆಯನ್ನು ಮತ್ತು ನಿನ್ನ ನಿಷ್ಪಕ್ಷಪಾತತೆಯನ್ನು ಮರೆತುದು ವಿಲಕ್ಷಣವೆನ್ನಬೇಕು. ಅದರ ಹೊರತಾಗಿ, ನಿನ್ನ ಶ್ರೇಯೋಭಿವೃದ್ಧಿಯ ತನಕ ನೀನು ಕಾಯುತ್ತಿರಲಿಲ್ಲ ಅಥವಾ ಅದೇ ಪ್ರಕಾರ ನಿನ್ನ ಸ್ಥಿತಿಯನ್ನು ಸುಖ-ಸಂತೋಷದಿಂದ ಕಂಡು ಕೊಳ್ಳುತ್ತಿರಲಿಲ್ಲ. ಇನೊಂದು ಬಡತನದ ಮೇಲ್ಮೆಯನ್ನು ಮತ್ತು ನಮ್ಮ ಮನಸ್ಸನ್ನು ನಿಯಂತ್ರಿಸುವುದರ ಮಹತ್ವವನ್ನು ತೋರಿಸುವ ಪ್ರಬಲವಾದ ಪಾಠವಾಗಿದೆ. ನಾನು ಬಲ್ಲಂತೆಯೇ ಈ ಸುದ್ದಿಗಾರನು ನಿನ್ನ ಕೀರ್ತಿಯ ರೀತಿಯನ್ನು ಬಲ್ಲವನಾಗಿದ್ದರೆ ಅವನು— ನಿನ್ನ ಹಿಂದಿನ ಬರಹಗಳು ಮತ್ತು ಸಾಧನೆಗಳು ನಿನ್ನ ಆತ್ಮಚರಿತ್ರೆಯತ್ತ ಮತ್ತು 'ಸದ್ಗುಣಕಲೆ' ಯತ್ತ ಲಕ್ಷ್ಯ ವನ್ನು ಸೆಳೆಯುತ್ತವೆ ಹಾಗೂ ಪ್ರತಿಯಾಗಿ ನಿನ್ನ ಆತ್ಮಚರಿತ್ರೆ ಮತ್ತು 'ಸದ್ಗುಣಕಲೆ' (Art of Virtue) ಅವುಗಳ ಕಡೆಗೆ ಪುನಃ ಲಕ್ಷ್ಯ ವನ್ನು ಸೆಳೆಯುತ್ತವೆ. ಇದು ವಿವಿಧ ಸ್ವಭಾವದಲ್ಲಿರುವ ಲಾಭದಾಯಕ ಉಪಯೋಗಕಾರಕ ಗುಣ ಇದು ಅದರ ಸ್ವಾಧೀನದಲ್ಲಿರುವುದಕ್ಕಿಂತ ಹೆಚ್ಚಿನ ಶೌರ್ಯಕ್ಕೆ ಒದಗಿಸಿಕೊಡುತ್ತದೆ. ಬಹುಶಃ ಹೆಚ್ಚಿನ ಜನರು ತಮ್ಮ ಚಿತ್ತವನ್ನು ಮತ್ತು ಸ್ವಭಾವವನ್ನು ಸುಧಾರಿಸಿಕೊಳ್ಳುವ ಕಾಲ ಮತ್ತು ಆ ಬಗ್ಗೆ ಒಲವು ಇಲ್ಲದೆ ನಷ್ಟಕ್ಕೆ ಗುರಿಯಾಗುವುದಕ್ಕಿಂತ ಹೆಚ್ಚಿನ ನಷ್ಟಕ್ಕೆ ಅಂಥ ಮಾರ್ಗಗಳೇ ಕಾಣದೆ ಗುರಿಯಾಗುತ್ತಾರೆನ್ನಬೇಕಾಗಿದೆ. ಅವರಿಗೆ ಇದು ಬಹಳ ಪ್ರಯೋಜನಕಾರಿಯಾದುದು. ಮಾನ್ಯನೇ, ನಿನ್ನ ಜೀವನ ಚರಿತ್ರೆಯು ಕೇವಲ ಸಾಹಿತ್ಯಕ ಕೃತಿಯಾಗಿ ಕೂಡ ಅದರ ಉಪ ಯುಕ್ತತೆಯನ್ನು ತೋರಿಸುವ ಒಂದು ಕೊನೆಯ ವಿಚಾರವುಂಟು. ಈ ಬರವಣಿಗೆಯ ಶೈಲಿಯು ಸದ್ಯಕ್ಕೆ ತುಸು ರೂಢಿಬಾಹಿರವಾಗಿದ್ದಂತೆ ಕಾಣು ತ್ತದೆ. ಆದರೂ ಕೂಡ ಅದು ಸಾಕಷ್ಟು ಉಪಯೋಗವುಳ್ಳದ್ದು. ಅಂತೇ ಅದರಲ್ಲಿನ ನಿನ್ನ ಮಾದರಿಯು ಮುಖ್ಯವಾಗಿ ನಾಕಷ್ಟು ಹಿತಕರವಾದದ್ದು. ಯಾಕಂದರ ಅದು ವಿವಿಧ ಸಾರ್ವಜನಿಕ ಕೊಲೆಗಡುಕರ ಮತ್ತು ಒಳಸಂಚು ಗಾರರ ಮತ್ತು ಮಠಗಳ ಕಪಟಿಗಳಾದ ಸ್ವಪೀಡೆಗಾರರ ಅಥವಾ ಹೆಮ್ಮೆಯ ಅಲ್ಪ ಸಾಹಿತಿಗಳ ಜೀವನಚಿತ್ರಗಳೊಡನೆ ಹೋಲಿಕೆಯಾಗಿ ಬಳಸಿಕೊಳ್ಳ ಬಹುದಾಗಿರುತ್ತದೆ. ನಿನ್ನ ಸ್ವಂತದ ಬರಹದಂತೆ ಒಂದು ವೇಳೆ ಅದು ಅದೇ ಬಗೆಯ ಇನ್ನೂ ಹೆಚ್ಚು ಹೆಚ್ಚು ಬರಹಗಳನ್ನು ಪ್ರೋತ್ಸಾಹಿಸುತ್ತಿದ್ದರೆ ಮತ್ತು

ಬರವಣಿಗೆಗೆ ಯೋಗ್ಯವಾದ ಜೀವನವನ್ನು ಸಾಗಿಸುವಂತೆ ಹೆಚ್ಚು ಜನರನ್ನು ಪ್ರಚೋದಿಸುತ್ತಿದ್ದರೆ ಅದು "ಪ್ಲುಟಾರ್ಕನ ಜೀವನಗಳ"ನ್ನೆಲ್ಲ (Plutarch's Lives) ಒಟ್ಟಿಗೆ ಕೂಡಿಸಿದಷ್ಟು ಯೋಗ್ಯತೆಯನ್ನು ಪಡೆಯುವುದು. ಆದರೆ ನನ್ನಷ್ಟಕ್ಕೆ ಒಂದು ಪಾತ್ರವನ್ನು ಸೃಜಿಸಿದಾಗ ಅದರ ಎಲ್ಲಾ ಗುಣಗಳು ಜಗತ್ತಿನಲ್ಲಿಯ ಒಂದೇ ಒಂದು ವ್ಯಕ್ತಿಗೆ ಹೊಂದಿಕೆಯಾಗುತ್ತಿದ್ದುದರಿಂದ ಬೇಸತ್ತು, ಅದರ ಸ್ತುತಿಯನ್ನು ಅವನಲ್ಲಿ ಮಾಡಲಿಕ್ಕೆ ಸಾಧ್ಯವಿಲ್ಲದ ಮೂಲಕ, ಪ್ರಿಯ ಡಾಕ್ಟರ್ ಫ್ರ್ಯಾಂಕ್ಲಿನನೇ, ನಾನು ನನ್ನ ಈ ಪತ್ರವನ್ನು ನಿನ್ನ ಯೋಗ್ಯ ಸ್ವಚಿತ್ತಕ್ಕೆ ಅರಿಕೆಮಾಡಿಕೊಂಡು ಕೊನೆಗೊಳಿಸುತ್ತೇನೆ. ಆದುದರಿಂದ ನಾನು ಪ್ರಾಮಾಣಿಕವಾಗಿ, ನೀನು ನಿನ್ನ ಚತುರ ಜೀವನದ ಮುಖಗಳನ್ನೆಲ್ಲ ಜಗತ್ತಿಗೆ ತಿಳಿಯಪಡಿಸಬೇಕೆಂದು ಆಸೆಪಡುತ್ತಿದ್ದೇನೆ. ಇಲ್ಲದೆ ಹೋದರೆ ಸಭ್ಯ ರೀತಿಯ ಕಲಹಗಳು ಅದನ್ನು ಮರೆಮಾಚಬಹುದು ಅಥವಾ ನಿಂದಿಸಲೂ ಬಹುದು. ನಿನ್ನ ಹಿರಿಯ ಪ್ರಾಯ, ನಿನ್ನ ಸ್ವಭಾವದ ಪ್ರಸನ್ನತೆ; ಮತ್ತು ವಿಚಾರ ಮಾಡುವ ನಿನ್ನ ವಿಶಿಷ್ಟವಾದ ಶೈಲಿಯನ್ನು ಪರಿಗಣಿಸಿದಾಗ ನಿನ್ನ ಜೀವನದ ಘಟನೆಗಳ ಸುಪರಿಚಯಸ್ಥನು ಅಥವಾ ನಿನ್ನ ಮನಸ್ಸಿನ ಧ್ಯೇಯ–ಧೋರಣೆಗಳನ್ನು ಚೆನ್ನಾಗಿ ಬಲ್ಲವನು ನಿನ್ನ ಹೊರತಾಗಿ ಮಿಕ್ಕವನು ಯಾರೂ ಇರಲಿಕ್ಕೆ ಸಾಧ್ಯವಿಲ್ಲ ಎನ್ನಬಹುದು. ಇವೆಲ್ಲದರ ಹೊರತಾಗಿ, ಈ ಕಾಲದ ಅಪಾರವಾದ ಕ್ರಾಂತಿಯು ನಮ್ಮನ್ನೆಲ್ಲ ಅವಶ್ಯವಾಗಿ ಅದರ ಕರ್ತೃವಿನತ್ತ ಹೊರಳಿಸುತ್ತದೆ! ಅದರಲ್ಲಿ ವಿವೇಕದ ತತ್ವಗಳನ್ನು ವ್ಯಕ್ತಪಡಿಸಿದುದರಿಂದ, ಅವುಗಳು ನಿಜವಾಗಿ ವರ್ಚಸ್ಸನ್ನು ಬೀರಿವೆ ಎಂಬುದನ್ನು ತೋರಿಸುವುದು ಬಹಳ ಮಹತ್ವದಾಗಿದೆ. ಅಂತೇ ನಿನ್ನ ಪಾತ್ರವು ಯೋಗ್ಯತಾ ವಿಮರ್ಶೆಗೆ ಮುಖ್ಯವಾಗಿ ತಾಳಿಕೊಂಡು ನಿಲ್ಲುವುದರಿಂದ ಅದು ಪೂಜ್ಯವಾಗಿ ಮತ್ತು ಅನಾದಿಯಾಗಿ ಉಳಿಯುವುದು ಯೋಗ್ಯವಾಗಿರುತ್ತದೆ (ನಿನ್ನ ವಿಶಾಲವಾದ ಹಾಗೂ ಉನ್ನತಕ್ಕೇರುತ್ತಿರುವ ದೇಶಕ್ಕೆ, ಇಂಗ್ಲೆಂಡಿಗೆ ಮತ್ತು ಯುರೋಪುಗಳಿಗೂ ಸಹ ಅದರ ಪರಿಣಾಮದ ದೃಷ್ಟಿಯಿಂದ ಕೂಡ—ಯೋಗ್ಯವಾದದು). ಈಗಲೂ ಕೂಡ ಮಾನವನು ದುಷ್ಟ ಹಾಗೂ ತಿರಸ್ಕರಣೀಯವಾದ ಪ್ರಾಣಿಯಲ್ಲವೆಂಬುದನ್ನು ಮಾನವನ ಸುಖಸಂತೋಷದ ವೃದ್ಧಿಗೋಸ್ಕರ ಸಿದ್ಧಪಡಿಸುವುದು ಅವಶ್ಯವಾಗಿದೆಯೆಂದು ನಾನು ಮೊದಲಿನಿಂದಲೂ ಹೇಳುತ್ತ ಬಂದಿದ್ದೇನೆ. ಅದಕ್ಕೂ ಹೆಚ್ಚಾಗಿ ಉತ್ತಮ ವ್ಯವಸ್ಥೆಯಿಂದ ಅವನನ್ನು ಸಾಕಷ್ಟು ಸುಧಾರಿಸಬಹು

ದೆಂಬುದನ್ನು ಸಿದ್ಧಪಡಿಸಬೇಕಾಗಿದೆ. ಅಂತೇ, ಹೆಚ್ಚು-ಕಡಿಮೆ ಇದೇ ಕಾರಣಕ್ಕಾಗಿ ಜನಾಂಗದ ವ್ಯಕ್ತಿಗಳಲ್ಲೂ ಉತ್ತಮ ಗುಣಗಳು ನೆಲೆಸಿವೆ ಯೆಂಬ ಅಭಿಪ್ರಾಯವು ದೃಢವಾಗಿ ಉಳಿಯುವುದನ್ನು ನೋಡಬೇಕೆಂದು ನಾನು ಬಹಳ ಆತುರನಾಗಿದ್ದೇನೆ. ಯಾಕಂದರೆ—ಒಂದು ಕ್ಷಣಕ್ಕೆ ಯಾವ ಅಪವಾದವಿಲ್ಲದೆ ಎಲ್ಲಾ ಜನರನ್ನು ಭ್ರಷ್ಟರೆಂದು ತಿಳಿದು, ಉತ್ತಮ ಜನರು ದುಷ್ಟವೆಂದು ತಿಳಿಯಲಾದ ಕೆಲಸಗಳನ್ನು ಮಾಡದೆ ಇದ್ದುಕೊಂಡು ಮತ್ತು ಬಹಳ ಮಾಡಿ ಜೀವನದ ಹೋರಾಟದಲ್ಲಿ ತನ್ನ ಪಾತ್ರವನ್ನು ವಹಿಸುವ ವಿಚಾರದಲ್ಲಿದ್ದು ಅಥವಾ ಕೊನೆಯ ಪಕ್ಷಕ್ಕೆ ಮುಖ್ಯವಾಗಿ ತಮಗಾಗಿಯೇ ಅದನ್ನು ಸುಖಕರವಾಗಿ ಮಾಡುವ ವಿಚಾರದಲ್ಲಿರುವಂತೆ ಆಗಬೇಕು. ಆದುದರಿಂದ ನನ್ನ ಪೂಜ್ಯ ಪ್ರಿಯನೇ, ಅತ್ಯಧಿಕ ವೇಗದಿಂದ ಈ ಕೃತಿ ಯನ್ನು ಕೈಕೊಳ್ಳು : ನೀನು ಎಷ್ಟು ಒಳ್ಳೆಯವನಾಗಿರುವಿಯೋ ಅಷ್ಟೇ ಒಳ್ಳೆಯವನೆಂದು ನಿನ್ನಷ್ಟಕ್ಕೆ ತೋರಿಸಿ ಕೊಳ್ಳು ; ನಿನ್ನ ಸೌಮ್ಯತೆಯನ್ನು ತೋರಿಸು. ಅಂತೇ ಎಲ್ಲಕ್ಕಿಂತ ಮಿಗಿಲಾಗಿ ತನ್ನ ಬಾಲ್ಯದಿಂದಲೂ ನ್ಯಾಯ, ಸ್ವಾತಂತ್ರ್ಯ ಮತ್ತು ಐಕ್ಯತೆಯನ್ನು ಪ್ರೀತಿಸುತ್ತಿದ್ದವನೆಂಬುದನ್ನು-ನಿನ್ನ ವರ್ತನೆಗ ಯೋಗ್ಯವಾಗಿ ಹೊಂದಿಕೊಳ್ಳುವಂತೆ ಮತ್ತು ಸ್ವಾಭಾವಿಕವಾಗಿ ತೋರುವಂತೆ-ನಿನ್ನ ಜೀವನದ ಹಿಂದಿನ ಹದಿನೇಳು ವರುಷಗಳಿಂದಲೂ ನೀನು ನಡೆದುಕೊಂಡು ಬಂದುದನ್ನು ನಾವು ನೋಡಿದಂತೆ-ನೀನು ಸಿದ್ಧ ಪಡಿಸಬೇಕು. ಇಂಗ್ಲಿಷರು ಕೇವಲ ನಿನ್ನನ್ನು ಗೌರವಿಸುವುದಲ್ಲದೆ ಪ್ರೀತಿಸು ವಂತೆಯೂ ಆಗಲಿ. ನಿನ್ನ ಜನ್ಮಭೂಮಿಯ ವ್ಯಕ್ತಿಗಳ ಬಗ್ಗೆ ಸದ್ಭಾವನೆ ಯನ್ನು ಅವರು ತಾಳ ಹತ್ತಿದರ ಅವರು ನಿನ್ನ ದೇಶದ ಬಗ್ಗೆಯೇ ಒಳಿತನ್ನು ಬಗೆಯುವುದರ ಸಮೀಪವಾಗುತ್ತಾರೆ. ಅಂತೇ ನಿನ್ನ ದೇಶದ ಜನರು ಯಾವಾಗ ತಮ್ಮನ್ನು ಇಂಗ್ಲೀಷರು ಒಳ್ಳೆಯ ರೀತಿಯಿಂದ ಬಗೆಯು ತ್ತಾರೆಂದು ತಿಳಿದುಕೊಳ್ಳ ತೊಡಗುತ್ತಾರೋ, ಆಗ ಅವರು ಕೂಡಾ ಇಂಗ್ಲೆಂಡಿನ ಬಗ್ಗೆ ಒಳ್ಳೆಯದನ್ನು ಬಗೆಯುವುದರ ಸಮೀಪ ಹೋದಂತಾಗು ವುದು. ಅದಕ್ಕೂ ದೂರಕ್ಕೆ ನಿನ್ನ ದೃಷ್ಟಿಯನ್ನು ಹೊರಳಿಸು. ಇಂಗ್ಲೀಷ್ ಭಾಷೆಯನ್ನು ಮಾತಾಡುವ ಜನರ ಮಟ್ಟಿಗೆ ಮಾತ್ರ ನೀನು ನಿಲ್ಲಬೇಡ. ಆದರೆ ಪ್ರಕೃತಿಯಲ್ಲಿ ಮತ್ತು ರಾಜಕೀಯದಲ್ಲಿ ಅನೇಕ ವಿಷಯಗಳನ್ನು ನಿರ್ಧರಿಸಿಕೊಂಡ ನಂತರ ಅಖಿಲ ಮಾನವ ಜನಾಂಗವನ್ನೇ ಉದ್ಧರಿಸು ವುದರ ಬಗ್ಗೆ ಚಿಂತೆ ಮಾಡು. ಪ್ರಸ್ತುತ ಚರ್ಚೆಯಲ್ಲಿರುವ ಜೀವನದ ಯಾವ ಭಾಗವನ್ನೂ ನಾನು ಓದದೆ ಇರುವುದರಿಂದ, ಆದರೆ ಅದನ್ನು

ಜೀವಿಸಿದ ವೃತ್ತಿಯನ್ನು ತಿಳಿದಿರುವುದರಿಂದ ನಾನು ಒಂದಿಷ್ಟು ಕಷ್ಟದಿಂದಲೇ ಬರೆಯಬೇಕಾಗುವುದು. ಏನಿದ್ದರೂ ಕೂಡ ನಾನು ಸೂಚಿಸಿರುವಂಥ ಜೀವನ ಮತ್ತು ಗ್ರಂಥ ('ಸದ್ಗುಣ ಕಲೆ' ಯ ಬಗ್ಗೆ) ನನ್ನ ಪ್ರಮುಖವಾದ ಆಶಯಗಳನ್ನು ಈಡೇರಿಸುತ್ತವೆಂದು ನನಗೆ ಖಂಡಿತವಾಗಿ ಭರವಸೆ ಇದೆ. ಅಂತೇ ಮೇಲೆ ಹೇಳಿದ ಅನೇಕ ವಿಚಾರಗಳಿಗೆ ಒಂದುವೇಳೆ ನೀನು ಈ ಕಾರ್ಯಗಳಿಗೆ ಹೊಂದಿಕೊಳ್ಳುವ ಉಪಾಯಗಳನ್ನು ಪ್ರಯೋಗಿಸಿದರೆ ಇನ್ನೂ ಹೆಚ್ಚು ಖಾತ್ರಿಯಾಗಿ ನಾನು ಆ ಬಗ್ಗೆ ಹೇಳಬಲ್ಲೆ. ಅತಿವಿಚಾರಿ ಒಂದುವೇಳೆ ನಿನ್ನ ಆಶಾದಾಯಕ ಮೆಚ್ಚುಗೆಯವನು ಬಯಸಿದಂತೆ ಆಗದೆ ಅವುಗಳು ಅಯಶಸ್ವಿಯಾಗಿ ಹೋದರೂ ಕೂಡ ಕೊನೇ ಪಕ್ಷಕ್ಕೆ ಮಾನವನ ಮನಸ್ಸಿಗೆ ಹಿಡಿಸುವಂಥ ಕೃತಿಗಳನ್ನಾದರೂ ನೀನು ರಚಿಸಿದಂತಾಗುವುದು ಮತ್ತು ಮನುಷ್ಯನಾದವನಿಗೆ ಸಾಧುವಾದ ಆನಂದವನ್ನು ಒದಗಿಸಿ ಕೊಟ್ಟವನು ಆ ಜೀವನದ ಒಳಿತಿಗಾಗಿ ಏನನ್ನಾದರೂ ಹೆಚ್ಚಿಗೆ ಸೇರಿಸಿ ದಂತಾಗುವುದು—ಇಲ್ಲವೆ ಹೋದಲ್ಲಿ ಅದು ವ್ಯಾಕುಲತೆಯ ಅಂಧಕಾರದಲ್ಲಿ ಬಿದ್ದು ದುಃಖದಿಂದ ನರಳಬೇಕಷ್ಟೆ. ನನ್ನ ಪ್ರೀತಿಯ ಮಾನ್ಯನೇ, ಆದುದರಿಂದ ನಿನಗೆ ಅರ್ಪಿಸಿದ ಈ ಪತ್ರದಲ್ಲಿನ ಪ್ರಾರ್ಥನೆಯನ್ನು ನೀನು ಕೇಳುವಿಯೆಂಬ ಆಸೆಯಿಂದ ನಾನು ನನ್ನ ಸಹಿಮಾಡಲು ಅಪ್ಪಣೆ ಕೇಳುತ್ತೇನೆ, ಇತ್ಯಾದಿ, ಇತ್ಯಾದಿ.

"ಸಹಿ, ಬೆಂಜ್. ಒಘನ್."

## ಪ್ಯಾರಿಸಿನ ಹತ್ತಿರದ ಪ್ಯಾಸ್ಸಿಯಲ್ಲಿ ತೊಡಗಿದ ನನ್ನ ಜೀವನ ವೃತ್ತಾಂತ ಮುಂದುವರಿದುದು

೧೭೮೪

ಮೇಲಿನ ಪತ್ರಗಳನ್ನು ನಾನು ಪಡೆದು ಕೆಲಕಾಲವಾಯಿತು. ಆದರೆ ಅವುಗಳಲ್ಲಿ ಅಡಕವಾಗಿದ್ದ ಬೇಡಿಕೆಯನ್ನು ಮನ್ನಿಸುವ ವಿಚಾರಮಾಡಲು ಇಲ್ಲಿಯವರೆಗೆ ನಾನು ಅವಿಶ್ರಾಂತನಾಗಿದ್ದೆನು. ಅಂತೇ ನನ್ನ ಕಾಗದ ಪತ್ರಗಳ ಸಂಗಡ ಮನೆಯಲ್ಲಿ ನಾನು ಇದ್ದರೆ ಇನ್ನೂ ಉತ್ತಮವಾಗಿ ಈ ಕೆಲಸ ಪೂರೈಸಿದಂತಾಗುತ್ತಿತ್ತು. ತಾರೀಕುಗಳನ್ನು ನಿರ್ಧರಿಸಲು ಉಪ ಯೋಗ ಬೀಳುತ್ತಿತ್ತು. ಆದರೆ ನನ್ನ ಮರಳುವಿಕೆಯು ಅನಿಶ್ಚಿತವಾಗಿರು ವುದರಿಂದ ಮತ್ತು ಈಗ ತುಸು ಬಿಡುವು ದೊರೆತ ಕಾರಣ ನನ್ನಿಂದ ಸಾಧ್ಯ ವಾದುದನ್ನು ನೆನಪಿಗೆ ತಂದುಕೊಳ್ಳಲು ಪ್ರಯತ್ನಿಸಿಕೊಂಡು ಬರೆಯು

ತ್ತೇನೆ. ಒಂದುವೇಳೆ ಮನೆ ಸೇರಲು ನಾನು ಬದುಕಿದ್ದೇ ಆದರೆ ಅದನ್ನು ಅಲ್ಲಿಯೆ ಸರಿಪಡಿಸಿ ಸುಧಾರಿಸುವೆನು.

ಇಷ್ಟರಲ್ಲೆ ಬರೆದಿರುವುದರ ಪ್ರತಿಯು ಇಲ್ಲಿ ಇಲ್ಲದ್ದರಿಂದ ಫಿಲಡೆಲ್ಫಿಯಾದ ಸಾರ್ವಜನಿಕ ವಾಚನಾಲಯವನ್ನು ಸ್ಥಾಪಿಸಲು ನಾನು ಬಳಸಿಕೊಂಡಿರುವ ರೀತಿಯ ವೃತ್ತಾಂತವನ್ನು ಕೊಟ್ಟಿರುವೆನೋ ಇಲ್ಲವೋ ಎಂಬುದು ನನಗೆ ಗೊತ್ತಿಲ್ಲ. ಅದು ತೀರ ಚಿಕ್ಕ ರೀತಿಯಲ್ಲಿ ಪ್ರಾರಂಭವಾಗಿದ್ದರೂ ಈಗ ಅದ್ಭುತವಾಗಿ ಬೆಳೆದಿರುತ್ತದೆ. ಅದರ ವ್ಯವಹಾರದ ಕಾಲದ (೧೭೩೦) ಹತ್ತಿರದವರೆಗೆ ನಾನು ಮುಟ್ಟಿದ ಹಾಗೆ ನನ್ನ ಸ್ಮೃತಿಯಲ್ಲುಂಟು. ಆದುದರಿಂದ ನಾನು ಇಲ್ಲಿ ಅದರ ವೃತ್ತಾಂತದಿಂದ ಪ್ರಾರಂಭಿಸುತ್ತೇನೆ. ಒಂದುವೇಳೆ ಅದು ಇಷ್ಟರಲ್ಲೆ ಬರೆಯಲ್ಪಟ್ಟಿಂತೆ ಕಂಡುಬಂದರೆ ಅದನ್ನು ರದ್ದು ಮಾಡಬಹುದು.

ಪೆನ್ಸಿಲ್ವಾನಿಯದಲ್ಲಿ ನಾನು ನೆಲೆ ನಿಲ್ಲುವ ಹೊತ್ತಿಗೆ ಬೋಸ್ಟನ್ನಿನ ದಕ್ಷಿಣದ ಯಾವ ವಸಾಹತುಗಳಲ್ಲಿಯೂ ಒಂದು ಒಳ್ಳೆಯ ಪುಸ್ತಕ ವ್ಯಾಪಾರಿಯ ಅಂಗಡಿ ಇರಲಿಲ್ಲ. ನ್ಯೂಯಾರ್ಕ್ ಮತ್ತು ಫಿಲಡೆಲ್ಫಿಯಾದಲ್ಲಿ ಮುದ್ರಕರು ನಿಜವಾಗಿ ಸ್ಟೇಷನರಿ ವ್ಯಾಪಾರಿಗಳಾಗಿದ್ದರು. ಅವರು ಕೇವಲ ಕಾಗದ, ಪಂಚಾಂಗಗಳನ್ನು (almanacs), ಲಾವಣಿಗಳನ್ನು ಮತ್ತು ಕೆಲ ಸಾಮಾನ್ಯವಾದ ಶಾಲೆಯ ಪಠ್ಯಪುಸ್ತಕ—ಮೊದಲಾದವುಗಳನ್ನು ಮಾರುತ್ತಿದ್ದರು. ಓದುವ ಅಭಿರುಚಿಯುಳ್ಳವರು ತಮಗೆ ಬೇಕಾದ ಪುಸ್ತಕಗಳನ್ನು ಇಂಗ್ಲೆಂಡಿನಿಂದ ತರಿಸಿಕೊಳ್ಳಬೇಕಿತ್ತು. ಜುಂಟೋದ ಪ್ರತಿಯೊಬ್ಬ ಸದಸ್ಯನಲ್ಲೂ ಕೆಲವೊಂದು ಪುಸ್ತಕಗಳಿದ್ದವು. ನಾವು ಮೊದಲಿಗೆ ಸೇರಿದ್ದ ಗಡಂಗನ್ನು ಬಿಟ್ಟು ನಮ್ಮ ಮಂಡಳಿಯನ್ನು ಜರಗಿಸಲಿಕ್ಕೆ ಒಂದು ಬೇರೆ ಕೋಣೆಯನ್ನು ಬಾಡಿಗೆಗೆ ಹಿಡಿದೆವು. ಆ ಕೋಣೆಗೆ ನಾವೆಲ್ಲರೂ ನಮ್ಮ ಪುಸ್ತಕಗಳನ್ನು ತರಬೇಕೆಂದು ನಾನು ಸೂಚನೆ ಮಾಡಿದೆನು. ಅಲ್ಲಿ ಅವುಗಳು ನಮ್ಮ ಸಭೆ ಜರಗುವ ಹೊತ್ತಿಗೆ ಸಹಾಯಕ್ಕೆ ಪಡೆದುಕೊಳ್ಳಲಿಕ್ಕೆ ಬರುವುದಷ್ಟೇ ಅಲ್ಲದೆ ನಮ್ಮಲ್ಲಿ ಬೇಕಾದವರು ತಮಗೆ ಮನೆಯಲ್ಲಿ ಓದಲಿಕ್ಕೆ ಬೇಕೆಂದೆನಿಸಿದುದನ್ನು ಎರವಲು ಪಡೆಯಲಿಕ್ಕೆ ಸ್ವತಂತ್ರರಾಗಿರುವುದರಿಂದ ಸಾಮಾನ್ಯವಾಗಿ ಸರ್ವರ ಉಪಯೋಗಕ್ಕೂ ಅವುಗಳು ಬೀಳುವುವು. ಇದೇ ಪ್ರಕಾರ ಏರ್ಪಾಡು ಮಾಡಲಾಯಿತು. ಅಂತೇ ಕೆಲಕಾಲದ ತನಕ ನಮ್ಮನ್ನು ತೃಪ್ತಿಪಡಿಸಿದ್ದೂ ಆಯಿತು.

ಈ ಚಿಕ್ಕ ಸಂಗ್ರಹದ ಉಪಯೋಗವನ್ನು ಕಂಡುಕೊಂಡ ನಂತರ

ಪುಸ್ತಕಗಳಿಂದ ದೊರೆಯುವ ಲಾಭವು ಹೆಚ್ಚು ಸಾರ್ವತ್ರಿಕವಾಗಲೆಂದು ಒಂದು ಸಾರ್ವಜನಿಕ ಚಂದಾ ವಾಚನಾಲಯವನ್ನು ಸ್ಥಾಪಿಸುವ ಸೂಚನೆಯನ್ನು ನಾನು ಮುಂದೆ ಹಾಕಿದೆನು. ಅಂತೇ ಯೋಜನೆಯ ಕರಡನ್ನು ಮತ್ತು ಅದಕ್ಕೆ ಯೋಗ್ಯವಾದ ನಿಯುಮಾವಳಿಗಳನ್ನು ಸಿದ್ಧಪಡಿಸಿದೆನು. ಒಬ್ಬ ಚತುರ ಕರಣಿಕನನ್ನು—ಮಿಸ್ಟರ್ ಚಾರ್ಲ್ಸ್ ಬ್ರೊಕ್ಡನ್ ಎಂಬುವನನ್ನು ಹಿಡಿದು, ಚಂದಾ ಹಣದ ಒಡಂಬಡಿಕೆ ಪತ್ರದ ಕರಾರುಗಳನ್ನೆಲ್ಲ ಒಂದು ರೂಪದಲ್ಲಿ ಬರೆಯಿಸಿದೆನು. ಈ ಕರಾರಿನ ಪ್ರಕಾರ ಪ್ರತಿಯೊಬ್ಬ ಚಂದಾದಾರನು ಪ್ರಥಮದಲ್ಲಿ ಪುಸ್ತಕಗಳನ್ನು ಖರೀದಿ ಮಾಡುವಾಗ ನಿರ್ದಿಷ್ಟವಾದ ಕೆಲವೊಂದು ಮೊಬಲಗನ್ನು ಕೊಡಬೇಕಾಗಿತ್ತು; ಹಾಗೂ ವಾರ್ಷಿಕ ಚಂದಾವನ್ನು ಅವುಗಳ ಸಂಖ್ಯೆಯನ್ನು ಹೆಚ್ಚಿಸುವುದಕ್ಕಾಗಿ ಕೊಡತಕ್ಕದ್ದಾಗಿತ್ತು. ಆ ಕಾಲದಲ್ಲಿ ಫಿಲಡೆಲ್ಫಿಯಾದಲ್ಲಿನ ಓದುಗರಾದ ನಾವು ಬರೇ ಕೆಲವು ಮಂದಿ ಇದ್ದೆವು ಅಲ್ಲದೆ ನಮ್ಮಲ್ಲಿ ಹೆಚ್ಚಿನವರೆಲ್ಲ ಬಹಳ ಬಡವರಾಗಿದ್ದರು. ಸತತ ಪ್ರಯತ್ನದಿಂದಲೂ ಕೂಡಾ, ನನ್ನಿಂದ ಈ ಕಾರ್ಯಕ್ಕಾಗಿ, ತಲಾ ನಾಲ್ವತ್ತು ಶಿಲ್ಲಿಂಗುಗಳು ಮತ್ತು ವರುಷಂಪ್ರತಿ ಹತ್ತು ಶಿಲ್ಲಿಂಗುಗಳು ಕೊಡಲಿಕ್ಕೆ ಇಚ್ಛಿಸುವ ಐವತ್ತಕ್ಕಿಂತ ಹೆಚ್ಚು ಜನರನ್ನು ದೊರಕಿಸಲು ಸಾಧ್ಯವಾಗಲಿಲ್ಲ. ಅವರಲ್ಲಿ ಕೂಡಾ ಹೆಚ್ಚಿನವರು ವ್ಯಾಪಾರಸ್ಥರಾಗಿದ್ದರು. ಇಷ್ಟೊಂದು ಅಲ್ಪ ಮೊಬಲಗಿನಿಂದ ನಾವು ಮೊದಲನೆಯ ಹೆಜ್ಜೆ ಇಟ್ಟಿದ್ದಾಯಿತು. ಪುಸ್ತಕಗಳನ್ನು ಆಮದು ಮಾಡಿಸಿದ್ದಾಯಿತು. ವಾಚನಾಲಯವು ಚಂದಾದಾರರಿಗೆ ಪುಸ್ತಕಗಳನ್ನು ಕೊಡುವುದಕ್ಕಾಗಿ ಒಂದು ದಿನ ತೆರೆದಿಡಲ್ಪಡುತ್ತಿತ್ತು. ಒಂದು ವೇಳೆ ಅವರು ನಿಯಮಿತ ವೇಳೆಗೆ ಸರಿಯಾಗಿ ಪುಸ್ತಕಗಳನ್ನು ಹಿಂದಿರುಗಿಸದಿದ್ದರೆ ಮೊಬಲಗಿನ ಎರಡು ಪಟ್ಟು ಹಣವನ್ನು ದಂಡವಾಗಿ ತೆರಬೇಕೆಂಬ ಪ್ರಮಾಣ ಪತ್ರವನ್ನು ಅವರಿಂದ ಬರೆಸಿಕೊಳ್ಳಲಾಗಿತ್ತು. ಬಹು ಬೇಗನೆ ಸಂಸ್ಥೆಯು ತನ್ನ ಉಪಯುಕ್ತತೆಯನ್ನು ತೋರ್ಪಡಿಸಿತು. ಅಂತೇ ಬೇರೆ ಪಟ್ಟಣಗಳಲ್ಲಿ ಮತ್ತು ಬೇರೆ ಪ್ರಾಂತ್ಯಗಳಲ್ಲಿ ಇದನ್ನು ಅನುಕರಣೆ ಮಾಡಲಾಯಿತು. ಧರ್ಮ–ದಾನಗಳಿಂದ ವಾಚನಾಲಯಗಳು ಅಭಿವೃದ್ಧಿಯಾದವು. ಓದುವುದೊಂದು 'ಫ್ಯಾಷನ್' ಆಯಿತು. ಅಲ್ಲದೆ ತಮ್ಮ ಅಭ್ಯಾಸದಿಂದ ಬೇರೆಡೆಗೆ ಲಕ್ಷ್ಯ ಕೊಡಲು ಯಾವ ಸಾರ್ವಜನಿಕ ಮನೋರಂಜನೆಯ ವ್ಯವಸ್ಥೆಯಿಲ್ಲದ್ದರಿಂದ ನಮ್ಮ ಜನರು ಚೆನ್ನಾಗಿ ಪುಸ್ತಕಗಳಲ್ಲಿ ಮಗ್ನರಾದರು. ಅಂತೇ ಕೆಲವೇ ವರುಷಗಳಲ್ಲಿ ನಮ್ಮ ಜನರು ಸಾಮಾನ್ಯವಾಗಿ ಬೇರೆ ದೇಶಗಳಲ್ಲಿಯ

ಆದೇ ಮಟ್ಟದ ಜನರಿಗಿಂತ ಹೆಚ್ಚು ಉತ್ತಮವಾದ ತಿಳುವಳಿಕೆಯುಳ್ಳವರು ಮತ್ತು ಹೆಚ್ಚು ಬುದ್ಧಿವಂತರೆಂಬುದನ್ನು ಅಪರಿಚಯಸ್ಥರಾದ ಪರಜನರಿಂದ ಕಂಡುಹಿಡಿಯಲ್ಪಟ್ಟದ್ದಾಯಿತು.

ನಮ್ಮ ಹಕ್ಕು ಮೊದಲಾದುವುಗಳ ಕುರಿತು ಐವತ್ತು ವರುಷಗಳ ತನಕ ಸಂಬಂಧಪಟ್ಟ ಕರಾರು ಪತ್ರಕ್ಕೆ ನಾವು ರುಜು ಹಾಕುವ ಸಮಯಕ್ಕೆ ಕರಣಿಕನಾದ ಮಿಸ್ಟರ್ ಬ್ರೋಕ್ಡನನು ನಮಗೆ, "ನೀವೆಲ್ಲ ತರುಣರು. ಆದರೆ ನೀವುಗಳೆಲ್ಲ ಈ ಕರಾರು ಪತ್ರದ ನಿಯಮಾವಳಿಗಳೆಲ್ಲ ಅಂತ್ಯವಾಗುವುದನ್ನು ನೋಡಲಿಕ್ಕೆ ಉಳಿಯುವುದು ಬಹುಶಃ ದುಸ್ತರವಾದ ಸಂಗತಿಯೆನ್ನಬೇಕು" ಎಂದು ಹೇಳಿದ್ದನು. ಆದರೂ ಕೂಡ ನಮ್ಮಲ್ಲಿ ಸಾಕಷ್ಟು ಮಂದಿ ಇನ್ನೂ ಜೀವಿಸುತ್ತಲೇ ಇದ್ದಾರೆ. ಆದರೆ ಕರಾರು ಪತ್ರ ಮಾತ್ರ ಕೆಲವು ವರುಷಗಳ ತರುವಾಯ-ಕಂಪನಿಗೆ ಸ್ಥಿರತ್ವವನ್ನು ನೀಡುವ ಮತ್ತು ಸಂಘಟನೆಯನ್ನೀಯುವ ಒಂದು ರಾಜ್ಯ ಶಾಸನದ ಮೂಲಕ-ಅದು ವ್ಯರ್ಥವೆಂದು ಪರಿಗಣಿಸಲಾಯಿತು.

ಚಂದಾ ಹಣವನ್ನು ಕೇಳಿಕೊಳ್ಳುವಾಗ ನಾನು ಎದುರಿಸಬೇಕಾಗಿ ಬಂದ ತಕರಾರುಗಳು ಮತ್ತು ಅನಿಚ್ಛೆಯು ಬೇಗನೆ ನನಗೆ ಯಾವುದಾದರೂ ಪ್ರಯೋಜನಕಾರಿಯಾದ ಯೋಜನೆಯನ್ನು ಕಾರ್ಯಗತಗೊಳಿಸಲು ಹೊರಡುವವನ ಅನೌಚಿತ್ಯವನ್ನು ಮನಸ್ಸಿಗೆ ನಾಟುವಂತೆ ಮಾಡಿತು. ಇತ್ತ ಅಂಥ ಯೋಜನೆಯನ್ನು ಪೂರ್ಣಗೊಳಿಸಲು ತನ್ನ ಸುತ್ತುಮುತ್ತಲಿನವರ ಸಹಾಯವು ಅದಕ್ಕೆ ಬೇಕಾಗಿರುವಾಗ ಆ ಯೋಜನೆಯಿಂದ ತನ್ನ ಕೀರ್ತಿಯನ್ನು ಅವರೆಲ್ಲರಿಗಿಂತ ಕಿಂಚಿತ್ತಾದರೂ ಹೆಚ್ಚಿಸುವುದೆಂದು ತಿಳಿಯಲಾಗುತ್ತದಷ್ಟೆ. ಆದುದರಿಂದ ನಾನು ನನ್ನಿಂದ ಸಾಧ್ಯವಿದ್ದಷ್ಟರ ಮಟ್ಟಿಗೆ ಜನರ ದೃಷ್ಟಿಯಿಂದ ದೂರವಿರುತ್ತಿದ್ದೆನು. ಮತ್ತು ಇದೊಂದು ಕೆಲವು **ಮಂದಿ ಗೆಳೆಯರ** ಯೋಜನೆಯೆಂದೂ, ಅವರೆಲ್ಲ ನನಗೆ ಎಲ್ಲೆಡೆಗೂ ಸುತ್ತಾಡಿಕೊಂಡು ಓದುವ ಅಭಿರುಚಿಯುಳ್ಳವರೊಡನೆ ಅದರ ಬಗ್ಗೆ ಪ್ರಸ್ತಾಪ ಮಾಡಲು ಹೇಳಿರುತ್ತಾರೆಂದು ತಿಳಿಯಪಡಿಸುತ್ತಿದ್ದೆನು. ಈ ರೀತಿಯಲ್ಲಿ ನನ್ನ ಕೆಲಸವು ಹೆಚ್ಚು ಸುಗಮವಾಗಿ ಸಾಗಿತು. ಅಂತೇ ನಾನದನ್ನು ಆಮೇಲೆ ಇಂಥ ಪ್ರಸಂಗಗಳಲ್ಲಿ ಉಪಯೋಗಿಸುತ್ತಲೇ ಇದ್ದೆನು. ಅಲ್ಲದೆ ನನ್ನ ಹಲವಾರು ಯಶಸ್ಸುಗಳ ಮೂಲಕ ನಾನು ಈ ಪದ್ಧತಿಯನ್ನು ಶಿಫಾರಸು ಮಾಡುತ್ತೇನೆ. ಈಗಿನ ನಿನ್ನ ಹೆಮ್ಮೆಯ ತುಸು ತ್ಯಾಗವು ಆನಂತರ ಯಥೇಷ್ಟವಾಗಿ ಸಂದಾಯ ಮಾಡಲ್ಪಡುವುದು. ಸ್ವಲ್ಪ

ಸಮಯದ ತನಕ ಸ್ವಾಭಾವಿಕವಾದ ಗುಣವು ಯಾರಿಗೆ ಸಲ್ಲಬೇಕೆಂಬುದು ಅನಿರ್ದಿಷ್ಟವಾಗಿ ಉಳಿದರೂ ಕೂಡ, ನಿನಗಿಂತ ಹೆಚ್ಚು ಹೆಮ್ಮೆಯುಳ್ಳವನು ಯಾರಾದರೂ ಅದನ್ನು ಪ್ರತಿಪಾದಿಸಲು ಧೈರ್ಯಮಾಡಿದರೂ ಸಹ ಆಗೊಬ್ಬ ವೈರಿಯೂ ಕೂಡ ಅಂಥ ಕಾಲ್ಪನಿಕ ಗರಿಗಳನ್ನು ಕಿತ್ತೆಸೆದು ಅವುಗಳನ್ನು ಯೋಗ್ಯವಾದ ಯಜಮಾನನಿಗೆ ಸಲ್ಲಿಸಿ ನಿನಗೆ ನ್ಯಾಯವನ್ನು ನೀಡಲು ಸಿದ್ಧನಾಗುತ್ತಾನೆ.

ಸತತ ಅಭ್ಯಾಸದಿಂದ ಸುಧಾರಣೆಯ ಸಾಧನವಾಗಿ ಈ ವಾಚನಾಲಯವು ನನಗೆ ದೊರತಿತು. ಪ್ರತಿ ದಿನವೂ ನಾನು ಈ ಬಗ್ಗೆ ಒಂದೋ–ಎರಡೋ ತಾಸುಗಳನ್ನು ವಿನಿಯೋಗಿಸುತ್ತಿದ್ದೆನು. ಅಂತೇ ಈ ರೀತಿಯಲ್ಲಿ ಒಂದು ಕಾಲದಲ್ಲಿ ನನ್ನ ತಂದೆಯವರು ನನಗೆ ಕೊಡಲಿಚ್ಛಿಸಿದ ವಿದ್ಯೆಯನ್ನು ಪುನಃ ಕೆಲಮಟ್ಟಿಗೆ ಸರಿಪಡಿಸಿಕೊಂಡೆನು. ಓದುವುದೊಂದನ್ನು ಮಾತ್ರ ನಾನು ನನ್ನ ಮಟ್ಟಿಗೆ ಮನೋರಂಜನೆಯೆಂದು ಪರಿಗಣಿಸುತ್ತಿದ್ದೆನು. ನಾನು ಹೊಟೇಲುಗಳಲ್ಲಿ, ಆಟಗಳಲ್ಲಿ ಅಥವಾ ಯಾವ ಬಗೆಯ ಮನೋರಂಜನೆಯಲ್ಲಿಯೂ ಸಮಯ ಕಳೆಯುತ್ತಿದ್ದಿಲ್ಲ. ನನ್ನ ವ್ಯವಹಾರದಲ್ಲಿ ನನ್ನ ಸತತ ದುಡಿಮೆಯು ಎಷ್ಟು ಅವಶ್ಯವಾಗಿತ್ತೋ ಅಷ್ಟರ ಮಟ್ಟಿಗೆ ಅವಿಶ್ರಾಂತವಾಗಿ ಸಾಗುತ್ತಿತ್ತು. ನನ್ನ ಮುದ್ರಣಾಲಯಕ್ಕಾಗಿ ನಾನು ಋಣದಲ್ಲಿ ಬಿದ್ದಿದ್ದೆನು. ಶಿಕ್ಷಣ ಪಡೆಯುವುದಕ್ಕಾಗಿ ನನ್ನಲ್ಲಿಗೆ ಬರುವ ಒಂದು ತರುಣ ಕುಟುಂಬವಿತ್ತು. ಅಲ್ಲದೆ ನಾನು ಇಬ್ಬರು ಮುದ್ರಕರನ್ನು ವ್ಯವಹಾರದಲ್ಲಿ ತೊಡಗಿಸಿ ಸಲಹಬೇಕಾಗಿತ್ತು. ಆ ಪ್ರದೇಶದಲ್ಲಿ ಅವರು ನನಗಿಂತ ಮೊದಲೇ ನೆಲೆವೂರಿದ್ದರು. ಆದರೂ ಕೂಡ ದಿನದಿಂದ ದಿನಕ್ಕೆ ನನ್ನ ಸ್ಥಿತಿಗತಿಗಳು ಸುಧಾರಿಸುತ್ತಿದ್ದವು. ನನ್ನ ಮೂಲದ ಮಿತವ್ಯಯದ ಅಭ್ಯಾಸವಂತೂ ಹಾಗೇ ಮುಂದುವರಿದಿತ್ತು. ನನ್ನ ತಂದೆಯವರು ನನಗೆ ಉಪದೇಶ ಮಾಡುತ್ತಿರುವಾಗ ಚಿಕ್ಕಂದಿನಲ್ಲಿ ಸೊಲೊಮನ್‌ನ ಗಾದೆ ಮಾತೊಂದನ್ನು ಆಗಾಗ ಹೇಳುತ್ತಿದ್ದರು. "ತನ್ನ ಉದ್ಯೋಗದಲ್ಲಿ ಸತತ ಕರ್ಮಯೋಗಿಯಾದ ಮನುಷ್ಯನನ್ನು ನೀನು ನೋಡು, ಅವನು ರಾಜರ ಮುಂದೆ ನಿಲ್ಲುವವನೇ ಹೊರತು ಕ್ಷುಲ್ಲಕ ಮನುಜರ ಮುಂದೆ ನಿಲ್ಲಲಾರನು" ಎಂಬುದು ಆ ಮಾತಾಗಿತ್ತು. ಅಂದಿನಿಂದ ನಾನು ಸತತಕರ್ಮವು ಹಣ ಹಾಗೂ ಕೀರ್ತಿಯನ್ನು ಗಳಿಸುವ ಉಪಾಯವೆಂದು ಬಗೆದಿದ್ದೆನು. ಅದು ನನಗೆ ಪ್ರೋತ್ಸಾಹ ನೀಡಿತು. ಅಕ್ಷರಶಃ ನಾನೇನು **ರಾಜರ ಮುಂದೆ ನಿಲ್ಲಬೇಕೆಂದು** ಆಲೋಚಿಸಿರಲಿಲ್ಲವೆಂದು ನನಗನಿಸುತ್ತದೆ. ಆದರೂ

ಕೂಡ ಆ ಪ್ರಕಾರವೇ ಸಂಭವಿಸಿರುತ್ತದೆ. ಯಾಕಂದರೆ ನಾನು ಐವರ ಮುಂದೆ ನಿಂತಿದ್ದೇನೆ. ಅಷ್ಟೇ ಅಲ್ಲದೆ ಡೆನ್ಮಾರ್ಕಿನ ಅರಸನ ಸಂಗಡ ನಡೆದ ಮೇಜವಾನಿಯಲ್ಲಿ, ಮಾಡಿಸಿದ ಮರ್ಯಾದೆಗೂ ಪಾತ್ರನಾಗಿದ್ದೇನೆ.

"ಯಾವನು ಯಶಸ್ವಿಯಾಗಿ ಬಾಳುತ್ತಾನೋ ಅವನು ತನ್ನ ಹೆಂಡತಿಯನ್ನು ಕೇಳಲೇಬೇಕು" ಎಂಬುದೊಂದು ಆಂಗ್ಲ ಗಾದೆಯ ಮಾತು ನಮ್ಮಲ್ಲಿ ಉಂಟು. ನನ್ನಷ್ಟೇ ಮಿತವ್ಯಯ ಮಾಡುವ ಹಾಗೂ ನನ್ನಷ್ಟೇ ಕರ್ಮಶೀಲಳಾದ ಒಬ್ಬಳು ನನಗೆ ಇರುವುದು ನನ್ನ ಸುದೈವವೆಂದು ಹೇಳಬೇಕು. ಕರಪುಸ್ತಕಗಳನ್ನು ಮಡಚುವುದರಲ್ಲಿ, ಮತ್ತು ಹೊಲಿಯುವುದರಲ್ಲಿ, ಅಂಗಡಿ ನಡೆಸುವುದರಲ್ಲಿ, ಕಾಗದ ತಯಾರಿಸುವವರಿಗೆ ಹಳೆಯ ಲಿನನ್ ಹರಕು ಬಟ್ಟೆಗಳನ್ನು ಕೊಳ್ಳುವುದೇ ಮೊದಲಾದ ಅನೇಕ ನನ್ನ ವ್ಯವಹಾರದಲ್ಲಿ ಅವಳು ನನಗೆ ಸಂತೋಷದಿಂದ ಸಹಾಯ ಮಾಡುತ್ತಿದ್ದಳು. ನಾವು ಯಾವ ಸೋಮಾರಿ ಸೇವಕನನ್ನು ಇಟ್ಟುಕೊಂಡಿರಲಿಲ್ಲ. ನಮ್ಮ ಊಟದ ಟೇಬಲ್ ಸಾದಾ ಹಾಗೂ ಸರಳವಾಗಿತ್ತು. ನಮ್ಮ ಮನೆಯ ಸಲಕರಣೆಗಳು ಬಹಳ ಅಗ್ಗದವುಗಳು. ಉದಾಹರಣೆಗೆ—ನನ್ನ ಫರಾಳ (ಉಪಾಹಾರ) ಕೇವಲ ಒಂದು ದೀರ್ಘ ಸಮಯವಾದ ಬ್ರೆಡ್ ಹಾಗೂ ಹಾಲು (ಚಹಾ-ಇಲ್ಲ) ಮತ್ತು ನಾನು ಇದನ್ನು ಎರಡು ಪೆನ್ನಿಯ ಮಣ್ಣಿನ ಪಿಂಗಾಣಿಯಲ್ಲಿ ಒಂದು ಅಲ್ಯುಮಿನಿಯಂ ಚಮಚದಿಂದ ಉಣ್ಣುತ್ತಿದ್ದೆನು. ಆದರೆ ಸಂಸಾರಗಳಲ್ಲಿ ಹೇಗೆ ಭೋಗಸಾಧನಗಳು, ತತ್ವದಂತೆ ನಡೆಯುತ್ತಿದ್ದರೂ ಕೂಡ, ಪ್ರವೇಶಮಾಡಿ ಪ್ರಗತಿಯನ್ನು ಸಾಧಿಸುತ್ತವೆಂಬುದನ್ನು ನೋಡಿಕೊಳ್ಳಿರಿ: ಒಂದು ದಿನ ಬೆಳಿಗ್ಗೆ ಫಲಾಹಾರಕ್ಕೆ ಕರೆದಾಗ, ನಾನು ಅದನ್ನು ಚೈನಾ ಪಿಂಗಾಣಿಯಲ್ಲಿ, ಬೆಳ್ಳಿಯ ಚಮಚದ ಸಂಗಡ ಕಂಡೆನು! ಅವುಗಳನ್ನು ನನಗೆ ಗೊತ್ತಿಲ್ಲದೆ ನನ್ನ ಹೆಂಡತಿಯು ನನಗಾಗಿ ಕೊಂಡಿದ್ದಳು. ಅದಕ್ಕಾಗಿ ಅವಳು ಇಪ್ಪತ್ತ ಮೂರು ಶಿಲ್ಲಿಂಗುಗಳ ಬಹು ದೊಡ್ಡ ಮೊಬಲಗನ್ನು ತೆರಬೇಕಾಗಿತ್ತು. ಆ ಬಗ್ಗೆ ಅವಳು ಯಾವ ನೆವ ಅಥವಾ ಕ್ಷಮೆ ಹೇಳುವುದಕ್ಕೆ ಇರಲಿಲ್ಲ. ಬದಲು ತನ್ನ ನೆರೆಹೊರೆಯವರಂತೆ ಅವಳೂ ಕೂಡ ತನ್ನ ಗಂಡನಿಗೆ ಒಂದು ಬೆಳ್ಳಿಯ ಚಮಚ ಹಾಗೂ ಚೈನಾ ಪಿಂಗಾಣಿ ಯೋಗ್ಯವಾದುದೆಂದು ಯೋಚಿಸಿದ್ದಾಗಿತ್ತು. ಇದೇ ನಮ್ಮ ಮನೆಯಲ್ಲಿ ಚೈನಾ ಹಾಗೂ ಪ್ಲೇಟು ಪ್ರಥಮ ಪ್ರವೇಶ ಮಾಡಿದ್ದು. ಆನಂತರ ವರ್ಷಾನುಸಾರವಾಗಿ ಅದು ನಮ್ಮ ಐಶ್ವರ್ಯ ಹೆಚ್ಚಿದಂತೆ ಕ್ರಮೇಣ ನೂರಾರು ಪೌಂಡುಗಳ ಬೆಲೆ ಬಾಳುವ ತನಕ ವೃದ್ಧಿಗೊಂಡಿತು.

ನಾನು ಪ್ರೆಸ್ಬಿಟೇರಿಯನ್ ಆಗಿ ಧಾರ್ಮಿಕ ಶಿಕ್ಷಣವನ್ನು ಪಡೆದಿದ್ದೆನು. ಆದರೂ ಕೂಡಾ ಆ ಮತದ-ದೇವರ ಶಾಶ್ವತ ಅಪ್ಪಣೆಗಳು, ಚುನಾವಣೆ, ಪಾಪ ಮೊದಲಾದ ಕೆಲವು ತತ್ವಗಳು ನನಗೆ ವಿವೇಕಹೀನವಾಗಿ ಕಂಡಿದ್ದವು. ಬೇರೆ ಕೆಲವು ಸಂಶಯಾಸ್ಪದವಾಗಿ ತೋರಿದ್ದವು. ಅಂತೇ ನಾನು ಬಹು ಬೇಗನೆ ಮತದ ಸಾರ್ವಜನಿಕ ಸಭೆಗಳಿಂದ ದೂರವುಳಿದಿದ್ದೆನು. ಯಾಕಂದರೆ ಆದಿತ್ಯವಾರವು ನನ್ನ ಅಭ್ಯಾಸದ ದಿವಸವಾಗಿತ್ತು. ಆದರೆ ನಾನೆಂದೂ ಕೆಲವು ಧಾರ್ಮಿಕ ತತ್ವಗಳನ್ನು ಅನುಸರಿಸದೆ ಇರಲಿಲ್ಲ. ಉದಾಹರಣೆಗಾಗಿ ನಾನೆಂದೂ-ದೇವರ ಅಸ್ತಿತ್ವ, ಅವನು ಈ ಜಗತ್ತನ್ನು ನಿರ್ಮಿಸಿ ತನ್ನ ದಯೆಯಿಂದ ಅದನ್ನು ರಕ್ಷಿಸುವುದು, ಮನುಷ್ಯನಿಗೆ ಒಳ್ಳೆಯದನ್ನೆ ಮಾಡುವುದು ದೇವರಿಗೆ ಬಹಳ ಮೆಚ್ಚುಗೆಯಾಗುವ ಸೇವೆಯೆಂಬುದು; ನಮ್ಮ ಆತ್ಮಗಳು ಅನಂತವಾದವುಗಳು, ಎಲ್ಲಾ ಪಾಪ ಕೃತ್ಯಗಳಿಗೆ ಶಿಕ್ಷೆ ದೊರಕುವುದು, ಸದ್ಗುಣಗಳಿಗೆ ಇಹದಲ್ಲಿ-ಇಲ್ಲವೆ ಪರದಲ್ಲಿ ಜಯದೊರೆಯುವುದು ಎಂಬವುಗಳ ಬಗ್ಗೆ ಸಂಶಯಗ್ರಸ್ತನಾಗಿರಲಿಲ್ಲ. ಇವುಗಳಲ್ಲಿ ಪ್ರತಿಯೊಂದೂ ಧರ್ಮದ ಆವಶ್ಯಕ ಸೂತ್ರಗಳೆಂದು ನಾನು ಬಗೆದಿದ್ದೆನು. ಮತ್ತು ನಮ್ಮ ದೇಶದಲ್ಲಿರುವ ಎಲ್ಲಾ ಧರ್ಮಗಳಲ್ಲೂ ಇವುಗಳನ್ನು ಕಂಡುಕೊಂಡು ನಾನು ಎಲ್ಲವುಗಳನ್ನು ಗೌರವಿಸುತ್ತಿದ್ದೆನು. ಆದರೆ ಆ ಗೌರವದಲ್ಲಿ ಮಾತ್ರ ತಾರತಮ್ಯ ಭಾವನೆಯಿತ್ತು. ಯಾಕಂದರೆ ಅವುಗಳಲ್ಲಿ ಹೆಚ್ಚು ಅಥವಾ ಕಡಿಮೆ ಪ್ರಮಾಣದಿಂದ ಮಿಕ್ಕ ವಿಷಯಗಳು ಕೇವಲ ನಮ್ಮನ್ನು ಒಡೆಯುವುದಕ್ಕಾಗಿ ಸೇರಿಕೊಂಡದ್ದನ್ನು ನಾನು ಕಂಡುಕೊಂಡಿದ್ದೆನು. ಆ ವಿಷಯಗಳು ನೀತಿಯನ್ನು ಪ್ರಚೋದಿಸುವ, ವೃದ್ಧಿಪಡಿಸುವ, ಇಲ್ಲವೆ ಸ್ಥಿರಪಡಿಸುವ, ಯಾವ ಉದ್ದೇಶದಿಂದಲೂ ಕೂಡಿಕೊಂಡಿರುತ್ತಿದ್ದಿಲ್ಲ. ಅಂತೇ ಅವುಗಳು ನಮ್ಮಲ್ಲಿ ವೈಷಮ್ಯವನ್ನು ಹುಟ್ಟಿಸುತ್ತಿದ್ದವು. ಅವುಗಳೆಲ್ಲದರ ಬಗ್ಗೆ ಇರುವ ಈ ಗೌರವವು-ತೀರ ಕೆಟ್ಟದರಿಂದ ಕೂಡ ಕೆಲವೊಂದು ಒಳ್ಳೆಯ ಪರಿಣಾಮಗಳಾಗುತ್ತವೆ ಎಂಬ ಅಭಿಪ್ರಾಯದೊಡನೆ ಸೇರಿಕೊಂಡು-ಜೀವಿಯುವನು ತನ್ನ ಧರ್ಮದ ಬಗ್ಗೆ ವಹಿಸಬಹುದಾದ ಒಳ್ಳೆಯ ಅಭಿಪ್ರಾಯವನ್ನು ಕಡಿಮೆ ಮಾಡುವ ಎಲ್ಲಾ ಧಾರ್ಮಿಕ ಉಪಾಖ್ಯಾನಗಳನ್ನೂ ತಪ್ಪಿಸುವಂತೆ ನನ್ನನ್ನು ಪ್ರೇರೇಪಿಸಿತ್ತು. ಅಂತೇ ನಮ್ಮ ಪ್ರಾಂತದಲ್ಲಿ ಜನಸಂಖ್ಯೆ ಹೆಚ್ಚಿದ ಹಾಗೆ, ಮತ್ತು ಪುಣ್ಯಕ್ಷೇತ್ರಗಳ ಆವಶ್ಯಕತೆಯು ಸತತವಾಗಿ ಇರುವಾಗ, ಮತ್ತು ಸಾಮಾನ್ಯವಾಗಿ ಅವುಗಳನ್ನು ಐಚ್ಛಿಕವಂತಿಗೆಯಿಂದಲೆ ನಿರ್ಮಿಸುತ್ತಿರುವಾಗ, ಯಾವ ಧರ್ಮವೇ ಆದಾ

ಗಿದ್ದರೂ ಕೂಡ, ಅಂಥ ಕೆಲಸಗಳಿಗೆ ನನ್ನ ಚಿಕ್ಕಾಸು ಎಂದಿಗೂ ನಿರಾಕರಿಸಲ್ಪಡಲಿಲ್ಲ.

ನಾನು ಕ್ವಚಿತ್ತಾಗಿ ಯಾವ ಸಾರ್ವಜನಿಕ ದೇವಸ್ಥಾನಗಳಿಗೆ ಹೋಗಿರದಿದ್ದರೂ ಕೂಡ ಅವುಗಳ ಯಥಾರ್ಥತೆಯ ಬಗ್ಗೆ, ಮತ್ತು ಕ್ರಮಪ್ರಕಾರ ಅವುಗಳನ್ನು ನಡೆಸಿಕೊಂಡು ಹೋದಲ್ಲಿ ಅವುಗಳ ಉಪಯುಕ್ತತೆಯ ಬಗ್ಗೆ, ನನ್ನಲ್ಲಿ ಸದಭಿಪ್ರಾಯವೇ ಇತ್ತು. ಅಲ್ಲದೆ ಫಿಲಡೆಲ್ಫಿಯಾದಲ್ಲಿದ್ದ ಏಕಮಾತ್ರ ಪ್ರೆಸ್ಬಿಟೇರಿಯನ್ ಪಾದ್ರಿಯ ಅಥವಾ ಸಭೆಯ ಸಹಾಯಾರ್ಥವಾಗಿ ನಾನು ನನ್ನ ವಾರ್ಷಿಕ ವಂತಿಗೆಯನ್ನು ನಿಯಮಿತವಾಗಿ ಕೊಡುತ್ತಲೇ ಇದ್ದೆನು. ಗೆಳೆಯನಂತೆ ಅವನು ಕೆಲವೊಮ್ಮೆ ನನ್ನನ್ನು ಭೇಟಿಯಾಗುತ್ತಿದ್ದನು. ಮತ್ತು ತನ್ನ ಅದ್ಭುತಗಳಿಗೆ ಉಪಸ್ಥಿತನಾಗಲು ಎಚ್ಚರಿಕೆ ಕೊಡುತ್ತಿದ್ದನು. ಕ್ರಮಪ್ರಕಾರ ಐದು ಆದಿತ್ಯವಾರಗಳಿಗೆ ಒಂದು ಸಲ ಆಗಾಗ ಹಾಗೆ ಮಾಡುವ ಅಭ್ಯಾಸವಿಟ್ಟಿದ್ದೆನು. ನನ್ನ ಅಭಿಮತದಂತೆ ಅವನು ಯೋಗ್ಯ ಧರ್ಮಬೋಧಕನಾಗಿದ್ದರೆ ಬಹುಶಃ ನಾನು ಹಾಗೆ ಹೋಗುವುದನ್ನು ಮುಂದುವರಿಸುತ್ತಿದ್ದೆನು. ನನ್ನ ಅಭ್ಯಾಸದ ಕಾರ್ಯದಲ್ಲಿ ನನಗೆ ದೊರೆಯುತ್ತಿದ್ದ ಏಕಮಾತ್ರ ಆದಿತ್ಯವಾರದ ವಿರಾಮವನ್ನು ಕೂಡ ನಾನು ಪರಿಗಣಿಸುತ್ತಿರಲಿಲ್ಲ. ಅವನ ಭಾಷಣಗಳೆಂದರೆ ಮುಖ್ಯವಾಗಿ ವಾದಾನುವಾದಗಳ ತರ್ಕಗಳು ಅಥವಾ ನಮ್ಮ ಮತದ ವಿಲಕ್ಷಣ ತತ್ವಗಳ ವಿವರಣೆಗಳೇ ಆಗಿರುತ್ತಿದ್ದವು. ನನಗೆ ಮಾತ್ರ ಅವುಗಳೆಲ್ಲ ಬಹಳ ಸಪ್ಪೆಯಾಗಿ, ಅಭಿರುಚಿಹೀನವಾಗಿ ಮತ್ತು ಬೋಧನೆಯಿಲ್ಲದವುಗಳಾಗಿ ಕಾಣುತ್ತಿದ್ದವು. ಯಾವ ಒಂದು ನೈತಿಕ ತತ್ವವನ್ನು ಬೋಧಿಸದೆ ಅಥವಾ ಜಾರಿಗೆ ತರದೆ ಇರುವ ಅವುಗಳ ಉದ್ದೇಶವು ನಮ್ಮನ್ನು ಯೋಗ್ಯ ನಾಗರಿಕರನ್ನಾಗಿ ಮಾಡುವುದರ ಬದಲು ಪ್ರೆಸ್ಬಿಟೇರಿಯನ್ನರಾಗಿ ಮಾಡುವಂತೆ ಕಂಡುಬರುತ್ತಿತ್ತು.

ಬಹಳ ಕಾಲದಿಂದ ಅವನು ತನ್ನ ಪಠ್ಯವೆಂದು 'ಫಿಲಿಪ್ಪಾನ್ಸ' (Philippians)ದ ನಾಲ್ಕನೆಯ ಅಧ್ಯಾಯದ ಆ ಪದ್ಯವನ್ನು ಇಟ್ಟುಕೊಂಡಿದ್ದನು. ಅದೆಂದರೆ—"ಬಂಧುಗಳೆ, ಕೊನೆಯದಾಗಿ ಯಾವ ವಿಷಯಗಳು ಸತ್ಯ, ಪ್ರಾಮಾಣಿಕ, ಯೋಗ್ಯ, ಪರಿಶುದ್ಧ, ಸುಂದರ ಅಥವಾ ಸುಶ್ರುತವಾಗಿವೆಯೋ ಅಂಥ ವಸ್ತುಗಳ ಬಗ್ಗೆ,—ಯಾವುದಾದರೂ ಗುಣ ಅಥವಾ ಮೆಚ್ಚಿಕೆ ಇದ್ದುದಾದರೆ ಮಾತ್ರ—ವಿಚಾರಮಾಡಿರಿ" ಎಂಬುದು ಆ ಪದ್ಯವಾಗಿತ್ತು. ಅಂಥ ಪಠ್ಯದ ಒಂದು ಪ್ರವಚನದಲ್ಲಿ—ನಾವು ನೀತಿಯನು

ಸ್ವಲ್ಪವಾದರೂ ಪಡೆಯುವುದನ್ನು ತಪ್ಪಿಸಿಕೊಳ್ಳಬಾರದೆಂದು ನಾನು ಎಣಿಸಿ ದೆನು. ಆದರೆ ದೇವದೂತನೆಂಬುದರ ಅರ್ಥಕ್ಕೆ ಅವನು ಕೇವಲ ಐದು ಅಂಶಗಳಿಗಷ್ಟೆ ತನ್ನನ್ನು ಸ್ತಿಮಿತಗೊಳಿಸಿಕೊಂಡನು. ಅವುಗಳೆಂದರೆ: ೧. ಸಬ್ಬಾತ್ ದಿವಸವನ್ನು ಶುದ್ಧವಾಗಿ ಆಚರಿಸುವುದು. ೨. ಪವಿತ್ರ ಗ್ರಂಥಗಳ ಪಠಣದಲ್ಲಿ ಸತತ ಮಗ್ನವಾಗುವುದು ೩. ಸಾರ್ವಜನಿಕ ದೇವಾಲಯಗಳಿಗೆ ಸಮಯಾನುಸಾರ ದರ್ಶನವೀಯುವುದು. ೪ ಸಂಸ್ಕಾರ ದಲ್ಲಿ ಭಾಗವಹಿಸುವುದು. ೫. ದೇವರ ಪೂಜಾರಿಗಳಿಗೆ ಯೋಗ್ಯ ಮರ್ಯಾದೆ ಯನ್ನು ಕೊಡುವುದು. ಇವುಗಳೆಲ್ಲ ಒಳ್ಳೆಯ ವಿಷಯಗಳಾಗಿರಬಹುದು. ಆದರೆ ಆ ಪಠ್ಯದಿಂದ ಆಶಿಸಿದ ಒಳ್ಳೆಯ ವಿಷಯಗಳು ಮಾತ್ರ ಈ ಬಗೆ ಯವುಗಳಾಗಿರಲಿಲ್ಲ. ಬೇರೆ ಯಾವನಿಂದಾದರೂ ಅಂಥ ವಿಷಯಗಳನ್ನು ಹೇಳುವ ಆಸೆ ಬಿಟ್ಟೆನು. ಅದರಿಂದ ನಾನು ಬೇಸತ್ತದ್ದೂ ಆಯಿತು. ಅಂತೇ ಅವನ ಪ್ರವಚನಗಳಿಗೆ ಇನ್ನು ಮುಂದೆ ಉಪಸ್ಥಿತನಾಗಲೂ ಇಲ್ಲ. ನನ್ನ ಸ್ವಂತದ ಉಪಯೋಗಕ್ಕಾಗಿ ನಾನು ಕೆಲವು ವರುಷಗಳ ಹಿಂದೆ (ಅಂದರೆ ೧೭೨೮ ರಲ್ಲಿ) ಒಂದು ಪ್ರಾರ್ಥನಾ ವಿಧಿಯನ್ನು ಅಥವಾ ಒಂದು ಬಗೆಯ ಪ್ರಾರ್ಥನೆಯನ್ನು ನಿರ್ಮಿಸಿದ್ದೆನು. ಅದರ ಹೆಸರು 'ನಂಬಿಕೆಯ ತತ್ವ ಗಳು ಮತ್ತು ಧರ್ಮದ ಕೃತ್ಯಗಳು' ಎಂದಾಗಿತ್ತು. ನಾನು ಇದರ ಉಪ ಯೋಗಕ್ಕೆ ಮರಳಬೇಕಾಯಿತು. ಅಂತೇ ಯಾವ ಸಾರ್ವಜನಿಕ ಸಭೆ ಗಳಿಗೂ ಹೋಗಲಿಲ್ಲ. ನನ್ನ ನಡತೆಯು ಗರ್ಹ್ಯವಾಗಿರಬಹುದು. ಆದರೆ ನಾನದನ್ನು ಲೆಕ್ಕಿಸುವುದಿಲ್ಲ. ಆ ಬಗ್ಗೆ ಇನ್ನು ಮುಂದೆ ಯಾವ ಕ್ಷಮೆಗಾಗಿ ಪ್ರಯತ್ನಿಸುವುದಿಲ್ಲ. ನನ್ನ ಪ್ರಸ್ತುತ ಉದ್ದೇಶವು ನೈಜ ಸಂಗತಿ ಗಳನ್ನು ವಿವರಿಸುವುದಾಗಿರುತ್ತದೆಯೆ ಹೊರತು, ಅವುಗಳಿಗಾಗಿ ಕ್ಷಮೆ ಕೇಳು ವುದಾಗಿಲ್ಲ.

ಸುಮಾರು ಇದೇ ಹೊತ್ತಿಗೆ ನಾನು ನೈತಿಕ ಪೂರ್ಣತೆಯನ್ನು ಮುಟ್ಟುವ ದಿಟ್ಟ ಹಾಗೂ ಪ್ರಯಾಸಕರವಾದ ಯೋಜನೆಯನ್ನು ತಯಾರಿ ಸಿದ್ದು, ಯಾವ ಕಾಲದಲ್ಲೂ ಯಾವ ತಪ್ಪನ್ನೂ ಮಾಡದೆ ಜೀವಿಸಲು ನಾನು ಆಶಿಸಿದ್ದೆನು. ಸ್ವಾಭಾವಿಕ ಒಲವನ್ನು, ರೂಢಿಯನ್ನು ಅಥವಾ ಸಂಗತಿ ದೋಷವನ್ನು ನಾನು ಗೆದ್ದು ನಿಲ್ಲಬಹುದೆಂದು ಬಗೆದಿದ್ದೆನು. ಯಾವುದು ಸರಿ ಅಥವಾ ತಪ್ಪು ಎಂದು ನಾನು ತಿಳಿದುದನ್ನು ಅಥವಾ ನನಗೆ ಗೊತ್ತಿದೆಯೆಂದು ತಿಳಿದುದನ್ನು ನಾನು ಯಾವಾಗಲೂ ಯಾಕೆ ಮಾಡ ಬಾರದು ಮತ್ತು ಬೇರೆಯದನ್ನು ಯಾಕೆ ತಪ್ಪಿಸಬಾರದೆಂದು ನನಗೆ ಅನಿಸು

ತ್ತಿತ್ತು. ಆದರೆ ನಾನು ಎಣಿಸಿದ್ದಕ್ಕಿಂತ ಹೆಚ್ಚು ಪ್ರಯಾಸದ ಕೆಲಸ ದಲ್ಲಿ ತೊಡಗಿದ್ದೇನೆಂದು ನನಗೆ ಬೇಗನೆ ಗೋಚರವಾಯಿತು. ಒಂದು ತಪ್ಪಿನ ಬಗ್ಗೆ ಕಾಯುವುದರಲ್ಲಿ ನನ್ನ ಎಚ್ಚರವೆಲ್ಲ ತೊಡಗಿರುವಾಗ ನಾನು ಕೆಲವೊಮ್ಮೆ ಮತ್ತೊಂದು ತಪ್ಪಿನಿಂದ ಬೆರಗಾಗುತ್ತಿದ್ದೆ. ಅಲಕ್ಷ್ಯತನದ ಲಾಭವನ್ನು ಅಭ್ಯಾಸ ತೆಗೆದುಕೊಳ್ಳುತ್ತಿತ್ತು. ವಿಚಾರಕ್ಕಿಂತ ಹೆಚ್ಚು ಶಕ್ತಿ ಯುತವಾಗಿ ಕೆಲವೊಮ್ಮೆ ಒಲವು ಇರುತ್ತಿತ್ತು. ಕೊನೆಗೆ ನಾನು ಈ ಸಿದ್ಧಾಂತಕ್ಕೆ ಬಂದೆನು-ಕೇವಲ ಮುಂಧೋರಣೆಯ ನಮ್ಮ ದೃಢ ನಂಬಿಕೆ ಯಂತೆ ಸಂಪೂರ್ಣ ಗುಣಾಢ್ಯರಾಗಬೇಕೆಂಬ ನಮ್ಮ ಇಚ್ಛೆಯಿದ್ದರೂ ನಮ್ಮ ತಪ್ಪು-ತಡೆಗಳನ್ನು ತಡೆಯುವುದಕ್ಕೆ ಅದು ಸಾಲದೆ ಹೋಗುವುದು. ಅಂತೇ ನಾವು ಯಾವುದಾದರೂ ಸುಸೂತ್ರವಾದ ಹಾಗೂ ಸಮಾನವಾದ ನಡ ತೆಯ ಮೇಲೆ ಅವಲಂಬಿಸಬೇಕಾದರೆ ಮೊದಲಿಗೇ ನಾವು ಅದರ ವಿರುದ್ಧ ವಾದ ಅಭ್ಯಾಸಗಳನ್ನು ಮುರಿಯಬೇಕು ಮತ್ತು ಉತ್ತಮವಾದವುಗಳನ್ನು ಸಾಧಿಸಿಕೊಂಡು ಸ್ಥಿರಗೊಳಿಸಿರಬೇಕಾಗುತ್ತದೆ. ಈ ಉದ್ದೇಶಕ್ಕಾಗಿ ನಾನು ಕೆಳಗಿನ ಪದ್ಧತಿಯನ್ನು ಹುಡುಕಿ ತೆಗೆದೆನು.

ನಾನು ಗ್ರಂಥ ಓದಿನಲ್ಲಿ, ನೈತಿಕಗುಣಗಳ ಬಗ್ಗೆ ನನಗೆ ದೊರೆತ ವಿವರಣೆಯಲ್ಲಿ ಹೆಚ್ಚು-ಕಡಿಮೆ ಅವುಗಳ ಕ್ರಮಪಟ್ಟಿಗಳು ಅನೇಕ ದೊರೆ ತಿದ್ದವು. ಯಾಕಂದರೆ ಒಂದೇ ಬಗೆಯ ಹೆಸರಿನಲ್ಲಿ ಹೆಚ್ಚು-ಕಡಿಮೆ ವಿವಿಧ ವಿಚಾರಗಳನ್ನು ಬೇರೆ ಬೇರೆ ಲೇಖಕರು ಸೇರಿಸಿಕೊಂಡಿದ್ದರು. ಉದಾಹರಣೆ ಗಾಗಿ—ಮಿತಭೋಗವನ್ನು ಊಟ ಮತ್ತು ಕುಡಿತಕ್ಕಷ್ಟೆ ಕೆಲವರು ಪರಿ ಮಿತಗೊಳಿಸಿದ್ದರು. ಆದರೆ ಬೇರೆಯವರು ಅದನ್ನು ಮಿಕ್ಕ ಸರ್ವ ಮನೋ ರಂಜನೆಯನ್ನು—ಹಸಿವು, ಒಲವು, ಅಥವಾ ದೈಹಿಕ ಅಥವಾ ಮಾನಸಿಕ ಕಾಮನೆ ಇವುಗಳನ್ನು ಹಾಗೂ ನಮ್ಮ ಕೃಪಣತನ ಮತ್ತು ಮಹತ್ವಾ ಕಾಂಕ್ಷೆಯನ್ನು ಕೂಡ—ಮಿತಗೊಳಿಸುವ ಅರ್ಥದಿಂದ ಉಪಯೋಗಿಸಿದ್ದರು. ಸ್ಪಷ್ಟತೆಯ ಸಲುವಾಗಿ ಹೆಚ್ಚು ಅರ್ಥಗಳುಳ್ಳ ಹೆಸರುಗಳನ್ನು ಉಪಯೋಗಿ ಸುವುದಕ್ಕಿಂತ ಪ್ರತಿಯೊಂದಕ್ಕೆ ಕಡಿಮೆ ಅರ್ಥಗಳುಳ್ಳಂಥ ಹೆಚ್ಚು ಶಬ್ದ ಗಳನ್ನು ಬಳಸಬೇಕೆಂದು ನನ್ನ ಮಟ್ಟಿಗೆ ಪರ್ಯಾಲೋಚಿಸಿದೆನು. ಆ ಕಾಲ ದಲ್ಲಿ ನನಗೆ ಅಗತ್ಯವೆನಿಸಿದ ಅಥವಾ ಬೇಕೆಂದೆನಿಸಿರುವ ನಡತೆಗಳನ್ನು ಹದಿಮೂರು ಹೆಸರುಗಳ ಕೆಳಗೆ ಸೇರಿಸಿದೆನು. ಅಂತೇ ಪ್ರತಿಯೊಂದಕ್ಕೆ ಒಂದೊಂದು ಚಿಕ್ಕ ನಿಯಮವನ್ನು ವಿಧಿಸಿದೆನು. ಅದು ವಿಶದವಾಗಿ ನಾನು ಅದರ ಅರ್ಥಕ್ಕೆ ಕೊಟ್ಟ ವ್ಯಾಪ್ತಿಯನ್ನು ವಿವರಿಸುತ್ತಿತ್ತು.

ಈ ನಡತೆಗಳ ಹೆಸರುಗಳು ಅವುಗಳ ನಿಯಮಗಳೊಂದಿಗೆ ಹೀಗಿವೆ :

೧. ಮಿತಭೋಗ

ಜಡ ಬರುವಂತೆ ಉಣಬೇಡ, ಹದಮೀರಿ ಕುಡಿಯಬೇಡ.

೨. ಮೌನ

ನಿನಗೆ ಅಥವಾ ಪರರಿಗೆ ಉಪಯೋಗವಿಲ್ಲದೆ ಮಾತಾಡಬೇಡ; ಅಲ್ಪ ಸಂಭಾಷಣೆಯನ್ನು ನಿಷೇಧಿಸು.

೩. ಕ್ರಮ

ನಿನ್ನ ಪ್ರತಿಯೊಂದು ವಸ್ತುವಿಗೂ ಯೋಗ್ಯವಾದ ಸ್ಥಾನವಿರಲಿ; ನಿನ್ನ ವ್ಯವಹಾರದ ಪ್ರತಿಯೊಂದು ಅಂಶಕ್ಕೂ ತಕ್ಕ ಕಾಲವಿದ್ದಿರಲಿ.

೪. ದೃಢನಿರ್ಧಾರ

ನೀನು ಮಾಡಲೇ ಬೇಕಾದುದನ್ನು ಮಾಡಲು ನಿರ್ಧರಿಸು; ನೀನು ನಿರ್ಧರಿಸಿದುದನ್ನು ತಪ್ಪದೆ ನೆರವೇರಿಸು.

೫. ಮಿತವ್ಯಯ

ಪರರ ಅಥವ ನಿನ್ನ ಒಳಿತಿಗಾಗಿ ಹೊರತು ಮಿಕ್ಕದ್ದಕ್ಕೆ ವ್ಯಯಮಾಡಬೇಡ; ಅಂದರೆ-ಯಾವುದನ್ನೂ ಹಾಳು ಮಾಡದಿರು.

೬. ಕಾಯಕ

ಸಮಯ ಕಳೆಯದಿರು; ಪ್ರಯೋಜನಕಾರಿಯಾದ ಯಾವುದಾದರೂ ಕೆಲಸದಲ್ಲಿ ಯಾವಾಗಲೂ ನಿರತನಾಗಿರು; ಅಗತ್ಯವಿಲ್ಲದ ಸಕಲ ಕಾರ್ಯಗಳನ್ನು ದೂರೀಕರಿಸು.

೭. ಅಂತಶ್ಶುದ್ಧಿ

ನೋವನ್ನುಂಟು ಮಾಡುವ ಕಪಟವಾಡದಿರು; ಸರಳತನದಿಂದ ಮತ್ತು ನ್ಯಾಯವಾಗಿ ವಿಚಾರ ಮಾಡು; ಅಂತೇ ನೀನು ಮಾತಾಡುವೆಯಾದರೆ ಆ ಪ್ರಕಾರ ಮಾತನಾಡು.

೮. ನ್ಯಾಯ

ಅಪಕಾರ ಮಾಡಿ ಅಥವಾ ನಿನ್ನ ಕರ್ತವ್ಯವಾಗಿರುವಂಥ ಉಪಕಾರಗಳನ್ನು ನೆರವೇರಿಸದೆ ಯಾರಿಗೂ ಅನ್ಯಾಯ ಮಾಡಬೇಡ.

೯. ಸಂಯಮ

ಅತಿಯನ್ನು ತಪ್ಪಿಸು; ಕೋಪದ ಅನ್ಯಾಯಗಳನ್ನು ಎಷ್ಟರ ಮಟ್ಟಿಗೆ ಸಾಧ್ಯವಿದೆಯೆಂದು ನಿನಗೆ ಎನಿಸುತ್ತದೋ ಅಲ್ಲಿಯವರೆಗೆ ಅವುಗಳನ್ನು ಸಹಿಸಿಕೊಳ್ಳು.

### ೧೦. ಸ್ವಚ್ಛತೆ

ದೇಹದಲ್ಲಿನ, ಅರಿವೆಯ ಅಥವಾ ವಾಸ್ತವ್ಯದ ಯಾವ ಹೊಲಸನ್ನೂ ಸಹಿಸಿಕೊಳ್ಳಬೇಡ.

### ೧೧. ಶಾಂತಿ

ಚಿಕ್ಕಪುಟ್ಟ ವಿಷಯಗಳಿಂದ ಅಥವಾ ಸಾಮಾನ್ಯವಾದ ಇಲ್ಲವೆ ಅಪರಿಹಾರ್ಯವಾದ ಕಂಟಕಗಳ ಮೂಲಕ ತಲ್ಲಣಗೊಳ್ಳದಿರು.

### ೧೨. ಬ್ರಹ್ಮಚರ್ಯೆ

ಆರೋಗ್ಯ ಅಥವಾ ಸಂತತಿಯ ಹೊರತು ಸಂಭೋಗದಲ್ಲಿ ತೊಡಗಬೇಡ; ಜಡತ್ವ, ಅಶಕ್ತತೆ ಅಥವಾ ನಿನ್ನ ಇಲ್ಲವೆ ಪರರ ಶಾಂತಿ ಹಾಗೂ ಕೀರ್ತಿಗೆ ಕಲಂಕ ಉಂಟಾಗುವಂತೆ ಹಾಗೆಂದಿಗೂ ವರ್ತಿಸಬೇಡ.

### ೧೩. ವಿನಯ

ಜೀಸಸ್ ಮತ್ತು ಸೊಕ್ರೆಟೀಸರನ್ನು ಅನುಸರಿಸು.

ಈ ಎಲ್ಲಾ ನಡತೆಗಳನ್ನು ನನ್ನ ಜೀವನದಲ್ಲಿ ರೂಢಿಸಬೇಕೆಂಬುದು ನನ್ನ ಉದ್ದೇಶವಾಗಿತ್ತು. ಆದರೆ ಎಲ್ಲಾ ನಡತೆಗಳನ್ನು ಒಂದೇ ಸಲ ವೈಗೂಡಿಸಲು ಪ್ರಯತ್ನಿಸುತ್ತ ಬುದ್ಧಿಯನ್ನು ಭ್ರಂಶಗೊಳಿಸುವುದು ಉಚಿತವಲ್ಲೆಂದು ನಾನು ತೀರ್ಮಾನಿಸಿದೆನು. ಒಂದು ಬಾರಿಗೆ ಅವುಗಳಲ್ಲಿ ಒಂದರ ಮೇಲೆ ಕೇಂದ್ರೀಕೃತವಾಗುವುದು; ಅದರ ಗುರುತ್ವ ನನಗೆ ಸಿಕ್ಕಮೇಲೆ ಮತ್ತೊಂದಕ್ಕೆ ಕೈಹಚ್ಚುವುದಾಗಿತ್ತು. ಹೀಗೆ ಹದಿಮೂರನ್ನೂ ಕೈವಶ ಮಾಡಿಕೊಳ್ಳುವ ತನಕ ಮುಂದುವರಿಯುವುದು. ಅಂತೇ ಈ ಮೊದಲು ಕೈಗತವಾದ ನಡತೆಗಳು ಮುಂದಣ ಕೆಲವನ್ನು ಕೈಗತ ಮಾಡಿಕೊಳ್ಳಲು ಸಹಕಾರಿಯಾಗುತ್ತವೆಂಬ ವಿಚಾರದಿಂದ ನಾನು ಅವುಗಳನ್ನು ಮೇಲೆ ಕಾಣಿಸಿದ ಅನುಕ್ರಮಣಿಕೆಯಲ್ಲಿ ಹೊಂದಿಸಿದ್ದಾಗಿತ್ತು. ಮೊದಲನೆಯದಾಗಿ ಮಿತಭೋಗ. ಯಾಕಂದರೆ ಅದು ತಲೆಯನ್ನು ಶಾಂತವಾಗಿ ಮತ್ತು ಸ್ವಚ್ಛವಾಗಿಡಲು ಸಹಕರಿಸುತ್ತದೆ. ಸತತ ಎಚ್ಚರಿಕೆ ವಹಿಸಬೇಕಾದಲ್ಲಿ, ಪೂರ್ವದ ದುರಭ್ಯಾಸಗಳು ಏಕಪ್ರಕಾರವಾಗಿ ಮನಸ್ಸನ್ನು ಸೆಳೆಯುವುದಕ್ಕೆ ವಿರೋಧ ಕಾಯುವುದರಲ್ಲಿ ಮತ್ತು ಶಾಶ್ವತ ಅವಲೋಭನೆಗಳ ಶಕ್ತಿಯನ್ನು ದಮನ ಮಾಡುವಲ್ಲಿ ಮಿತಭೋಗವು ಅತ್ಯಂತ ಅಗತ್ಯವಾದುದಾಗಿದೆ. ಇದನ್ನು ರೂಢಿಸಿಕೊಂಡು ಸಾಧಿಸಿ—ಸ್ಥಿರಪಡಿಸಿಕೊಂಡರೆ ಮೌನವು ಬಹಳ ಸುಲಭವಾಗುವುದು. ಅಲ್ಲದೆ ನಾನು ನಡತೆಯಲ್ಲಿ ಸುಧಾರಿಸಿದಂತೆ ನನ್ನ ಜ್ಞಾನವೂ ಹೆಚ್ಚಾಗಬೇಕೆಂದು ನನ್ನ ಇಚ್ಛೆಯಿತ್ತು. ಕಾರಣ, ಸಂಭಾಷಣೆ

ಯಲ್ಲಿ ನಾಲಗೆಯನ್ನು ಉಪಯೋಗಿಸುವುದಕ್ಕಿಂತ ಕಿವಿಗಳನ್ನು ಉಪಯೋಗಿಸಿದರೆ ಅದು ದೊರೆಯುತ್ತದೆಂದು ಪರಿಗಣಿಸಿಕೊಂಡುದರಿಂದ—ಹರಟೆ ಹೊಡೆಯುವ, ಶ್ಲೇಷ ಹಾಕುವ ಮತ್ತು ಹಾಸ್ಯಮಾಡುವ ನನಗಿದ್ದ ಅಭ್ಯಾಸಗಳನ್ನು ಮುರಿಯಬೇಕೆಂದು ಬಗೆದುಕೊಂಡೆನು. ಇದರಿಂದ ನಾನು ಅಲ್ಪರ ಸಂಘದಲ್ಲಿ ಮಾತ್ರ ಮೇಲ್ಮೆಯನ್ನು ಪಡೆಯುತ್ತಿದ್ದೆ. ಆದುದರಿಂದ ನಾನು ದ್ವಿತೀಯ ಸ್ಥಾನವನ್ನು ಮೌನಕ್ಕೆ ನೀಡಿದ್ದಾಗಿತ್ತು. ಇದು ಮತ್ತು ಮುಂದಿನದಾದ 'ಕ್ರಮ' – ನನ್ನ ಯೋಜನೆಗಳನ್ನು ನಿರೀಕ್ಷಿಸುವುದಕ್ಕೆ ಹಾಗೂ ನನ್ನ ಅಭ್ಯಾಸಗಳನ್ನು ನಡೆಸಲು ನನಗೆ ಹೆಚ್ಚಿನ ಸಮಯವನ್ನು ಒದಗಿಸುತ್ತವೆಂದು ನಾನು ಬಗೆದುಕೊಂಡಿದ್ದೆನು. ದೃಢನಿರ್ಧಾರವು ಒಮ್ಮೆ ಮೈಗೂಡಿಕೊಂಡುದಾದರೆ—ಮುಂದಿನ ಎಲ್ಲಾ ನಡತೆಗಳನ್ನು ರೂಢಿಸಿಕೊಳ್ಳುವ ಪ್ರಯತ್ನದಲ್ಲಿ ನನ್ನನ್ನು ಸ್ಥಿರಗೊಳಿಸುತ್ತದೆಂದು ತಿಳಿದಿದ್ದೆ. ಮಿತವ್ಯಯ ಮತ್ತು ಕಾಯಕ ಇನ್ನೂ ಬಾಕಿ ಉಳಿದಿರುವ ನನ್ನ ಸಾಲದಿಂದ ಬಿಡುಗಡೆ ಪಡಿಸಿ, ಧನ ಮತ್ತು ಸ್ವಾತಂತ್ರ್ಯವನ್ನು ದೊರಕಿಸಿಕೊಟ್ಟು, ಅಂತಶ್ಶುದ್ಧಿ ಮತ್ತು ನ್ಯಾಯ ಇತ್ಯಾದಿಗಳನ್ನು ರೂಢಿಸಿಕೊಳ್ಳಲು ಬಹಳ ಸುಲಭ ಮಾಡಿಕೊಡುತ್ತಿದ್ದವು. ಕಾರಣ, ಪೈಥೆಗೋರಸನ 'ಗೋಲ್ಡನ್ ವರ್ಸಸ್' (Golden Verses)ನ ಉಪದೇಶವನ್ನು ಯೋಗ್ಯವೆಂದು ನೆನಪಿಕೊಂಡು, ನಿತ್ಯ ಪರೀಕ್ಷೆಯು ಅಗತ್ಯವೆಂದು ಬಗೆದು, ಆ ಪರೀಕ್ಷೆಯನ್ನು ನಡೆಸುವುದಕ್ಕಾಗಿ ನಾನು ಕೆಳಗೆ ಕಾಣಿಸಿರುವ ಪದ್ಧತಿಯನ್ನು ರಚಿಸಿದೆನು.

## ಪುಟಗಳ ಮಾದರಿ ಪ್ರತಿ

| ಮಿತಭೋಗ | | | | | | | |
|---|---|---|---|---|---|---|---|
| ಜಡ ಬರುವಂತೆ ಉಣಬೇಡ; ಹದ ಮೀರಿ ಕುಡಿಯಬೇಡ | | | | | | | |
| | ಆದಿತ್ಯ | ಸೋಮ | ಮಂ | ಬುಧ | ಗುರು | ಶುಕ್ರ | ಶನಿ |
| ಮಿತಭೋಗ | | | | | | | |
| ಮೌನ | * | * | | * | | * | |
| ಕ್ರಮ | * * | * | * | | * | * | * |
| ದೃಢನಿರ್ಧಾರ | | | * | | | * | |
| ಮಿತವ್ಯಯ | | * | | | * | | |
| ಕಾಯಕ | | | * | | | | |
| ಅಂತಶ್ಶುದ್ಧಿ | | | | | | | |
| ನ್ಯಾಯ | | | | | | | |
| ಸಂಯಮ | | | | | | | |
| ಸ್ವಚ್ಛತೆ | | | | | | | |
| ಶಾಂತಿ | | | | | | | |
| ಬ್ರಹ್ಮಚರ್ಯ | | | | | | | |
| ವಿನಯ | | | | | | | |

ನಾನೊಂದು ಚಿಕ್ಕ ಪುಸ್ತಕವನ್ನು ತಯಾರಿಸಿದೆನು. ಅದರಲ್ಲಿ ಪ್ರತಿಯೊಂದು ನಡತೆಗೆ ಒಂದು ಪುಟವನ್ನು ಮೀಸಲಿಟ್ಟೆನು. ಪ್ರತಿಯೊಂದು ಪುಟದಲ್ಲೂ ಏಳು ಕಾಲಂಗಳಾಗುವ ಹಾಗೆ ಕೆಂಪು ಶಾಯಿಯ ಗೆರೆ ಹಾಕಿದೆನು. ವಾರದಲ್ಲಿಯ ಪ್ರತಿಯೊಂದು ದಿವಸಕ್ಕೂ ಒಂದು ಕಾಲಂ ಮಾಡಿದ್ದಾಯಿತು. ಪ್ರತಿಯೊಂದು ಕಾಲಂನಲ್ಲಿ ಆ ಆ ದಿವಸವನ್ನು ತೋರಿಸಿದ್ದಾಯಿತು. ಈ ಕಾಲಂಗಳನ್ನು ಹದಿಮೂರು ಕೆಂಪು ಗೆರೆಗಳಿಂದ ವಿಭಾಗಿಸಿದೆನು. ಪ್ರತಿಯೊಂದು ಗೆರೆಯ ಮೊದಲಲ್ಲಿ ಪ್ರತಿಯೊಂದು ನಡತೆಯ ಹೆಸರನ್ನು ನಮೂದಿಸಿದೆನು. ಆ ಗೆರೆಯ ಮೇಲೆ-ಅಂದರೆ ಅದರ ಯೋಗ್ಯ ಕಾಲಂನಲ್ಲಿ ಸಣ್ಣ ಕಪ್ಪು ಚಿಕ್ಕೆಯಿಂದ, ಆ ದಿವಸದಲ್ಲಿ ಅನುಕ್ರಮವಾಗಿ ಯಾವ ನಡತೆಯ ಬಗ್ಗೆ ನಾನು ತಪ್ಪಿ ಬಿದ್ದಿದ್ದೇನೆ ಎಂಬುದನ್ನು-ಪರೀಕ್ಷೆ ಮಾಡಿದಾಗ ನನಗೆ ಕಂಡುಬಂದ ಹಾಗೆ ಗುರುತು ಮಾಡುತ್ತಿದ್ದೆನು.

ಒಂದು ವಾರದ ಕಟ್ಟು-ನಿಟ್ಟಿನ ಲಕ್ಷ್ಯವನ್ನು ಪ್ರತಿಯೊಂದು ನಡತೆಗೂ ಅನುಕ್ರಮವಾಗಿ ಕೊಡುವುದೆಂದು ನಾನು ನಿರ್ಧರಿಸಿದೆನು. ಹೀಗೆ ಮೊದಲನೆಯ ವಾರದಲ್ಲಿ ನಾನು ಅಪಾರವಾದ ಎಚ್ಚರಿಕೆಯನ್ನು ಮಿತಭೋಗದ ವಿರೋಧ ಒದಗುವುದನ್ನೆಲ್ಲ ತಡೆಯುವುದರಲ್ಲಿ ತೊಡಗಿಸಿದ್ದೆನು. ಮಿಕ್ಕ ನಡತೆಗಳನ್ನು ಅವುಗಳ ಸಾಮಾನ್ಯ ಸ್ಥಿತಿಗೆ ಬಿಟ್ಟಿದ್ದೆನು. ಅಂತೇ ಆ ದಿನದ ತಪ್ಪುಗಳನ್ನು ಮಾತ್ರ ಗುರುತಿಸುತ್ತಿದ್ದೆನು. ಹೀಗೆ ನಾನು ಮೊದಲನೆಯ ವಾರದಲ್ಲಿ 'ಮಿತಭೋಗ' ಎಂದು ಗುರುತಿಸಿರುವ ಸಾಲನ್ನು ಚುಕ್ಕೆಗಳಿಲ್ಲದೆ ಸ್ವಚ್ಛವಾಗಿ ಬಿಟ್ಟಿದ್ದರೆ ಆ ನಡತೆಯ ಅಭ್ಯಾಸವು ಅಷ್ಟರ ಮಟ್ಟಿಗೆ ಬಲಗೊಂಡಿತು ಮತ್ತು ಅದರ ವಿರುದ್ಧ ಅಭ್ಯಾಸವು ಅಷ್ಟರ ಮಟ್ಟಿಗೆ ಕಡಿಮೆಯಾಯಿತೆಂದು ನಾನು ಬಗೆದಿದ್ದೆನು. ಅಂತೇ ನಾನು ಮುಂದಿನ ನಡತೆಯನ್ನು ರೂಢಿಸಿಕೊಳ್ಳಲು ನನ್ನ ಲಕ್ಷ್ಯವನ್ನು ಬೆಳೆಸಲು ಧೈರ್ಯಗೊಳ್ಳಬಹುದಾಗಿತ್ತು. ಅದೇ ಪ್ರಕಾರ ಮುಂದಣ ವಾರದಲ್ಲಿ ಎರಡೂ ಸಾಲುಗಳನ್ನು ಚಿಕ್ಕೆಗಳಿಲ್ಲದೆ ಇಡಬಹುದಾಗಿತ್ತು. ಹೀಗೆ ಕೊನೆಯ ತನಕ ಮುಂದುವರಿದರೆ ಹದಿಮೂರು ವಾರಗಳಲ್ಲಿ ನನ್ನಿಂದ ಒಂದು ಗತಿ (course) ಯನ್ನು ಪೂರ್ಣಗೊಳಿಸಲಿಕ್ಕಾಗುತ್ತಿತ್ತು. ಅಂತೇ ನಾಲ್ಕು ಗತಿಗಳನ್ನು ಒಂದು ವರುಷದಲ್ಲಿ ಮುಗಿಸಬಹುದಿತ್ತು. ಆದರೆ ಒಬ್ಬ ತೋಟಗಾರನು ತನ್ನ ತೋಟದಲ್ಲಿನ ಎಲ್ಲಾ ಕಳೆಗಳನ್ನು ಒಮ್ಮೆಲೇ ಕೀಳಲು ಪ್ರಯತ್ನಿಸಿದರೆ ಅದರಿಂದ ಅವನ ನಿಲುಕು ಮತ್ತು ಬಲ ವ್ಯರ್ಥವಾಗುತ್ತದೆಯಷ್ಟೆ. ಆದುದರಿಂದ ಅವನು ಒಂದೊಂದೇ ಸಾಲಿನ ಕಳೆ

ಯನ್ನು ಕೀಳುತ್ತ ಬರುತ್ತಾನೆ. ಹೀಗೆ ಒಂದನ್ನು ಮುಗಿಸಿದ ನಂತರ ಎರಡನೆಯದಕ್ಕೆ ಕೈಹಾಕುತ್ತಾನೆ. ಅದೇ ಪ್ರಕಾರ ನಾನು ಕೂಡ ಪುಟಗಳ ಮೇಲೆ ನನ್ನ ನಡತೆಯಲ್ಲಿ ಸಾಧಿಸಿದ ಪ್ರಗತಿಯನ್ನು ನೋಡುವ ಆನಂದ ದಿಂದ ಪ್ರಚೋದನೆಗೊಳ್ಳಲು ಆಶಿಸಿದ್ದಾಗಿತ್ತು. ಹೀಗೆ ಕೊನೆಯತನಕ ಅನುಕ್ರಮವಾಗಿ ನನ್ನ ಸಾಲುಗಳಲ್ಲಿನ ಚಿಕ್ಕೆಗಳನ್ನು ಕಡಿಮೆ ಮಾಡುತ್ತ ಅನೇಕ ಗತಿಗಳಿಂದ ಸಾಧಿಸುವುದಾಗಿತ್ತು. ಈ ರೀತಿಯಲ್ಲಿ ಹದಿಮೂರು ವಾರಗಳ ಪ್ರತಿದಿನದ ಪರೀಕ್ಷೆಯ ನಂತರ ಸ್ವಚ್ಛವಾದ ಪುಸ್ತಕವನ್ನು ನೋಡಲು ನಾನು ಆನಂದಪಡುವುದಾಗಿತ್ತು

ಈ ನನ್ನ ಚಿಕ್ಕ ಪುಸ್ತಕದಲ್ಲಿ ಅಡಿಸನನ 'ಕೇಟೊ' (Cato) ದಿಂದ ಕೆಳಗಿನ ಸಾಲುಗಳು ಆದರ್ಶವಾಕ್ಯವೆಂದು ಇದ್ದವು:

"ನಾನಿಲ್ಲಿಂತು ನಂಬುವೆನು. ನಮಗಿಂತ ಮೇಲಿನ ಶಕ್ತಿಯೊಂದಿರು ವುದಾದರೆ (ಅಂತೇ, ಅಖಂಡ ಪೃಥ್ವಿಯು ಘಂಟಾಘೋಷವಾಗಿ ಅವಳ ಸಕಲ ಕೃತಿಗಳಿಂದ ಸಾರುವುದೇ ಆದರೆ), ಅವನು ಗುಣದಲ್ಲಿ ಸಂತಸ ಗೊಳ್ಳಲೇಬೇಕು ಮತ್ತು ಅವನು ಸಂತಸಗೊಳ್ಳುವುದು ಖಂಡಿತಕ್ಕೂ ಸಂತಸದಾಯಕವಾಗಿರಲೇಬೇಕು."

ಇನ್ನೊಂದು ಸಿಸಿರೋನಿಂದ—

"O vitæ philosophia dux! O virtutum indagatrix expultrixque vitiorum! Unus dies, bene et ex præceptis tuis actus, peccanti immortalitati est anteponendus."

ಮತ್ತೊಂದು ಸೊಲೊಮನನ ಗಾದೆಮಾತುಗಳಿಂದ—ಜ್ಞಾನ ಅಥವಾ ಗುಣದ ಬಗ್ಗೆ ಹೇಳುವುದೆಂದರೆ:

"ದಿವಸಗಳ ಅವಧಿಯು ಅವಳ ಬಲಗೈಯಲ್ಲಿ ಉಂಟು, ಮತ್ತು ಅವಳ ಎಡದ ಕೈಯಲ್ಲಿ ಐಶ್ವರ್ಯ ಮತ್ತು ಗೌರವವಿವೆ. ಅವಳ ನಡೆ-ನುಡಿಗಳು ಮತ್ತು ದಾರಿಗಳೆಲ್ಲ ಶಾಂತಿಯವುಗಳು." iii. 16, 17.

ಮತ್ತು ಜ್ಞಾನದ ಕಾರಂಜಿಯೆ ದೇವರೆಂದು ಬಗೆದುಕೊಂಡು, ಅದನ್ನು ಪಡೆಯುವುದಕ್ಕಾಗಿ ಅವನ ಕೃಪೆಯನ್ನು ಬೇಡಿಕೊಳ್ಳುವುದು ಅವಶ್ಯವೂ—ಯೋಗ್ಯವೂ ಎಂದು ನಾನು ತಿಳಿದುಕೊಂಡಿದ್ದೆನು. ಈ ಉದ್ದೇಶದಿಂದ ನಾನು ಕೆಳಗಿನ ಪ್ರಾರ್ಥನೆಯನ್ನು ರಚಿಸಿದ್ದೆನು. ಅದನ್ನು ನನ್ನ ನಿತ್ಯದ ಉಪಯೋಗಕ್ಕಾಗಿ ನನ್ನ ಪರೀಕ್ಷೆಯ ಪಟ್ಟಿಯ ಮೊದಲಲ್ಲಿ

ಜೋಡಿಸಿದ್ದೆನು.

"ಓ ಶಕ್ತಿಶಾಲಿಯಾದ ಒಳ್ಳಿತೇ! ದಯಾಘನನಾದ ತಂದೆಯೇ! ಕರುಣಾಳು ಸಹಾಯಕನೇ! ನನ್ನ ನೈಜವಾದ ಹೇತುವನ್ನು ಹುಡುಕುವಂಥ ಆ ಜ್ಞಾನವನ್ನು ನನ್ನಲ್ಲಿ ವೃದ್ಧಿಪಡಿಸು. ಆ ಜ್ಞಾನವು ನಿರ್ದೇಶಿಸುವುದನ್ನು ನೆರವೇರಿಸುವಂತೆ ನನ್ನ ದೃಢನಿರ್ಧಾರವನ್ನು ಬಲಗೊಳಿಸು. ನನಗೆ ನೀಡುವ ನಿನ್ನ ಸತತ ಅನುಗ್ರಹದ ಪ್ರತಿಯಾಗಿ ನನ್ನಿಂದ ಸಾಧ್ಯವಾದ ನನ್ನ ಕೇವಲ ಬಡ ಕರ್ತವ್ಯಗಳನ್ನು ನಿನ್ನ ಮಿಕ್ಕ ಮಕ್ಕಳಿಗಾಗಿ ಸ್ವೀಕರಿಸಿಕೊಳ್ಳಿ."

ನಾನು ಕೆಲವೊಮ್ಮೆ ಥೋಮ್ಸನನ ಪದ್ಯಗಳಿಂದ ಕೂಡಾ ಒಂದು ಚಿಕ್ಕ ಪ್ರಾರ್ಥನೆಯನ್ನು ಬಳಸುತ್ತಿದ್ದೆನು, ಅದೆಂದರೆ:

"ಜೀವನ ಹಾಗೂ ಜ್ಯೋತಿಯ ತಂದೆಯೇ, ನೀನು ಪರಮೋತ್ತಮನು! ದೇವಾ ಉತ್ತಮವಾದುದನ್ನು ನನಗೆ ಕಲಿಸು, ನೀನೆ ನನಗೆ ಕಲಿಸು! ಬದುಕಿಸು ನನ್ನನ್ನು ಮೂರ್ಖತನ, ಹೆಮ್ಮೆ ಮತ್ತು ದುರ್ಗುಣಗಳಿಂದ; ಸಕಲ ಅಲ್ಪ ಕೆಲಸಗಳಿಂದೆನ್ನನು ಉಳಿಸು; ತುಂಬು ನನ್ನಾತ್ಮವನು ಜ್ಞಾನ, ಜಾಗ್ರತ ಶಾಂತಿ, ಮತ್ತು ಶುದ್ಧ ನಡೆ–ನುಡಿಗಳಿಂದ; ಮೇಣ್ ಪವಿತ್ರ, ಘನ, ಮತ್ತು ಎಂದೂ ಅಳಿಯದ ಆನಂದದಿಂದ!"

'ಕ್ರಮ'ದ ನಿಯಮಕ್ಕೆ ಅನುಗುಣವಾಗಿ ನನ್ನ ವ್ಯವಹಾರದ ಪ್ರತಿಯೊಂದು ಭಾಗಕ್ಕೂ ನಿಯಮಿತ ಕಾಲವನ್ನು ಕೊಡಬೇಕಾಗಿ ಬಂದುದರಿಂದ ನನ್ನ ಚಿಕ್ಕ ಹೊತ್ತಗೆಯಲ್ಲಿನ ಒಂದು ಪುಟದಲ್ಲಿ ಸಾಮಾನ್ಯವೊಂದರ ಇಪ್ಪತ್ತನಾಲ್ಕು ಗಂಟೆಗಳ ನನ್ನ ಕೆಲಸ-ಕಾರ್ಯಗಳ ಯೋಜನೆಯು ಕೆಳಗಿನಂತೆ ಇತ್ತು :

| | | |
|---|---|---|
| ಮುಂಜಾನೆ.<br>ಪ್ರಶ್ನೆ: ಯಾವ ಒಳ್ಳೆಯ ಕೆಲಸವನ್ನು ನಾನೀ ದಿನ ಮಾಡಬೇಕು? | 5<br>6<br><br><br><br><br><br><br>7 | ಏಳುವುದು, ಸ್ನಾನ ಮಾಡಿಕೊಂಡಮೇಲೆ ಶಕ್ತಿಶಾಲಿಯಾದ ಪರಮಾತ್ಮನನ್ನ ನೆನೆಯುವುದು! ದಿವಸದ ವ್ಯವಹಾರವನ್ನು ನಿರ್ಧರಿಸುವುದು ಮತ್ತು ದಿನದ ದೃಢ ನಿರ್ಣಯವನ್ನು ಕೈಕೊಂಡು, ಪ್ರಸ್ತುತ ಅಭ್ಯಾಸವನ್ನು ಬಿಸದೆ ಸಾಗಿಸುವುದು ಮತ್ತು ಬೆಳಗಿನ ಫಲಾಹಾರ ಸ್ವೀಕರಿಸುವುದು. |

| | | |
|---|---|---|
| | 8<br>9<br>10<br>11 | ಉದ್ಯೋಗ |
| ಮಧ್ಯಾಹ್ನ. | 12<br>1 | ಓದು ಅಥವಾ ನನ್ನ ಲೆಕ್ಕಗಳ ಮೇಲೆ ಕಣ್ಣು ಹಾಯಿಸುವುದು, ಮತ್ತು ಉಣ್ಣುವುದು. |
| | 2<br>3<br>4<br>5 | ಉದ್ಯೋಗ |
| ಸಾಯಂಕಾಲ<br>ಪ್ರಶ್ನೆ : ಯಾವ ಒಳ್ಳೆಯ ಕೆಲಸವನ್ನು ನಾನಿಂದು ಮಾಡಿದ್ದೇನೆ? | 6<br>7<br>8<br>9 | ಉಪಕರಣಗಳನ್ನೆಲ್ಲ ಅವುಗಳ ಸ್ಥಳದಲ್ಲಿಡುವುದು. ರಾತ್ರಿಯೂಟ ಗಾಯನ ಅಥವಾ ಮನೋರಂಜನೆ ಇಲ್ಲವೆ ಸಂಭಾಷಣೆ. ದಿನದ ಪರೀಕ್ಷೆ. |
| ರಾತ್ರಿ. | 10<br>11<br>12<br>1<br>2<br>3<br>4 | ನಿದ್ದೆ. |

ಸ್ವಪರೀಕ್ಷೆಗಾಗಿ ನಾನು ಈ ಯೋಜನೆಯನ್ನು ಪೂರ್ಣಗೊಳಿಸಲು ತೊಡಗಿದ್ದಾಗಿತ್ತು. ಅಂತೇ ಸಾಂದರ್ಭಿಕ ಅಡೆ-ತಡೆಗಳೊಡನೆ ಇದನ್ನು ಕೆಲ ಕಾಲದ ತನಕ ಮುಂದುವರಿಸಿದೆನು. ನಾನು ಎಣಿಸಿದುದಕ್ಕಿಂತ ಹೇರಳವಾದ ತಪ್ಪುಗಳನ್ನು ಕಂಡು ನನಗೆ ಅತ್ಯಾಶ್ಚರ್ಯವಾಯಿತು. ಆದರೆ ಅವುಗಳು ಕ್ಷಯವಾಗುತ್ತಿರುವುದನ್ನು ನೋಡಲು ನನಗೆ ತೃಪ್ತಿಯೂ ದೊರಕಿತು. ನನ್ನ ಚಿಕ್ಕ ಪುಸ್ತಕವನ್ನು ಆಗಾಗ ಸರಿಪಡಿಸುವ ತೊಂದರೆಯನ್ನು ತಪ್ಪಿಸುವುದಕ್ಕಾಗಿ ನನ್ನ ಪಟ್ಟಿಗಳನ್ನು ಒಂದು ದಂತದ ಎಲೆಗಳ

ಜ್ಞಾಪಕಪತ್ರಗಳ (Memorandum) ಪುಸ್ತಕಕ್ಕೆ ಸ್ಥಾನಾಂತರಿಸಿದೆನು. ಯಾಕಂದರೆ ಆ ಚಿಕ್ಕ ಪುಸ್ತಕದ ಕಾಗದದ ಮೇಲೆ ಹಳೆಯ ತಪ್ಪುಗಳಿದ್ದಲ್ಲಿ ಹೊಸ ಗತಿಯ ಕಾಲಕ್ಕೆ ಹೊಸ ತಪ್ಪುಗಳಿಗೆ ಗುರುತು ಮಾಡಲು ಗೀಚಿ-ಗೀಚಿ ತೂತುಗಳಿಂದ ತುಂಬಿ ಹೋಗಿತ್ತು. ಇತ್ತ ಈ ಆನೆಯ ದಂತದ ಪುಸ್ತಕದ ಹಾಳೆಯ ಮೇಲೆ ಕೆಂಪು ಶಾಯಿಯಿಂದ ಗೆರೆಗಳನ್ನು ಹಾಕಿದ್ದಾಯಿತು. ಇದು ಸಾಕಷ್ಟು ಪಳಿಗೆ ಬರುವ ಗುರುತಾಯಿತು. ಅಂತೇ ಆ ಗೆರೆಗಳಲ್ಲಿ ಕಪ್ಪು-ಸೀಸದ ಪೆನ್ಸಿಲಿನಿಂದ ನನ್ನ ತಪ್ಪುಗಳ ಗುರುತು ಮಾಡಿದೆನು. ಈ ಗುರುತುಗಳನ್ನು ಬಹಳ ಸುಲಭದಿಂದ ಒಂದು ಒದ್ದೆ ಹಾವಸೆಯಿಂದ ಅಳಿಸಲಿಕ್ಕೆ ಬರುತ್ತಿತ್ತು. ಆ ತರುವಾಯ ಕೇವಲ ಒಂದು ಗತಿ (Course) ಯನ್ನು ಮಾತ್ರ ಒಂದು ವರುಷದಲ್ಲಿ ನಡೆಸಿದೆನು. ಆಮೇಲೆ ಮಾತ್ರ ಅನೇಕ ವರುಷಗಳಿಗೆ ಒಂದು ಗತಿಯನ್ನು ತೀರಿಸಿದ್ದೆನು. ಹೀಗೆ ಕಟ್ಟಕಡೆಗೆ ಅವುಗಳನ್ನು ಸಂಪೂರ್ಣ ಮುಗಿಸುವ ತನಕ ನಡೆಸಿದ್ದಾಯಿತು. ಯಾಕಂದರೆ ದೂರ ದೇಶದಲ್ಲಿ ವ್ಯವಹಾರ ಹಾಗೂ ಜಲಪ್ರಯಾಣದಲ್ಲಿ ತೊಡಗುತ್ತಿದ್ದೆನು ಮತ್ತು ಅನಂತ ವಿಷಯಗಳು ನಡುವೆ ಹಣಿಕೆ ಹಾಕಿ ತಡೆಯುತ್ತಿದ್ದವು. ಆದರೆ ಯಾವಾಗಲೂ ನಾನು ಆ ಚಿಕ್ಕ ಪುಸ್ತಕವನ್ನು ನನ್ನ ಸಂಗಡ ಇಟ್ಟುಕೊಳ್ಳುತ್ತಿದ್ದೆನು.

'ಕ್ರಮ'ದ ನನ್ನ ಯೋಜನೆಯು ನನಗೆ ಸಾಕಷ್ಟು ತೊಂದರೆಯನ್ನು ಕೊಟ್ಟಿತು. ಅಂತೇ ಕಾಲದ ಅವಕಾಶವು ಯೋಗ್ಯವಾಗಿ ದೊರೆಯುವ ವ್ಯವಹಾರವುಳ್ಳಂಥವರಿಗೆ, ಉದಾಹರಣೆಗಾಗಿ ಕೆಲಸಗಾರರಾದ ಮುದ್ರಕರಿಗೆ ಈ ಕ್ರಮವು ಕಾರ್ಯಗತಗೊಳಿಸಲಿಕ್ಕೆ ಸಾಧ್ಯವಿದ್ದರೂ ಧನಿ (Master)ಗೆ ಇದನ್ನು ಯಥಾರ್ಥವಾಗಿ ಪಾಲಿಸಲಿಕ್ಕೆ ಸಾಧ್ಯವೇ ಇಲ್ಲ. ಯಾಕಂದರೆ ಅವನು ಜಗತ್ತಿನೊಡನೆ ಕೂಡಿಕೊಳ್ಳಬೇಕಾಗುತ್ತದೆ ಮತ್ತು ವ್ಯವಹಾರಸ್ಥರಾದ ಜನರನ್ನು ಅವನು ಸಮಯಕ್ಕೆ ಸರಿಯಾಗಿ ಭೇಟಿ ಮಾಡಿಕೊಳ್ಳಬೇಕಾಗುವುದು. ಕಾಗದ, ವಸ್ತು-ಉಪಕರಣ ಮೊದಲಾದುವುಗಳ ಸ್ಥಳದ ವಿಷಯದಲ್ಲಿ ಕೂಡ ಕ್ರಮವನ್ನು ಅನುಸರಿಸುವುದು ಬಹಳ ಪ್ರಯಾಸದ ಕೆಲಸವೆಂದು ನನಗೆ ಕಂಡು ಬಂದಿತು. ನಾನು ಬಹು ಬೇಗನೆ ಅದನ್ನು ರೂಢಿಸಿಕೊಳ್ಳಲಿಲ್ಲ. ಅಲ್ಲದೆ ಅತ್ಯಧಿಕವಾದ ಉತ್ತಮ ಜ್ಞಾಪಕ ಶಕ್ತಿಯಿದ್ದ ಮೂಲಕ ಕ್ರಮಹೀನತೆಯಿಂದೊದಗುವ ತೊಂದರಗಳಿಂದ ನಾನು ಅಷ್ಟೊಂದು ಬಳಲಬೇಕಾಗಿರಲಿಲ್ಲ. ಹೀಗೆ ಈ ನಿಯಮವು ಬಹಳ ತಾಪದಾಯಕ ಲಕ್ಷ್ಯವನ್ನು ಪೂರೈಸುನಂತೆ ಮಾಡಿತು. ಇದರ ತಪ್ಪುಗಳು

ನನಗೆ ಅಪಾರವಾಗಿ ಪೀಡಿಸಿದವು. ಅವುಗಳನ್ನು ಸರಿಪಡಿಸುವುದರಲ್ಲಿ ನನ್ನ ಪ್ರಗತಿ ಬಹಳ ಅಲ್ಪವಾಗಿತ್ತು. ಅಂತೇ ಮತ್ತೆ ಮತ್ತೆ ಅದೇ ತಪ್ಪನ್ನು ಪುನರಾವೃತ್ತಿಸುತ್ತಿದ್ದೆನು. ಹೀಗಾಗಿ ಕೊನೆಗೆ ನಾನು ಈ ಪ್ರಯತ್ನವನ್ನೆ ಬಿಟ್ಟುಬಿಡಲು ಸಿದ್ಧನಾದೆನೆಂಬೇ ಹೇಳಬಹುದು. ಈ ವಿಷಯದಲ್ಲಿ ದೋಷ ಯುಕ್ತ ಸ್ವಭಾವವನ್ನು ಇಟ್ಟುಕೊಂಡ ಕಮ್ಮಾರನ ಕೊಡಲಿಯನ್ನು ಕ್ರಯಕ್ಕೆ ತೆಗೆದುಕೊಂಡ ನನ್ನ ನೆರ ಮನೆಯ ಮನುಷ್ಯನಂತೆ ತೃಪ್ತಿ ಪಡು ವುದೆಂದೂ ಆಗಿತ್ತು. ಅಂದರೆ—ಈ ಮನುಷ್ಯನು ಕಮ್ಮಾರನಿಂದ ಕೊಡಲಿ ಯನ್ನು ಕೊಳ್ಳುವಾಗ ಅದರ ಇಡೀ ಮೈಯೆಲ್ಲ ಅದರ ಬಾಯಿಯಷ್ಟು ಪ್ರಕಾಶಿಸುತ್ತಿರಬೇಕೆಂದು ಅಪೇಕ್ಷಿಸಿದನಂತೆ. ಇತ್ತ ಅವನು ಸಾಣೆಯ ಚಕ್ರವನ್ನು ತಿರುಗಿಸುವುದಾದರೆ ಕಮ್ಮಾರನು ಅದನ್ನು ಅವನಿಗೆ ಪ್ರಕಾಶ ಮಾನವಾಗಿ ಮಾಡಿಕೊಡಲು ಒಪ್ಪಿದನು. ಅವನು ಚಕ್ರ ತಿರುಗಿಸಿದನು. ಇತ್ತ ಕಮ್ಮಾರನು ಕೊಡಲಿಯ ದಪ್ಪವಾದ ಮುಖವನ್ನು ಆ ತಿರುಗಣೆಯ ಕಲ್ಲಿನ ಮೇಲೆ ಬಲವಾಗಿ ಒತ್ತಿ ಹಿಡಿದನು. ಇದರಿಂದ ಅದನ್ನು ತಿರುಗಿಸು ವುದು ಬಹಳ ತ್ರಾಸದಾಯಕವಾಯಿತು. ಈ ಕಡೆ ಮನುಷ್ಯನು ಕ್ಷಣ ಕ್ಕೊಮ್ಮೆ ಚಕ್ರವನ್ನು ಬಿಟ್ಟು ಕೆಲಸ ಹೇಗೆ ನಡೆದಿದೆಯೆಂದು ನೋಡಿ ಹೋಗು ತ್ತಿದ್ದನು. ಕಟ್ಟಕಡೆಗೆ ಸಾಣೆ ಹಿಡಿಸದಯೇ ಆ ಕೊಡಲಿಯನ್ನು ಹಾಗೆಯೇ ಆ ಮನುಷ್ಯನು ಕೊಂಡೊಯ್ಯುವನು. "ಬೇಡ; ಸಾಣೆಯನ್ನು ತಿರು ಗಿಸು, ತಿರುಗಿಸು—ಹೀಗೇ ನಾವದನ್ನು ಪ್ರಕಾಶಮಾನವಾಗಿ ಮಾಡೋಣ ವಂತೆ. ಈಗ ಅದಕ್ಕೆ ಒಂದಿಷ್ಟು ತಲೆಯಾಗಿದೆಯಷ್ಟೆ" ಎಂದು ಕಮ್ಮಾರ ಹೇಳಿದನು. "ಹೌದು, ಆದರೆ ತಲೆಯಿದ್ದ ಕೊಡಲಿಯೇ ಉತ್ತಮವೆಂದು ನನಗನಿಸುತ್ತದೆ" ಎಂದು ಆ ಮನುಷ್ಯ ಹೇಳಿದನು. ಈ ಬಗೆಯ ಪರಿಸ್ಥಿತಿ ಅನೇಕರದ್ದಾಗಿರಬೇಕೆಂದು ನನ್ನ ನಂಬಿಕೆ. ಅನೇಕರು ನಾನು ಪ್ರಯೋ ಗಿಸಿದಂಥ ಸಾಧನೆಗಳನ್ನು ಬಯಸಿಕೊಂಡು ಅವುಗಳಿಂದ ಒಳ್ಳೆಯದನ್ನು ಪಡೆಯಲು ಪಡಬೇಕಾದ ಕಷ್ಟಗಳನ್ನು ಕಂಡುಕೊಂಡು ಮತ್ತು ಮಿಕ್ಕ ದೃಷ್ಟಿಯಲ್ಲಿ ಸುಗುಣ-ದುರ್ಗುಣಗಳ ಕೆಟ್ಟ ಚಾಳಿಗಳನ್ನು ಮುರಿಯುವ ತೊಂದರೆಯನ್ನು ಮನಗಂಡು—ಆ ಹೋರಾಟವನ್ನೆ ಬಿಟ್ಟುಕೊಟ್ಟು, "ಕಲೆಯ ಕೊಡಲಿಯೆ ಉತ್ತಮು" ಎಂದು ಕೊನೆಯ ನಿರ್ಧಾರಕ್ಕೆ ಬಂದಿರ ಬೇಕಷ್ಟೆ. ಯಾಕಂದರೆ—ವಿವೇಕವೆಂದು ನಟಿಸುವಂಥ ಯಾವುಗೋ ಒಂದು ವಸ್ತು ಆಗಾಗ ನನಗೆ ನಾನು ಪ್ರಯೋಗಿಸದ ಅಂಥ ಮಿತಿಮೀರಿದ ಸುಧಾರಣೆಯು ನೀತಿಯ ಡಂಭಾಚಾರವಾಗಬಹುದೆಂದು ಸೂಚಿಸುತ್ತಿರು

ತ್ತದೆ ಇದು ಒಂದುವೇಳೆ ಹೊರಗೆ ತಿಳಿಯುಗೊಟ್ಟರೆ ನನ್ನನ್ನು ನಗೆಗೀಡು ಮಾಡುತ್ತದೆ. ಇತ್ತ ಪರಿಪೂರ್ಣವಾದ ವ್ಯಕ್ತಿಯು ತಿರಸ್ಕರಣೀಯವಾದ ಮತ್ತು ವೈರದಾಯಕ ತೊಂದರೆಗಳನ್ನು ಎದುರಿಸಬೇಕಾಗಬಹುದು. ಧರ್ಮಿಷ್ಟ ಮನುಷ್ಯನು ತನ್ನಲ್ಲಿ ಕೆಲವೊಂದು ದೋಷಗಳಿಗೆ ಸ್ಥಾನ ಕೊಡಬೇಕಾಗುತ್ತದೆ—ಯಾಕಂದರೆ ಅವನು ತನ್ನ ಮಿತ್ರರನ್ನು ಆಶ್ರಯಿಸಬೇಕಾಗುವುದಷ್ಟೆ.

ಸತ್ಯ ಸ್ಥಿತಿ ಹೇಳಬೇಕಾದರೆ—'ಕ್ರಮ'ದ ವಿಷಯದಲ್ಲಿ ನಾನು ಮೊಂಡನಾಗಿಯೇ ಉಳಿದೆನೆಂದು ಹೇಳಬೇಕು. ಈಗ ನಾನು ಮುದುಕನಾಗಿದ್ದೇನೆ. ನನ್ನ ಜ್ಞಾಪಕಶಕ್ತಿ ಬಹಳ ಕೆಟ್ಟಿದೆ. ಕ್ರಮದ ಕೊರತೆ ನನಗೆ ಸಾಕಷ್ಟು ತಿಳಿದುಬರುತ್ತವೆ. ಆದರೆ ಒಟ್ಟಿನಲ್ಲಿ, ನಾನು ಅಷ್ಟೊಂದು ಮಹತ್ವಾಕಾಂಕ್ಷೆಯಿಂದ ಸಾಧಿಸಲು ಹೋದುದರಲ್ಲಿ ನನಗೆ ಪೂರ್ಣತೆ ದೊರೆಯದಿದ್ದರೂ ಕೂಡ—ಆ ಪ್ರಯತ್ನದಲ್ಲಿ ತೊಡಗಿರುವುದರಿಂದ—ನಾನು ಹಾಗೆ ತೊಡಗದಿದ್ದಲ್ಲಿ ಇರುವುದಕ್ಕಿಂತ ಉತ್ತಮನೂ ಹೆಚ್ಚು ಸುಖಿಯೂ ಆಗಿದ್ದೇನೆ. ಪರಿಶುದ್ಧ ಬರವಣಿಗೆಯತ್ತ ಗುರಿಯಿಟ್ಟು, ಮುದ್ರಿತ ಪ್ರತಿಗಳನ್ನು ಅನುಕರಣೆ ಮಾಡುತ್ತ ಹೋಗಿ, ಅವರಿಗೆ ಆ ಪ್ರತಿ ಅವರು ಬಯಸಿದಷ್ಟು ಪರಿಪೂರ್ಣತೆ ಸಾಧಿಸದಿದ್ದರೂ ಅವರ ಅಕ್ಷರಗಳು ಆ ಪ್ರಯತ್ನದಿಂದ ಸುಧಾರಣೆ ಹೊಂದುತ್ತವೆ ಮತ್ತು ಅವರ ಹಸ್ತಾಕ್ಷರಗಳು ಅನಂತರ ಕೂಡ ತೃಪ್ತಿಕರವಾಗಿಯೂ ಶುದ್ಧವಾಗಿಯೂ ಇರುವಂತೆ ನನ್ನ ಪರಿಸ್ಥಿತಿಯಾಗಿತ್ತೆಂದು ಹೇಳಬಹುದು.

ದೇವರ ದಯೆಯಿಂದ ಈ ಅಲ್ಪ ಉಪಾಯದ ಮೂಲಕ ನನ್ನ ಮುಂದಿನ ಪೀಳಿಗೆಯವರ ಹಿರಿಯನಾದ ನಾನು ಈ ೭೯ ವರುಷ ಪ್ರಾಯದವರೆಗೆ ಅಂದರೆ—ಈ ಬರೆಹ ನಡೆದಲ್ಲಿಯ ತನಕ ಸತತ ಸುಖವನ್ನು ಅನುಭವಿಸಿದೆನೆಂದು ಆ ಪೀಳಿಗೆಯವರು ಅರಿತುಕೊಂಡುದಾದರೆ ಒಳ್ಳೆಯ ವಿಷಯವೆಂದೇ ಹೇಳಬಹುದಷ್ಟೆ. ಆದರೆ ಮಿಕ್ಕ ಆಯುಷ್ಯದಲ್ಲಿ ಯಾವ ವಿರೋಧಾಭಾಸ ಒದಗುತ್ತದೆಂಬುದು ಮಾತ್ರ ಆ ದಯಾಘನನ ಕೈಯ ಮಾತು. ಒಂದುವೇಳೆ ಅಂಥ ಅವಘಡಗಳು ಒದಗಿದರೂ ಕೂಡ, ಗತ ಕಾಲದಲ್ಲಿ ಅನುಭವಿಸಿದ ಪರಮಾನಂದದ ಸವಿನೆನಪು ಮಾತ್ರ ಹೆಚ್ಚಿನ ಧೈರ್ಯದಿಂದ ಅವುಗಳನ್ನು ಸಹಿಸಿಕೊಳ್ಳಲು ಖಂಡಿತವಾಗಿಯೂ ಅವನಿಗೆ ಸಹಕರಿಸುತ್ತದೆ. ಅವನ ದೀರ್ಘ ಆರೋಗ್ಯ ಮತ್ತು ಇನ್ನೂ ಉಳಿದಿರುವ ಅವನ ಉತ್ತಮ ಪ್ರಕೃತಿಯನ್ನು ಅವನು ಮಿತಭೋಗದಿಂದ ದೊರಕಿಸಿದ್ದಾ

ಗಿರುತ್ತದೆ. ಕಾಯಕ ಹಾಗೂ ಮಿತವ್ಯಯದಿಂದ ಅವನ ಸ್ಥಿತಿಗತಿ ಬೇಗನೆ ಅನುಕೂಲಗೊಂಡದ್ದರಿಂದ ಮತ್ತು ಧನ ಕೂಡಿಸಿಕೊಂಡದ್ದರಿಂದ ಹಾಗೂ ಈ ಎಲ್ಲಾ ಜ್ಞಾನದಿಂದ ಅವನಿಗೆ ಉಪಯುಕ್ತ ನಾಗರಿಕನಾಗಲು ಪ್ರೋತ್ಸಾಹ ದೊರೆಯಿತು. ಅಲ್ಲದೆ ವಿದ್ವಾಂಸರಲ್ಲಿ ಅವನಿಗೆ ಒಂದು ಮಟ್ಟದ ಕೀರ್ತಿಯನ್ನು ದೊರಕಿಸಿಕೊಟ್ಟಿತು. ಅಂತಶ್ಶುದ್ಧಿ ಮತ್ತು ನ್ಯಾಯಬುದ್ಧಿಯಿಂದ ಅವನಿಗೆ ಅವನ ದೇಶದ ನಂಬಿಕೆ ಹಾಗೂ ದಯಪಾಲಿಸಿದ ಗೌರವಯುಕ್ತ ಉದ್ಯೋಗಗಳು—ದೊರೆತ ಕಾಣಿಕೆಗಳಾಗಿದ್ದವು. ಅಂತೇ ಈ ಎಲ್ಲಾ ನಡೆನುಡಿಗಳ ಸಂಯುಕ್ತ ವರ್ಚಸ್ಸಿನಿಂದ, ಅವುಗಳನ್ನು ಆತನು ಅಪೂರ್ಣ ರೀತಿಯಲ್ಲಿ ಸಾಧಿಸಿಕೊಂಡಿದ್ದರೂ ಕೂಡ, ಮನೋಭಾವನೆಯ ಸಮತೆ ಹಾಗೂ ಸಂಭಾಷಣೆಯ ಸಜೀವತೆ—ರೂಪುಗೊಂಡಿರುತ್ತದೆ. ಇದರಿಂದ ಅವನ ಗೆಳೆತನವನ್ನು ಈಗಲೂ ಕಟ್ಟಿಕೊಳ್ಳಬೇಕೆಂದು ಅನಿಸುವುದು. ಅದೇ ಪ್ರಕಾರ, ಅವನ ಕಿರಿಯ ಗೆಳೆಯರಿಗೂ ಕೂಡಾ ಅದು ಮನಸ್ಸಿಗೆ ಹಿಡಿಯುವಂತಹದಾಗಿದೆ. ಆದುದರಿಂದ, ನನ್ನ ನಂತರದ ಪೀಳಿಗೆಯ ಕೆಲವರು ಈ ಉದಾಹರಣೆಯನ್ನು ಅನುಸರಿಸಿಕೊಂಡು ಆದರ ಲಾಭವನ್ನು ಪಡೆದುಕೊಂಡಾರೆಂದು ನಾನು ಆಶಿಸಿದ್ದೇನೆ.

ನನ್ನ ಯೋಜನೆಯಲ್ಲಿ ಪರಿಪೂರ್ಣವಾದ ಧರ್ಮ ಇಲ್ಲದಿಲ್ಲವೆಂಬುದನ್ನು ಕಾಣಬಹುದಾಗಿದೆ. ಆದರೆ ಯಾವುದಾದರೂ ನಿರ್ದಿಷ್ಟವಾದ ಮತದ ತತ್ವಗಳ ಗುರುತುಗಳು ಮಾತ್ರ ಇಲ್ಲಿ ಕಾಣಲಿಕ್ಕಿಲ್ಲ. ಉದ್ದೇಶಪೂರ್ವಕವಾಗಿಯೇ ನಾನು ಅವುಗಳನ್ನು ತಪ್ಪಿಸಿರುತ್ತೇನೆ. ಯಾಕಂದರೆ—ನನ್ನ ಪದ್ಧತಿಯ ಉತ್ಕೃಷ್ಟತೆಯನ್ನು ಮತ್ತು ಉಪಯುಕ್ತತೆಯನ್ನು ಸಂಪೂರ್ಣವಾಗಿ ಪಡೆದುಕೊಂಡರೆ ಅದು ಎಲ್ಲಾ ಮತಗಳ ಜನರಿಗೂ ಸಹಾಯಕಾರಿಯಾಗಬಹುದಾಗಿದೆ. ಅಂತೇ ಒಂದಲ್ಲ ಒಂದು ಕಾಲಕ್ಕೆ ಅದನ್ನು ಪ್ರಕಟಪಡಿಸಬೇಕೆಂಬ ಉದ್ದೇಶದಿಂದ ಆದರಲ್ಲಿ ಯಾವ ಮತದವರೂ ಆದರ ವಿರುದ್ಧವಾಗಿ ಪೂರ್ವಾಗ್ರಹ ದೋಷದಿಂದ ಪೀಡಿತರಾಗುವ ವಿಷಯವನ್ನು ನಾನು ಸೇರಿಸಿಲ್ಲ. ಪ್ರತಿಯೊಂದು ಗುಣದ ಬಗ್ಗೆ ಚಿಕ್ಕ ಟೀಕೆಯನ್ನು ಬರಯಬೇಕೆಂದು ನಾನು ಎಣಿಕೆ ಹಾಕಿದ್ದೆನು. ಅದರಲ್ಲಿ ಅವುಗಳನ್ನು ಮೈಗೂಡಿಸಿಕೊಳ್ಳುವುದರಿಂದ ಆಗುವ ಅನುಕೂಲತೆಗಳನ್ನು ಮತ್ತು ಅವುಗಳ ವಿರುದ್ಧವಾದ ದುರ್ಗುಣಗಳ ಬೆನ್ನಿಗಿರುವ ಕಿಡಿಗೇಡಿತನವನ್ನು ತೋರಿಸುವುದಾಗಿತ್ತು. ಅಂತೇ ಆ ನನ್ನ ಪುಸ್ತಕವನ್ನು ನಾನು

'ಸದ್ಗುಣದ ಕಲೆ' (The Art of Virtue)* ಎಂದು ಕರೆಯಬಹುದಾಗಿತ್ತು. ಯಾಕೆಂದರೆ ಅದು ಸದ್ಗುಣಗಳನ್ನು ಸಾಧಿಸುವ ಮಾರ್ಗವನ್ನು ಮತ್ತು ಕ್ರಮವನ್ನು ತೋರಿಸಿಕೊಡುವಂತಹದ್ದಾಗಿರುತ್ತಿತ್ತು. ಇದರಿಂದಾಗಿ ಕೇವಲ ಒಳ್ಳೆಯ ನಡತೆಯನ್ನು ಬೋಧಿಸುವ ಮತ್ತು ಅದರ ಮಾರ್ಗವನ್ನು ತಿಳಿಸದ ಹಾಗೂ ತೋರಿಸಿಕೊಡದಂಥ ಕೃತಿಗಿಂತ ಅದು ವಿಶಿಷ್ಟವಾದ ರೀತಿಯಲ್ಲಿ ವಿಂಗಡಿಸಲ್ಪಡುತ್ತಿತ್ತು. ಆದರೆ ಕೇವಲ ದೇವದೂತನ ಮಾತಿನ ಉದಾರತೆಯು ಮನುಷ್ಯನಂತೆ ಆಗುತ್ತಿತ್ತು. ಅಂದರೆ ಇವನು ಬತ್ತಲೆಯಿದ್ದವರಿಗೆ ಮತ್ತು ಹಸಿದವರಿಗೆ—ಅವರು ಹೇಗೆ ಅಥವಾ ಎಲ್ಲಿ ಅರಿವೆ–ಅಂಚಡಿಗಳನ್ನು ಮತ್ತು ಭೋಜನ-ಸಾಮುಗ್ರಿಗಳನ್ನು ದೊರಕಿಸಬೇಕೆಂಬುದನ್ನು ತೋರಿಸಿಕೊಡದೆ ಉಂಡು-ಉಟ್ಟುಕೊಂಡಿರಲು ಅವರಿಗೆ ಬೋಧನೆ ಮಾಡಿದ್ದನು.—ಜೇಮ್ಸ್ ii. 15, 16.

ಆದರೆ ಈ ಟೀಕೆಯನ್ನು ಬರೆಯುವ ಮತ್ತು ಪ್ರಕಟಿಸುವಂಥ ನನ್ನ ಉದ್ದೇಶವು ಎಂದೂ ಫಲಪ್ರದವಾಗದೆ ಹೋಯಿತು. ಹಾಗೆಂದು ಕಾಲಕಾಲಕ್ಕೆ ಅದರಲ್ಲಿ ಉಪಯೋಗ ಮಾಡಿಕೊಳ್ಳುವುದಕ್ಕಾಗಿ ಭಾವನೆಗಳ, ವಿಚಾರಗಳ ಬಗ್ಗೆ ಚಿಕ್ಕ-ಪುಟ್ಟ ಟಿಪ್ಪಣಿಗಳನ್ನು ಬರೆಯುತ್ತಲೇ ಬಂದಿದ್ದೆನು. ಅವುಗಳಲ್ಲಿ ಕೆಲವು ಇನ್ನೂ ನನ್ನಲ್ಲಿವೆ. ಆದರ ನನ್ನ ಜೀವನದ ಮೊದಲ ಭಾಗದಲ್ಲಿ ಸ್ವಂತ ವ್ಯವಹಾರದತ್ತ ಹೆಚ್ಚಿನ ಲಕ್ಷ್ಯವನ್ನು ಹಾಕಬೇಕಾದುದರಿಂದ ಮತ್ತು ಸಾರ್ವಜನಿಕ ವ್ಯವಹಾರದಿಂದಾಗಿ ಅದನ್ನು ನಾನು ಮುಂದು ಹಾಕುವಂತಾಯಿತು. ಅದು ಬಹು ದೊಡ್ಡ ಹಾಗೂ ಸರ್ವತೋಮುಖವಾದ ಯೋಜನೆಯಾಗಿ ನನ್ನ ಮನಸ್ಸಿನಲ್ಲಿ ನೆಲೆಸಿದ್ದರಿಂದ ಅದನ್ನು ಕಾರ್ಯಗತಗೊಳಿಸಲು ಒಬ್ಬ ಅಖಂಡ ವ್ಯಕ್ತಿಯೇ ಬೇಕಾಗಿತ್ತು. ಆದರ ಅಗೋಚರವಾದ ಉದ್ಯೋಗಗಳ ಸರಪಳಿಯೇ ನಾನು ಅದರತ್ತ ಲಕ್ಷ್ಯ ಪೂರೈಸದಂತೆ ಮಾಡಿತು. ಹೀಗಾಗಿ ಅದು ಇಲ್ಲಿಯ ತನಕ ಅಪೂರ್ಣವಾಗಿಯೇ ಉಳಿದುಕೊಂಡಿತು.

ಈ ಲೇಖದಲ್ಲಿ ನನ್ನ ಉದ್ದೇಶವು, ಮಾನವನ ಸ್ವಭಾವವನ್ನು ಮಾತ್ರ ಪರಿಗಣಿಸಿದರೆ- ದುರ್ನಡತೆಗಳು ನಿಷೇಧಿಸಲ್ಪಟ್ಟವೆಯೆಂದು ಮಾತ್ರ ಕಂಟಕಪ್ರಾಯವಾಗಿಲ್ಲ, ಆದರೆ ಕಂಟಕಪ್ರಾಯವಾಗಿವೆ ಎಂದು ಅವುಗಳನ್ನು

---

*ಸದ್ಗುಣದಷ್ಟು ಮನುಷ್ಯನ ಸಂಪತ್ತನ್ನು ನಿರ್ಮಿಸುವ ಸಾಧನವು ಬೇರೆ ಯಾವುದೂ ಇಲ್ಲ.—[ವಾರ್ಜನಿನ ಟಿಪ್ಪಣಿ.]

ನಿಷೇಧಿಸಲಾಗಿದೆ ಎಂಬ ತತ್ವವನ್ನು ವಿವರಿಸುವುದು ಮತ್ತು ಒತ್ತಾಯ ಪಡಿಸುವುದು ಆಗಿರುತ್ತದೆ. ಆದುದರಿಂದ ಈ ಜಗತ್ತಿನಲ್ಲಿ ಸುಖಿಯಾಗಿರುವ ಪ್ರತಿಯೊಬ್ಬನ ಉದ್ದೇಶವೂ ಕೂಡ ಗುಣವಂತನಾಗಿರುವುದೇ ಆಗಿರುತ್ತದೆ. ಅಂತೇ ಈ ಪರಿಸ್ಥಿತಿಯಿಂದ (ಈ ಜಗತ್ತಿನಲ್ಲಿ ಯಾವಾಗಲೂ ಸಾಕಷ್ಟು ಶ್ರೀಮಂತ ವ್ಯಾಪಾರಿಗಳು, ಬಿರುದಾಂಕಿತ ಶ್ರೀಮಂತರು, ಪದವಿಯುಳ್ಳ ಅಧ್ಯರು ಮತ್ತು ರಾಜಕುಮಾರರು ಇದ್ದು; ಅವರ ಕಾರ್ಯಕಲಾಪಗಳನ್ನು ವ್ಯವಸ್ಥೆ ಪಡಿಸಲು ಪ್ರಾಮಾಣಿಕ ಸಹಾಯಕರ ಅಗತ್ಯವಿರುವುದರಿಂದ ಮತ್ತು ಅಂಥವರು ತೀರ ವಿರಳವಾಗಿರುವುದರಿಂದ) ಬಡ ಮನುಷ್ಯನ ಸಂಪತ್ತನ್ನು ಹೆಚ್ಚಿಸಲು ತರುಣರಿಗೆಲ್ಲ ನಿಷ್ಕಾಪಟ್ಯ ಮತ್ತು ಭಾವಶುದ್ಧಿಯಷ್ಟು ಬೇರೆ ಯಾವ ಗುಣಗಳಿಂದಲೂ ಸಾಧ್ಯವಿಲ್ಲವೆಂಬುದನ್ನು ಮನದಟ್ಟು ಮಾಡಲು ನಾನು ಪ್ರಯತ್ನಿಸಬೇಕಾಗಿತ್ತು.

ಮೊದಲಲ್ಲಿ ನಡೆನುಡಿಗಳು ನನ್ನ ಪಟ್ಟಿಯಲ್ಲಿ ಕೇವಲ ಹನ್ನೆರಡಿದ್ದವು. ಆದರೆ ನನ್ನ ಒಬ್ಬ ಕ್ವ್ಯಾಕರ್ ಮಿತ್ರನು ದಯಮಾಡಿ, ನನ್ನನ್ನು ಸಾಮಾನ್ಯವಾಗಿ ಹೆಮ್ಮೆಯವನೆಂದು ಪರಿಗಣಿಸಲಾಗುತ್ತಿದೆ ಮತ್ತು ನನ್ನ ಹೆಮ್ಮೆಯು ಆಗಾಗ ಸಂಭಾಷಣೆಯಲ್ಲಿ ಎದ್ದು ಕಾಣುತ್ತದೆಂದು ನನಗೆ-ತಿಳಿಯಪಡಿಸಿದನು. ಯಾವುದಾದರೂ ಒಂದು ವಿಷಯವನ್ನು ಚರ್ಚಿಸುವಾಗ ಸರಿಯಾಗಿದ್ದರೂ ತೃಪ್ತಿಪಡದೆ ನಾನು ಗರ್ವದಿಂದ ಹಾಗೂ ತುಸು ಉದ್ಧಟತನದಿಂದ ವರ್ತಿಸುತ್ತೇನೆಂದೂ ಮತ್ತು ಈ ಬಗ್ಗೆ ಅನೇಕ ಉದಾಹರಣೆಗಳನ್ನು ಕೊಟ್ಟೂ ಅವನು ನನಗೆ ತಿಳಿಸಿ ಕೊಟ್ಟನು. ಸರಿ, ನನ್ನನ್ನು ಸುಧಾರಿಸಿಕೊಳ್ಳಲು ನಾನು ನಿರ್ಧರಿಸಿಯೇ ಬಿಟ್ಟೆನು. ಸಾಧ್ಯವಾದರೆ ಈ ದುರ್ಗುಣದೊಂದಿಗೆ ಮಿಕ್ಕವುಗಳಲ್ಲಿನ ದೋಷವನ್ನೂ ಕಳೆದುಕೊಳ್ಳುವುದೆಂದು ನಿರ್ಣಯಿಸಿದ್ದಾಯಿತು. ಅಂತೇ ನನ್ನ ಪಟ್ಟಿಯಲ್ಲಿ 'ವಿನಯ' ವನ್ನು ಸೇರಿಸಿ ಆ ಶಬ್ದಕ್ಕೆ ವಿಶಾಲವಾದ ಅರ್ಥವನ್ನು ಕಲ್ಪಿಸಿದ್ದಾಯಿತು.

ಈ ಗುಣದ ನೈಜವನ್ನು ಸಾಧಿಸುವುದರಲ್ಲಿ ಯಶಸ್ಸಿನ ಬಗ್ಗೆ ನಾನೇನು ಹೇಳಿಕೊಳ್ಳುವುದಿಲ್ಲ. ಆದರೆ ಅದರ ವಿಷಯದಲ್ಲಿ ತೋರಿಕೆಗಾದರೂ ಸಾಕಷ್ಟು ರೂಢಿಸಿಕೊಂಡದ್ದಾಗಿತ್ತು. ಪರರ ಭಾವನೆಗಳ ಸಲುವಾಗಿ ಎಲ್ಲಾ ನೇರವಾದ ವಿರೋಧಾಭಾಸಗಳನ್ನು ತಾಳಿಕೊಳ್ಳುವುದು ಹಾಗೂ ಎಲ್ಲಾ ಖಂಡಿತ ಅಭಿವ್ಯಕ್ತಿಗಳನ್ನು ನನ್ನ ಸಲುವಾಗಿ ಸಹಿಸಿಕೊಳ್ಳುವುದು— ಒಂದು ತತ್ವವೆಂದೇ ನಾನು ಇಟ್ಟುಕೊಂಡೆನು. ನಮ್ಮ 'ಜಂಟೋ' ದ

ಹಳೆಯ ತತ್ವಗಳನ್ನು ಕೂಡಾ ನಾನು ಮನಃಪೂರ್ವಕವಾಗಿ ನಿಷೇಧಿಸಿದೆನು. ಆ ಪ್ರಕಾರ ಒಂದು ಪದವನ್ನು ಅಥವಾ ಅಭಿವ್ಯಕ್ತಿಯನ್ನು ಖಂಡಿತವಾಗಿ, ನಿಸ್ಸಂಶಯವಾಗಿ ಎಂದು ಮೊದಲಾಗಿ ನಿರ್ದಿಷ್ಟವಾದ ಅರ್ಥ ಬರುವ ರೀತಿ ಯಲ್ಲಿ ಬಳಸುವುದನ್ನು ಕೂಡಾ ನಿಲ್ಲಿಸಿದ್ದಾಯಿತು. ಅವುಗಳ ಬದಲಿಗೆ ಯಾವುದಾದರೂ ವಿಷಯವನ್ನು 'ನಾನು ಹೀಗೆ ಎಣಿಸಿದ್ದೇನೆ', 'ನನಗೆ ಅನಿಸುತ್ತದೆ' ಅಥವಾ 'ನಾನು ಹೀಗೆ ಆಲೋಚಿಸಿದ್ದೇನೆ' ಇಲ್ಲವೆ 'ಅದು ಸದ್ಯಕ್ಕೆ ಹೀಗೆಂದು ನನಗೆ ತೋರುತ್ತದೆ.' ಎಂಬ ರೀತಿಯನ್ನು ಅಳವಡಿಸಿಕೊಂಡೆನು. ಜೊತೆಯವರು ಯಾರಾದರು ಖಂಡಿತ ಪಡಿಸಿದುದು ನನಗೆ ತಪ್ಪೆಂದು ಕಂಡರೆ, ಹಠಾತ್ತನೆ ಅವನ ವಿರುದ್ಧ ವಾದಿಸುತ್ತ ಸಂತೋಷಿಸುವುದನ್ನು ಮತ್ತು ಅವನ ವಾಕ್ಯದಲ್ಲಿ ಕೂಡಲೆ ಕೆಲ ತಪ್ಪುಗಳನ್ನು ತೋರಿಸುವುದನ್ನು ನಾನೇ ನಿರಾಕರಿಸಿದೆನು. ಉತ್ತರಿಸು ವಾಗ ಕೆಲ ನಿರ್ದಿಷ್ಟ ಸ್ಥಿತಿಯಲ್ಲಿ ಅಥವಾ ಪರಿಸರದಲ್ಲಿ ಅವನ ಅಭಿಪ್ರಾಯವು ಸರಿಯಾದುದೆಂದು ಹೇಳುತ್ತ ಹೊರಟು, ಆದರೆ ಸದ್ಯದ ವಿಷಯದಲ್ಲಿ ಮಾತ್ರ ಕೆಲವು ವ್ಯತ್ಯಾಸಗಳು ನನಗೆ ಕಂಡುಬರುತ್ತದೆ ಅಥವಾ ಕಂಡ ಹಾಗೆ ಅನಿಸುತ್ತದೆ ಎಂದು ಮೊದಲಾಗಿ ತಿಳಿಸುತ್ತಿದ್ದೆನು. ನನ್ನ ನಡತೆ ಯಲ್ಲಿನ ಈ ಬದಲಾವಣೆಯ ಲಾಭವು ನನಗೆ ಬೇಗನೆ ಕಂಡು ಬಂದಿತು. ನಾನು ತೊಡಗಿರುವ ಸಂಭಾಷಣೆಗಳು ಹೆಚ್ಚು ಸಂತೋಷದಾಯಕವಾಗಿ ನಡೆಯತೊಡಗಿದವು. ನನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸುವ ಸಮಾ ಧಾನದ ರೀತಿಯಿಂದಾಗಿ ಅವುಗಳಿಗೆ ಕಡಿಮೆ ವಾಗ್ವಿರೋಧ ಮತ್ತು ಸಿದ್ಧ ಸ್ವಾಗತವು ದೊರೆಯತೊಡಗಿತು. ನಾನು ತಪ್ಪಿನಲ್ಲಿ ಸಿಕ್ಕಿದಾಗ ನನಗೆ ಕಡಿಮೆ ಪ್ರಮಾಣದಲ್ಲಿ ಮುಖಭಂಗವಾಗುತ್ತಿತ್ತು. ಅದೇ ರೀತಿಯಲ್ಲಿ ಮಿಕ್ಕವರು ತಪ್ಪಿನಲ್ಲಿ ಸಿಕ್ಕಾಗ ಅವರ ತಪ್ಪನ್ನು ಮರೆತು ಸರಿಯಾಗಿರುವ ನನ್ನೊಡನೆ ಸೇರಿಕೊಳ್ಳಲು ನಾನು ಬಹಳ ಸುಲಭದಿಂದ ಒಪ್ಪಿಕೊಳ್ಳು ತ್ತಿದ್ದೆನು.

ಮೊದ-ಮೊದಲಿಗೆ ಈ ಪದ್ಧತಿಯಿಂದ ಸ್ವಾಭಾವಿಕವಾದ ಒಲವು ತುಸು ಹಿಂಸೆಗೀಡಾಗಿದ್ದರೂ, ಕಾಲಾನುಸಾರವಾಗಿ ಅದು ಬಹಳ ಸುಲಭ ಮತ್ತು ಸರಾಗವಾಗಿ ನನಗೆ ಅಭ್ಯಾಸವಾಗಿ ಒಪ್ಪಿತು. ಇದರಿಂದಾಗಿ ಈ ಐವತ್ತು ವರುಷಗಳಿಂದ ಯಾವನೂ ನನ್ನ ತುಟಿಜಾರಿ ಯಾವ ಹಠದ ವಿಚಾರವೂ ಬಿದ್ದುದನ್ನು ಕೇಳಿರಲಾರನು. ಅಲ್ಲದೆ, ಈ ಅಭ್ಯಾಸದಿಂದ (ನನ್ನ ಭಾವಶುದ್ಧಿಯ ಸ್ವಭಾವದೊಂದಿಗೆ) ಮುಖ್ಯವಾಗಿ ನಾನು ಬಹು

ಬೇಗನೆ ನನ್ನ ಸಹ-ನಾಗರಿಕರಲ್ಲಿ ಅಂಥ ಘನತೆಯನ್ನು—ಹೊಸ ಸಂಸ್ಥೆಗಳನ್ನು ಕಟ್ಟಲು ಮುಂದುವರಿಯುವಾಗ ಅಥವಾ ಹಳೆಯವುಗಳನ್ನು ಬದಲು ಗೊಳಿಸುವಾಗ-ಸಂಪಾದಿಸಿದ್ದು ಮತ್ತು ನಾನು ವಿಧಾನ ಸಭೆಯ ಸದಸ್ಯ ನಾದಾಗ ಅಷ್ಟೊಂದು ವರ್ಚಸ್ಸನ್ನು ಸಾಧಿಸಿದ್ದು—ಎಂದು ನನಗನಿಸುತ್ತದೆ. ಯಾಕಂದರೆ ನಾನು ಅಗಣ್ಯ ಅಲ್ಪ ಮಾತುಗಾರನಾಗಿದ್ದೆ, ಎಂದೂ ನಿರರ್ಗಳ ವಾಗಿರಲಿಲ್ಲ, ಶಬ್ದಗಳನ್ನು ಹೆಕ್ಕುವುದರಲ್ಲಿ ತುಂಬಾ ಹಿಂದುಳಿದವನಾಗಿದ್ದೆ, ಭಾಷೆಯೂ ಶುದ್ಧವಾಗಿರುವುದು ಬಹಳ ವಿರಳವಾಗಿತ್ತು ಮತ್ತು ಹೀಗಿ ದ್ದರೂ ಸಾಮಾನ್ಯವಾಗಿ ನಾನು ನನ್ನ ವಿಷಯಗಳನ್ನು ತಿಳಿಯಪಡಿಸು ತ್ತಿದ್ದೆನು.

ವಸ್ತುತಃ ನಮ್ಮ ರಾಜಕೀಯ ಕಾಮನೆಗಳನ್ನು ಜಯಿಸುವುದರಲ್ಲಿ, ಬಹುಶಃ ಹೆಮ್ಮೆಯನ್ನು ಜಯಿಸಲಿಕ್ಕೆ ಇದ್ದಷ್ಟು ಕಷ್ಟವು ಬೇರೆಲ್ಲಿಯೂ ಇಲ್ಲವೆಂದು ಹೇಳಬೇಕು. ಅದನ್ನು ಮುಚ್ಚಿಡಿರಿ, ಅದರೊಡನೆ ಹೋರಾಟ ನಡಿಸಿರಿ, ಅದನ್ನು ಸದೆಬಡೆಯಿರಿ, ಅದರ ಸೊಕ್ಕಡಗಿಸಿರಿ, ಸಾಧ್ಯವಿದ್ದಷ್ಟರ ಮಟ್ಟಿಗೆ ಅದರ ಮುಖಭಂಗ ಮಾಡಿರಿ,—ಆದರೂ ಕೂಡಾ ಅದು ಜೀವಂತ ವಿರುತ್ತದೆ. ಆಗೊಮ್ಮೆ ಈಗೊಮ್ಮೆ ಹಣಿಕಿ ಹಾಕಿಕೊಂಡು ತನ್ನ ಪ್ರದರ್ಶನ ಮಾಡುವುದನ್ನು ನೀವು ನೋಡಬಹುದು. ಬಹುಶಃ ಈ ಚರಿತ್ರೆಯಲ್ಲೆ ಅದನ್ನು ನೀವು ಕಾಣಬಹುದು. ಯಾಕಂದರೆ—ನಾನು ಅದನ್ನು ಸಂಪೂರ್ಣ ಗೆದ್ದಿರುತ್ತೇನೆಂದು ತಿಳಿದುಕೊಂಡಿದ್ದರೂ ಕೂಡ ಬಹುಶಃ ನಾನು ನನ್ನ ವಿನಯದ ಬಗ್ಗೆ ಕೂಡ ಹೆಮ್ಮೆ ಪಟ್ಟುಕೊಳ್ಳಬಹುದು.

[ಇಲ್ಲಿಯ ತನಕ ಪ್ಯಾಸ್ಸಿಯಲ್ಲಿ ಬರೆದುದು, ೧೭೮೪.]

["ಈಗ ನಾನು ಮನೆಯಲ್ಲೆ ಬರೆಯುವುದರಲ್ಲಿ ಇದ್ದೇನೆ, ಅಗಸ್ಟ್, ೧೭೮೮; ಆದರೆ ನನ್ನ ಕಾಗದ ಪತ್ರಗಳಿಂದ ನಿರೀಕ್ಷಿಸಿದ್ದ ಸಹಾಯವು ಮಾತ್ರ ಸಿಗುತ್ತಿಲ್ಲ, ಅವುಗಳಲ್ಲಿ ಅನೇಕ ಯುದ್ಧದಲ್ಲಿ ಕಳೆದು ಹೋಗಿವೆ. ಆದರೂ ಕೂಡ ಕೆಳಗಿನ ಕೆಲವು ನನಗೆ ದೊರೆತವು."]

ನಾನು ಕಲ್ಪಿಸಿದ ಬಹು ದೊಡ್ಡ ಹಾಗೂ ವಿಶಾಲವಾದ ಯೋಜನೆ ಯನ್ನು ಪ್ರಸ್ತಾಪಿಸಿದ ಮೇಲೆ ಆ ಯೋಜನೆಯ ಕೆಲ ವೃತ್ತಾಂತ ಹಾಗೂ ಆದರ ಧ್ಯೇಯ-ಧೋರಣೆಗಳನ್ನು ಇಲ್ಲಿ ಕೊಡುವುದು ಯೋಗ್ಯವೆಂದು ಕಾಣುತ್ತದೆ. ಅದು ನನ್ನ ಮನಸ್ಸಿನಲ್ಲಿ ಮೊದಲಬಾರಿ ಮೂಡಿದುದನ್ನು, ಈ ಕೆಳಗಿನ ಅದೃಷ್ಟವಶಾತ್ ಕಾದಿರಿಸಿದ ಚಿಕ್ಕ ಕಾಗದದಲ್ಲಿ ಕಾಣ ಬಹುದು. ಯಾವುದೆಂದರೆ:

ವಾಚನಾಲಯದಲ್ಲಿ ನಾನು ಇತಿಹಾಸ ಓದಿದುದರ ಪರಿಶೀಲನೆಗಳು, ೧೯ ಮೇ ೧೭೩೧.

"ಯುದ್ಧಗಳು, ಕ್ರಾಂತಿ ಮೊದಲಾದ ಜಗತ್ತಿನ ಘನ ವಿಷಯಗಳು ಪಕ್ಷಗಳಿಂದ ನಡೆಸಲ್ಪಟ್ಟವುಗಳು ಮತ್ತು ಪರಿಣಮಿಸಲ್ಪಟ್ಟವುಗಳಾಗಿವೆ.

"ಈ ಪಕ್ಷಗಳ ದೃಷ್ಟಿಯು ಅವುಗಳ ಪ್ರಸ್ತುತ ಸಾಮಾನ್ಯ ಉದ್ದೇಶ ಅಥವಾ ಅವುಗಳು ಹಾಗೆಂದು ಗ್ರಹಿಸಿಕೊಂಡದ್ದಾಗಿರುತ್ತದೆ.

"ಈ ಭಿನ್ನ-ಭಿನ್ನ ಪಕ್ಷಗಳ ಭಿನ್ನ ಭಿನ್ನ ದೃಷ್ಟಿಗಳು ಪರಿಸ್ಥಿತಿಯನ್ನು ಗೊಂದಲಕ್ಕೀಡು ಮಾಡುತ್ತವೆ.

"ಒಂದು ಪಕ್ಷವು ಸಾಮಾನ್ಯ ಉದ್ದೇಶದಂತೆ ಸಾಗುತ್ತಿರುವಾಗ, ಪ್ರತಿಯೊಬ್ಬ ಮನುಷ್ಯನ ದೃಷ್ಟಿಯಲ್ಲೂ ಅವನ ವಿಶಿಷ್ಟ ಖಾಸಗಿ ಉದ್ದೇಶವಿರುತ್ತದೆ.

"ಅಂತೇ ಒಂದು ಪಕ್ಷವು ತನ್ನ ಸಾಮಾನ್ಯ ಉದ್ದೇಶವನ್ನು ಸಾಧಿಸಿದ ಕೂಡಲೆ ಪ್ರತಿಯೊಬ್ಬ ಸದಸ್ಯನೂ ತನ್ನ ವಿಶಿಷ್ಟ ಉದ್ದೇಶದತ್ತ ತಲ್ಲೀನಗೊಳ್ಳುತ್ತಾನೆ. ಇದು ಮಿಕ್ಕವರನ್ನು ಹದಗೆಡಿಸಿ ಆ ಪಕ್ಷವನ್ನು ಭಾಗ-ಭಾಗಗಳಾಗಿ ವಿಂಗಡಿಸುತ್ತದೆ. ಮತ್ತು ಹೆಚ್ಚಿನ ಗೊಂದಲದ ಪರಿಸ್ಥಿತಿಯನ್ನು ತಂದೊಡ್ಡುತ್ತದೆ.

"ಅವರು ಹೇಗೇ ನಟಿಸಲಿ, ಸಾರ್ವಜನಿಕ ಕಾರ್ಯಕಲಾಪಗಳಲ್ಲಿ ಕೆಲವರು ಮಾತ್ರ ತಮ್ಮ ದೇಶದ ಹಿತದ ದೃಷ್ಟಿಯಿಂದ ನಡೆದುಕೊಳ್ಳುತ್ತಾರೆ, ಮತ್ತು ಅವರ ದೇಶಕ್ಕೆ ಅವರ ನಡತೆಗಳು ಸ್ವಾಭಾವಿಕವಾದ ಒಳ್ಳಿತನ್ನು ದೊರಕಿಸಿಕೊಟ್ಟರೂ ಕೂಡ, ಮುಖ್ಯವಾಗಿ ಜನರು ಮಾತ್ರ ಅವರು ತಮ್ಮ ಹಾಗು ತಮ್ಮ ದೇಶದ ಹಿತವನ್ನು ಒಟ್ಟಿಗೆ ಸಾಧಿಸಿಕೊಳ್ಳುತ್ತಾರೆಂದು ಬಗೆಯುತ್ತಿರುತ್ತಾರೆ. ಅಂತೇ ಜನಹಿತದ ತತ್ವದಂತೆ ಎಂದೂ ನಡೆದಿಲ್ಲವೆಂದು ಪರಿಗಣಿಸುತ್ತಾರೆ.

"ಅದಕ್ಕೂ ತೀರ ವಿರಳವಾಗಿ ಕೆಲರು ಜನತೆಯ ಒಳ್ಳಿತಿನ ದೃಷ್ಟಿಯಿಂದ ಸಾರ್ವಜನಿಕ ಕೆಲಸ ಕಾರ್ಯಗಳಲ್ಲಿ ತೊಡಗುತ್ತಾರೆ.

"ಈಗ ಸದ್ಯಕ್ಕೆ ಎಲ್ಲಾ ದೇಶಗಳ ಗುಣವಂತರ ಮತ್ತು ಸತ್ಪುರುಷರೆಲ್ಲರ ಒಂದು ನಿಯಮಿತ ಸಂಸ್ಥೆಯನ್ನು 'ಸುಶೀಲತೆಯ ಸಂಯುಕ್ತ ಪಕ್ಷ' ವೆಂದು ಸ್ಥಾಪಿಸುವ ಬಹು ದೊಡ್ಡ ಪ್ರಸಂಗವೊದಗಿದೆಯೆಂದು ನನಗನಿಸುತ್ತದೆ ಯೋಗ್ಯ ಹಾಗೂ ಚತುರ ತತ್ವಗಳಿಂದ ಆಳ್ವಿಕೆ ಸಾಗಬೇಕಾದರೆ ಇದರ ಅಗತ್ಯವಿದೆ. ಬಹುಶಃ ಈ ಒಳ್ಳೆಯ ಹಾಗೂ ಚತುರ ವ್ಯಕ್ತಿಗಳು

ಸಾಮಾನ್ಯ ಜನರಿಗಿಂತ ಸಾರ್ವಜನಿಕ ಕಾಯ್ದೆ-ಕಾನೂನುಗಳಿಗೆ ವಿಧೇಯು ರಾಗಿ ನಡೆಯುವುದರಲ್ಲಿ ಹೆಚ್ಚು ಐಕಮತ್ಯದಿಂದ ವರ್ತಿಸುತ್ತಾರೆಂದು ಕಾಣುತ್ತದೆ.

"ಇದನ್ನು ಯಾವನು ಸರಿಯಾದ ರೀತಿಯಲ್ಲಿ ಪ್ರಯತ್ನಿಸುತ್ತಾನೋ ಮತ್ತು ಯೋಗ್ಯವಾದ ಅರ್ಹತೆಯುಳ್ಳವನಾಗಿದ್ದಾನೋ ಅವನು ದೇವ ರನ್ನು ತೃಪ್ತಿಪಡಿಸುವುದರಲ್ಲಿ ಅಯಶಸ್ವಿಯಾಗಲಾರನು ಮತ್ತು ಜಯ ವನ್ನು ಸಂಪಾದಿಸಿಯೆ ಬಿಡುವನು—ಎಂದು ನಾನೀಗ ಸದ್ಯಕ್ಕೆ ಯೋಚಿಸು ತ್ತಿದ್ದೇನೆ.

ಬಿ ಎಫ್."

ನನ್ನ ಮನಸ್ಸಿನಲ್ಲಿ ಈ ಯೋಜನೆಯು ಸುಳಿದಾಡುತ್ತ, ಈ ನಂತರ ಕಾರ್ಯಗತಗೊಳಿಸಲಿರುವುದರಿಂದ, ನನ್ನ ಸ್ಥಿತಿಗತಿಗಳು ಅಗತ್ಯವಾದ ವಿರಾಮವನ್ನು ದೊರಕಿಸಿಕೊಟ್ಟಾಗ, ಕಾಲಕಾಲಕ್ಕೆ ಕಾಗದದ ತುಂಡುಗಳ ಮೇಲೆ ಅದಕ್ಕೆ ಸಂಬಂಧಪಟ್ಟ ವಿಚಾರಗಳನ್ನು ಬರೆದಿಡಹತ್ತಿದ್ದೆನು. ಇವು ಗಳಲ್ಲಿ ಹೆಚ್ಚಿನವು ಕಳೆದುಹೋಗಿವೆ. ಆದರೆ ವಿಶಿಷ್ಟವಾದೊಂದು ಮತದ ತಾತ್ಪರ್ಯವನ್ನು ವ್ಯಕ್ತಪಡಿಸುವಂಥ ಒಂದು ತುಂಡು ನನಗೆ ದೊರಕಿತು. ಪ್ರತಿಯೊಂದು ಧರ್ಮದ ಮೂಲಸೂತ್ರಗಳು ಅದರಲ್ಲಿವೆಯೆಂದೂ ಮತ್ತು ಯಾವ ಧರ್ಮದ ಪ್ರಾಧ್ಯಾಪಕರನ್ನೂ ದಂಗುಬಡಿಸುವಂಥ ಯಾವ ವಿಷಯ ದಿಂದಲೂ ಕೂಡಿಕೊಂಡಿಲ್ಲವೆಂದು ಅದರ ಬಗ್ಗೆ ನಾನು ತಿಳಿದುಕೊಂಡಿದ್ದೇನೆ. ಅದನ್ನು ಈ ಕೆಳಗಿನ ಮಾತುಗಳಲ್ಲಿ ವ್ಯಕ್ತಪಡಿಸಿಗುತ್ತದೆ :

"ಒಬ್ಬನೇ ದೇವರು, ಅವನು ಎಲ್ಲಾ ವಸ್ತುಗಳ ನಿರ್ಮಾಪಕನು.

"ಅವನು ತನ್ನ ದಯೆಯಿಂದ ಜಗತ್ತನ್ನು ಆಳುತ್ತಾನೆ.

"ಪೂಜೆ, ಪ್ರಾರ್ಥನೆ ಮತ್ತು ಭಜನೆ ವಂದನಾರ್ಪಣೆಗಳಿಂದ ಅವ ನನ್ನು ಪೂಜಿಸಲೇ ಬೇಕು.

"ಆದರೆ ಮನುಷ್ಯನಿಗೆ ಒಳ್ಳೆಯದನ್ನು ಮಾಡುವುದು ದೇವರಿಗೆ ಅತ್ಯಂತ ಸೇರಿಕೆಯಾಗುವಂಥ ಸೇವೆಯಾಗಿರುತ್ತದೆ.

"ಆತ್ಮವು ಅಮರವಾದದ್ದು.

"ಅಂತೇ, ಇಹದಲ್ಲಿ ಅಥವಾ ಪರದಲ್ಲಿ ಗುಣಗಳಿಗೆ ಪ್ರತಿಫಲವನ್ನು ಮತ್ತು ದುರ್ಗುಣಗಳಿಗೆ ದಂಡನೆಯನ್ನು ದೇವರು ಕೊಡುತ್ತಾನೆ."

ನನ್ನ ಆ ಕಾಲದ ವಿಚಾರಗಳೆಂದರೆ—ಕೇವಲ ವ್ಯಕ್ತಿಗತವಾಗಿಯೇ ಧರ್ಮವು ಪ್ರಾರಂಭವಾಗಿ ಮೊದಲಲ್ಲಿ ಪ್ರಚುರಗೊಳ್ಳಬೇಕು; ಅಂಥ

ಧರ್ಮಕ್ಕೆ ಪ್ರತಿಯೊಬ್ಬ ಮನುಷ್ಯನು ತನ್ನ ಅನುಮತಿಯನ್ನು ಸೂಚಿಸುವುದಷ್ಟೇ ಅಲ್ಲದೆ, ಈ ಮೊದಲಿಗೆ ಹೇಳಲಾಗದ ಮಾದರಿಯಲ್ಲಿ—ಹದಿಮೂರು ವಾರಗಳ ಪರೀಕ್ಷೆಯನ್ನು ಮತ್ತು ನಡತೆಗಳ ಪಾಠವನ್ನು ಸ್ವಂತಕ್ಕೆ ತೆಗೆದುಕೊಳ್ಳಬೇಕು; ಅಂಥ ಸಂಸ್ಥೆಯ ಇರುವಿಕೆಯನ್ನು, ಅದು ಪ್ರಬಲವಾಗುವ ತನಕ—ಅದರಲ್ಲಿ ಅಯೋಗ್ಯ ಜನರು ಸೇರಿಕೊಳ್ಳುವ ಹಂಬಲವನ್ನು ತಪ್ಪಿಸಲು—ಅದನ್ನು, ಗುಪ್ತವಾಗಿ ಇಡಬೇಕು. ಆದರೆ ಅದರ ಪ್ರತಿಯೊಬ್ಬ ಸದಸ್ಯನೂ ಬುದ್ಧಿವಂತರ ಹಾಗೂ ಸಿದ್ಧ ತರುಣರ ಸಖ್ಯವನ್ನು ಹುಡುಕಬೇಕು, ಇಂಥವರಿಗೆ ಯೋಗ್ಯವಾದ ಎಚ್ಚರಿಕೆಯಿಂದ ಕ್ರಮೇಣ ಯೋಜನೆಯನ್ನು ತಿಳಿಯಪಡಿಸಬೇಕು; ಪರಸ್ಪರ ಉದ್ದೇಶ, ವ್ಯವಹಾರ ಮತ್ತು ಜೀವನದ ಸುಧಾರಣೆಯನ್ನು ಹೊಂದುವುದಕ್ಕೋಸ್ಕರ ಸದಸ್ಯರೆಲ್ಲ ತಮ್ಮಲ್ಲಿ ಸಲಹೆ ಸಹಕಾರ ಮತ್ತು ಪ್ರೋತ್ಸಾಹಗಳನ್ನು ನೀಡುವುದರಲ್ಲಿ ತೊಡಗಬೇಕಾಗುವುದು; ಅಂತೇ, ವೈಶಿಷ್ಟ್ಯಕ್ಕಾಗಿ ನಾವು "ಸರಳ ಮತ್ತು ಸ್ವತಂತ್ರ ಸಮಾಜ" ಎಂದು ನಮ್ಮನ್ನು ಕರೆಯಬೇಕು. ನಡೆನುಡಿಗಳ ಸಾಮಾನ್ಯ ಆಚರಣೆಯಿಂದ ಸ್ವತಂತ್ರರಾಗಿಯೂ ಮತ್ತು ದುರ್ಗುಣಗಳಿಂದಲೂ ಮತ್ತು ಪ್ರಾಮುಖ್ಯವಾಗಿ ಕಾಯಕ ಮತ್ತು ಮಿತವ್ಯಯದಿಂದಲೂ, ಸಾಲದಿಂದಲೂ ದೂರವಾಗಿರಬೇಕು—ಇದು ಮಾನವನನ್ನು ಬಂಧನದಲ್ಲಿಡುತ್ತದೆ. ಮತ್ತು ಸಾಲಗಾರರ ದಾಸ್ಯದ ಜಾತಿಯಲ್ಲಿ ಅವನು ಬಿದ್ದಂತಾಗುವುದು.

ಇದಿಷ್ಟು ನಾನು ಈಗ ಸ್ಮರಿಸಬಹುದಾದ ಯೋಜನೆಯ ವಿಷಯ—ಆದರೆ ಅದರ ಕೆಲ ಅಂಶವನ್ನು ಇಬ್ಬರು ತರುಣ ವ್ಯಕ್ತಿಗಳಿಗೆ ತಿಳಿಯಪಡಿಸಿದ್ದು, ಅವರು ಅದನ್ನು ಹುರುಪಿನಿಂದ ಸ್ವೀಕರಿಸಿದುದರ ಹೊರತು, ಆಗಿನ ನನ್ನ ಬಿಕ್ಕಟ್ಟಿನ ಸ್ಥಿತಿಗಳು ಮತ್ತು ನನ್ನ ವ್ಯವಹಾರದಲ್ಲಿ ಎಡೆಬಿಡದೆ ತೊಡಗುವ ಅವಶ್ಯಕತೆಯಿಂದ ಆ ಕಾಲದಲ್ಲಿ ಅದನ್ನು ಕಾರ್ಯಗತಗೊಳಿಸುವುದನ್ನು ಮುಂದಕ್ಕೆ ದೂಡುವ ಪ್ರಸಂಗವೊದಗಿತು; ಮತ್ತು ನನ್ನ ಅನೇಕ ವಿಧದ ವೈಯಕ್ತಿಕ ಹಾಗೂ ಸಾರ್ವಜನಿಕ ಕಾರ್ಯ ಬಾಹುಲ್ಯದಿಂದ ಅದನ್ನು ಮುಂದೂಡುವಂತಾಯಿತು, ಹೀಗಾಗಿ ಆ ಬಗೆಯ ಸಾಹಸಕ್ಕೆ ಸಾಕಷ್ಟು ಶಕ್ತಿ ಹಾಗೂ ಚಟುವಟಿಕೆ ನನ್ನಲ್ಲಿ ಉಳಿಯದಿರುವಲ್ಲಿಯ ತನಕ ಅದನ್ನು ರದ್ದು ಮಾಡಿದ್ದಾಯಿತು; ಆದರೂ ಕೂಡ ನಾನು ಈಗಲೂ ಅದು ಸಾಧ್ಯ ಯೋಜನೆಯಾಗಿರುತ್ತದೆಂಬ ಮತದವನಾಗಿದ್ದೇನೆ, ಮತ್ತು ಅನೇಕ ಉತ್ತಮ ನಾಗರಿಕರನ್ನು ರೂಪಿಸಿ ಅದು ಬಹಳ ಉಪಯುಕ್ತವಾದ ಯೋಜ

ನೆಯಾದೀತೆಂದು ನಂಬಿದ್ದೇನೆ. ಅಲ್ಲದೆ ನಾನು ಆ ಕಾರ್ಯದ ಬಾಹ್ಯ ಬೃಹದಾಕಾರದಿಂದೇನು ಅಧೀರನಾಗಿರುವುದಿಲ್ಲ, ಯಾಕಂದರೆ ಸಹನೀಯ ಶಕ್ತಿಯುಳ್ಳ ಒಬ್ಬ ಮನುಷ್ಯನು ಬಹು ದೊಡ್ಡ ಬದಲಾವಣೆಗಳನ್ನು ಸಾಧಿಸ ಬಹುದು ಮತ್ತು ಜನತೆಯಲ್ಲಿ ಬಹು ದೊಡ್ಡ ಕಾರ್ಯಗಳನ್ನು ಮಾಡ ಬಹುದು—ಅಂದರೆ ಅವನು ಪ್ರಥಮದಲ್ಲಿ ಒಂದು ಉತ್ತಮ ಯೋಜನೆ ಯನ್ನು ಸಿದ್ಧಪಡಿಸಿಕೊಂಡು, ಅವನ ಲಕ್ಷ್ಯವನ್ನು ಬೇರೆಡೆಗಳಿಗೆ ಸೆಳೆಯು ವಂಥ ಎಲ್ಲ ಮನೋರಂಜನೆಗಳನ್ನು ಅಥವಾ ಮಿಕ್ಕ ಉದ್ಯಮಗಳನ್ನು ಬದಿಗಿರಿಸಿಕೊಂಡು ಮತ್ತು ಅದೇ ಯೋಜನೆಯನ್ನು ಕಾರ್ಯಗತ ಮಾಡು ವುದೇ ಅವನ ಏಕಮಾತ್ರ ಅಭ್ಯಾಸ ಮತ್ತು ವ್ಯವಹಾರವೆಂದು ಆಚರಿಸಿ ಕೊಂಡರಷ್ಟೇ ಅದು ಸಾಧ್ಯವಾಗುವುದು.

೧೭೩೨ರಲ್ಲಿ ನಾನು ಮೊದಲ ಬಾರಿಗೆ ನನ್ನ ಪಂಚಾಂಗವನ್ನು (Almanack) ರಿಚರ್ಡ ಸಾಂಡರ್ಸ್ ಎಂಬ ಹೆಸರಿನಿಂದ ಪ್ರಕಟಿಸಿ ದೆನು. ಸುಮಾರು ಇಪ್ಪತ್ತೈದು ವರುಷಗಳ ತನಕ ಅದು ನನ್ನಿಂದ ಮುಂದುವರಿಸಲ್ಪಟ್ಟಿತ್ತು. ಸಾಮಾನ್ಯವಾಗಿ ಅದನ್ನು 'ಬಡ ರಿಚರ್ಡನ ಪಂಚಾಂಗ' (Poor Richard's Almanack) ಎಂದು ಕರೆಯ ಲಾಗುತ್ತಿತ್ತು. ಅದನ್ನು ಮನೋರಂಜಕವೂ ಉಪಯುಕ್ತವೂ ಎರಡೂ ಆಗುವಂತೆ ಪ್ರಯತ್ನಿಸುತ್ತಿದ್ದೆನು. ಅದೇ ರೀತಿಯಲ್ಲಿ ತಕ್ಕ ಬೇಡಿಕೆಯೂ ಒದಗಿಬಂದಿತು. ಹೀಗಾಗಿ ಅದರಿಂದ ನಾನು ಸಾಕಷ್ಟು ಲಾಭ ದೊರಕಿಸಿ ದ್ದಾಯಿತು. ವರುಷಕ್ಕೆ ಹತ್ತು ಸಾವಿರದವರೆಗೆ ಅದು ಮಾರಿಹೋಗು ತ್ತಿತ್ತು. ಅಂತೇ ಅದನ್ನು ಸರ್ವೇಸಾಮಾನ್ಯವಾಗಿ ಎಲ್ಲರೂ ಓದುತ್ತಾ ರೆಂದು ಬಗೆದುದರಿಂದ ಜಿಲ್ಲೆಯಲ್ಲಿ ಯಾವ ನೆರೆ-ಹೊರೆಯುವರಲ್ಲೂ ಅದಿಲ್ಲದೆ ಹೋಗುವುದೇ ವಿರಳವಾಗಿತ್ತು. ಸಾಮಾನ್ಯ ಜನರು ಬಹಳ ಕ್ವಚಿತ್ತಾಗಿ ಬೇರೆ ಪುಸ್ತಕವನ್ನು ಕೊಳ್ಳುತ್ತಿದ್ದುದರಿಂದ ನಾನು ಅವರಿಗೆ ಶಿಕ್ಷಣ ನೀಡು ವಂಥ ಯೋಗ್ಯಸಾಧನವೆ ಅದೆಂದು ಬಗೆದುಕೊಂಡ ಮೂಲಕ ಕ್ಯಾಲೆಂಡರಿನ ಲ್ಲಿನ ಗಣನೀಯ ವಾರದ ದಿನ ದೊರೆಯುವ ಚಿಕ್ಕ-ಪುಟ್ಟ ಸ್ಥಳಗಳಲ್ಲಿ ಕೂಡಾ ನಾನು ಗಾದೆಮಾತುಗಳ ವಾಕ್ಯಗಳನ್ನು ತುಂಬಿಸುತ್ತಿದ್ದೆನು. ಮುಖ್ಯವಾಗಿ ಅವುಗಳು ಕಾರ್ಯವನ್ನು ಮಿತವ್ಯಯವನ್ನು ಬೋಧಿಸುವಂತಹವುಗಳಾಗಿ ಇರುತ್ತಿದ್ದವು. ಯಾಕಂದರೆ ಅವುಗಳಿಂದಲೇ ಹಣ ಸಂಪಾದನೆ ಮಾಡುವು ದಾಗಿತ್ತು ಮತ್ತು ಆ ಮೂಲಕ ಒಳ್ಳೆಯ ನಡೆನುಡಿಗಳನ್ನೂ ಮೈಗೂಡಿಸಿ ಕೊಳ್ಳಬಹುದಾಗಿತ್ತು. ಅಲ್ಲದೆ ಕೊರತೆಯಿಲ್ಲದ ಮನುಷ್ಯನಿಗೆ ಪ್ರಾಮಾ

ಣಿಕತನದಿಂದ ನಡೆದುಕೊಳ್ಳುವುದೂ ಬಹಳ ಕಠಿಣವಾಗಿರುತ್ತದೆ. ಅಂತೇ ಆ ನಾಣ್ಣುಡಿಗಳಲ್ಲಿ ಒಂದನ್ನು ಇಲ್ಲಿ ಉಪಯೋಗಿಸಬಹುದಾಗಿದೆ; ಬರಿದಾದ ಗೋಣಿಚೀಲವು ನೆಟ್ಟಗೆ ನಿಲ್ಲುವುದು ಕಷ್ಟ.

ಅನೇಕ ಯುಗಗಳ ಮತ್ತು ರಾಷ್ಟ್ರಗಳ ವಿವೇಕದಿಂದ ಕೂಡಿರುವ ಈ ಗಾದೆಮಾತುಗಳನ್ನು ಕೂಡಿ ಹಾಕಿ, ಸಂಕೀರ್ಣ ವ್ಯಾಖ್ಯಾನದ ರೂಪು ಕೊಟ್ಟು ,೧೭೫೭ರ ಪಂಚಾಂಗ (Almanack)ಕ್ಕೆ, ಒಂದು ಹರಾಜಿಗೆ ನೆರೆದ ಸಭೆಯಲ್ಲಿ ಚತುರ ಮುದಿಮನುಷ್ಯನ ಆವೇಶಯುಕ್ತ ಭಾಷಣದಂತೆ, ಮೊದಲಲ್ಲಿ ಜೋಡಿಸಿದೆನು. ಹೀಗೆ ಹರಿದು ಹಂಚಿರುವಂಥ ಈ ಉಪದೇಶಗಳನ್ನೆಲ್ಲ ಒಂದೆಡೆಗೆ ಕೂಡಿಸಿ ಬೆಳಕಿಗೆ ತಂದುದರಿಂದ ಅವುಗಳಿಂದ ಹೆಚ್ಚು ಪರಿಣಾಮವುಂಟಾಯಿತು. ಈ ಕೃತಿಯು ಸಾಮಾನ್ಯವಾಗಿ ಸರ್ವರಿಂದಲೂ ಮೆಚ್ಚಿಸಿಕೊಂಡುದರಿಂದ ಭೂಖಂಡದ (Continent) ಎಲ್ಲ ವೃತ್ತಪತ್ರಿಕೆಗಳು ಅದನ್ನು ನಕಲು ಮಾಡಿದವು, ಬ್ರಿಟನ್ನಿನಲ್ಲಿ ಅಗಲವಾದ ಹಾಳೆಗಳ ಮೇಲೆ, ಮನೆಗಳಲ್ಲಿ ಅಂಟಿಸುವುದಕ್ಕೋಸ್ಕರ-ಪುನರ್ಮುದ್ರಿಸಲ್ಪಟ್ಟವು; ಫ್ರೆಂಚಿನಲ್ಲಿ ಅದರ ಎರಡು ಭಾಷಾಂತರಗಳಾದವು; ಶ್ರೀಮಂತವರ್ಗದವರು ಮತ್ತು ಪಾದರಿಗಳು ಅವುಗಳನ್ನು ತಮ್ಮ ಬಡ ಭಕ್ತಕ್ಷೇತ್ರದವರಿಗೆ ಮತ್ತು ಬಾಡಿಗೆದಾರರಿಗೆ ಪುಕ್ಕಟೆಯಾಗಿ ಹಂಚಲು ಅನೇಕ ಪ್ರತಿಗಳನ್ನು ಕೊಂಡುಕೊಂಡರು. ಅಲ್ಲದೇ ಅದು ನಿಷ್ಪ್ರಯೋಜಕವಾದ ವಿದೇಶೀಯ ಅನವಶ್ಯಕ ವೆಚ್ಚವನ್ನು ಅಲ್ಲಗಳೆಯುತ್ತಿದ್ದುದರಿಂದ, ಪೆನ್ಸಿಲ್ವಾನಿಯಾದಲ್ಲಿ ಕೆಲವರು-ಅದರ ಪ್ರಕಟನೆಯಾಗಿ ಹಲವು ವರುಷಗಳ ತನಕ ಕಂಡುಬಂದಿದ್ದ ಹೇರಳವಾದ ಹಣದಿಂದಾಗಿ ಅದರಲ್ಲಿಯೂ ಇದರ ಕೆಲವಂಶ ಪರ್ಚನ್ನು ಬಿದ್ದಿದೆಯೆಂದು ಬಗೆದಿದ್ದರು.

ನನ್ನ ವೃತ್ತಪತ್ರಿಕೆಯನ್ನು—ಪ್ರವಚನಗಳನ್ನು ಪ್ರಚುರಗೊಳಿಸುವ ಇನ್ನೊಂದು ಬಗೆಯ ಸಾಧನವೆಂದು ಬಗೆದಿದ್ದೆನು. ಅಂತೇ ಈ ದೃಷ್ಟಿಯಿಂದ ಆಗಾಗ 'ಸ್ಪೆಕ್ಟೇಟರ್' (Spectator)ನಿಂದ ಮತ್ತು ಮಿಕ್ಕ ನೈತಿಕ ಬರೆಹಗಾರರಿಂದ ಲೇಖದ ತುಂಡುಗಳನ್ನು ತೆಗೆದುಕೊಂಡು ಇದರಲ್ಲಿ ಪುನರ್ಮುದ್ರಿಸುತ್ತಿದ್ದೆನು. ಮತ್ತು ಕೆಲವೊಮ್ಮೆ ನನ್ನ ಚಿಕ್ಕಪುಟ್ಟ ಕೃತಿಗಳನ್ನು ಮುದ್ರಿಸುತ್ತಿದ್ದೆನು. ಇವುಗಳನ್ನು ನಮ್ಮ 'ಜಂಟೊ'ದಲ್ಲಿ ಓದಲು ರಚಿಸಿದ್ದಾಗಿತ್ತು. ಇವುಗಳಲ್ಲಿ ಕೆಲವು ಅಂದರೆ— ಎಂಥ ಸ್ಥಾನವನ್ನು ವಹಿಸಿದ್ದರೂ, ಯಾವ ಸಾಮರ್ಥ್ಯಗಳಿದ್ದರೂ, ದುರ್ಗುಣದ ಮನುಷ್ಯನನ್ನು ಯಾವ ರೀತಿಯಲ್ಲೂ ವಿವೇಕವುಳ್ಳ ಮನುಷ್ಯನೆಂದು ಕರೆಯಲಿಕ್ಕೆ ಸಾಧ್ಯ

ವಿಲ್ಲ; ಮತ್ತು ಸುಗುಣಗಳ ಆಚರಣೆಯು ಜೀವನದ ಅಭ್ಯಾಸವಾಗಿ ಹೋಗದೆ ಮತ್ತು ಅವುಗಳಿಗೆ ವಿರುದ್ಧ ಒಲವುಗಳಿಂದ ಸ್ವತಂತ್ರವಾಗಿರದ ಹೊರತು ಅದು ಎಂದೂ ಸುರಕ್ಷಿತವಾಗಲಾರದೆಂದು ತೋರಿಸುವಂಥ ಆತ್ಮ-ನಿಷೇಧದ ಮೇಲಿನ ಒಂದು ವ್ಯಾಖ್ಯಾನವಾಗಿತ್ತು. ಇವುಗಳು ೧೭೩೫ ರ ಆದಿಯ ಕಾಗದ-ಪತ್ರಗಳಲ್ಲಿ ಕಂಡುಬರಬಹುದು.

ನನ್ನ ವೃತ್ತಪತ್ರದ ಧೋರಣೆಯಲ್ಲಿ ಎಲ್ಲಾ ನಿಂದಾಪ್ರದವಾದ ಮತ್ತು ವೈಯಕ್ತಿಕ ದೂಷಣೆಗಳನ್ನು ಬಹು ಜಾಗ್ರತೆಯಿಂದ ರದ್ದುಪಡಿಸಿದ್ದೆನು. ಇದು ಇತ್ತೀಚೆಗೆ ನಮ್ಮ ದೇಶಕ್ಕೆ ಬಹಳ ಅಪಮಾನಕರವಾಗಿರುತ್ತದೆ. ಈ ಬಗೆಯಲ್ಲಿ ಏನಾದರೂ ನನ್ನ ಪತ್ರಿಕೆಯಲ್ಲಿ ಸೇರಿಸಬೇಕೆಂದು ಕೇಳಿಕೊಂಡಾಗ, ಮತ್ತು ಸಾಮಾನ್ಯವಾದ ಅವರ ಪರಿಪಾಠದಂತೆ ಬರೆಹಗಾರರು ಮುದ್ರಣ ಸ್ವಾತಂತ್ರ್ಯವನ್ನು ವಾದಿಸಿ, ಒಂದು ಪತ್ರಿಕೆಯೆಂದರೆ ನಿಯಮಿತ ಬಂಡಿಯಂತೆ—ಯಾವನು ಹಣ ಕೊಟ್ಟರೂ ಅದರಲ್ಲಿ ಅವನಿಗೆ ಸ್ಥಳದ ಅಧಿಕಾರವುಂಟು ಎಂದೂ ವಾಗ್ವಾದ ಮಾಡಿದಾಗ, ಅವರಿಗೆ ನನ್ನ ಉತ್ತರವೆಂದರೆ—ಅಪೇಕ್ಷೆಯಿದ್ದರೆ ನಾನು ಲೇಖನವನ್ನು ಪ್ರತ್ಯೇಕವಾಗಿ ಮುದ್ರಿಸಬಹುದು; ಮತ್ತು ಲೇಖಕನಿಗೆ ಹಂಚಲು ಬೇಕಾದಷ್ಟು ಪ್ರತಿಗಳೂ ದೊರೆಯಬಹುದು, ಆದರೆ ನಾನು ಮಾತ್ರ ಅವನ ನಿಂದೆಯನ್ನು ಪ್ರಚುರಪಡಿಸುವ ಹೊಣೆಯನ್ನು ನನ್ನ ಮೇಲೆ ತೆಗೆದುಕೊಳ್ಳುವುದಿಲ್ಲ; ಅಲ್ಲದೆ ನನ್ನ ಚಂದಾದಾರರೊಡನೆ ಅವರಿಗೆ ಉಪಯೋಗವಾಗುವಂಥದನ್ನು ಅಥವಾ ಮನೋರಂಜನೀಯವಾದುದನ್ನು ಕೊಡುತ್ತೇನೆಂದು ಒಪ್ಪಂದಮಾಡಿಕೊಂಡ ಮೇಲೆ, ಅವರ ಪತ್ರಿಕೆಗಳನ್ನು ನಾನು ವೈಯಕ್ತಿಕ ನಿಂದೆಗಳಿಂದ ತುಂಬಲಾರೆನು, ಅವರಿಗೆ ಅದರ ಬಗ್ಗೆ ಯಾವ ಸಂಬಂಧವೂ ಇರುವುದಿಲ್ಲ ಮತ್ತು ಅವರಿಗೆ ಅನ್ಯಾಯ ಮಾಡಿದೆನೆಂದು ಅವರಿಂದ ಕೇಳಿಕೊಳ್ಳಲೂ ನನ್ನಿಂದ ಸಾಧ್ಯವಿಲ್ಲ. ಈಗ ನಮ್ಮಲ್ಲಿಯ ಅನೇಕ ಮುದ್ರಕರು—ನಮ್ಮಲ್ಲಿನ ಅತ್ಯುತ್ತಮ ವ್ಯಕ್ತಿಗಳ ಸುಳ್ಳು ಅಪವಾದಗಳಿಂದ ನಮ್ಮಲ್ಲಿಯ ಅನೇಕ ಜನರ ಮತ್ಸರವನ್ನು ತೃಪ್ತಿಗೊಳಿಸುವುದರಲ್ಲಿ ಏನೂ ಅರೆಮನೆ ಮಾಡುವುದಿಲ್ಲ. ಖಡ್ಗಯುದ್ಧದ ತನಕವೂ ವೈರವನ್ನು ಬೆಳೆಸುತ್ತಾರೆ. ಅದೂ ಅಲ್ಲದೆ, ನೆರೆಹೊರೆಯ ಪ್ರಾಂತಗಳ ಸರಕಾರದ ಬಗ್ಗೆ ಅಸಹ್ಯ ವಿಚಾರಗಳನ್ನು ತಿಳಿಗೇಡಿತನದಿಂದ ಮುದ್ರಿಸುತ್ತಾರೆ ಮತ್ತು ನಮ್ಮ ಉತ್ಕೃಷ್ಟ ರಾಷ್ಟ್ರೀಯ ಒಪ್ಪಂದಗಳ ಮೇಲೆಯೂ ಅವಿಚಾರದಿಂದ ಬರೆಯುತ್ತಾರೆ. ಇವುಗಳಿಂದ ವಿನಾಶಕಾರಕ ಪರಿಣಾಮಗಳು ಉಂಟಾಗುತ್ತವೆ. ಈ ವಿಷಯಗಳನ್ನು

ನಮ್ಮ ತರುಣ ಮುದ್ರಕರ ಎಚ್ಚರಿಕೆಗೆಂದು ಮತ್ತು ಇಂಥ ಕ್ಷುಲ್ಲಕ ಕೃತಿಗಳಿಂದ ಅವರು ತಮ್ಮ ಮುದ್ರಣಾಲಯಗಳನ್ನು ಭ್ರಷ್ಟಗೊಳಿಸದಂತೆ ಮತ್ತು ಅವರ ಉದ್ಯಮಗಳ ಘನತೆ ನಷ್ಟವಾಗದಂತೆ ಪ್ರೋತ್ಸಾಹಿಸಲ್ಪಡಬೇಕೆಂದು ನಾನು ನಮೂದಿಸಿರುತ್ತೇನೆ. ಅಂಥ ಕೃತಿಗಳನ್ನು ನೇರವಾಗಿ ತಿರಸ್ಕರಿಸುವುದರಿಂದ ಅವರ ಧ್ಯೇಯ-ಧೋರಣೆಗಳಿಗೆ ದಕ್ಕೆಯನ್ನುಂಟುಮಾಡದೆಂದು ಅವರು ನನ್ನ ಉದಾಹರಣೆಯ ಮೂಲಕ ತಿಳಿದುಕೊಳ್ಳಬಹುದು.

೧೭೩೩ ರಲ್ಲಿ ನನ್ನ ಕೆಲಸಗಾರರ (journeymen) ಪೈಕಿ ಒಬ್ಬನನ್ನು ದಕ್ಷಿಣ ಕೆರೊಲಿನಾದ ಚಾರ್ಲ್ಸ್‌ಟನ್‌ಗೆ ಕಳುಹಿಸಿದೆನು. ಅಲ್ಲಿಗೊಬ್ಬ ಮುದ್ರಕ ಬೇಕಾಗಿದ್ದನು. ಅವನಿಗೆ ನಾನೇ ಪ್ರೆಸ್ಸು ಮತ್ತು ಟೈಪುಗಳ ಸರಬರಾಯಿ ಮಾಡಿಕೊಟ್ಟೆನು. ಇದಕ್ಕೆ ನಮ್ಮಲ್ಲಿ ಪಾಲುಗಾರಿಕೆಯ ಒಂದು ಒಪ್ಪಂದವಾಗಿತ್ತು. ಇದರ ಪ್ರಕಾರ ಮೂರನೇ ಒಂದಂಶ ಖರ್ಚನ್ನು ಕೊಟ್ಟು, ಮೂರನೇ ಒಂದಂಶ ಲಾಭ ನನಗೆ ಬರುವುದಿತ್ತು. ಅವನು ಸುರಕ್ಷಿತ ವ್ಯಕ್ತಿಯಾಗಿದ್ದನು. ಪ್ರಾಮಾಣಿಕನೂ ಆಗಿದ್ದ, ಆದರೆ ಲೆಕ್ಕಪತ್ರದ ವಿಷಯದಲ್ಲಿ ಅಜ್ಞನಾಗಿದ್ದನು. ಅಂತೇ ಅವನು ಕೆಲವೊಮ್ಮೆ ನನಗೆ ಹಣ ಕಳುಹಿಸುತ್ತಿದ್ದರೂ ಅವನಿಂದ ಯಾವ ಲೆಕ್ಕಪತ್ರವಾಗಲಿ ಅಥವಾ ಯಾವ ತೃಪ್ತಿದಾಯಕವಾದ ಪಾಲುಗಾರಿಕೆಯಾಗಲಿ ಅವನು ಜೀವಿಸಿರುವಾಗ ನನಗೆ ಸಿಗಲಿಲ್ಲ. ಅವನು ತೀರಿಕೊಂಡ ಮೇಲೆ ವ್ಯವಹಾರವು ಅವನ ವಿಧವೆಯಿಂದ ಮುಂದುವರಿಸಲ್ಪಟ್ಟಿತು. ಅವಳು ಹಾಲೆಂಡಿನಲ್ಲಿ ಹುಟ್ಟಿ ಬೆಳೆದವಳಾದುದರಿಂದ, ನನಗೆ ಗೊತ್ತಾದ ಹೇಳಿಕೆಯಂತೆ ಅಲ್ಲಿ--ಲೆಕ್ಕಪತ್ರದ ಜ್ಞಾನವು ಸ್ತ್ರೀಶಿಕ್ಷಣದ ಒಂದು ಅಂಗವಾಗಿದ್ದುದರಿಂದ; ಅವಳು ಹಿಂದಿನ ವ್ಯವಹಾರದ ಬಗ್ಗೆ ಅವಳಿಂದ ಸಾಧ್ಯವಾದಷ್ಟು ಸ್ಪಷ್ಟವಾದ ಲೆಕ್ಕಪತ್ರದ ವಿವರಣೆಯನ್ನು ನನಗೆ ಕಳುಹಿಸಿದ್ದಳು ಮತ್ತು ಅನಂತರ ಮೂರು ತಿಂಗಳಿಗೊಮ್ಮೆ ಅತ್ಯಂತ ನಿಯಮಿತವಾಗಿ ಲೆಕ್ಕವನ್ನು ತೋರಿಸುತ್ತ ಹೋದಳು; ಹಾಗೂ ವ್ಯವಹಾರವನ್ನು ಇಷ್ಟೊಂದು ಯಶಸ್ವಿಯಾಗಿ ಸಾಗಿಸಿದಳು—ಇದರಿಂದ ಅವಳು ಮಕ್ಕಳಿಂದ ಕೂಡಿದ ಸಂಸಾರವನ್ನು ಗೌರವಯುಕ್ತವಾಗಿ ಸಾಕುವುದಲ್ಲದೆ ಕರಾರಿನ ಕಾಲ ಮುಕ್ತಾಯವಾದೊಡನೆ ನನ್ನಿಂದ ಮುದ್ರಣಾಲಯವನ್ನು ಖರೀದಿ ಮಾಡಲು ಸಮರ್ಥಳಾದಳು. ಮತ್ತು ಅದರಲ್ಲಿ ಅವಳ ಮಗನನ್ನು ನೆಲೆವೂರಿದಳು.

ಈ ವೃತ್ತಾಂತವನ್ನು ನಾನು ಮುಖ್ಯವಾಗಿ ಯಾಕೆ ವ್ಯಕ್ತಪಡಿಸುತ್ತಿದ್ದೇನೆಂದರೆ—ನಮ್ಮ ಹೆಣ್ಣು ಮಕ್ಕಳಿಗೆ ಶಿಕ್ಷಣದ ಆ ಅಂಗವನ್ನು ಶಿಫಾ

ರಸು ಮಾಡುವುದಕ್ಕೆ. ಯಾಕಂದರೆ,ಅದರಿಂದ ಅವರ ವೈಧವ್ಯದ ಕಾಲದಲ್ಲಿ, ಗಾಯನ ಅಥವಾ ನೃತ್ಯಕ್ಕಿಂತ, ಅವರ ಮಕ್ಕಳಿಗೆ ಮತ್ತು ಅವರಿಗೆ ಹೆಚ್ಚು ಉಪಯುಕ್ತವಾಗುವ ಸಂಭವವಿರುತ್ತದೆ. ಇದರಿಂದ ಕಪಟ ಜನಗ ಮೋಸ ದಿಂದ ಅವರು ಪಾರಾಗಿ ಉಳಿಯುತ್ತಾರೆ ಮತ್ತು ಬಹುಶಃ ಲಾಭದಾಯಕ ವಾದ ವ್ಯವಹಾರಸ್ಥ ಗೃಹವನ್ನು ನಡೆಸಿಕೊಂಡು ಹೋಗಲು ಅವರಿಗೆ ಸಾಮರ್ಥ್ಯವುಂಟಾಗುತ್ತದೆ. ಪತ್ರವ್ಯವಹಾರವನ್ನು ನಡೆಸಿಕೊಂಡು ಹೀಗೆ ಅವರ ಒಬ್ಬ ಮಗನು ಅದನ್ನು ಕೈಗ ತೆಗೆದುಕೊಂಡು ನಡೆಸಿಕೊಳ್ಳಲಿಕ್ಕೆ ಸಮರ್ಥನಾಗುವ ತನಕ ಸಂಸಾರದ ಶ್ರೇಯಸ್ಸಿನ ಸಲುವಾಗಿ ಮತ್ತು ಸ್ಥಿರ ವಾದ ಹಿತಕ್ಕಾಗಿ ಮುಂದುವರಿಯುವುದರಿಂದ ಪ್ರೋತ್ಸಾಹ ದೊರೆಯುವುದು.

೧೭೩೪ನೆಯ ವರುಷದ ಸುಮಾರಿಗೆ ನಮ್ಮ ಕ್ಷೇತ್ರಕ್ಕೆ ಐರ್ಲಂಡಿನಿಂದ ಒಬ್ಬ ತರುಣ ಪ್ರೆಸ್ಬಿಟೇರಿಯನ್ ಪಾದ್ರಿಯು, ಹೆಂಪ್‌ಹಿಲ್ ಎಂಬಾತನು ಬಂದು ತಲಪಿದನು. ಅವನು ಸುಸ್ವರದಿಂದ ಮತ್ತು ಸ್ವಾಭಾವಿಕವಾದ ಸ್ಫೂರ್ತಿಯಿಂದ ಅತ್ಯುತ್ಕೃಷ್ಟ ಭಾಷಣಗಳನ್ನು ಕೊಡುತ್ತಿದ್ದನು. ಇದು ಅನೇಕ ಮತಗಳ ಸಾಕಷ್ಟು ಸದಸ್ಯರನ್ನು ಒಟ್ಟುಗೂಡಿಸಿತ್ತು. ಅವರೆಲ್ಲ ಅವನ ವ್ಯಾಖ್ಯಾನಗಳನ್ನು ಬಹಳವಾಗಿ ಮೆಚ್ಚುತ್ತಿದ್ದರು. ಉಳಿದವರಲ್ಲಿ ನಾನು ಕೂಡಾ ಅವನ ಸತತ ಶ್ರೋತೃವಾಗಿದ್ದೆನು. ಅವನ ಉಪದೇಶ ಭಾಷಣ ಗಳು ನನ್ನ ಮೆಚ್ಚಿಕೆಗೆ ಪಾತ್ರವಾಗುತ್ತಿದ್ದವು. ಯಾಕಂದರೆ ಅವುಗಳಲ್ಲಿ ತತ್ವಗಳ ಅಂಶ ಬಹಳ ಅಲ್ಪವಾಗಿತ್ತು. ಆದರೆ ಪ್ರಬಲವಾಗಿ ಸುಶೀಲ ವನ್ನು ಅಥವಾ ಧಾರ್ಮಿಕ ಶೈಲಿಯಲ್ಲಿ ಯಾವುದನ್ನು ಒಳ್ಳೆಯ ನಡತೆಯೆಂದು ಕರೆಯಲಾಗುತ್ತದೋ ಅದನ್ನು ಮನಸ್ಸಿಗೆ ನಾಟುವಂತೆ ಉಪದೇಶಿಸು ತ್ತಿದ್ದನು. ನಮ್ಮ ಶ್ರೋತೃವರ್ಗದಲ್ಲಿ, ಹೀಗಿದ್ದರೂ ಕೂಡ-ಕಟ್ಟಾ ಪ್ರೆಸ್ಬಿಟೇರಿಯನರೆಂದು ಬಗೆದುಕೊಂಡವರು ಅವನ ತತ್ವಗಳನ್ನು ನಿರಾಕರಿಸಿ ಹಳೆಯ ಪಾದ್ರಿಯೊಡನೆ ಸೇರಿಕೊಂಡರು. ಅವರೆಲ್ಲ ಅವನ ಮೇಲೆ ಧರ್ಮ ಲಂಡನೆಂಬ ಆಪಾದನೆ ಹೊರಿಸಿ ಅವನ ಬಾಯಿ ಮುಚ್ಚಸುವುದಕ್ಕೋಸ್ಕರ ವ್ಯವಸ್ಥಾಪಕರ ಸಭೆಯಲ್ಲಿ ವಿಚಾರಣೆಗೆ ಗುರಿಮಾಡಿದ್ದರು. ಇತ್ತ ನಾನು ಅವನ ಸಕ್ರಿಯ ಪಕ್ಷಗಾರನಾದೆನು. ಅವನ ಪರವಾದ ಒಂದು ಪಕ್ಷವನ್ನು ನಿರ್ಮಿಸುವುದರಲ್ಲಿ ನನ್ನ ಕೈಲಾದುದನ್ನೆಲ್ಲ ಮಾಡಿದೆನು. ಅಂತೇ ಕುಸುರಿ ಯಶಸ್ಸಿನ ಆಸೆಯಿಂದ ನಾವು ಅವನ ಬಗ್ಗೆ ಕೆಲ ಸಮಯ ಹೋರಾಡಿದೆವು. ಈ ಪ್ರಸಂಗದ ಬಗ್ಗೆ ಸಾಕಷ್ಟು ಅನುಕೂಲ ಪ್ರತಿಕೂಲವಾದ ಅವಸರದ ಬರವಣಿಗೆಗಳು ಬಂದವು. ಆದರೆ ಕುಶಲ ಉಪದೇಶಕನಾಗಿದ್ದರೂ ಅವನು

ಬಡ ಬರಹಗಾರನಾಗಿದ್ದುದನ್ನು ಕಂಡು ನಾನು ಅವನಿಗೋಸ್ಕರ ನನ್ನ ಲೆಕ್ಕಣಿಕೆಯನ್ನು ಮೀಸಲಿಟ್ಟು ಎರಡೋ-ಮೂರೋ ಕರಪತ್ರಿಕೆಗಳನ್ನು ಅವಸಗಾಗಿ ಬರೆದೆನು ಮತ್ತು ಒಂದು ಲೇಖವು ೧೭೩೫ ರ ಏಪ್ರಿಲ್ ತಿಂಗಳ ಗೆಜೆಟ್ (Gazette) ನಲ್ಲೂ ಬಂದಿತು. ಭಿನ್ನಾಭಿಪ್ರಾಯದ ಬರವಣಿಗೆಯ ಬಗ್ಗೆ ಸಾಮಾನ್ಯವಾಗಿ ಸಂಭವಿಸುವಂತೆ ಈ ಕರಪತ್ರಿಕೆಗಳು ಆ ಸಮಯ ದಲ್ಲಿ ಕುತೂಹಲದಿಂದ ಓದಲ್ಪಟ್ಟವು ಮತ್ತು ಬೇಗನೆ ರೂಢಿ ಬಾಹಿರವಾಗಿ ಹೋದವು. ಅಂತೇ ಅದರ ಒಂದು ಪ್ರತಿಯಾದರೂ ಈಗ ಇದೆಯೋ ಎಂದು ನಾನು ಪ್ರಶ್ನಿಸುತ್ತೇನೆ.

ಜಗಳದ ಕಾಲದಲ್ಲಿ ಒಂದು ದುರ್ದೈವದ ಸಂಗತಿಯಿಂದ ಅವನ ಹೇತುವಿಗೆ ಬಲವಾದ ಪೆಟ್ಟುಬಿತ್ತು. ನನ್ನ ಎದುರಾಳಿಗಳಲ್ಲಿ ಒಬ್ಬನು ಅವನು ಉಪದೇಶಿಸುತ್ತಿದ್ದ ಒಂದು ವ್ಯಾಖ್ಯಾನವನ್ನು ವಿಪರೀತ ಹೊಗಳು ತ್ತಿದ್ದುದನ್ನು ಕೇಳಿದವನು—ಈ ಮೊದಲಿಗೆ ಅವನು ಅದನ್ನು ಎಲ್ಲಿಯೋ ಓದಿದ ಹಾಗೆ ಅಥವಾ ಕೊನೇ ಪಕ್ಷಕ್ಕೆ ಅದರ ಕೆಲ ಭಾಗವನ್ನಾದರೂ ಓದಿ ದಂತೆ ಇದೆಯೆಂದು ತಿಳಿದುಕೊಂಡನು. ಹುಡುಕಾಡಿದ ಮೇಲೆ, ಅವನು 'ಬ್ರಿಟಿಷ್ ರಿವ್ಯೂಸ್' (British Reviews) ನ ಡಾ। ಫೊಸ್ಟರನ ವ್ಯಾಖ್ಯಾನದಲ್ಲಿ ಅದನ್ನು ದೀರ್ಘವಾಗಿ ಉದ್ಧರಿಸಿರುವುದನ್ನು ಕಂಡನು. ಈ ಶೋಧನೆಯಿಂದ ನಮ್ಮ ಪಕ್ಷದ ಅನೇಕರಿಗೆ ತಿರಸ್ಕಾರವುಂಟಾಯಿತು. ಅವರು ಅವನ ಪಕ್ಷವನ್ನು ತೊರೆದುಬಿಟ್ಟರು. ಅಲ್ಲದೆ ಧರ್ಮ ವ್ಯವಸ್ಥಾಪ ಕರ ಸಭೆಯಲ್ಲಿ ನಮ್ಮ ಪರಾಭವವು ತೀವ್ರ ಒದಗುವ ಪ್ರಸಂಗವನ್ನುಂಟು ಮಾಡಿದರು. ಹೀಗಿದ್ದರೂ ಕೂಡ ನಾನು ಅವನಿಗೇ ಸೇರಿಕೊಂಡಿದ್ದೆ. ಯಾಕಂದರೆ, ತಾವೇ ಸ್ವತಃ ರಚಿಸಿದ ಕೆಟ್ಟ ವ್ಯಾಖ್ಯಾನಗಳನ್ನು ಕೊಡುವ ಬೇರೆಯವರಿಗಿಂತ, ಇದು ಸಾಮಾನ್ಯವಾದ ನಮ್ಮ ಧರ್ಮೋಪದೇಶಕರ ಪರಿ ಪಾಠವಾಗಿದ್ದರೂ ಕೂಡ, ಬಹಳ ಚೆನ್ನಾಗಿ ಇತರರು ರಚಿಸಿದ ವ್ಯಾಖ್ಯಾನ ಗಳನ್ನು ಕೊಡುತ್ತಿರುವ ಅವನನ್ನು ನಾನು ಮೆಚ್ಚಿದ್ದಾಗಿತ್ತು. ಅನಂತರ— ಅವನು ಉಪದೇಶಿಸಿದವುಗಳಲ್ಲಿ ಒಂದೂ ಅವನ ಸ್ವರಚನೆಗಳಾಗಿರಲಿಲ್ಲ ವೆಂದು ನನಗೆ ತಿಳಿಯಪಡಿಸಿದ್ದನು. ಯಾವ ಧರ್ಮೋಪದೇಶ(Sermon) ವನ್ನಾದರೂ ಕೂಡ ಒಂದೇ ಸಲ ಓದಿದರೆ ಅವನಿಗೆ ನೆನಪಿಟ್ಟು ಪುನರು ಚ್ಚರಿಸಲಿಕ್ಕೆ ಬರುವಷ್ಟು ಅವನ ನೆನಪಿನ ಶಕ್ತಿಯಿತ್ತೆಂದು ಹೇಳಿದ್ದನು. ನಮ್ಮ ಪರಾಭವದ ನಂತರ ಅವನು ಉತ್ತಮ ಸಂಪತ್ತನ್ನು ಅರಸಿಕೊಂಡು ನಮ್ಮನ್ನು ಬಿಟ್ಟು ಹೋದನು. ಇತ್ತ ನಾನು ಕೂಡಾ ಧಾರ್ಮಿಕ ಗೋಷ್ಠಿ

ಯತ್ತ ಕಾಲುಹಾಕುವುದನ್ನೆ ತೊರೆದುಬಿಟ್ಟೆನು. ಆದರೂ ಕೂಡ ಅದರ ಪಾದ್ರಿಗಳ ಸಂರಕ್ಷಣಾರ್ಥವಾಗಿ ಅನೇಕ ವರುಷಗಳ ತನಕ ನನ್ನ ಚಂದಾ ಹಣವನ್ನು ಸಲ್ಲಿಸುತ್ತ ಇದ್ದೆನು.

೧೭೩೩ ರಲ್ಲಿ ನಾನು ಭಾಷೆಗಳ ಅಭ್ಯಾಸವನ್ನು ಪ್ರಾರಂಭಿಸಿದ್ದೆನು. ನಾನು ಬಹು ಬೇಗನೆ ಸುಲಭದಿಂದ ಫ್ರೆಂಚಿನ ಪುಸ್ತಕಗಳನ್ನು ಓದಲು ಸಮರ್ಥನಾಗುವಷ್ಟು ಪ್ರಭುತ್ವವನ್ನು ಆ ಭಾಷೆಯಲ್ಲಿ ಗಳಿಸಿದ್ದೆನು. ಆ ತರುವಾಯ ನಾನು ಇಟಾಲಿಯನ್ ಭಾಷೆಯಲ್ಲಿ ತೊಡಗಿದೆನು. ನನ್ನ ಮಿತ್ರನೊಬ್ಬನು, ಅದನ್ನು ಕಲಿಯುತ್ತಿದ್ದನು.ಅವನೊಡನೆ ಚದುರಂಗದಾಟವನ್ನು ಆಡಲು ನನ್ನನ್ನು ಕೆರಳಿಸುತ್ತಿದ್ದನು. ಇದು ನನ್ನ ಅಭ್ಯಾಸದ ಹೆಚ್ಚಿನ ಹೊತ್ತನ್ನು ತೆಗೆದುಕೊಳ್ಳುವುದನ್ನು ಕಂಡು ಕಟ್ಟಕಡೆಗೆ ನಾನೊಂದು ಕರಾರಿನ ಹೊರತಾಗಿ ಇನ್ನು ಮುಂದೆ ಆಡುವುದಿಲ್ಲವೆಂದು ನಿರಾಕರಿಸಿದೆನು. ಆ ಕರಾರು ಅಂದರೆ—ಪ್ರತಿಯೊಂದು ಆಟದಲ್ಲಿ ಗೆದ್ದವನಿಗೆ ವ್ಯಾಕರಣದಲ್ಲಿನ ಭಾಗಗಳನ್ನು ಬಾಯಿಪಾಠ ಮಾಡುವ ಅಥವಾ ಭಾಷಾಂತರ ಇತ್ಯಾದಿ ಕೆಲಸವನ್ನು ಸೋತವನ ಮೇಲೆ ಹೇರುವ ಹಕ್ಕು ಇತ್ತು. ಈ ಕೆಲಸಗಳನ್ನು ನಮ್ಮ ಮುಂದಿನ ಕೂಟದ ಮೊದಲಿಗೆ ಸೋತವನು ಗೌರವದಿಂದ ಪೂರೈಸಬೇಕಾಗಿತ್ತು. ನಾವು ಸಾಕಷ್ಟು ಸಮಾನವಾಗಿ ಆಡುತ್ತಿದ್ದುದರಿಂದ ಹೀಗೆ ನಾವು ಪರಸ್ಪರರನ್ನು ಆ ಭಾಷೆಯಲ್ಲಿ ಸೋಲಿಸುತ್ತಿದ್ದೆವು. ಆಮೇಲೆ ಒಂದು ಸ್ವಲ್ಪ ಕಷ್ಟಪಟ್ಟುಕೊಂಡು ನಾನು ಸ್ಪೇನಿಷನ್ನೂ, ಆ ಭಾಷೆಯ ಪುಸ್ತಕಗಳನ್ನು ಕೂಡ ಓದುವಂತೆ, ರೂಢಿಸಿಕೊಂಡೆನು.

ಈ ಮೊದಲೆ ನಾನು ನನಗೆ ಲ್ಯಾಟಿನ್ ಸ್ಕೂಲಿನಲ್ಲಿ ಒಂದು ವರುಷದ ಶಿಕ್ಷಣವಾಗಿತ್ತೆಂದು ನಮೂದಿಸಿದ್ದೇನ. ಅದು ಕೂಡಾ ನಾನು ಬಹಳ ತರುಣನಾಗಿದ್ದಾಗ. ಆ ತರುವಾಯ ನಾನು ಆ ಭಾಷೆಯನ್ನು ಸಂಪೂರ್ಣ ಅಲಕ್ಷಿಸಿದೆನು. ಆದರೆ ಫ್ರೆಂಚ್, ಇಟಾಲಿಯನ್ ಮತ್ತು ಸ್ಪೇನಿಷ್‌ಗಳ ಜ್ಞಾನವು ನನಗೆ ಉಂಟಾದ ಮೇಲೆ, ಲ್ಯಾಟಿನ್ ಟೆಸ್ಟಮೆಂಟ್ (Latin Testament) ದತ್ತ ದೃಷ್ಟಿ ಹಾಸಿದಾಗ, ಆ ಭಾಷೆಯ ಬಗ್ಗೆ ನಾನು ಎಣಿಸಿದುದಕ್ಕಿಂತ ವಿಶೇಷವಾದ ಜ್ಞಾನವು ನನಗಾಗಿತ್ತೆಂಬುದನ್ನು ತಿಳಿದುಕೊಳ್ಳಲು ನನಗೆ ಅಚ್ಚರಿಯಾಯಿತು. ಇದರಿಂದಾಗಿ ನಾನು ಪುನಃ ಅದರ ಅಭ್ಯಾಸದತ್ತ ಬೀಳುವ ಹಾಗಾಯಿತು. ಅಂತೇ ಈ ಮುಂಚಿನ ಭಾಷೆಗಳು ನನ್ನ ಹಾದಿಯನ್ನು ತುಂಬ ಸುಲಭಮಾಡಿ ಕೊಟ್ಟಿರುವುದರಿಂದ ನನಗೆ ಹೆಚ್ಚಿನ ಯಶಸ್ಸು ದೊರೆಯಿತು.

ಈ ಸಂಗತಿಯಿಂದ ಭಾಷೆಗಳನ್ನು ಕಲಿಸುವ ಸರ್ವ ಸಾಮಾನ್ಯವಾದ ನಮ್ಮ ಪದ್ಧತಿಯಲ್ಲಿ ಒಂದಿಷ್ಟು ತಾಳಮೇಳವಿಲ್ಲೆಂದು ನನಗೆನಿಸಿತು. ಲ್ಯಾಟಿನಿನಿಂದ ಮೊದಲು ಪ್ರಾರಂಭಿಸುವುದು ಯೋಗ್ಯವೆಂದು ನಮಗೆ ಹೇಳಲಾಗುತ್ತಿದೆ. ಅಂತೇ ಇದನ್ನು ರೂಢಿಸಿಕೊಂಡ ನಂತರ ಇದರಿಂದ ಹುಟ್ಟಿದ ಆಧುನಿಕ ಭಾಷೆಗಳನ್ನು ಕಲಿತುಕೊಳ್ಳಲು ಬಹಳ ಸುಲಭವಾಗುವುದಂತ. ಆದರೆ ಇನ್ನೂ ಲ್ಯಾಟಿನನ್ನು ಬಹಳ ಸರಾಗವಾಗಿ ಕಲಿತುಕೊಳ್ಳಲು ನಾವು ಗ್ರೀಕಿನಿಂದ ಪ್ರಾರಂಭಿಸುತ್ತಿಲ್ಲ. ಮೆಟ್ಟಲುಗಳನ್ನು ಉಪಯೋಗಿಸದೆ ಮಾಳಿಗೆಗೆ ಕಷ್ಟದಿಂದ ಹಾರಿದರೆ ಕೆಳಗೆ ಇಳಿಯುವಾಗ ಅವುಗಳಲ್ಲಿ ಬಹಳ ಸುಲಭದಿಂದ ಕೆಳಗೆ ಬರುವಿಯೆಂಬುದು ನಿಜವಾದ ಮಾತು, ಆದರೆ ಒಂದು ವೇಳೆ ತೀರ ಕೆಳಗಿನ ಮೆಟ್ಟಲಿನಿಂದ ಪ್ರಾರಂಭಿಸಿದರೆ ಬಹಳ ಸರಳವಾಗಿ ಅಟ್ಟಕ್ಕೆ ನೀನು ಮುಟ್ಟಬಹುದಾಗಿದೆ. ಆದುದರಿಂದ ನಮ್ಮ ಯುವಕರ ಶಿಕ್ಷಣದ ಮೇಲ್ವಿಚಾರಣೆ ನಡೆಸುತ್ತಿರುವವರ ಅವಗಾಹನೆಗಾಗಿ ನಾನು ಅವನ್ನು ಬಿಟ್ಟುಕೊಡುತ್ತೇನೆ. ಅಂದರೆ-- ಲ್ಯಾಟಿನಿನಿಂದ ಮೊದಲು ಪ್ರಾರಂಭಿಸುವವರು ಅದರಲ್ಲಿ ಕೆಲ ವರುಷಗಳು ಯಾವ ಪ್ರಭುತ್ವವನ್ನು ಸಾಧಿಸದೆ ಕಳೆದನಂತರ ಅದನ್ನು ತ್ಯಜಿಸುತ್ತಾರೆ. ಮತ್ತು ಅವರು ಕಲಿತುದೆಲ್ಲವೂ ನಿರುಪಯೋಗವಾಗುತ್ತದೆ. ಹೀಗೆ ಅವರ ಸಮಯ ವ್ಯರ್ಥವಾಯಿತು. ಆದುದರಿಂದ ಫ್ರೆಂಚಿನಿಂದ ಅಭ್ಯಾಸವನ್ನು ಪ್ರಾರಂಭಿಸಿಕೊಂಡು ಇಟಾಲಿಯನ್ ಮೊದಲಾದವುಗಳತ್ತ ತೆರಳಿದ್ದರ ಒಳ್ಳೆಯದಾಗುತ್ತಿತ್ತೋ ಇಲ್ಲವೋ? ಯಾಕೆಂದರೆ, ಅದೇ ಸಮಯವನ್ನು ಕಳೆದನಂತರ ಕೂಡಾ ಅವರು ಭಾಷೆಗಳ ಅಭ್ಯಾಸವನ್ನೆ ಬಿಡಬೇಕಾಗುತ್ತದೆ ಮತ್ತು ಎಂದೂ ಲ್ಯಾಟಿನನ್ನು ತಲಪುವುದೂ ಇಲ್ಲ. ಹೀಗಿರಲಾಗಿ ಅವರು ಹೇಗಿದ್ದರೂ ಕೂಡ ಒಂದೋ-ಎರಡೋ ಭಾಷೆಗಳನ್ನು ಕಲಿಯಬಹುದಾಗಿತ್ತು. ಅದಾದರೂ ಕೂಡ ಆಧುನಿಕ ಕಾಲದಲ್ಲಿ ಬಳಕೆಯಲ್ಲಿದ್ದುದರಿಂದ ನಿತ್ಯಜೀವನದಲ್ಲಿ ಅವರಿಗೆ ಉಪಯೋಗ ಬೀಳುತ್ತಿತ್ತಷ್ಟೆ.

ಬೋಸ್ಟನಿನಿಂದ ಹತ್ತು ವರುಷಗಳ ತನಕ ದೂರವಿದ್ದು ಮತ್ತು ನನ್ನ ಸ್ಥಿತಿಗಳು ಅನುಕೂಲವಾದ ನಂತರ ನಾನು ಬಂಧುಗಳನ್ನು ನೋಡುವುದಕ್ಕಾಗಿ ಅಲ್ಲಿಗೆ ಪ್ರಯಾಣ ಬೆಳೆಸಿದೆನು. ಇದನ್ನು ಇದಕ್ಕೂ ಬೇಗನೆ ನೆರವೇರಿಸಲು ನನ್ನಲ್ಲಿ ಹಣವಿದ್ದಿಲ್ಲ. ಮರಳುವಾಗ ನನ್ನ ಸೋದರನನ್ನು ನೋಡುವುದಕ್ಕೋಸ್ಕರ ನಾನು ನ್ಯೂಫೋರ್ಟಿಗೆ ಸಂದರ್ಶನವಿತ್ತೆನು. ಆಗ ಅವನು ಅಲ್ಲಿ ಮುದ್ರಣಾಲಯ ನಡೆಸುತ್ತಿದ್ದನು. ನಮ್ಮ ಹಿಂದಿನ ಮನ

ಸ್ತಾಪಗಳು ಮರೆತುಹೋಗಿದ್ದವು. ಅಂತೇ ನಮ್ಮ ಮಿಲನವು ಮನಃ ಪೂರ್ವಕವಾದದ್ದೂ ಪ್ರೀತಿಪೂರ್ವಕವಾದದ್ದೂ ಆಗಿತ್ತು. ಅವನ ಆರೋಗ್ಯವು ವೇಗವಾಗಿ ಕೆಡುತ್ತಿತ್ತು. ಅಂತೇ ಅವನು ತನ್ನ ಮರಣವು ಬೇಗನೆ ಸಂಭವಿಸುತ್ತದೆಂದು ತಿಳಿದುಕೊಂಡು, ತಾನು ಸತ್ತುದಾದರೆ ಆಗ ಕೇವಲ ಹತ್ತು ವರುಷ ಪ್ರಾಯದವನಾಗಿದ್ದ, ತನ್ನ ಮಗನನ್ನು, ನನ್ನ ಮನೆಗೆ ಕರೆದುಕೊಂಡು ಹೋಗಿ, ಮುದ್ರಣದ ಕೆಲಸದಲ್ಲಿ ಅವನನ್ನು ರೂಢಿಸಬೇಕೆಂದು ನನಗೆ ಅರಿಕೆಮಾಡಿಕೊಂಡನು. ಇದನ್ನು ನಾನು ಆ ಪ್ರಕಾರ ನೆರವೇರಿಸಿದೆನು. ಕೆಲಸದ ಕಚೇರಿಗೆ ಒಯ್ಯುವುದಕ್ಕಿಂತ ಮೊದಲು ಕೆಲವು ವರುಷಗಳ ತನಕ ಅವನನ್ನು ಸಾಲೆಗೂ ಕಳುಹಿಸಿದ್ದಾಗಿತ್ತು. ಪ್ರಾಯಕ್ಕೆ ಬರುವತನಕ ಅವನ ತಾಯಿ ವ್ಯವಹಾರ ಸಾಗಿಸಿದ್ದಳು. ಅನಂತರ ಅವನ ತಂದೆಯ ಟೈಪುಗಳು ಸವೆದು ಹೋದುದರಿಂದ ನಾನು ಅವನಿಗೆ ಹೊಸ ಟೈಪುಗಳ ಸರಬರಾಯಿ ಮಾಡಿಕೊಟ್ಟು ಸಹಕರಿಸಿದೆನು. ಹೀಗೆ ನಾನು ಅವನನ್ನು ಬಹಳ ಬೇಗನೆ ಬಿಟ್ಟುಹೋದುದರ ದೆಸೆಯಿಂದ ಅವನಿಗೆ ನೀಡದಿದ್ದ ನನ್ನ ಸೇವೆಯ ಸಲುವಾಗಿ ಈಗ ಇದರ ಮುಖಾಂತರ ಅತಿಯಾಗಿ ನಷ್ಟಭರತಿ ಮಾಡಿಕೊಟ್ಟಂತಾಯಿತು.

೧೭೩೬ ರಲ್ಲಿ ಸಾಮಾನ್ಯವಾಗಿ ತಗಲಿದ ಸಿಡುಬಿನಿಂದ ನಾಲ್ಕು ವರುಷದ ನನ್ನ ಒಳ್ಳೆಯ ಹುಡುಗನನ್ನು ಕಳೆದುಕೊಂಡೆನು. ದೀರ್ಘ ಕಾಲದ ತನಕ ನಾನು ದುಃಖಿಸಿದ್ದಾಯಿತು. ಆದರೆ ಅವನಿಗೆ ದಾತು ಹಾಕಿಸಲಿಲ್ಲವಲ್ಲಾ ಎಂದು ಇನ್ನೂ ದುಃಖಿಸುತ್ತೇನೆ. ಈ ಚಿಕಿತ್ಸೆಯನ್ನು ಮಾಡಿಸದಿರುವ ಪಾಲಕರ ಸಲುವಾಗಿ ನಾನು ಇದನ್ನು ಹೇಳುತ್ತಿದ್ದೇನೆ. ಅದರಿಂದಾಗಿ ಒಂದು ಮಗು ಸತ್ತುದಾದರೆ ಅವರು ಅದನ್ನು ಎಂದೂ ಮರೆಯುವುದಿಲ್ಲನೆಂದು ನನ್ನ ನಂಬಿಕೆ. ಆದರೆ ಎರಡೂ ವಿಧದಿಂದಲೂ ದುಃಖವು ಮಾತ್ರ ಒಂದೇ ಆಗಿವೆಯೆಂದು ನನ್ನ ಉದಾಹರಣೆ ತೋರಿಸುತ್ತದೆ. ಆದುದರಿಂದ ಕ್ಷೇಮಕರವಾದ ಮಾರ್ಗವನ್ನೆ ಆರಿಸತಕ್ಕುದ್ದಷ್ಟೆ.

ನಮ್ಮ ಸಂಸ್ಥೆ 'ಜಂಟೊ' ಬಹಳ ಉಪಯುಕ್ತವಾಗಿ ಕಂಡಿತು ಮತ್ತು ಸದಸ್ಯರಿಗೆ ಪೂರ್ಣ ತೃಪ್ತಿಯನ್ನಿತ್ತಿತು. ಹೀಗಾಗಿ ಅನೇಕರು ತಮ್ಮ ಮಿತ್ರರನ್ನು ಇದರಲ್ಲಿ ಸೇರಿಸಲು ಇಚ್ಛಿಸಿದ್ದರು. ಆದರೆ ಯೋಗ್ಯವೆಂದು ನಾವು ನಿರ್ದಿಷ್ಟಪಡಿಸಿದ್ದ ಹನ್ನೆರಡರ ಸದಸ್ಯತ್ವದ ಸಂಖ್ಯೆಯನ್ನು ಹೆಚ್ಚಿಸದೆ ಹಾಗೆ ಅದನ್ನು ಮಾಡುವುದು ಒಳ್ಳೆಯದಾಗುತ್ತಿರಲಿಲ್ಲ. ಆದಿಯಿಂದಲೂ ನಾವು ನಮ್ಮ ಸಂಸ್ಥೆಯನ್ನು ಗುಪ್ತವಾಗಿ ಇಡಬೇಕೆಂಬ ತತ್ವ

ವನ್ನು ಇಟ್ಟಿದ್ದೆವು. ಇದನ್ನು ಚೆನ್ನಾಗಿ ಅನುಸರಿಸಿಕೊಂಡು ಬಂದದ್ದಾಗಿತ್ತು. ಇದರ ಮುಖ್ಯ ಉದ್ದೇಶವೇನೆಂದರೆ ಅಯೋಗ್ಯ ಜನರನ್ನು ಸೇರಿಸಿಕೊಳ್ಳಲು ಬರುವ ಅರ್ಜಿಗಳನ್ನು ತಪ್ಪಿಸುವುದಾಗಿತ್ತು. ಆದರೆ ಅವರಲ್ಲಿ ಕೆಲವರನ್ನು ನಿರಾಕರಿಸುವುದೇ ನನಗೆ ಕಠಿಣವೆಂದು ಕಂಡುಬಂದಿತು ನಮ್ಮ ಸಂಖ್ಯೆಯನ್ನು ಹೆಚ್ಚಿಸಬಾರದೆಂಬವರಲ್ಲಿ ನಾನೂ ಒಬ್ಬನಾಗಿದ್ದೆ. ಆದರೆ ಇದರ ಬದಲಾಗಿ ಒಂದು ಲಿಖಿತ ಠರಾವನ್ನು ಮಾಡಿದ್ದಾಯಿತು. ಅದರಂತೆ ಪ್ರತಿಯೊಬ್ಬ ಸದಸ್ಯನೂ ಪ್ರತ್ಯೇಕವಾದ ಒಂದು ಉಪ ಸಂಸ್ಥೆಯನ್ನು-ಪ್ರಶ್ನಾವಳಿ ಮೊದಲಾದವುಗಳ ಕುರಿತು ಅದೇ ತತ್ವಗಳಿಂದ-ಸ್ಥಾಪಿಸಲು ಪ್ರಯತ್ನಿಸಬೇಕಾಗಿತ್ತು ಮತ್ತು ಅವುಗಳ ಸಂಬಂಧವನ್ನು ಜಂಟೋವಿಗೆ ತಿಳಿಸಬಾರದಾಗಿತ್ತು. ನಮ್ಮ ಸಂಸ್ಥೆಗಳ ಉಪಯೋಗದಿಂದ ಹೆಚ್ಚಿನ ಅನೇಕ ತರುಣ ನಾಗರಿಕರ ಸುಧಾರಣೆ; ಪ್ರತಿಯೊಂದು ಸಂದರ್ಭಗಳಲ್ಲಿ ಕೂಡ ಪುರವಾಸಿಗಳ ಸಾಮಾನ್ಯವಾದ ಆಗುಹೋಗುಗಳ ವಿಚಾರವನ್ನು ಉತ್ತಮ ರೀತಿಯಿಂದ ಅರಿತುಕೊಂಡಿರುವುದು; ಯಾಕಂದರೆ "ಜಂಟೋ" ಸದಸ್ಯನು ನಮಗೆ ಯಾವ ಸಮಸ್ಯೆಯು ಅವಶ್ಯವಿದೆಯೆಂದು ಹೇಳಬೇಕಾಗಿತ್ತು ಮತ್ತು ಅವನ ಪ್ರತ್ಯೇಕ ಸಂಸ್ಥೆಯಲ್ಲಾದ ಠರಾವನ್ನು ಜಂಟೋವಿಗೆ ತಿಳಿಸಬೇಕಾಗಿತ್ತು; ವಿಶಾಲವಾದ ಶಿಫಾರಸಿನಿಂದ ವ್ಯವಹಾರದಲ್ಲಿ ನಮ್ಮ ವೈಯಕ್ತಿಕ ಉದ್ದೇಶಗಳು ಸಫಲಗೊಳ್ಳುವುದು, ಮತ್ತು ಸಾರ್ವಜನಿಕ ವ್ಯವಹಾರದಲ್ಲಿ ನಮ್ಮ ವರ್ಚಸ್ಸು ಹೆಚ್ಚುವುದು, ಮತ್ತು ಜಂಟೋದ ಭಾವನೆಗಳನ್ನು ನಮ್ಮ ಅನೇಕ ಸಂಸ್ಥೆಗಳಿಂದ ಬಿತ್ತರಿಸುವುದರಿಂದ ಸತ್ಕಾರ್ಯಗಳನ್ನು ಮಾಡುವ ನಮ್ಮ ಶಕ್ತಿಯು ವೃದ್ಧಿಯಾಗುವುದು— ಇವುಗಳೆಲ್ಲ ಅದರ ನಿರೀಕ್ಷಿತ ಅನುಕೂಲತೆಗಳಾಗಿದ್ದವು.

ಯೋಜನೆಯು ಎಲ್ಲರಿಗೂ ಒಪ್ಪಿಗೆಯಾಯಿತು. ಅಂತೇ ಪ್ರತಿಯೊಬ್ಬ ಸದಸ್ಯನೂ ತನ್ನ ಸಂಸ್ಥೆಯನ್ನು ರೂಪಿಸಲು ತೊಡಗಿದನು. ಆದರೆ ಅವರೆಲ್ಲರೂ ಯಶಸ್ವಿಯಾಗಲಿಲ್ಲ. ಐದೋ ಆರೋ ಪೂರ್ಣವಾದವು. ಅವುಗಳನ್ನು ವಿವಿಧ ಹೆಸರುಗಳಿಂದ ಕರೆಯಲಾಗುತ್ತಿತ್ತು. ಅಂದರೆ— ವೈನ್ (Vine), ಯೂನಿಯನ್ (Union), ಬ್ಯಾಂಡ್ (Band) ಇತ್ಯಾದಿಯಾಗಿ. ಅವುಗಳು ತಮ್ಮಷ್ಟಕ್ಕೆ ಉಪಯುಕ್ತವಾಗಿದ್ದವು ಮತ್ತು ನಮಗೆ ಸಾಕಷ್ಟು ಪ್ರಮಾಣದಲ್ಲಿ ಮನೋರಂಜನೆ, ಸುದ್ದಿಸಮಾಚಾರ, ಹಾಗೂ ಉಪದೇಶವನ್ನು ನೀಡುತ್ತಿದ್ದವು. ಅದಲ್ಲದೆ, ಕೆಲ ವಿಶಿಷ್ಟ ಸಂದರ್ಭಗಳಲ್ಲಿ ಸಾರ್ವಜನಿಕ ಅಭಿಪ್ರಾಯದ ಬಗ್ಗೆ ನಮ್ಮ ವಿಚಾರಗಳನ್ನು

ವ್ಯಕ್ತಪಡಿಸುವಾಗ ಬಹಳ ಪರಿಣಾಮವನ್ನುಂಟುಮಾಡುತ್ತಿತ್ತು. ಅವುಗಳ ಉದಾಹರಣೆಯನ್ನು ಸಮಯಾನುಸಾರವಾಗಿ ಅವುಗಳು ಘಟಿಸಿದ ಹಾಗೆ ಕೊಡುತ್ತೇನೆ.

೧೭೩೬ ರಲ್ಲಿ ನನ್ನನ್ನು ಜನರಲ್ ಅಸೆಂಬ್ಲಿ (General Assembly)ಯ ಕಾರಕೂನನೆಂದು ಆರಿಸಿದು ನನ್ನ ಮೊದಲನೆಯ ಅಭಿವೃದ್ಧಿಯಾಗಿರುತ್ತದೆ. ಆ ವರುಷದ ಆಯ್ಕೆಯು ಅವಿರೋಧವಾಗಿತ್ತು. ಆದರೆ ಮುಂದಿನ ವರುಷ ಪುನಃ ನನ್ನನ್ನೆ ಆ ಆಯ್ಕೆಗೆ ಸೂಚಿಸಿದಾಗ (ಸದಸ್ಯರ ಹಾಗೆ ಈ ಆಯ್ಕೆಯೂ ಕೂಡ ವಾರ್ಷಿಕವಾಗಿತ್ತು.) ಒಬ್ಬ ಹೊಸ ಸದಸ್ಯನು ನನ್ನ ವಿರುದ್ಧ ಒಂದು ಪ್ರದೀರ್ಘ ಭಾಷಣವನ್ನು, ಮತ್ತೊಬ್ಬ ಉಮೇದುವಾರನಿಗೆ ಉಪಕಾರಮಾಡಲಿಕ್ಕೋಸುಗ, ಮಾಡಿದನು. ಏನಿದ್ದರೂ ಕೂಡ ನಾನೊಮ್ಮೆ ಆರಿಸಲ್ಪಟ್ಟೆನು. ಇದು ನನಗೆ ತುಂಬಾ ಹಿತಕರವಾಗಿತ್ತು. ಯಾಕಂದರೆ ಕಾರಕೂನಿಕೆಯ ಸೇವೆಗೆ ದೊರೆಯುತ್ತಿದ್ದ ತಕ್ಷಣ ಸಂಬಳವಲ್ಲದೆ ಸದಸ್ಯರೊಡನೆ ನಿಕಟವಾದ ಪರಿಚಯವನ್ನು ಇಟ್ಟುಕೊಳ್ಳಲು ಈ ಸ್ಥಾನವು ನನಗೆ ಉತ್ತಮ ಸಂಧಿಯನ್ನು ನೀಡಿತು. ಇದರಿಂದಾಗಿ ಓಟುಗಳನ್ನು, ಕಾಯ್ದೆಗಳನ್ನು, ಕಾಗದದ ಹಣವನ್ನು ಮತ್ತು ಇತರ ಸಾಂದರ್ಭಿಕ ಬಿಡುಗೆಲಸ (jobs)ಗಳನ್ನು ಮುದ್ರಿಸುವ ವ್ಯವಹಾರ ನನಗೆ ಲಭಿಸಿತು. ಒಟ್ಟಿನಲ್ಲಿ ಇವುಗಳೆಲ್ಲ ಲಾಭದಾಯಕವಾಗಿದವು.

ಹೀಗಾಗಿ ನನಗೆ ಈ ಹೊಸ ಸದಸ್ಯನ ವಿರೋಧವು ಸೇರಲಿಲ್ಲ. ಅವನು ದುಡ್ಡಿದ್ದವನು ಮತ್ತು ಸುಶಿಕ್ಷಿತನಾದ ದೊಡ್ಡ ಮನುಷ್ಯನಾಗಿದ್ದನು. ಅಲ್ಲದೆ ಅವನ ಬುದ್ಧಿಮತ್ತೆಗಳಿಂದ ಅವನಿಗೆ ಸಭೆಯಲ್ಲಿ (House) ದೊಡ್ಡ ವರ್ಚಸ್ಸು ಸಿಗುವ ಪ್ರಸಂಗವಿತ್ತು. ಅದೇ ರೀತಿಯಲ್ಲಿ ಅವನಿಗೆ ಅದು ತರುವಾಯ ದೊರಕಿತು. ಹಾಗೆಂದು ಅವನಿಗೆ ಎಲ್ಲಾದರೂ ಸೇವಕಬುದ್ಧಿಯ ಗೌರವವನ್ನು ತೋರಿಸಿ ಅವನ ಸಹಾಯವನ್ನು ಬೇಡುವುದರತ್ತ ನಾನೇನು ಗುರಿಯಿಟ್ಟಿರಲಿಲ್ಲ. ಆದರೆ ಕೆಲಕಾಲದ ತರುವಾಯ ಇತರ ಮಾರ್ಗವೊಂದನ್ನು ಹಿಡಿದೆನು. ಅವನ ಪುಸ್ತಕಾಲಯದಲ್ಲಿ ಒಂದು ಅತ್ಯಂತ ದುರ್ಲಭವಾದ ಮತ್ತು ಕುತೂಹಲಕರವಾದ ಪುಸ್ತಕವಿದೆಯೆಂಬುದನ್ನು ಕೇಳಿಕೊಂಡ ಮೇಲೆ ಆ ಪುಸ್ತಕವನ್ನು ಓದುವ ನನ್ನ ಇಚ್ಛೆಯನ್ನು ವ್ಯಕ್ತಪಡಿಸಿ, ಅದನ್ನು ನನಗೆ ಕೆಲ ದಿವಸಗಳವರೆಗೆ ಎರವಲು ಕೊಡುವ ಉದಾರತೆಯನ್ನು ಅವನು ತೋರಿಸಬೇಕೆಂದು ಬಿನ್ನವಿಸಿ ಒಂದು ಪತ್ರವನ್ನು

ಬರೆದೆನು. ಅವನು ಅದನ್ನು ಬಹು ಬೇಗನೆ ಕೊಟ್ಟು ಕಳುಹಿಸಿದನು. ನಾನು ಕೂಡ ಅದನ್ನು ಒಂದು ವಾರದಲ್ಲಿ, ಮತ್ತೊಂದು ಪತ್ರವನ್ನು ಬರೆದು-ಅದರಲ್ಲಿ ಬಹಳ ಆಳವಾಗಿ ನನ್ನ ಕೃತಜ್ಞತೆಯನ್ನು ಸೂಚಿಸಿ, ಹಿಂದೆ ಕಳುಹಿಸಿದೆನು. ಮುಂದೆ ನಾವು ಪುನಃ ಸಭೆ (House)ಯಲ್ಲಿ ಸಂಧಿಸಿದಾಗ, ಅವನು ನನ್ನೊಡನೆ ಮಾತಾಡಿದನು (ಈ ಮೊದಲು ಅವನೆಂದೂ ಮಾತಾಡಿದವನಲ್ಲ); ಬಹಳ ಆದರದಿಂದ ಸಲ್ಲಾಪ ನಡೆಸಿದನು; ಅಂತೇ ಅವನು ಅಂದಿನಿಂದ ಯಾವಾಗಲೂ ಯಾವ ಪ್ರಸಂಗದಲ್ಲೂ ನನಗೆ ಸಹಾಯ ಮಾಡಲು ಸಿದ್ಧತೆಯನ್ನು ವ್ಯಕ್ತಪಡಿಸುತ್ತಿದ್ದನು. ಹೀಗಾಗಿ ನಾವು ದೊಡ್ಡ ಗೆಳೆಯರಾದೆವು. ನಮ್ಮ ಗೆಳೆತನವು ಅವನ ಮರಣದ ತನಕ ಸಾಗಿತ್ತು. ಇದು ನಾನು ಕಲಿತ ಹಳೆಯ ಗಾದೆ ಮಾತಿನ ಸತ್ಯದ ವಿಚಾರದಲ್ಲಿ ಇನ್ನೊಂದು ಉದಾಹರಣೆಯಾಗಿರುತ್ತದೆ. ಅದು ಹೀಗೆ ಹೇಳುತ್ತದೆ: "ನೀನು ಉಪಕಾರ ಹೊರಿಸಿದವನಿಗಿಂತ ಹೆಚ್ಚು ಮುಂದಾಗಿ ಯಾವನು ನಿನಗೊಮ್ಮೆ ಉಪಕಾರ ಮಾಡಿದ್ದಾನೋ ಅವನು ಮತ್ತೊಮ್ಮೆ ಉಪಕರಿಸಲು ಸಿದ್ಧನಾಗಿರುತ್ತಾನೆ" ಅಂತೇ ವಿರೋಧಿಸುವುದು, ತಿರುಗಿ ಆರಿಸಿ ಬರುವುದು ಮತ್ತು ವೈರತ್ವದ ಮಾರ್ಗವನ್ನು ಹಿಡಿದು ಮುನ್ನಡೆಯುವುದಕ್ಕಿಂತ ವಿವೇಕತನದಿಂದ ಸ್ಥಾನಾಂತರ ಮಾಡುವುದು ಎಷ್ಟು ಲಾಭದಾಯಕವಾದುದೆಂಬುದನ್ನು ಇದು ತೋರಿಸುತ್ತದೆ.

೧೭೩೭ರಲ್ಲಿ ಕರ್ನಲ್ ಸ್ಪೋಟ್ಸ್‌ವುಡ್, ಎಂಬ ವರ್ಜಿನಿಯಾದ ಮಾಜಿ ಗವರ್ನರ್ ಮತ್ತು ಆಗ ಪೋಸ್ಟ್‌ಮಾಸ್ಟರ್ ಜನರಲ್ ಆಗಿದ್ದವನು, ಫಿಲಡೆಲ್ಫಿಯಾದಲ್ಲಿನ ತನ್ನ ಪ್ರತಿನಿಧಿಯ ನಡತೆಯ ಬಗ್ಗೆ ಅತೃಪ್ತನಾಗಿ ಮತ್ತು ಅಲಕ್ಷ್ಯತನದಿಂದ ಹಾಗೂ ಅಯೋಗ್ಯ ರೀತಿಯಲ್ಲಿ ಪ್ರತಿನಿಧಿಯು ತನ್ನ ಲೆಕ್ಕಪತ್ರಗಳನ್ನು ನೋಡಿಕೊಂಡದ್ದರಿಂದ ಅವನಿಂದ ತನ್ನ ದಲಾಲಿ (Commission)ಯನ್ನು ತೆಗೆದು ನನಗೆ ನೀಡಿದನು. ಅದನ್ನು ನಾನು ಮನಃಪೂರ್ವಕ ಸ್ವೀಕರಿಸಿದೆನು ಮತ್ತು ಅದು ತುಂಬ ಲಾಭದಾಯಕವಾಗಿತ್ತು. ಯಾಕಂದರೆ ಸಂಬಳವು ಕಡಿಮೆಯಾಗಿದ್ದರೂ ಕೂಡ, ಅದರ ಪತ್ರವ್ಯವಹಾರ ಸುದ್ದಿಸಮಾಚಾರಗಳು ನನ್ನ ವೃತ್ತಪತ್ರಿಕೆಯನ್ನು ಸುಧಾರಿಸಿದುವು; ಅದರ ಬೇಡಿಕೆಯ ಸಂಖ್ಯೆ ಹೆಚ್ಚಿತು, ಅಲ್ಲದೆ ಜಾಹಿರಾತು ಹಾಕುವುದೂ ಹೆಚ್ಚಾಯಿತು. ಹೀಗಾಗಿ ನನಗೆ ಅದು ಸಾಕಷ್ಟು ವರಮಾನವನ್ನು ನೀಡುವಂತಹದ್ದಾಯಿತು. ಅದೇ ರೀತಿಯಲ್ಲಿ ನನ್ನ ಹಳೆಯ ಪ್ರತಿಸ್ಪರ್ಧಿಯ ಪತ್ರಿಕೆಯ ಪ್ರಸಾರವು ಕಡಿಮೆಯಾಯಿತು. ಇತ್ತ ಪೋಸ್ಟ್‌ಮಾಸ್ಟರನಿದ್ದಾಗ ನನ್ನ

ಪತ್ರಿಕೆಗಳನ್ನು ಸವಾರರು ಒಯ್ಯಗೊಡದ ಅವನ ನಿರಾಕರಣೆಯ ಬಗ್ಗೆ ಸೇಡು ತೀರಿಸದೆ ನಾನು ತೃಪ್ತನಾದೆನು. ಹೀಗೆ ಅವನು ಕೊಡತಕ್ಕ ಸಾಲದ ಲೆಕ್ಕದಿಂದ ತುಂಬ ಕಷ್ಟಕ್ಕೀಡಾದನು. ಬೇರೆಯವರ ವತಿಯಲ್ಲಿ ಕಾರ್ಯವ್ಯವಹಾರದ ಉಸ್ತುವಾರಿಯನ್ನು ನೋಡಲು ನೇಮಿಸಲ್ಪಟ್ಟ ತರುಣರಿಗೆ ಇದು ಒಂದು ಪಾಠವೆಂದು ನಾನು ಇದನ್ನು ಹೇಳಿದ್ದಾಗಿರುತ್ತದೆ. ಅವರು ಯಾವಾಗಲೂ ಲೆಕ್ಕ-ಪತ್ರಗಳನ್ನು ಕೊಡುತ್ತ ಇರಬೇಕು ಮತ್ತು ಹಣ ಕಳುಹಿಸುತ್ತಿರಬೇಕು. ಇದನ್ನು ಬಹು ಸ್ಪಷ್ಟವಾಗಿ ಮತ್ತು ಕ್ಲುಪ್ತಕಾಲಕ್ಕೆ ಸರಿಯಾಗಿ ನಿರ್ವಹಿಸತಕ್ಕದ್ದು. ಅಂಥ ನಡತೆಯನ್ನು ಕಾದುಕೊಳ್ಳುವ ಸ್ವಭಾವವು—ಹೊಸ ಉದ್ಯೋಗಗಳಿಗೆ ಮತ್ತು ವ್ಯವಹಾರದ ಅಭಿವೃದ್ಧಿಗೆ ಎಲ್ಲಾ ಶಿಫಾರಸುಗಳಿಗಿಂತ ಹೆಚ್ಚು ಸತ್ವಯುತವಾದದ್ದು.

ಈಗ ಹೇಗಾದರೂ ಚಿಕ್ಕಪುಟ್ಟ ವಿಷಯಗಳಿಂದ ಪ್ರಾರಂಭಿಸಿಕೊಂಡು ನಾನು ಸಾರ್ವಜನಿಕ ಕಾರ್ಯಕಲಾಪಗಳತ್ತ ತುಸು ನನ್ನ ವಿಚಾರಗಳನ್ನು ತೊಡಗಿಸಲಿಕ್ಕೆ ಪ್ರಾರಂಭಿಸಿದೆನು. ನಗರದ ಗಸ್ತಿ (watch)ಯ ಬಗ್ಗೆ ಕಾಯದೆ-ಕಾನೂನಿನ ಅಗತ್ಯವಿದೆಯೆಂಬುದು ನಾನು ಮೊಟ್ಟಮೊದಲಿಗೆ ವಿಚಾರಿಸಿದ ವಿಷಯಗಳಲ್ಲಿ ಒಂದಾಗಿತ್ತು. ಇದು ಸರದಿಯ ಪ್ರಕಾರ ಆಯಾಯ ವಾರ್ಡಿನ ಕಾನ್ಸಟೇಬಲುಗಳ ಮೂಲಕ ನಡೆಸಲ್ಪಡುತ್ತಿತ್ತು. ಇತ್ತ ಆ ಕಾನ್ಸಟೇಬಲನು ಕೆಲವು ಮನೆಗಳ ಜನರಿಗೆ ತನ್ನೊಡನೆ ರಾತ್ರಿಯಲ್ಲಿ ಸಹಕರಿಸಲು ಎಚ್ಚರಿಸುತ್ತಿದ್ದನು. ಎಂದೂ ಅವನೊಡನೆ ಇದ್ದು ಸಹಕರಿಸಲು ಇಚ್ಛಿಸದವರು ವರುಷಕ್ಕೆ ಆರು ಶಿಲ್ಲಿಂಗುಗಳನ್ನು ದಂಡವೆಂದು ಅವನಿಗೆ ಕೊಡುತ್ತಿದ್ದರು. ಈ ಹಣವು ಅವರ ಬದಲಿಗೆ ಜನರನ್ನು ಸಂಬಳಕ್ಕೆ ಪಡೆಯಲು ಉಪಯೋಗಿಸಲಿಕ್ಕೆಂದು ತಿಳಿಯಲಾಗಿತ್ತು. ಆದರೆ ವಸ್ತುತಃ ಅಷ್ಟು ಮಾತ್ರ ಈ ಕಾರ್ಯಕ್ಕೆ ಬೇಕಾದುದಕ್ಕಿಂತ ಅತಿ ಹೆಚ್ಚಾಗಿತ್ತು. ಅಂತೇ ಕಾನ್ಸಟೇಬಲ್ ಕೆಲಸವು ಲಾಭಬಡಕತನದ ಉದ್ಯಮವಾಗಿ ಬಿಟ್ಟಿತ್ತು. ಮತ್ತು ಈ ಕಾನ್ಸಟೇಬಲನು ಒಂದಿಷ್ಟು ಹೆಂಡದಿಂದ, ತನಗೆ ದೊರೆತ ತೀರ ದುಷ್ಟ ಮೂಢರನ್ನು ಗಸ್ತಿಯಾಳುಗಳನ್ನಾಗಿ ಆಗಾಗ ನೇಮಿಸಿಕೊಳ್ಳುತ್ತಿದ್ದನು. ಹೀಗಾಗಿ ಗೌರವಸ್ಥ ಮನೆತನದವರು ಅವರೊಡನೆ ಸೇರಲು ಬಯಸುತ್ತಿದ್ದಿಲ್ಲ. ಸುತ್ತು ಹಾಕುತ್ತ ತಿರುಗುವುದನ್ನೂ ಕೆಲವೊಮ್ಮೆ ಅಲಕ್ಷಿಸಲಾಗುತ್ತಿತ್ತು. ಅಂತೇ ಹೆಚ್ಚಿನ ರಾತ್ರಿಯೆಲ್ಲ ಕುಡಿತದಲ್ಲಿ ಕಳೆದು ಹೋಗುತ್ತಿತ್ತು. ಆ ಬಗ್ಗೆ ನಾನು ಜಂಟೋದಲ್ಲಿ ಓದುವುದಕ್ಕೋಸ್ಕರ ಒಂದು ಪ್ರಬಂಧವನ್ನು ಬರೆದು, ಆದರಲ್ಲಿ ಈ ಅನಿಯಮಿತ

ಸಂಗತಿಗಳನ್ನೆಲ್ಲ ವಿವರಿಸಿ, ಹೆಚ್ಚು ಪ್ರಮುಖವಾಗಿ ಈ ಕಾನ್ಸಟೇಬಲುಗಳ ಆರು ಶಿಲ್ಲಿಂಗ್ ಕರದ ವೈಷಮ್ಯವು ಅದನ್ನು ತೆರುವ ಜನರ ಸ್ಥಿತಿಗತಿಗನು ಸಾರವಾಗಿ ಎಷ್ಟಿದೆಯೆಂಬುದನ್ನು ಒತ್ತಿ ಹೇಳಿದ್ದೆನು. ಯಾಕಂದರೆ— ಮನೆಯುಳ್ಳ ಬಡ ವಿಧವೆಯೊಬ್ಬಳು,-ಗಸ್ತಿ ಮಾಡತಕ್ಕ ಅವಳ ಸರ್ವ ಸೊತ್ತಿನ ಬೆಲೆಯು ಐವತ್ತು ಪೌಂಡುಗಳನ್ನ ಮೀರಲಿಕ್ಕಿಲ್ಲವಾದರೂ— ಶ್ರೀಮಂತ ವ್ಯಾಪಾರಿಯಷ್ಟೆ ಹಣ ಕೊಡಬೇಕಾಗುತ್ತವೆ. ಇತ್ತ ಅವನ ಗುದಾಮಿನಲ್ಲಿ ಸಹಸ್ರಾರು ಪೌಂಡುಗಳ ಸಾಮಾನುಗಳಿರುತ್ತವೆಯಷ್ಟೆ.

ಒಟ್ಟಿನಲ್ಲಿ ನಾನು ಆ ಕಾರ್ಯದಲ್ಲಿ ಸತತವಾಗಿ ಕೆಲಸ ಮಾಡುವಂಥ ಯೋಗ್ಯ ಮನುಷ್ಯರನ್ನು ಸಂಬಳಕ್ಕೆ ತೆಗೆದುಕೊಳ್ಳುವುದು, ಮತ್ತು ಹೆಚ್ಚು ಸಮಾನವಾದ ರೀತಿಯಲ್ಲಿ ಆದರ ತೆರಿಗೆಯನ್ನು ಪುರಸ್ಕರಿಸುವುದು—ಅಂದರೆ ಆಸ್ತಿಸೊತ್ತಿಗೆ ಅನುಗುಣವಾದ ತೆರಿಗೆಯನ್ನು ಹೇರುವುದನ್ನು ಪರಿಣಾಮ ಕಾರಿಯಾದ ಗಸ್ತಿಗೋಸ್ಕರ ಪ್ರಸ್ತಾಪ ಮಾಡಿದೆನು. ಈ ಹಂಚಿಕೆಯನ್ನು ಜಂಟೋದ ಸಮ್ಮತಿ ಪಡೆದು ಬೇರೆ ಸಂಸ್ಥೆಗಳಿಗೆ ತಿಳಿಸಲಾಯಿತು. ಆದರೆ ಪ್ರತಿಯೊಂದರಲ್ಲೂ ಆ ವಿಚಾರ ಸ್ಫುರಿಸಿದೆಯೆಂಬಂತೆ ತಿಳಿಸಲಾಯಿತಷ್ಟೆ. ಅಂತೇ ಯೋಜನೆಯು ಆ ಕೂಡಲೆ ಕಾರ್ಯಗತವಾಗದಿದ್ದರೂ ಕೂಡ ಜನರ ಮನಸ್ಸುಗಳನ್ನು ಈ ಬದಲಾವಣೆಗೆ ಅನುಗೊಳಿಸಿ, ಕೆಲ ವರುಷಗಳ ತರುವಾಯ ಸ್ಥಿರವಾದ ಕಾಯ್ದೆಗೆ ಹಾದಿಯನ್ನು ಹಾಕಿಕೊಟ್ಟಿತು. ಆಗ ನನ್ನ ಸಂಸ್ಥೆಗಳ ಸದಸ್ಯರು ಹೆಚ್ಚು ವರ್ಚಸ್ಸನ್ನು ಗಳಿಸಿದ್ದರು.

ಈ ಕಾಲದ ಸುಮಾರಿಗೆ ನಾನೊಂದು ಲೇಖನವನ್ನು (ಅದು ಮೊದಲಿಗೆ ಜಂಟೊದಲ್ಲಿ ಓದುವುದಕ್ಕೋಸ್ಕರ, ಬರೆದದ್ದು ಆದರೆ ಆ ಮೇಲೆ ಮಾತ್ರ ಪ್ರಕಟವಾಯಿತು)- ತರತರಹದ ಅವಘಡಗಳಿಂದ ಮತ್ತು ಅಲಕ್ಷ್ಯತನದಿಂದ ಮನೆಗೆ ಬೆಂಕಿ ಬೀಳುವುದರ ಕುರಿತು ಮತ್ತು ಅವುಗಳ ಬಗ್ಗೆ ವಹಿಸತಕ್ಕ ಎಚ್ಚರಿಕೆಗಳ ಹಾಗೂ ಅವುಗಳನ್ನು ತಡೆಯುವ ಮಾರ್ಗಗಳ ವಿಷಯವಾಗಿ ಬರೆದೆನು. ಇದೊಂದು ಉಪಯುಕ್ತ ಲೇಖನವೆಂದು ಬಹಳ ಮಾತುಕತೆ ನಡೆಯಿತು. ಅಂತೇ ಒಂದು ಯೋಜನೆಯ ಹುಟ್ಟಿಗೆ ಕಾರಣವಾಯಿತು. ಇದರಿಂದಾಗಿ ಬೆಂಕಿಯನ್ನು ಹೆಚ್ಚು ಶೀಘ್ರವಾಗಿ ನಂದಿಸುವ ಕಂಪನಿಗಳನ್ನು ರೂಪಿಸುವುದು ಹಾಗೂ ಅಪಾಯದಲ್ಲಿ ಸಿಲುಕಿದ ಸಾಮಾನುಗಳನ್ನು ಸಾಗಿಸುವುದರ ಬಗ್ಗೆ ಮತ್ತು ಉಳಿಸುವುದರ ಬಗ್ಗೆ ಪರಸ್ಪರ ಸಹಾಯ ಮಾಡುವುದು ಜೇಗನೆ ಆ ಯೋಜನೆಯಲ್ಲಿ ಸೇರಿಕೊಂಡಿತ್ತು. ಈಗಾಗಲೇ ಈ ಯೋಜನೆಯಲ್ಲಿರಬೇಕಾದ ಸದಸ್ಯರ ಸಂಖ್ಯೆ ಮೂವತ್ತು ಇತ್ತು.

ನಮ್ಮ ಒಪ್ಪಂದದ ಕರಾರುಗಳಂತೆ ಪ್ರತಿಯೊಬ್ಬ ಸದಸ್ಯನೂ ಯೋಗ್ಯ ರೀತಿಯಲ್ಲಿ ಸದಾ ಇರುವಂತೆ ಮತ್ತು ಅವನಿಗೆ ಉಪಯೋಗಕ್ಕೆ ಬೀಳುವ ಹಾಗೆ ಇರಲು-ಕೆಲ ನಿರ್ದಿಷ್ಟ ಚರ್ಮದ ಬಕೆಟ್ಟು (buckets)ಗಳನ್ನು ಮತ್ತು ಬಲವಾದ ಚೀಲಗಳನ್ನು ಹಾಗೂ ಬುಟ್ಟಿಗಳನ್ನು (ಸಾಮಾನುಗಳನು ತುಂಬುವುದಕ್ಕೆ ಮತ್ತು ಸ್ಥಳಾಂತರಿಸುವುದಕ್ಕೆ) ನೀಡಲಾಗಿತ್ತು. ಅವುಗಳನ್ನು ಬೆಂಕಿಯ ಸ್ಥಳಕ್ಕೆ ತರಬೇಕಾಗಿತ್ತು. ಅಲ್ಲದೆ ನಾವೆಲ್ಲ ಕೂಡಿಕೊಂಡು ತಿಂಗಳಿಗೊಮ್ಮೆ ಒಂದು ಸಾಮಾಜಿಕ ವಿಧಾಯ ಕೂಟವನ್ನು ನೆರವೇರಿಸಲು ಒಪ್ಪಿದ್ದೆವು. ಬೆಂಕಿಯ ವಿಷಯದಲ್ಲಿ—ಅಂಥ ಪ್ರಸಂಗಗಳಲ್ಲಿ ನಮಗೆ ಉಪಯೋಗ ಬೀಳುವಂಥ ನಮಗೆ ದೊರೆತ ವಿಚಾರಗಳನ್ನು ಈ ಸಭೆಯಲ್ಲಿ ವ್ಯಕ್ತಪಡಿಸಿ, ಪರಸ್ಪರ ವಿನಿಮಯಿಸಿಕೊಳ್ಳುವುದಾಗಿತ್ತು.

ಈ ಸಂಸ್ಥೆಯ ಉಪಯುಕ್ತತೆಯು ಕೂಡಲೆ ಕಂಡು ಬಂದಿತು. ಮತ್ತು ನಾವು ಒಂದು ಕಂಪನಿಗೆ ಅನುಕೂಲವೆಂದು ತಿಳಿದುದಕ್ಕಿಂತ ಹೆಚ್ಚಿನ ಅನೇಕ ಜನರು ಸೇರಲು ಇಚ್ಛಿಸಿದ್ದರು. ಸರಿ, ಮತ್ತೊಂದನ್ನು ನಿರ್ಮಿಸುವಂತೆ ಅವರಿಗೆ ಹೇಳಲಾಯಿತು. ಅದರಂತೆ ಮಾಡಿದ್ದಾಯಿತು. ಒಂದು ಹೊಸ ಕಂಪನಿಯ ನಂತರ ಮತ್ತೊಂದು ನಿರ್ಮಾಣವಾಗುತ್ತ ಹೋಯಿತು. ಇದೇ ರೀತಿಯಲ್ಲಿ ಅವುಗಳ ಸಂಖ್ಯೆ ಹೇರಳವಾಗಿ ಬೆಳೆಯುತ್ತ ದೇಶದ ಆಸ್ತಿವಂತ ನಿವಾಸಿಗಳೆಲ್ಲ ಹೆಚ್ಚಾಗಿ ಸೇರಿಕೊಳ್ಳುವ ತನಕವೂ ಮುಂದರಿಯಿತು ಮತ್ತು ಈಗ ನಾನು ಇದನ್ನು ಬರೆಯುವ ಹೊತ್ತಿಗೆ, ಅದನ್ನು ಸ್ಥಾಪಿಸಿ ಐವತ್ತು ವರುಷಗಳಿಗಿಂತ ಹೆಚ್ಚು ಕಾಲವಾಗಿದ್ದರೂ ಕೂಡ, ನಾನು ಮೊಟ್ಟ ಮೊದಲಿಗೆ ರೂಪಿಸಿದ 'ಯೂನಿಯನ್ ಫೈರ್ ಕಂಪನಿ' (Union Fire-Company) ಎಂಬುದು ಇನ್ನು ಚಾಲ್ತಿಯಲ್ಲಿದ್ದು ಏಳಿಗೆಯನ್ನು ಹೊಂದಿರುತ್ತದೆ. ಆದರೆ ಪ್ರಥಮದ ಸದಸ್ಯರೆಲ್ಲ ತೀರಿಹೋಗಿದ್ದರೂ ಸಹ ನಾನು ಹಾಗೂ ನನಗಿಂತ ಒಂದು ವರುಷಕ್ಕೆ ದೊಡ್ಡವನಾದ ಮತ್ತೊಬ್ಬ ಮಾತ್ರ ಇನ್ನೂ ಜೀವಂತವಿದ್ದೇವೆ. ಮಾಸಿಕ ಸಭೆಗಳಿಗೆ ಗೈರಹಾಜರಿಯಾದುದಕ್ಕೆ ಸದಸ್ಯರುಗಳು ದಂಡವಾಗಿ ತೆತ್ತ ಹಣವನ್ನು ಪ್ರತಿಯೊಂದು ಕಂಪನಿಗೂ ಫೈರ್ ಇಂಜಿನುಗಳನ್ನು, ನಿಚ್ಚಣಿಕೆಗಳನ್ನು, ಫೈರ್ ಹುಕ್ಕುಗಳನ್ನು ಮತ್ತು ಬೇರೆ ಉಪಯುಕ್ತ ಸಲಕರಣೆಗಳನ್ನು ಕೊಳ್ಳುವುದಕ್ಕೆ ಉಪಯೋಗಿಸಲಾಗುತ್ತಿತ್ತು. ಆದುದರಿಂದ ದಳ್ಳುರಿಗೆ ಆರಂಭವಾದಾಗ ತಡೆಹಾಕಿ ನಿಲ್ಲಿಸುವ ಸಾಧನೆಗಳುಳ್ಳ, ಇದಕ್ಕಿಂತ ಒಳ್ಳೆಯ ಪಟ್ಟಣವು ಈ ಜಗತ್ತಿನಲ್ಲಿದೆಯೋ ಎಂದು ನಾನು ಪ್ರಶ್ನಿಸುತ್ತೇನೆ. ಅಂತೇ ವಸ್ತುತಃ ಈ ಸಂಸ್ಥೆಗಳ ತರು

ವಾಯು, ಒಂದು ಬಾರಿಗೆ ಒಂದೋ ಎರಡಕ್ಕಿಂತ ಹೆಚ್ಚು ಮನೆಗಳನ್ನು ಪಟ್ಟಣವು ಬೆಂಕಿಯಿಂದ ಎಂದೂ ಕಳೆದುಕೊಂಡಿಲ್ಲ ಮತ್ತು ಕೆಲವೊಮ್ಮೆ ಬೆಂಕಿಬಿದ್ದ ಮನೆಯನ್ನು ಬೆಂಕಿಯ ಕೆನ್ನಾಲಗೆಗಳು ಅರ್ಧ ಸುಡುವಷ್ಟರಲ್ಲೇ ಆರಿಸಲಾಗಿರುತ್ತದೆ.

೧೭೩೯ರಲ್ಲಿ ಐರ್ಲಂಡಿನಿಂದ ನಮ್ಮಲ್ಲಿಗೆ ರೆವರೆಂಡ್ ಮಿಸ್ಟರ್ ವೈಟ್‌ಫೀಲ್ಡ್ ಎಂಬಾತನು ಬಂದನು. ಆತನು ಅಲ್ಲಿ ಸಂಚಾರಿ ಧರ್ಮೋಪದೇಶಕನೆಂದು ಖ್ಯಾತಿಯನ್ನು ಪಡೆದಿದ್ದನು. ಪ್ರಥಮದಲ್ಲಿ ನಮ್ಮ ಕೆಲವೊಂದು ಚರ್ಚುಗಳಲ್ಲಿ ಅವನು ಧರ್ಮೋಪದೇಶ ಮಾಡಲು ಅನುಮತಿಯನ್ನು ನೀಡಲಾಗಿತ್ತು. ಆದರೆ ಪಾದರಿಗಳು ಅವನ ಬಗ್ಗೆ ಜಿಗುಪ್ಸೆ ತಾಳಿ ತಮ್ಮ ಭಾಷಣದ ಗದ್ದುಗೆಯನ್ನು ಅವನಿಗೆ ನಿರಾಕರಿಸಿದರು. ಆದುದರಿಂದ ಅವನು ಬಯಲಿನಲ್ಲಿ ಧಾರ್ಮಿಕ ವ್ಯಾಖ್ಯಾನಗಳನ್ನು ಕೊಡುವ ಪ್ರಸಂಗ ಬಂದಿತು. ಎಲ್ಲಾ ಮತಗಳ ಹಾಗೂ ವರ್ಗಗಳ ಜನರು ಅವನ ವ್ಯಾಖ್ಯಾನಕ್ಕೆ ಕಿಕ್ಕಿರಿದು ತುಂಬುತ್ತಿದ್ದರು. ಈ ಅಸಂಖ್ಯಾಕರಲ್ಲಿ ಒಬ್ಬನಾದ ನನಗೆ, ಅವನು ಶ್ರೋತೃಗಳ ಮೇಲೆ ತನ್ನ ಅನ್ಯಾದೃಶವಾದ ವಕ್ತೃತ್ವದಿಂದುಂಟುಮಾಡುವ ಪರಿಣಾಮವನ್ನು ನೋಡುವುದು ಮತ್ತು ವಸ್ತುತಃ ಅವನಲ್ಲ ಅರ್ಧ ಪ್ರಾಣಿಗಳು ಮತ್ತು ಅರ್ಧ ಭೂತಗಳಾಗಿದ್ದಾರೆಂದು ಅವನು ಸಾಮಾನ್ಯವಾಗಿ ಅವರಿಗೆಲ್ಲ ಮನವರಿಕೆ ಮಾಡಿಕೊಟ್ಟು ಬೈಯ್ಯುತ್ತಿದ್ದರೂ ಕೂಡ ಅವರು ಅವನನ್ನು ಎಷ್ಟು ಗೌರವಿಸುತ್ತಿದ್ದರು ಮತ್ತು ಹೊಗಳುತ್ತಿದ್ದರೆಂಬುದನ್ನು ಅವಲೋಕಿಸುವುದು ನನಗೆ ಒಂದು ನಿರಂತರ ಅಭ್ಯಾಸದ ವಿಷಯವೇ ಆಗಿತ್ತು. ನಮ್ಮ ಊರಿನವರ ರೀತಿ–ನೀತಿಗಳಲ್ಲಿ ಉಂಟಾದ ತೀವ್ರ ಬದಲಾವಣೆಯನ್ನು ನೋಡಿದರೆ ಅದ್ಭುತವೆನಿಸುತ್ತದೆ. ವಿಚಾರಹೀನರು ಅಥವಾ ಧರ್ಮದತ್ತ ಅಲಕ್ಷ್ಯವುಳ್ಳವರಾಗಿರುವುದರಿಂದ ಜಗತ್ತಿನ ಎಲ್ಲಾ ಜನರು ಒಮ್ಮೆಲೇ ಧಾರ್ಮಿಕ ಪ್ರವೃತ್ತಿಯನ್ನು ತಾಳಿದ ಹಾಗೆ ಕಾಣುತ್ತಿತ್ತು. ಹೀಗಾಗಿ ಸಂಜೆಯ ಹೊತ್ತಿನಲ್ಲಿ ಯಾವನೂ ಕೂಡ ಪಟ್ಟಣದ ಪ್ರತಿಯೊಂದು ಬೀದಿಯಲ್ಲಿನ ಬೇರೆ ಬೇರೆ ಮನೆಗಳಲ್ಲಿನ ಪ್ರಾರ್ಥನೆಯ (Psalms) ಹಾಡುಗಳನ್ನು ಕೇಳದೆ ನಡೆದುಕೊಂಡು ಹೋಗಲಿಕ್ಕೆ ಸಾಧ್ಯವಿರಲಿಲ್ಲ.

ಇಷ್ಟು ಬಿಟ್ಟ–ಬಯಲಿನಲ್ಲಿ ಅದರ ಚಳಿ ಹವೆಯಿಂದಾಗಿ ಸಭೆಸೇರಲು ಅನಾನುಕೂಲವೆನಿಸಿತು. ಕ್ಷಿಪ್ರದಲ್ಲೇ ಸಭೆ ಕೂಡಲು ಒಂದು ಮನೆಯನ್ನು ಕಟ್ಟುವುದೂ ಸೂಚಿಸಲ್ಪಟ್ಟಿತು. ವಂತಿಗೆ ಕೂಡಿಸಲು ಜನರನ್ನೂ ನೇಮಿಸ

ಲಾಯಿತು. ಸ್ಥಳ ಖರೀದಿ ಮಾಡಲಿಕ್ಕೆ ಮತ್ತು ಕಟ್ಟಡ ಕಟ್ಟಲಿಕ್ಕೆ ಸಾಕಾಗುವಷ್ಟು ಹಣ ವಸೂಲಾಯಿತು. ಈ ಕಟ್ಟಡವು ೧೦೦ ಗಜ ಉದ್ದ ಹಾಗೂ ೭೦ ಗಜ ಅಗಲವಾಗಿತ್ತು, ಸುಮಾರು ವೆಸ್ಟ್‌ಮಿನಿಸ್ಟರ್ ಹಾಲಿನಷ್ಟು ದೊಡ್ಡದು. ಅಂತೇ ನಿರೀಕ್ಷಿಸಿದ್ದಕ್ಕಿಂತ ಮೊದಲೇ ಕಟ್ಟಡ ಮುಗಿಯಬೇಕೆಂದು ಹುರುಪಿನಿಂದ ಕೆಲಸವು ಬಹಳ ತುರಾತುರಿಯಿಂದ ನಡೆಯುತ್ತಿತ್ತು. ಸ್ಥಳ ಮತ್ತು ಕಟ್ಟಡ ಎರಡೂ ಟ್ರಸ್ಟಿಗಳ ವಶದಲ್ಲಿತ್ತು. ಮತ್ತು ಫಿಲಡೆಲ್ಫಿಯಾದ ಜನರಿಗೆ, ಯಾವ ಮತದವನೇ ಆಗಲಿ ಏನಾದರೂ ಹೇಳಬೇಕೆಂದಿದ್ದರೆ, ಅಂಥ ಧರ್ಮೋಪದೇಶಕನು ಅದನ್ನು ಬಹಿರಂಗವಾಗಿ ಉಪಯೋಗಿಸಬಹುದಾಗಿತ್ತು. ಕಟ್ಟಡದಲ್ಲಿ ಯಾವ ನಿರ್ದಿಷ್ಟ ಪಂತದವರು ಕೂಡತಕ್ಕದ್ದೆಂದು ಕರಾರು ಇದ್ದಿಲ್ಲ; ಆದರೆ ಸಾಮಾನ್ಯವಾಗಿ ಎಲ್ಲ ನಿವಾಸಿಗಳು ಅಲ್ಲಿಗೆ ಬರಬಹುದಾಗಿತ್ತು. ಹೀಗಾಗಿ ಒಂದು ವೇಳೆ ಕಾನ್ಸಟೆಂಟಿನೋಪಲಿನ ಮುಫ್ತಿ (Mufti) ಯು ತನ್ನ ಧರ್ಮೋಪದೇಶದ ತಂಡವನ್ನು ನಮಗೆ ಮಹಮ್ಮದೀಯ ಧರ್ಮವನ್ನು ಹೇಳಲು ಕಳುಹಿಸಿದರೂ ಕೂಡ ಅವನಿಗೂ ಭಾಷಣದ ಪೀಠ ತೆರೆದು ಇಡಲ್ಪಡುತ್ತಿತ್ತು.

ಮಿಸ್ಟರ್ ವೈಟ್‌ಫೀಲ್ಡನು ನಮ್ಮನ್ನು ಬಿಟ್ಟು ಧರ್ಮೋಪದೇಶ ಮಾಡುತ್ತ ಜೋರ್ಜಿಯಾದ ವಸಾಹತುಗಳ ಹಾದಿಯುದ್ದಕ್ಕೂ ಹೊರಟನು. ಆ ವಸಾಹತುಗಳಲ್ಲಿ ಜನವಸತಿಯು ಆದೇ ಪ್ರಾರಂಭವಾಗಿತ್ತು. ಆದರೆ ಅಂಥ ಸಾಹಸಕ್ಕೆ ಸಮರ್ಥರಾದ ಏಕಮಾತ್ರ ಜನರಂತೆ ಅವರು ಕಷ್ಟಸಹಿಷ್ಣುಗಳೂ, ಸತತ ಕರ್ಮಿಗಳಾದ ಬೇಸಾಯಗಾರರೂ, ದುಡಿತದ ಒಲವಿದ್ದವರೂ ಆಗುವುದರ ಬದಲು ಆ ವಸಾಹತಿನ ಜನಗಳೆಲ್ಲ ಡಲ್ಲಾದ ಅಂಗಡಿಕಾರರೂ ಮತ್ತು ದಿವಾಳಿ ತೆಗೆದ ಮಿಕ್ಕ ಸಾಲಗಾರರೂ, ಹೆಚ್ಚಾಗಿ ಜೈಲಿನಿಂದ ಹೊರಬಂದ ಪೈಗಳ್ಳರೂ ಮತ್ತು ಸೋಮಾರಿಗಳೂ—ಕಾಡು ಗುಡ್ಡಗಳಲ್ಲಿ ವಸತಿ ಇದ್ದುದರಿಂದ ಭೂಮಿಯನ್ನು ಹಸನು ಮಾಡಲು ಅನರ್ಹರೂ ಮತ್ತು ಹೊಸ ವಸಾಹತಿನ ಕಷ್ಟ-ಕಾರ್ಪಣ್ಯಗಳನ್ನು ಸಹಿಸಲು ಅಸಮರ್ಥರಾದವರೂ ಇದ್ದುದರಿಂದ ಅನೇಕ ಚಿಕ್ಕ-ಪುಟ್ಟ ಅಸಹಾಯಕ ಮಕ್ಕಳನ್ನು ನಿರಾಧಾರವಾಗಿ ಬಿಟ್ಟು ಅತಿ ದೊಡ್ಡ ಸಂಖ್ಯೆಯಲ್ಲಿ ಮಡಿದು ಹೋಗಿದ್ದರು. ಅವರ ದುಃಖದಾಯಕ ಪರಿಸ್ಥಿತಿಯ ದೃಶ್ಯವು ವೈಟ್‌ಫೀಲ್ಡನ ದಯಾಪರವಾದ ಹೃದಯದಲ್ಲಿ 'ಅನಾಥ ಶಿಶುಗೃಹ' (Orphan House) ವನ್ನು ಅಲ್ಲಿ ನಿರ್ಮಿಸುವ ವಿಚಾರವನ್ನು ಸ್ಫುರಿಸಿತು. ಅಲ್ಲಿ ಅವುಗಳನ್ನೆಲ್ಲ ಆದರಿಸಿ ಶಿಕ್ಷಣ ಕೊಡಿಸಬಹುದಾಗಿತ್ತು.

ಉತ್ತರಾಭಿಮುಖವಾಗಿ ಅವನು ಮರಳಿ ಹೊರಟು ಈ ದಾನದ ಬಗ್ಗೆ ಪ್ರಚಾರ ಭಾಷಣ ಮಾಡಿದನು. ಅಂತೇ ತುಂಬ ಹಣ ಕೂಡಿಸಿದನು. ಯಾಕಂದರೆ ಅವನ ಅಸ್ಖಲಿತ ವಾಣಿಯ ಅದ್ಭುತ ಶಕ್ತಿಯು ಶ್ರೋತೃಗಳ ಹೃದಯ ಹಾಗೂ ಹಣದ ಕಿಸೆಗಳ ಮೇಲೆ ಸಾಕಷ್ಟು ಪರಿಣಾಮವನ್ನುಂಟು ಮಾಡಿತು. ಅದರ ಬಗ್ಗೆ ಸ್ವತಃ ನಾನೇ ಒಂದು ಉದಾಹರಣೆ ಎನ್ನ ಬಹುದು.

ಈ ಯೋಜನೆಯನ್ನು ನಾನೇನು ಮೆಚ್ಚದಿರಲಿಲ್ಲ. ಆದರೆ ಜೋರ್ಜಿಯಾದಲ್ಲಿ ಆಗ ಸಾಹಿತ್ಯ-ಸಾಮುಗ್ರಿಗಳಿಗೆ ಹಾಗೂ ಕೆಲಸಗಾರರಿಗೆ ಕೊರತೆ ಇದ್ದುದರಿಂದ ಮತ್ತು ಇವೆಲ್ಲವುಗಳನ್ನು ಹೆಚ್ಚಿನ ಖರ್ಚಿನಿಂದ ಅಲ್ಲಿಗೆ ಫಿಲಡೆಲ್ಫಿಯಾದಿಂದ ಕಳುಹಿಸುವ ಸೂಚನೆ ಮಾಡಿದ್ದರಿಂದ, ನನಗೆ ಆ ಗೃಹವನ್ನೇ ಇಲ್ಲಿ ಕಟ್ಟಿ ಮಕ್ಕಳನ್ನು ಇತ್ತ ಕಳುಹಿಸುವುದು ಉತ್ತಮವೆಂದು ಅನಿಸಿತು. ಇದನ್ನು ನಾನು ಅವನಿಗೆ ಹೇಳಿದೆನು. ಆದರೆ ಅವನು ಮಾತ್ರ ತನ್ನ ಯೋಜನೆಯಲ್ಲಿ ಸ್ಥಿರವಾಗಿದ್ದನು. ನನ್ನ ಉಪದೇಶವನ್ನು ನಿರಾಕರಿಸಿದನು. ಆದುದರಿಂದ ನಾನು ವಂತಿಗೆ ಸಲ್ಲಿಸಲು ನಿರಾಕರಿಸಿದೆನು. ಅನಂತರ ಕ್ವಚಿತ್ರದಲ್ಲಿ ಅವನ ಧಾರ್ಮಿಕ ಉಪನ್ಯಾಸಮಾಲೆಯಲ್ಲಿ ಒಂದಕ್ಕೆ ನಾನು ಉಪಸ್ಥಿತನಾಗಿದ್ದೆ. ಈ ಸಮಯದಲ್ಲಿ ಅವನು ತನ್ನ ಧನ ಸಂಗ್ರಹವನ್ನು ಮುಗಿಸುವ ಉದ್ದೇಶದಿಂದ ಇದ್ದ ಹಾಗೆ ನನಗನಿಸಿತ್ತು. ನನ್ನಿಂದ ಒಂದು ಚಿಕ್ಕಾಸೂ ಅವನಿಗೆ ದೊರೆಯಬಾರದೆಂದು ನಾನು ಮೌನದಿಂದಲೇ ನಿರ್ಧರಿಸಿದ್ದೆನು. ನನ್ನ ಕಿಸೆಯಲ್ಲಿ ತಾಮ್ರದ ಒಂದು ಹಿಡಿ ನಾಣ್ಯಗಳೂ, ಮೂರು ಅಥವಾ ನಾಲ್ಕು ಬೆಳ್ಳಿಯ ಡಾಲರುಗಳೂ ಮತ್ತು ಬಂಗಾರದ ಪಿಸ್ತೋಲುಗಳೂ ಇದ್ದವು. ಅವನು ಮುಂದುವರಿಯುತ್ತ ಹೋದಂತೆ ನನ್ನ ಮನಸ್ಸು ನಯವಾಗುತ್ತ ಬಂತು ಮತ್ತು ತಾಮ್ರದ ನಾಣ್ಯಗಳನ್ನು ಕೊಡುವುದೆಂದು ತೀರ್ಮಾನಿಸಿದ್ದಾಯಿತು. ಅವನು ಅಸ್ಖಲಿತ ವಾಣಿಯ ಮತ್ತೊಂದು ಸೆಲೆಯಿಂದ ಅವುಗಳನ್ನು ಕೊಡುವುದರ ಬಗ್ಗೆ ನನಗೆ ನಾಚಿಕೆಯೆನಿಸಿತು. ಅಂತೇ ಬೆಳ್ಳಿಯ ನಾಣ್ಯಗಳನ್ನು ಕೊಡುವ ನಿರ್ಧಾರಕ್ಕೆ ನನ್ನನ್ನು ತಂದೊಡ್ಡಿತು. ಆದರೆ ಇತ್ತ ಅವನು ಇಷ್ಟು ಸುಂದರವಾಗಿ ತನ್ನ ವ್ಯಾಖ್ಯಾನವನ್ನು ಮುಗಿಸಿದನಲ್ಲಾ ಅಷ್ಟಕ್ಕೇ ನಾನು ಬಂಗಾರದ ಹಾಗೂ ಎಲ್ಲಾ ನಾಣ್ಯಗಳನ್ನು ನನ್ನ ಕಿಸೆಯಿಂದ ಖಾಲಿಮಾಡಿ ಹಣಕೂಡಿಸುವವನ ಪಾತ್ರೆಗೆ ಸುರುವಿದೆನು. ಈ ವ್ಯಾಖ್ಯಾನಕ್ಕೆ ನಮ್ಮ ಸಂಸ್ಥೆಯವನೊಬ್ಬನು ಬಂದಿದ್ದನು. ಅವನು ಕೂಡಾ

ಜಾರ್ಜಿಯಾದಲ್ಲಿನ ಕಟ್ಟಡದ ಬಗ್ಗೆ ನನ್ನಂತೆ ಆದರ ಭಾವನೆ ತಾಳಿಕೊಂಡು ಮತ್ತು ನಿಧಿ ಸಂಗ್ರಹವೂ ನಡೆಯಬಹುದೆಂದು ಸಂಶಯಪಟ್ಟುಕೊಂಡು ಮುನ್ನೆಚ್ಚರಿಕೆಯಿಂದ ತನ್ನ ಕಿಸೆಯನ್ನು ಮನೆಯಿಂದ ಬರುವ ಮೊದಲೇ ಬರಿದುಮಾಡಿ ಬಂದಿದ್ದನು. ವ್ಯಾಖ್ಯಾನದ ಕೊನೇ ನಿರ್ಣಯಕ್ಕೆ ಬರುವ ಹೊತ್ತಿಗೆ ಹೇಗಾದರೂ ಅವನಿಗೆ ನೀಡಬೇಕೆಂಬ ಆಸೆ ಬಲವಾಯಿತು. ಅಂತೇ ಅವನ ಬಳಿಯಲ್ಲಿ ನಿಂತ ನೆರೆಯವನೊಡನೆ ಆ ಬಗ್ಗೆ ಸ್ವಲ್ಪ ಹಣ ಸಾಲ ಕೇಳಿದನು. ಆದರೆ ದುರ್ದೈವದಿಂದ ಅವನು ಹಣ ಕೇಳಿಕೊಂಡ ಮನುಷ್ಯನು ಆ ಗುಂಪಿನಲ್ಲಿ—ಎಂದೆಂದೂ ಧರ್ಮೋಪದೇಶಕನ ಮಾತು ಗಳಿಂದ ಯಾವ ಪರಿಣಾಮುಗೊಳ್ಳದ ಸ್ಥಿರತೆಯುಳ್ಳ ಬಹುಶಃ ಒಬ್ಬನೇ ಒಬ್ಬನಾಗಿದ್ದನು. ಅವನ ಉತ್ತರವು "ಮಿತ್ರ ಹೋಪ್‌ಕಿನ್‌ಸನ್, ಬೇರೆ ಯಾವ ಹೊತ್ತಿನಲ್ಲಾದರೂ ನಿನಗೆ ನಾನು ಬಿಚ್ಚುಗೈಯಿಂದ ಸಾಲ ಕೊಡು ತ್ತಿದ್ದೆನು; ಆದರೆ ಈಗ ಅಲ್ಲ, ಯಾಕಂದರೆ ಈಗ ನಿನ್ನ ಬುದ್ಧಿಯು ಸ್ಥಿರ ವಾಗಿದ್ದಂತೆ ಕಾಣುವುದಿಲ್ಲ" ಎಂದಾಗಿತ್ತು.

ಮಿಸ್ಟರ್ ವೈಟ್‌ಫೀಲ್ಡ್‌ನ ಕೆಲ ವೈರಿಗಳು ಅವನು ಈ ನಿಧಿಯನ್ನು ತನ್ನ ವೈಯಕ್ತಿಕ ಆದಾಯಕ್ಕೆ ಸೇರಿಸುತ್ತಾನೆಂದು ಸಂಶಯ ತಾಳಿಕೊಂಡ ಹಾಗೆ ಕಾಣುತ್ತಿತ್ತು. ಆದರೆ ಅವನೊಡನೆ ನಾನು ತೀರ ಸಮೀಪದ ಸಖ್ಯ ವನ್ನು ಇಟ್ಟುಕೊಂಡ ಕಾರಣ (ಅವನ ಧರ್ಮೋಪದೇಶಗಳನ್ನು ಮತ್ತು ಜರ್ನಲು ಮೊದಲಾದವುಗಳನ್ನು ಮುದ್ರಿಸುವುದರಲ್ಲಿ ತೊಡಗಿದ್ದ ಕಾರಣ) ಅವನ ಪ್ರಾಮಾಣಿಕತನದ ಬಗ್ಗೆ ಎಳ್ಳಷ್ಟೂ ಸಂಶಯಪಟ್ಟಿರಲಿಲ್ಲ. ಅಂತೇ ಇಂದಿನವರೆಗೂ ಅವನು ಸಂಪೂರ್ಣ ಪ್ರಾಮಾಣಿಕ ಮನುಷ್ಯನೆಂದು ಖಂಡಿತವಾದ ಅಭಿಪ್ರಾಯದವನಾಗಿದ್ದೇನೆ. ಮತ್ತು ನಮ್ಮಿಬ್ಬರಲ್ಲಿ ಧಾರ್ಮಿಕ ಸಂಬಂಧವಿಲ್ಲದ ಕಾರಣ ಅವನ ಪರವಾದ ನನ್ನ ಪುರಾವೆಗೆ ಹೆಚ್ಚಿನ ಮಹತ್ವ ಬರದೇ ತೀರುವುದೆಂದು ನಾನು ಎಣಿಸಿದ್ದೇನೆ. ಅಲ್ಲದೆ ಕೆಲವೊಮ್ಮೆ ಅವನು ನನ್ನ ಮತಾಂತರದ ಬಗ್ಗೆ ಪ್ರಾರ್ಥನೆ ಸಲ್ಲಿಸುವ ಪರಿ ಪಾಠವಿಟ್ಟಿದ್ದನು. ಆದರೆ ಅವನ ಪ್ರಾರ್ಥನೆಗಳು ಸಫಲಗೊಳ್ಳುತ್ತವೆಂಬು ದನ್ನು ನಂಬುವ ತೃಪ್ತಿ ಮಾತ್ರ ಅವನಿಗೆ ಎಂದಿಗೂ ಇರಲಿಲ್ಲ. ನಮ್ಮ ಮಿತ್ರತ್ವವು ಕೇವಲ ಲೌಕಿಕವಾಗಿದ್ದು, ಎರಡೂ ಕಡೆಯಿಂದ ಪ್ರಾಮಾಣಿಕ ತನದಿಂದ ಕೂಡಿತ್ತು ಮತ್ತು ಅವನ ಮರಣದವರೆಗೂ ಬಾಳಿತ್ತು.

ಈ ಕೆಳಗಿನ ಉದಾಹರಣೆಯು ನಾವಿಬ್ಬರೂ ನಡೆದುಕೊಳ್ಳುತ್ತಿದ್ದ ರೀತಿಯ ವಿಷಯವಾಗಿ ಕೆಲ ಅಂಶವನ್ನು ತೋರಿಸುತ್ತದೆ. ಬೋಸ್ಟನ

ನಿಂದ ಇಂಗ್ಲಂಡಿಗೆ ಬಂದು ಹೋಗುವ ಅವನ ಒಂದು ಪ್ರವಾಸದಲ್ಲಿ ಅವನು ನನಗೆ ಬಹು ಬೇಗನೆ ಫಿಲಡೆಲ್ಫಿಯಾಕ್ಕೆ ಬಂದು ತಲಪುವುದಾಗಿಯೂ ಮತ್ತು ಅಲ್ಲಿಗೆ ಬಂದಾಗ ತಾನೆಲ್ಲಿ ವಸತಿ ಹೂಡುವುದೆಂದು ಗೊತ್ತಿಲ್ಲವೆಂದೂ ಯಾಕಂದರೆ ತನ್ನ ಹಳೆಯ ಮಿತ್ರ ಹಾಗೂ ಆತಿಥ್ಯಕರ್ತನಾದ ಮಿಸ್ಟರ್ ಬೆನೆಝೆಟ್ ಜರ್ಮನ್ ಟೌನಿಗೆ ಸ್ಥಳಾಂತರ ಮಾಡಿರುವುದು ತನಗೆ ತಿಳಿದು ಬಂದಿದೆಯೆಂದು ಬರೆದಿದ್ದನು. ನನ್ನ ಉತ್ತರವು ಹೀಗಿತ್ತು : "ನಿನಗೆ ನನ್ನ ಮನೆ ಗೊತ್ತುಂಟು; ಆದ್ದರಿಂದ ಬಹು ಚಿಕ್ಕ ಈ ಮನೆಗೆ ನೀನು ಪಾದ ಬೆಳೆಸಿದರೆ ಅತ್ಯಂತ ಆದರದ ಸ್ವಾಗತವನ್ನು ನಿನಗೆ ನೀಡಲಾಗುವುದು." ಇಂಥ ಆದರದ ಸಹಕಾರವನ್ನು ನಾನು ಕ್ರಿಸ್ತನ ಪರವಾಗಿ ನೀಡಿದ್ದಾದರೆ ನನಗೆ ಅದರ ಪ್ರತಿಫಲ ದೊರೆಯದಿರದೆಂದು ಅವನು ಉತ್ತರಿಸಿದ್ದನು. ಅಂತೇ ನಾನು ಪುನಃ, "ನನ್ನ ಬಗ್ಗೆ ತಪ್ಪು ಗ್ರಹಿಸಬಾರದು; ಅದು ಕ್ರಿಸ್ತನ ಪರವಾಗಿ ಅಲ್ಲವೇ ಅಲ್ಲ, ಕೇವಲ ನಿನ್ನ ಸಲುವಾಗಿ" ಎಂದು ಬರೆದಿದ್ದೆನು. ನನ್ನ ಸಲುಗೆಯ ಮಿತ್ರರಲ್ಲಿ ಒಬ್ಬನು ಹಾಸ್ಯಮಯವಾಗಿ, ಸಾಧುಗಳಿಗೆ ಏನಾದರೂ ಸಹಕಾರ-ಸಹಾಯ ದೊರೆತರೆ, ಅದರ ಭಾರವನ್ನು ತಮ್ಮ ಹೆಗಲ ಮೇಲಿಂದ ತಪ್ಪಿಸಿ ಸ್ವರ್ಗದಲ್ಲಿ ಅದನ್ನು ಇಡುವುದು ಸಾಧುಗಳ ರೂಢಿಯೆಂದು ತಿಳಿದುಕೊಂಡು ನುಡಿದಿದ್ದನು. ಆದರೆ ನಾನು ಮಾತ್ರ ಅದನ್ನು ಭೂಮಿಯ ಮೇಲೆ ಸ್ಥಿರಪಡಿಸಲು ಹಂಚಿಕೆ ಹೂಡಿದ್ದಾಗಿತ್ತು.

ಕಟ್ಟಕಡೆಗೆ ನಾನು ವೈಟ್‌ಫೀಲ್ಡನನ್ನು ಲಂಡನಿನಲ್ಲಿ ಕಂಡಿದ್ದೆನು. ಆಗ ಅವನು ತನ್ನ ಅನಾಥ ಶಿಶು ಗೃಹದ ಸಂಬಂಧವಾಗಿ ಮತ್ತು ಅದನ್ನು ಒಂದು ಕಾಲೇಜು ಸ್ಥಾಪಿಸುವುದಕ್ಕೆ ಬಳಸುವ ಅವನ ಉದ್ದೇಶವಾಗಿ ನನಗೆ ಕೇಳಿಕೊಂಡಿದ್ದನು.

ಅವನಿಗೆ ದೊಡ್ಡ ಹಾಗೂ ಸ್ಪಷ್ಟವಾದ ಧ್ವನಿಯಿತ್ತು ಮತ್ತು ಶಬ್ದಗಳನ್ನು ಹಾಗೂ ವಾಕ್ಯಗಳನ್ನು ಇಷ್ಟೊಂದು ಪರಿಪೂರ್ಣವಾಗಿ ಉಚ್ಚರಿಸುತ್ತಿದ್ದನಲ್ಲಾ—ಅವನ ಮಾತುಗಳನ್ನು ಬಹುದೂರದ ತನಕ ಕೇಳಬಹುದಾಗಿತ್ತು. ಮುಖ್ಯವಾಗಿ ಅವನ ಶ್ರೋತೃಗಳು ಎಷ್ಟು ಹೆಚ್ಚಾಗಿದ್ದರೂ ಸಾಕಷ್ಟು ಮೌನವನ್ನು ತಾಳುತ್ತಿದ್ದರು. ಒಂದು ದಿನ ಸಂಜೆ, ಮಾರ್ಕೆಟ್ ಸ್ಟ್ರೀಟಿನ ಮಧ್ಯದಲ್ಲಿರುವ ಕೋರ್ಟ-ಹೌಸಿನ ಸೋಪಾನಗಳ ತುಟ್ಟತುದಿಯಿಂದ ಅವನು ಧಾರ್ಮಿಕ ವಿಷಯ ವ್ಯಾಖ್ಯಾನ ಮಾಡುತ್ತಿದ್ದನು ಮತ್ತು ಅವನು ನಿಂತ ಸ್ಥಳವು ಸೆಕೆಂಡ-ಸ್ಟ್ರೀಟಿನ ಪಶ್ಚಿಮಪಾರ್ಶ್ವದಲ್ಲಿದ್ದು—ಅಂದರೆ ಇದು ಅದನ್ನು ಸಮಕೋನದಲ್ಲಿ ಹಾದು ಹೋಗಿತ್ತು. ಎರಡೂ ಬೀದಿಗಳು

ಬಹು ದೂರದ ತನಕ ಅವನ ಶ್ರೋತೃಗಳಿಂದ ತುಂಬಿದ್ದವು. ಮಾರ್ಕೆಟ್ ಸ್ಟ್ರೀಟಿನ ಬಹು ಹಿಂದಿನವರಲ್ಲಿ ಒಬ್ಬನಾಗಿದ್ದ ನಾನು, ಅವನ ಧ್ವನಿಯು ಎಷ್ಟು ದೂರದವರೆಗೆ ಕೇಳುತ್ತದೆಂಬ ಕುತೂಹಲವುಳ್ಳವನಾಗಿ, ಹಿಂದ ಹಿಂದಕ್ಕೆ ಸರಿದುಕೊಂಡು ಹೋಗುತ್ತ ಬೀದಿಗುಂಟ ನದಿಯ ಕಡೆಗೂ ಹೋದೆನು. ಮತ್ತು ಅವನ ಸ್ವರವು ಫ್ರಂಟ್–ಸ್ಟ್ರೀಟಿನಲ್ಲೂ ಸ್ಪಷ್ಟವಾಗಿದ್ದುದನ್ನು ಕಂಡೆನು. ಆಗ ಬೀದಿಯಲ್ಲಿನ ಗಲಾಟೆಯೊಂದು ಅದನ್ನು ಅಸ್ಪಷ್ಟ ಪಡಿಸಿತು. ಆಮೇಲೆ, ಆಗ ಅರ್ಧವರ್ತುಲವನ್ನು ಕಲ್ಪಿಸಿಕೊಂಡು ಅದರಲ್ಲಿ ನಾನು ನಿಂತ ದೂರವನ್ನು ತ್ರಿಜ್ಯವೆಂದು ಮಾಡಿಕೊಂಡೆನು. ಮತ್ತು ಅದರಲ್ಲಿ ಶ್ರೋತೃಗಳು ತುಂಬಿದ್ದರು. ಪ್ರತಿಯೊಬ್ಬರಿಗೂ ನಾನು ಎರಡು ಚದರಡಿಗಳನ್ನು ಬಿಟ್ಟುಕೊಟ್ಟೆನು. ಹೀಗೆ ಲೆಕ್ಕಮಾಡಿದಾಗ ಮೂವತ್ತು ಸಾವಿರ ಅಡಿಗಳಿಗಿಂತ ಹೆಚ್ಚಿನವರಿಗೂ ಅವನ ಧ್ವನಿ ಕೇಳುತ್ತದೆಂದು ತಿಳಿದು ಬಂದಿತು. ಅವನು ಇಪ್ಪತ್ತೈದು ಸಾವಿರ ಜನರಿಗೆ ಬಯಲಿನಲ್ಲಿ ಧರ್ಮೋಪದೇಶ ಮಾಡಿದನೆಂಬ ವೃತ್ತಪತ್ರಿಕೆಯ ವರದಿಯ ಬಗ್ಗೆ ನಾನು ನಂಬುವಂತೆ ಇದು ನನಗೆ ಇಂಬುಗೊಟ್ಟಿತು ಮತ್ತು ಅರ್ವಾಚೀನ ಇತಿಹಾಸದ ಸೇನಾನಾಯಕರು ಅಖಂಡ ಸೈನ್ಯಕ್ಕೆ ಆವೇಶದ ಭಾಷಣ ಕೊಡುವುದರ ಬಗ್ಗೆ ನಾನು ಸಂಶಯ ತಾಳುತ್ತಿದ್ದದ್ದು ಈಗ ಇದರಿಂದ ನಿವಾರಣೆಯಾದಂತಾಯಿತು

ಮೇಲಿಂದ ಮೇಲೆ ಅವನ ಉಪಾಖ್ಯಾನಗಳನ್ನು ಕೇಳಿ, ಹೊಸತಾಗಿ ತಯಾರಿಸಿದ ಧರ್ಮೋಪದೇಶಗಳಲ್ಲಿರುವ ಹಾಗೂ ಅವನು ಪ್ರಯಾಣದಕಾಲದಲ್ಲಿ ಉಪದೇಶಿಸಿದವುಗಳಲ್ಲಿರುವ ತಾರತಮ್ಯವು ನನಗೆ ತಿಳಿಯಲಿಕ್ಕೆ ಆರಂಭವಾಯಿತು. ಅನೇಕ ಸಲ ತಿರುಗಿ-ತಿರುಗಿ ವ್ಯಾಖ್ಯಾನ ಮಾಡುವುದರಿಂದ ಅವನ ಸಂಚಾರಿ ಉಪನ್ಯಾಸಗಳು ಇಷ್ಟು ಸುಧಾರಿಸಿದ್ದವಲ್ಲಾ-ಪ್ರತಿಯೊಂದು ಸ್ವರ ಭಾರ, ಪ್ರತಿಯೊಂದು ಉಚ್ಚಾರವಿಶೇಷ, ಪ್ರತಿಯೊಂದು ಧ್ವನಿಯ ಸ್ಪಷ್ಟ ಅಭಿವ್ಯಕ್ತಿಗಳು ಅತ್ಯುತ್ತಮವಾಗಿದ್ದು ಮತ್ತು ಸುಯೋಜಿತವಾಗಿದ್ದುದರಿಂದ-ಒಂದುವೇಳೆ ವಿಷಯದಲ್ಲಿ ಅಭಿರುಚಿಯಿಲ್ಲದಿದ್ದರೂ ಕೂಡ ಆ ವಾಣಿಯಿಂದ ಯಾವನೂ ಹರ್ಷಿತನಾಗದಿರಲಿಕ್ಕೆ ಸಾಧ್ಯವಿರಲಿಲ್ಲ. ಅತ್ಯುತ್ತಮ ಗಾಯನದಿಂದ ದೊರೆಯುವ ಉಲ್ಲಾಸಕ್ಕೆ ಸರಿಸಮನಾದ ಉಲ್ಲಾಸವು ಲಭಿಸುತ್ತಿತ್ತು. ಸ್ಥಿರ ಧರ್ಮೋಪದೇಶಕರಿಗಿಂತ ಹೆಚ್ಚಿನ ಇದೊಂದು ಅನುಕೂಲವು ಸಂಚಾರಿ ಧರ್ಮೋಪದೇಶಕರಿಗೆ ಇದೆಯೆನ್ನಬೇಕು. ಯಾಕಂದರೆ–ಸ್ಥಿರ ಧರ್ಮೋಪದೇಶಕರು ಇಷ್ಟೊಂದು ಪಠಣಾ ತಾಲೀಮು

ಗಳಿಂದ ವ್ಯಾಖ್ಯಾನ ಕೊಡುವುದನ್ನು ಸುಧಾರಿಸಿಕೊಳ್ಳಲಿಕ್ಕೆ ಸಾಧ್ಯವಿಲ್ಲ.

ಕಾಲಕಾಲಕ್ಕೆ ಕೊಡುವ ಅವನ ಬರವಣಿಗೆಗಳಿಂದ ಮತ್ತು ಪ್ರಕಟನೆಗಳಿಂದ ಅವನ ವೈರಿಗಳಿಗೆ ದೊಡ್ಡ ಅನುಕೂಲವುಂಟಾಗಿತ್ತು. ಉಪಾಖ್ಯಾನದ ಕಾಲದಲ್ಲಿ ವ್ಯಕ್ತಪಡಿಸಿದ ಅಜಾಗರೂಕತೆಯ ಮಾತುಗಳು ಹಾಗೂ ಅಸಮಂಜಸವಾದ ಅಭಿಪ್ರಾಯಗಳು ಆ ಮೇಲೆ ವಿವರಿತವಾಗಿರುತ್ತಿತ್ತು. ಅಥವಾ ಅವುಗಳಿಗೆ ಸಂಬಂಧಪಟ್ಟ ಮಿಕ್ಕವುಗಳನ್ನು ಜೊತೆಗೆ ಸೇರಿಸಲಾಗಿದೆಯೆಂದು ಗ್ರಹಿಸಲಾಗುತ್ತಿತ್ತು ಅಥವಾ ಅವುಗಳನ್ನು ನಿರಾಕರಿಸಿಯೂ ಬಿಡಲಾಗುತ್ತಿತ್ತು; ಆದರ Litera Scripta manet· ಅವನ ಬರವಣಿಗೆಯನ್ನು ವಿಮರ್ಶಕರು ಕಠೋರವಾಗಿ ಖಂಡಿಸಿದ್ದರು. ಅದರೆ ಅವನ ಭಜಕರ ಸಂಖ್ಯೆಯನ್ನು ಕಡಿಮೆ ಮಾಡಬೇಕು ಮತ್ತು ಅವರ ಹೆಚ್ಚಳವನ್ನು ತಡೆಯಬೇಕೆಂಬ ಯಾವ ತೋರಿಕೆಯು ಕಾರಣದಿಂದೇನು ಹಾಗೆ ಮಾಡಲಿಲ್ಲ. ಹೀಗಾಗಿ ಒಂದುವೇಳೆ ಅವನು ಯಾವುದನ್ನೂ ಬರಯದಿರುತ್ತಿದ್ದರೆ ಅವನು ತನ್ನ ಹಿಂದೆ ಬಹಳ ದೊಡ್ಡ ಹಾಗೂ ಮಹತ್ವದ ಮತವನ್ನು ಬಿಡಬಹುದಾಗಿತ್ತು ಮತ್ತು ಅವನ ಮರಣಾನಂತರ ಕೂಡಾ ಅವನ ಕೀರ್ತಿಯು ಇನ್ನೂ ಬೆಳೆಯಬಹುದಾಗಿತ್ತು. ಯಾಕಂದರ ಅವನದಾದ ಯಾವ ಬರವಣಿಗೆಯೂ ಅವನ ತಪ್ಪು ತೋರಿಸಲಿಕ್ಕೆ ಅಥವಾ ಅವನ ವ್ಯಕ್ತಿತ್ವವನ್ನು ಕಿರಿದು ಮಾಡಲಿಕ್ಕೆ ಇಲ್ಲದಿರುತ್ತಿತ್ತು; ಅಂತೇ ಅವನ ನವಶಿಷ್ಯರು ಅವರ ಉತ್ಸಾಹದ ಹೊಗಳಿಕೆಗೆ ನಿಲುಕುವಷ್ಟು ವಿವಿಧ ಗುಣವೈಶಿಷ್ಟ್ಯಗಳನ್ನು ಅವನ ಮೇಲೆ ಹಾಕಿಕೊಂಡು ಸೋಗು ಮಾಡಲು ಸ್ವತಂತ್ರರಾಗುತ್ತಿದ್ದರಂದು-ನನ್ನ ಅಭಿಪ್ರಾಯವಾಗಿದೆ.

ಈಗ ನನ್ನ ವ್ಯವಹಾರವು ಸತತವಾಗಿ ವೃದ್ಧಿಯಾಗುತ್ತಲಿ ಇತ್ತು. ದಿನದಿಂದ ದಿನಕ್ಕೆ ನನ್ನ ಸ್ಥಿತಿಗತಿಯೂ ಸುಲಭವಾಗುತ್ತ ಬಂತು. ನನ್ನ ಪತ್ರಿಕೆಯು ಅತ್ಯಂತ ಲಾಭದಾಯಕವಾಗಿತ್ತು. ಯಾಕಂದರೆ ಆ ಕಾಲದ ಮಟ್ಟಗೆ ಈ ಹಾಗೂ ನೆರೆಹೊರೆಯ ಪ್ರಾಂತ್ಯಗಳಲ್ಲಿ ಏಕಮಾತ್ರ ಪತ್ರಿಕೆ ಇದೊಂದೇ ಆಗಿತ್ತು. ಹಣವು ಸ್ವತಃ ಫಲದಾಯಕ ಗುಣವುಳ್ಳದ್ದಾದುದರಿಂದ, "ಮೊದಲನೆಯ ನೂರು ಪೌಂಡುಗಳನ್ನು ಸಂಪಾದಿಸಿದ ಮೇಲೆ ಎರಡನೆಯ ನೂರನ್ನು ಸಂಪಾದಿಸುವುದು ಬಹಳ ಸುಲಭವಾಗಿದೆ" ಎಂಬ ಮಾತಿನ ಸತ್ಯವೂ ನನ್ನ ಮನವರಿಕೆಯಾಯಿತು.

ಕರೋಲಿನಾದಲ್ಲಿನ ಪಾಲುಗಾರಿಕೆಯು ಯಶಸ್ವಿಯಾದ ಕಾರಣ ಮಿಕ್ಕವುಗಳಲ್ಲಿ ತೊಡಗಲು ಮತ್ತು ಯೋಗ್ಯ ರೀತಿಯಿಂದ ನಡೆದುಕೊಂಡು ಹೋದ ನನ್ನ ಅನೇಕ ಜನ ಕೆಲಸಗಾರರನ್ನು ಬೇರೆ ಬೇರೆ ವಸಾಹತುಗಳಲ್ಲಿ

ಮುದ್ರಣಾಲಯುಗಳನ್ನು ಸ್ಥಾಪಿಸಿ—ಅದರಲ್ಲಿ ಇವರನ್ನು ಕರೋಲಿನಾ ದಲ್ಲಾದ ಕರಾರುಗಳಂತೆ ತುಸು ಮೇಲ್ತರಗತಿಯ ಹುದ್ದೆಕೊಟ್ಟು ನೇಮಿಸ ಲಿಕ್ಕೆ ಪ್ರೋತ್ಸಾಹ ದೊರಕಿತು. ಅವರಲ್ಲಿ ಹೆಚ್ಚಿನವರು ಒಳ್ಳೆಯ ಸ್ಥಿತಿ ವಂತರಾದರು. ಆರು ವರುಷದ ನಮ್ಮ ಕರಾರಿನ ಕಾಲಾವಧಿಯು ಕೊನೆ ಯಲ್ಲಿ ನನ್ನ ಕಡೆಯಿಂದ ಟೈಪುಗಳನ್ನು ಕೊಂಡುಕೊಂಡು ತಮ್ಮಷ್ಟಕ್ಕೇ ಸ್ವತಃ ವ್ಯವಹಾರ ನಡೆಸಿಕೊಂಡುಹೋಗಲು ಶಕ್ತರಾಗಿದ್ದರು. ಇದ ರಿಂದಾಗಿ, ಅನೇಕ ಕುಟುಂಬಗಳು ಜೀವಿಸುತ್ತಿದ್ದವು. ಪಾಲುಗಾರಿಕೆಗಳು ಹೆಚ್ಚಾಗಿ ಜಗಳದಲ್ಲಿ ಕೊನೆಗೊಳ್ಳುತ್ತವೆ. ಆದರೆ ಇದರಲ್ಲಿ ಮಾತ್ರ ನಾನು ಸಂತೋಷವಾಗಿದ್ದೆ. ನನ್ನವುಗಳೆಲ್ಲ ಒಳ್ಳೆಯದಾಗಿ ಮುಂದು ವರಿದು ಸ್ನೇಹದಿಂದ ಕೊನೆಗೊಂಡಿದ್ದವು. ಯಾಕಂದರೆ—ನಮ್ಮ ಕರಾರು ಪತ್ರಗಳಲ್ಲಿ, ಎಚ್ಚರಿಕೆಯಿಂದ ಸಾಕಷ್ಟು ವಿಶದವಾಗಿ ಪ್ರತಿಯೊಂದನ್ನೂ ನಿರ್ಧರಿಸಿರುವುದರಿಂದ, ಪ್ರತಿಯೊಂದು ಕೆಲಸವೂ ಇಬ್ಬರು ಪಾಲುಗಾರರಿಂದ ಮಾಡಲ್ಪಟ್ಟದರಿಂದ ಅಥವಾ ಅಪೇಕ್ಷಿಸಲ್ಪಟ್ಟದರಿಂದ, ವೈಮನಸ್ಸಿಗೆ ಇಲ್ಲಿ ಕಾರಣವಿರುವುದಿಲ್ಲ—ಎಂದು ನನಗೆನಿಸುತ್ತದೆ. ಆದುದರಿಂದ ಇಂಥ ಎಚ್ಚರಿಕೆಯನ್ನು ಪಾಲುಗಾರಿಕೆಯಲ್ಲಿ ಸೇರುವ ಎಲ್ಲರಿಗೂ ನಾನು ನಿಯ ಮಿಸುತ್ತೇನೆ. ಯಾಕಂದರೆ ಪಾಲುಗಾರರಿಗೆ ಕರಾರಿನ ಕಾಲದಲ್ಲಿ ಎಂಥ ಖ್ಯಾತಿಯಿದ್ದರೂ ಮತ್ತು ಪರಸ್ಪರರಲ್ಲಿ ಎಷ್ಟು ನಂಬಿಕೆಯಿದ್ದರೂ ಕೂಡ ಚಿಕ್ಕ-ಪುಟ್ಟ ಅಸೂಯೆ ಅವಹೇಳನಗಳು—ವ್ಯವಹಾರ ಮೊದಲಾದವುಗಳ ಅದಕ್ಷತೆ ಹಾಗೂ ಕಾರ್ಯಭಾರದ ಅಸಮಾನತೆಗಳ ವಿಚಾರದ-ಕುರಿತು ಉದ್ಭವಿ ಸುತ್ತವೆ. ಇವುಗಳನ್ನು ಆಗಾಗ ಸ್ನೇಹದ ಹಾಗೂ ಸಂಬಂಧದ ನಿರ್ಮೂಲನ ಬಹುಶಃ ಕಾಯ್ದೆ ಪ್ರಕಾರ ಖಟ್ಲೆ ಹಾಕುವುದು ಹಾಗೂ ಮಿಕ್ಕ ಅಸಂತೋಷ ಕಾರಕ ಪರಿಣಾಮುಗಳು ಹಿಂಬಾಲಿಸುತ್ತವೆ.

ಒಟ್ಟಿನಲ್ಲಿ ನಾನು ಪೆನ್ಸಿಲ್ವಾನಿಯದಲ್ಲಿ ನೆಲೆನಿಂತು ತೃಪ್ತಿದಾಯಕ ವಾಗಿದ್ದುದಕ್ಕೆ ತುಂಬಾ ಕಾರಣಗಳಿವೆ. ಆದರೂ ಕೂಡ ನಾನು ಅನು ತಪ್ಪಿಸಿಕೊಂಡ ಎರಡು ಸಂಗತಿಗಳಿದ್ದವು : ರಕ್ಷಣೆಯ ಕುರಿತಾಗಲಿ ಅಥವ ಯುವಕರ ಪರಿಪೂರ್ಣ ಶಿಕ್ಷಣದ ಬಗ್ಗೆಯಾಗಲಿ ಯಾವ ವ್ಯವ ಸ್ಥೆಯೂ ಇರಲಿಲ್ಲ. ಸೈನ್ಯವಿದ್ದಿಲ್ಲ ಅಥವಾ ಕಾಲೇಜು ಇದ್ದಿಲ್ಲ. ಆದುದ ರಿಂದ ೧೭೪೩ರಲ್ಲಿ ಒಂದು ಅಕ್ಯಾಡೆಮಿ (Academy) ಯನ್ನು ಸ್ಥಾಪಿಸು ವುದಕ್ಕೆ ಒಂದು ಯೋಜನೆಯನ್ನು ಪ್ರಸ್ತಾಪಿಸಿದೆನು. ಅಂತೇ ಆ ಕಾಲ ದಲ್ಲಿ ಉದ್ಯೋಗವಿಲ್ಲದೆ ಇದ್ದ ರೆವರೆಂಡ್ ಮಿಸ್ಟರ್ ಪೀಟರ್ಸ್ ಎಂಬೊಬ್ಬನು

ಅಂಥ ಸಂಸ್ಥೆಗಳನ್ನು ನೋಡಿಕೊಳ್ಳಲು ಯೋಗ್ಯ ಮನುಷ್ಯನೆಂದು ಬಗೆದು ನಾನು ಅವನಿಗೆ ಯೋಜನೆಯನ್ನು ತಿಳಿಸಿದೆನು. ಆದರೆ ಖಾಸಗಿ ಹಿಡು ವಳಿದಾರನಾಗಿ ಹೆಚ್ಚಿನ ಲಾಭದಾಯಕ ಮುಂದಾಲೋಚನೆಗಳು ಅವನಿಗೆ ಇದ್ದುದರಿಂದ ಮತ್ತು ಅದು ಯಶಸ್ವಿಯಾದ ಮೂಲಕ ಈ ಕಾರ್ಯವನ್ನು ನಿರಾಕರಿಸಿದನು. ಅಂತೇ ಅಂಥ ನಂಬಿಕೆಗೆ ಯೋಗ್ಯನಾದವನು ಯಾರೂ ಗೊತ್ತಿಲ್ಲದ್ದರಿಂದ ನಾನು ಆ ಕಾಲದಲ್ಲಿ ಯೋಜನೆಯನ್ನು ಕೆಲ ಹೊತ್ತಿನ ವರೆಗೆ ಸುಪ್ತವಾಗಿರಿಸಲಿಕ್ಕೆ ಬಿಡಬೇಕಾಯಿತು. ಮುಂದಿನ ವರುಷ, ೧೭೪೪ ರಲ್ಲಿ, ನಾನು 'ಫಿಲಸೋಫಿಕಲ್ ಸೊಸೈಟಿ (Philosophical Society) ಯನ್ನು ಪ್ರಸ್ತಾಪಿಸಿ ಸ್ಥಾಪಿಸುವುದರಲ್ಲಿ ಉತ್ತಮ ರೀತಿಯಿಂದ ಯಶಸ್ವಿ ಯಾದೆನು. ನನ್ನ ಬರಹಗಳನ್ನು ಸಂಗ್ರಹಿಸಿದಾಗ ಅವುಗಳಲ್ಲಿ ನಾನು ಈ ಉದ್ದೇಶಕ್ಕಾಗಿ ಬರೆದ ಪ್ರಬಂಧವು ದೊರೆಯಬಹುದು.

ರಕ್ಷಣೆಯ ವಿಷಯದಲ್ಲಿ, ಗ್ರೇಟ್‌ಬ್ರಿಟನ್ನಿನ ವಿರುದ್ಧವಾಗಿ ಅನೇಕ ವರುಷಗಳಿಂದ ಸ್ಪೈನು ಯುದ್ಧ ಕೈಕೊಂಡಿರುವುದರಿಂದ, ಮತ್ತು ಬಹಳ ದೀರ್ಘಕಾಲದಿಂದ ಫ್ರಾನ್ಸು ಸೇರಿಕೊಂಡ ಮೂಲಕ, ನಮಗೆ ಗಂಡಾಂತರ ವನ್ನು ತಂದೊಡ್ಡಿತ್ತು. ಅಂತೇ ನಮ್ಮ ಗವರ್ನರ್ ಥೋಮಸನು ಕ್ವ್ಯಾಕರ ಅಸೆಂಬ್ಲಿಯಲ್ಲಿ ಸೈನಿಕ ಕಾಯ್ದೆಯನ್ನು (Militia Law) ಜಾರಿಯಲ್ಲಿ ತಂದು ಜಯ ಹೊಂದುವ ಕಷ್ಟದಾಯಕ ಹಾಗೂ ಪ್ರದೀರ್ಘವಾದ ಪ್ರಯತ್ನ ಮಾಡಿದರೂ ಮತ್ತು ಬೇರೆ ಉಪಾಯಗಳಿಂದ ನಮ್ಮ ಪ್ರಾಂತ್ಯ ವನ್ನು ಸುರಕ್ಷಿತವಿಡಲು ಹೆಣಗಾಡಿದರೂ ಕೂಡ-ನಿರರ್ಥಕವಾಗಿ ಕಂಡು ಬಂದುದರಿಂದ, ಜನರ ಸ್ವಯಂಸೇವಕ ಸಂಘಶಕ್ತಿಯಿಂದ ಏನನ್ನು ಮಾಡ ಲಿಕ್ಕೆ ಶಕ್ಯವಿದೆಯೋ ಅದನ್ನು ನೆರವೇರಿಸಬೇಕೆಂದು ನಾನು ನಿರ್ಧರಿಸಿದೆನು. ಇದನ್ನು ಕಾರ್ಯಗತಮಾಡಲು ನಾನು ಮೊಟ್ಟ ಮೊದಲಿಗೆ 'ಸರಳವಾದ ಸತ್ಯ' (Plain Truth) ಎಂಬ ಒಂದು ಪ್ರಬಂಧವನ್ನು ಬರೆದು ಪ್ರಕಟಗೊಳಿಸಿ ದೆನು. ಅದರಲ್ಲಿ ನಮ್ಮ ರಕ್ಷಣಾಹೀನ ಪರಿಸ್ಥಿತಿಯ ಮೇಲೆ ಪ್ರಬಲವಾದ ಬೆಳಕನ್ನು ತೂರಿ ವಿವರಿಸಿದೆನು; ಹಾಗೂ ನಮ್ಮ ರಕ್ಷಣೆಯ ಬಗ್ಗೆ ಒಗ್ಗಟ್ಟಿನ ಮತ್ತು ಶಿಸ್ತಿನ ಆವಶ್ಯಕತೆಯನ್ನು ತೋರ್ಪಡಿಸಿ ಕೆಲ ದಿವಸಗಳಲ್ಲೆ ಒಂದು ಸಂಘವನ್ನು ಆ ಉದ್ದೇಶಕ್ಕಾಗಿ ತಯಾರಿಸಿ ಅದರ ಕರಡನ್ನು ಎಲ್ಲರ ಸಹಿಗಾಗಿ ಕಳುಹಿಸುತ್ತೇನೆಂದು ವಚನವಿತ್ತೆನು. ಪ್ರಬಂಧದ ಪರಿಣಾಮವು ಆಕಸ್ಮಿ ಕವೂ ಆಶ್ಚರ್ಯಕರವೂ ಆಗಿಬಿಟ್ಟಿತು. ಸಂಘದ ಘಟನಾದಿಗಳ ಬಗ್ಗೆ ನನ್ನನ್ನು ಕೇಳಿಕೊಳ್ಳಲಾಯಿತು. ಅಂತೇ ಕೆಲ ಸ್ನೇಹಿತರ ಸಹಾಯದಿಂದ

ಅದರ ಕರಡನ್ನು ತಯಾರಿಸಿಕೊಂಡು ಈ ಮೊದಲೆ ಹೇಳಿದ್ದ ದೊಡ್ಡ ಕಟ್ಟಡದಲ್ಲಿ ಪುರ ನಾಗರಿಕರ ಸಭೆಯನ್ನು ಕರೆದೆನು. ಭವನವು ಸಾಕಷ್ಟು ತುಂಬಿತ್ತು. ನಾನು ಸುಮಾರು ಮುದ್ರಿತ ಪ್ರತಿಗಳನ್ನು ಸಿದ್ಧಗೊಳಿಸಿದ್ದೆನು. ಭವನದ ಎಲ್ಲ ಕಡೆಗೂ ದೌತಿ-ಟಾಕುಗಳ ವ್ಯವಸ್ಥೆ ಮಾಡಿದ್ದಾಗಿತ್ತು. ಆ ವಿಷಯದ ಕುರಿತಾಗಿ ನಾನು ತುಸು ಆವೇಶದ ಭಾಷಣ ಮಾಡಿದೆನು; ಕರಪತ್ರಿಕೆಯನ್ನು ಓದಿದೆನು ಮತ್ತು ಅದನ್ನು ವಿವರಿಸಿದ್ದೂ ಆಯಿತು. ತರುವಾಯ ಪ್ರತಿಗಳನ್ನು ಹಂಚಲಾಯಿತು. ಅವುಗಳು ಒಳ್ಳೆಯ ಮುತುವರ್ಜಿಯಿಂದ ಸಹಿ ಹಾಕಿಸಲ್ಪಟ್ಟವು. ಎಳ್ಳಷ್ಟೂ ಅಡ್ಡಿ ಆತಂಕಗಳಿರಲಿಲ್ಲ.

ಸಭೆ ಚದರುವಾಗ ಪತ್ರಿಕೆಗಳನ್ನು ಸಂಗ್ರಹಿಸಲಾಯಿತು. ಹನ್ನೆರಡು ನೂರಕ್ಕಿಂತಲೂ ಹೆಚ್ಚು ಸಹಿಗಳು ನಮಗೆ ದೊರೆತವು. ಅಂತೇ ಬೇರೆ ಪ್ರತಿಗಳನ್ನು ದೇಶದಲ್ಲಿ ಹಂಚಲಾದುದರಿಂದ ಕಟ್ಟ ಕಡೆಗೆ ಸದಸ್ಯರ ಸಂಖ್ಯೆ ಹತ್ತು ಸಾವಿರಕ್ಕೂ ಹೆಚ್ಚು ಏರಿತು. ಇವರೆಲ್ಲ ತಮ್ಮಿಂದ ಸಾಧ್ಯವಿದ್ದಷ್ಟು ಬೇಗನೆ ಶಸ್ತ್ರಾಸ್ತ್ರಗಳನ್ನು ತಮ್ಮಷ್ಟಕ್ಕೆ ಸಜ್ಜುಗೊಳಿಸಿಕೊಂಡರು, ತಮ್ಮೊಳಗೇ ಸಂಘಗಳನ್ನು ಮತ್ತು ದೈಹಿಕ ಕವಾಯತುಗಳ ಅಭ್ಯಾಸ ಹಾಗೂ ಸೈನ್ಯದ ಶಿಸ್ತನ್ನು ಕಲಿತುಕೊಳ್ಳಲಿಕ್ಕೆ ವಾರವಾರವು ಒಂದೆಡೆ ಸೇರುತ್ತಿದ್ದರು. ಹೆಂಗಸರೂ ಕೂಡ ತಮ್ಮ-ತಮ್ಮಲ್ಲೆ ಚಂದಾ ರೀತಿಯಿಂದ, ಬಣ್ಣದ ಸಿಲ್ಕು ಅರಿವೆಯನ್ನು ಸಂಘಕ್ಕೆ ಕಾಣಿಕೆ ಕೊಟ್ಟರು. ಈ ಸಿಲ್ಕು ಅರಿವೆಯಲ್ಲಿ ಬೇರೆ ಬೇರೆ ಚಿಹ್ನೆ ಹಾಗೂ ಆದರ್ಶವಾಕ್ಯಗಳನ್ನು ಬಣ್ಣದಿಂದ ನಿರ್ಮಿಸಲಾಗಿತ್ತು. ಇವುಗಳನ್ನು ಅವರಿಗೆ ನಾನು ಒದಗಿಸಿ ಕೊಟ್ಟಿದ್ದೆನು.

ಫಿಲಡೆಲ್ಫಿಯಾ ಸೇನೆಯ ಕಂಪನಿಗಳ ಅಧಿಕಾರಿಗಳು ಸಭೆಸೇರಿ, ನನ್ನನ್ನು ಅವರ ಕರ್ನಲ್‌ನಾಗಿ ಆರಿಸಿದರು. ಆದರೆ ನಾನು ಅದಕ್ಕೆ ಅಯೋಗ್ಯನೆಂದು ತಿಳಿದುಕೊಂಡು ಆ ಸ್ಥಾನವನ್ನು ನಿರಾಕರಿಸಿದೆನು. ಅಂತೇ ಮಿಸ್ಟರ್ ಲಾರೆನ್ಸ್ ಎಂಬ ಯೋಗ್ಯ ವರ್ಚಸ್ವೀ ಮನುಷ್ಯನನ್ನು ಶಿಫಾರಸು ಮಾಡಿದೆನು. ಅದೇ ಪ್ರಕಾರ ಅವನನ್ನು ನೇಮಿಸಿಕೊಂಡದ್ದಾಯಿತು. ಆಮೇಲೆ ಪೇಟೆಯ ಕೆಳಗಡೆಯಲ್ಲಿ ಒಂದು ಬುರುಜನ್ನು (Battery) ಸ್ಥಾಪಿಸಿ ಅದರಲ್ಲಿ ಫಿರಂಗಿಗಳನ್ನು ಇಡುವುದರ ಸಲುವಾಗಿ ಬೇಕಾದ ಹಣ ಕೂಡಿಸುವುದಕ್ಕಾಗಿ ಒಂದು ಲಾಟರಿ (Lottery)ಯ ಪ್ರಸ್ತಾಪ ಮಾಡಿದೆನು. ಅದು ಬಹು ಬೇಗನೆ ನೆರವೇರಿತು. ಅಂತೇ ಬುರುಜನ್ನು ಕೂಡಲೆ ನಿಲ್ಲಿಸಿದ್ದಾಯಿತು, ಅದರ ಆಧಾರಸ್ತಂಭಗಳನ್ನು ಕಟ್ಟಿಗೆಯ ತೊಲೆಗಳಿಂದ

ನಿರ್ಮಿಸಿಕೊಂಡು ಅದನ್ನು ಮಣ್ಣಿನಿಂದ ತುಂಬಿಸಿದ್ದಾಯಿತು. ಬೋಸ್ಟನಿನಿಂದ ಕೆಲವು ಹಳೆಯ ತೋಪುಗಳನ್ನು ಕೊಂಡೆವು. ಆದರೆ ಇವುಗಳು ಸಾಕಾಗದ ಮೂಲಕ ಇನ್ನೂ ಹೆಚ್ಚಿನವುಗಳಿಗಾಗಿ ಇಂಗ್ಲೆಂಡಿಗೆ ಬರೆದೆವು. ಅದೇ ಕಾಲಕ್ಕೆ ನಮ್ಮ ಧನಿಗಳಿಂದ ತುಸು ಸಹಾಯವನ್ನು ಪ್ರಾರ್ಥಿಸಿಕೊಂಡದ್ದು ಆಗಿತ್ತು. ಆದರೆ ಅದು ದೊರೆಯುವ ಹೆಚ್ಚಿನ ನಿರೀಕ್ಷೆಯೇನು ಅಷ್ಟಿರಲಿಲ್ಲ.

ಇದೇ ಕಾಲಕ್ಕೆ ಕರ್ನಲ್ ಲಾರೆನ್ಸ್, ವಿಲಿಯಮ್ ಅಲೆನ್, ಏಬ್ರಾಮ್ ಟೇಯ್ಲರ್, ಎಸ್ಕ್ವಾಯರ್ ಮತ್ತು ನಾನು ನ್ಯೂಯಾರ್ಕಿಗೆ ಗವರ್ನರ್ ಕ್ಲಿಂಟನ್‌ನ ಕೆಲವು ತೋಪುಗಳನ್ನು ಎರವಲು ತರುವ ಆಯೋಗದಲ್ಲಿ ಕಳುಹಿಸಲ್ಪಟ್ಟೆವು. ಅವನು ಮೊಟ್ಟಮೊದಲಿಗೆ ಖಡಾಖಡಿಯಾಗಿ ನಿರಾಕರಿಸಿದನು. ಆದರೆ ತನ್ನ ಸಭಾಸದರೊಡನೆ ಮಧ್ಯಾಹ್ನದ ಮೇಜವಾನಿಯಲ್ಲಿ, ಆ ಸ್ಥಳದ ರೂಢಿಯಂತೆ ಆಗ ಮದಿಯರಾ ಕುಡಿಯುವ ಅರ್ಭಟಿ ವಿಪರೀತವಿದ್ದು, ಅವನು ಕ್ರಮೇಣ ಶಾಂತವಾಗುತ್ತ ಬಂದು ಮತ್ತು ನಮಗೆ ಆರು ತೋಪುಗಳನ್ನು ಕೊಡುವುದಾಗಿ ಹೇಳಿದ್ದು ಆಯಿತು. ಇನ್ನೂ ಕೆಲವು ತುಂಬಿದ ಬಟ್ಟಲುಗಳನ್ನು ಬಾಗಿಸಿದ ಮೇಲೆ ಅವನು ಹತ್ತಕ್ಕೆ ಏರಿದನು ಮತ್ತು ಕೊನೆಗೆ ಸ್ವಸಂತೋಷದಿಂದ ಹದಿನೆಂಟು ಕೊಡುವುದಾಗಿ ಒಪ್ಪಿದನು. ಅವುಗಳು ಅತ್ಯುತ್ತಮ ತೋಪುಗಳು, ಹದಿನೆಂಟು ಪೌಂಡಿನವುಗಳು ಹಾಗೂ ಕ್ಯಾರೇಜ ಕೂಡ ಅವುಗಳಿಗೆ ಇತ್ತು. ಬೇಗನೆ ಇವುಗಳನ್ನು ನಾವು ಸಾಗಿಸಿ ನಮ್ಮ ಬುರುಜಿನಲ್ಲಿ ನಿಲ್ಲಿಸಿದೆವು. ಯುದ್ಧ ನಡೆಯುತ್ತಿದ್ದಾಗ ಸಂಘದ ಸದಸ್ಯರು ಅಲ್ಲಿ ರಾತ್ರಿ ಕಾವಲು ಇರುತ್ತಿದ್ದರು. ಅಲ್ಲದೆ ಮಿಕ್ಕವರಲ್ಲಿ ನಾನು ಯಾವಾಗಲೂ ಸಾಮಾನ್ಯ ಸೈನಿಕನಂತೆ ನನ್ನ ಗಸ್ತಿಯ ಪಾಳಿಯನ್ನು ಮಾಡುತ್ತಿದ್ದೆನು.

ಈ ಕಾರ್ಯದಲ್ಲಿನ ನನ್ನ ನಡತೆಯಿಂದ ಗವರ್ನರ್ ಮತ್ತು ಸಭಾಸದರಿಗೆ ತೃಪ್ತಿಯಾಯಿತು. ಅವರು ನನ್ನನ್ನು ವಿಶ್ವಾಸದಿಂದ ನೋಡಹತ್ತಿದ್ದರು. ಅಂತೇ ಸಂಘಕ್ಕೆ ಉಪಯುಕ್ತವೆಂದು ಬಗೆಯಲಾದ ಪ್ರತಿಯೊಂದು ಹಂಚಿಕೆಯ ಸಮ್ಮತಿಯ ವಿಷಯವಾಗಿ ನನ್ನನ್ನು ಅವರೆಲ್ಲ ಕೇಳುತ್ತಿದ್ದರು. ಧರ್ಮದ ಸಂಬಂಧವಾಗಿ ನನ್ನನ್ನು ಕೇಳಿದ್ದಕ್ಕೆ ನಾವು ಕೈಕೊಂಡ ಕಾರ್ಯದಲ್ಲಿ ದೇವರ ಆಶೀರ್ವಾದ ಪಡೆಯುವುದಕ್ಕೆ ಮತ್ತು ಸುಧಾರಣೆಯನ್ನು ಸಾಧಿಸುವುದಕ್ಕೆ ನಾನು ಮತ್ತು ಅವರೆಲ್ಲ ಉಪವಾಸವ್ರತವನ್ನು ಪ್ರಚುರಗೊಳಿಸಬೇಕೆಂದು ಮನವಿ ಮಾಡಿದೆನು. ಅವರು ಮನವಿಯನ್ನು

ಸ್ವೀಕರಿಸಿದರು. ಆದರೆ ಅದು ಪ್ರಾಂತದಲ್ಲಿ ಇದುವರೆಗೆ ಯೋಚಿಸಲಾಗದ ಮೊದಲನೆಯ ಉಪವಾಸವ್ರತವಾದುದರಿಂದ ಅದರ ಪ್ರಸಿದ್ಧಿಯನ್ನು ನಡೆಸಲು ಕಾರ್ಯದರ್ಶಿಗೆ ಯಾವ ಹಿಂದಿನ ದಾಖಲೆಯೂ ಇರಲಿಲ್ಲ. ನ್ಯೂ ಇಂಗ್ಲೆಂಡಿನ ನನ್ನ ಶಿಕ್ಷಣದಿಂದಾಗಿ, ಅಲ್ಲಿ ವರುಷಂಪ್ರತಿ ಒಂದು ಉಪವಾಸ ವ್ರತವು ಪ್ರಕಟವಾಗುತ್ತಿದ್ದುದರಿಂದ, ಇಲ್ಲಿ ಅದು ಕೆಲ ಮಟ್ಟಿಗೆ ಅನುಕೂಲವಾಯಿತು : ನಾನು ಅದನ್ನು ಸ್ವಾಭಾವಿಕವಾದ ರೀತಿಯಲ್ಲಿ ರಚಿಸಿದೆನು, ಅದು ಜರ್ಮನ್ ಭಾಷೆಯಲ್ಲಿ ಭಾಷಾಂತರಿಸಲ್ಪಟ್ಟಿತು, ಎರಡೂ ಭಾಷೆಗಳಲ್ಲಿ ಮುದ್ರಿಸಲಾಯಿತು, ಮತ್ತು ಪ್ರಾಂತದಲ್ಲೆಲ್ಲ ಪ್ರಚುರ ಪಡಿಸಿದ್ದಾಯಿತು. ಇದು ಬೇರೆ ಬೇರೆ ಮತಗಳ ಧರ್ಮೋಪದೇಶಕರಿಗೆ ತಮ್ಮ ಶ್ರೋತೃವೃಂದದವರು ಈ ಸಂಘಕ್ಕೆ ಸೇರುವಂತೆ ವರ್ಚಸ್ಸು ಬೀರಲು ಒಂದು ಸುಸಂಧಿಯನ್ನು ಒದಗಿಸಿಕೊಟ್ಟಿತು, ಮತ್ತು ಒಂದುವೇಳೆ ಶಾಂತಿಯು ಬೇಗನೆ ನಡುವೆ ನೆಲೆಸದಿದ್ದಲ್ಲಿ ಕ್ವ್ಯಾಕರ್ಸ್ರ ಹೊರತಾಗಿ ಎಲ್ಲರಲ್ಲೂ ಬಹುಶಃ ಇದು ಪ್ರಚಾರವಾಗಿ ಬಿಡಬಹುದಾಗಿತ್ತು.

ಈ ವಿಷಯದಲ್ಲಿ ನನ್ನ ನಡತೆಯಿಂದಾಗಿ, ನಾನು ಆ ಮತದವರನ್ನು ರೇಗಿಸುತ್ತಿದ್ದೆನೆಂದು ಮತ್ತು ಇದರಿಂದ ಆ ಪ್ರಾಂತದ ಅಸೆಂಬ್ಲಿಯಲ್ಲಿ ನನ್ನ ಹಿತಚಿಂತನೆಯನ್ನು ಕಳೆದುಕೊಳ್ಳುತ್ತೇನೆಂದು ಕೆಲವು ನನ್ನ ಮಿತ್ರರು ಬಗೆದಿದ್ದರು, ಯಾಕೆಂದರೆ ಅವರದೇ ಅಲ್ಲಿ ಬಹುಮತವಿತ್ತು. ವಿಧಾನಸೌಧದಲ್ಲಿ ಕೆಲವು ಜನ ಮಿತ್ರರಿದ್ದ ಒಬ್ಬ ತರುಣ ದೊಡ್ಡ ಮನುಷ್ಯನು, ಅವರ ಕಾರಕೂನನಾಗಿ ನನ್ನ ಸ್ಥಾನವನ್ನು ಆಕ್ರಮಿಸಲು ಇಚ್ಛಿಸಿದವನು, ಮುಂದಿನ ಚುನಾವಣೆಯಲ್ಲಿ ನನ್ನನ್ನು ಪದಚ್ಯುತಿಗೊಳಿಸಲು ನಿರ್ಧರಿಸಲಾಗಿದೆಯೆಂದು ನನಗೆ ತಿಳಿಸಿದನು. ಅಂತೇ ಅವನು ಸದಿಚ್ಛೆಯಿಂದ ನನ್ನ ಗೌರವಕ್ಕೆ ಯೋಗ್ಯವೆನಿಸುವಂತೆ ಮನೆಗೆ ಕಳುಹಿಸಲ್ಪಡುವುದಕ್ಕಿಂತ ರಾಜಿನಾಮೆ ಸಲ್ಲಿಸುವುದು ಒಳ್ಳೆಯದೆಂದು ಉಪದೇಶ ಮಾಡಿದನು. ಅವನಿಗೆ ನನ್ನ ಉತ್ತರವೆಂದರೆ: ನಾನು ಒಬ್ಬ ಸಾರ್ವಜನಿಕ ಮನುಷ್ಯನ ಬಗ್ಗೆ ಓದಿದ್ದೇನೆ ಅಥವಾ ಕೇಳಿದ್ದೇನೆ, ಅವನು ಎಂದು ಯಾವ ನೌಕರಿಯನ್ನು ಕೇಳಬಾರದೆಂದು ಹಾಗೂ ಅಂಥ ಒಂದನ್ನು ಅವನಿಗೆ ನೀಡಿದಾಗ ಎಂದೂ ನಿರಾಕರಿಸಬಾರದೆಂದು ನಿಯಮ ಮಾಡಿಕೊಂಡಿದ್ದವನು. "ನಾನು ಅವನ ನಿಯಮವನ್ನು ಮೆಚ್ಚುತ್ತೇನೆ, ಮತ್ತು ಅದಕ್ಕೆ ಚಿಕ್ಕ ಮಾತನ್ನು ಸೇರಿಸಿ ಅದನ್ನು ಅನುಸರಿಸುತ್ತೇನೆ; ನಾನು ಎಂದೂ ಯಾವ ಹುದ್ದೆಯನ್ನೂ ಕೇಳುವುದಿಲ್ಲ, ಎಂದೂ ನಿರಾಕರಿಸುವುದಿಲ್ಲ, ಹಾಗೂ ಎಂದೂ ರಾಜಿ

**ನಾವು ಕೊಡುವುದಿಲ್ಲ.** ಒಂದುವೇಳೆ ಅವರು ನನ್ನ ಕಾರಕೂನಿಕೆಯ ಹುದ್ದೆಯನ್ನು ಬೇರೆಯವರಿಗೆ ಕೊಡುವುದಾದರೆ ಅದನ್ನು ನನ್ನಿಂದ ತೆಗೆದು ಕೊಳ್ಳಬೇಕು. ಅದನ್ನು ಬಿಟ್ಟುಕೊಡುವುದರಿಂದ ನನ್ನ ವಿರೋಧಿಗಳ ಸೇಡು ತೀರಿಸುವ ಹಕ್ಕನ್ನು ಒಂದಲ್ಲ ಒಂದು ದಿನ ನಾನೇನು ಕಳೆದುಕೊಳ್ಳು ವುದಿಲ್ಲ." ಎಂದು ನಾನು ಹೇಳಿದೆನು. ಇದು ಹಾಗೆಂದು ಆ ತರುವಾಯ ನನಗೇನು ಕೇಳಿಬರಲಿಲ್ಲ. ಮುಂದಿನ ಚುನಾವಣೆಯಲ್ಲಿ ಯಥಾಪ್ರಕಾರ ಐಕಮತ್ಯದಿಂದ ನಾನು ಆರಿಸಲ್ಪಟ್ಟೆನು. ಬಹುಶಃ ವಿಧಾನಸೌಧದ ಸದಸ್ಯ ರೊಡನಿದ್ದ ನನ್ನ ಹಳೆಯ ಸ್ನೇಹ ಅವರಿಗೆ ಸೇರಿ ಬಂದಿರಲಿಕ್ಕಿಲ್ಲ: ಯಾಕಂದರೆ, ಮಿಲಿಟರಿ ದಂಡುಗಳ ಬಗ್ಗೆ ನಡೆದ ಜಗಳಗಳಲ್ಲಿ ಇವರು ಗಳೆಲ್ಲ ಗವರ್ನರುಗಳ ಕಡೆಗೆ ಸೇರಿದ್ದರು. ಈ ವಿಷಯದಲ್ಲಿ ದೀರ್ಘಕಾಲ ದಿಂದ ಸಭೆಯು ಕಷ್ಟಕ್ಕೀಡಾಗಿತ್ತು. ನಾನು ಸಂತೋಷದಿಂದ ಅವರನ್ನು ಬಿಟ್ಟು ಹೋಗಿದ್ದರೆ ಅವರಿಗೆ ಆನಂದವಾಗಬಹುದಾಗಿತ್ತು. ಆದರೆ ಸಂಘ ಟನೆಯ ನನ್ನ ಕೇವಲ ಉತ್ಸಾಹವೊಂದರ ಮೂಲಕ ಅವರು ನನ್ನನ್ನು ಪದ ಚ್ಯುತಿಗೊಳಿಸಲು ಲಕ್ಷ್ಯಹಾಕಲಿಲ್ಲ. ಅಂತೆ ಅವರಿಂದ ಇದಕ್ಕಿಂತ ಉತ್ತಮ ವಾದ ಕಾರಣವನ್ನು ಕೊಡಲಿಕ್ಕೆ ಸಾಧ್ಯವಾಗಲಿಲ್ಲ.

ವಸ್ತುತಃ ಹಾಗೆಂದು ದೇಶದ ರಕ್ಷಣೆಯು ಅವರಲ್ಲಿ ಯಾರಿಗೂ ಅಸಮ್ಮತವಾಗಿರಲಿಲ್ಲವೆಂದು ನಂಬಲು ನನಗೆ ಕೆಲಕಾರಣಗಳಿದ್ದವು— ಆದರೆ ಅದರಲ್ಲಿ ಅವರೇನೂ ಸಹಾಯ ಮಾಡುವುದು ಅವಶ್ಯವಿರಬಾರ ದಾಗಿತ್ತು ಎಂಬುದನ್ನು ಹೊರಪಡಿಸತಕ್ಕದ್ದು. ಅಂತೇ ನಾನು ಯೋಚಿಸಿ ದುದಕ್ಕಿಂಲೂ ಹೆಚ್ಚಾಗಿ ಅವರಲ್ಲಿ ಅನೇಕರು ದಾಳಿಮಾಡುವ ಯುದ್ಧದ ವಿರುದ್ಧವಿದ್ದರೂ ಕೂಡಾ ಸಂರಕ್ಷಣೆಯ ಪರವಾಗಿದ್ದರೆಂಬುದು ನನಗೆ ಕಂಡು ಬಂದಿತ್ತು. ಈ ವಿಷಯದ ಸಾಧಕಬಾಧಕಗಳನ್ನು ವಿವರಿಸುವ ಕರಪತ್ರಿಕೆಗಳು ಪ್ರಕಟಗೊಂಡಿದ್ದವು. ಮತ್ತು ರಕ್ಷಣೆಯ ಪರವಾಗಿ ಕೆಲವು ಜನ ಒಳ್ಳೆಯ ಕ್ವ್ಯಾಕರ್ಸಿಂದಲೂ ಕೆಲವು ಪ್ರಕಟಿಸಲ್ಪಟ್ಟಿದ್ದವು. ಇದು ಅವರ ಹೆಚ್ಚಿನ ಕಿರಿಯ ಜನರಿಗೆ ಮನವರಿಕೆಯಾಗಿದೆಯೆಂದು ನಾನು ನಂಬಿದ್ದೇನೆ.

ನಮ್ಮ ಅಗ್ನಿಶಾಮಕ ಸಂಸ್ಥೆಯ ವ್ಯವಹಾರ ಒಂದು ಅವರ ಪ್ರಬಲ ವಾದ ಭಾವನೆಗಳನ್ನು ತಿಳಿದುಕೊಳ್ಳಲು ಅನುವು ಮಾಡಿಕೊಟ್ಟಿತು. ಆಗ ಲಾಟರಿಯ ಟಿಕೆಟ್ಟುಗಳಲ್ಲಿದ್ದ ಸುಮಾರು ಅರವತ್ತು ಪೌಂಡುಗಳ ಚಾಲ್ತಿ ಬಂಡವಾಳವನ್ನು, ಒಂದು ಬುರುಜು ಕಟ್ಟುವ ಯೋಜನೆಗೆ ವಿನಿಯೋಗಿ

ಸಲು ನಾವೆಲ್ಲ ಪ್ರೋತ್ಸಾಹ ನೀಡಬೇಕೆಂದು ಆಲೋಚಿಸಲಾಗಿತ್ತು. ಈ ಅಗ್ನಿಶಾಮಕ ಕಂಪನಿಯಲ್ಲಿ ಮೂವತ್ತು ಜನ ಸದಸ್ಯರಿದ್ದರು. ಅವರಲ್ಲಿ ಇಪ್ಪತ್ತೆರಡು ಮಂದಿ ಕ್ವ್ಯಾಕರುಗಳು ಮತ್ತು ಮಿಕ್ಕ ಎಂಟು ಜನರಷ್ಟೇ ಬೇರೆ ಪಕ್ಷದವರಾಗಿದ್ದರು. ನಾವು ಎಂಟು ಜನರು ನಿಯಮಿತ ಸಮಯಕ್ಕೆ ಸರಿಯಾಗಿ ತಪ್ಪದೆ ಸಭೆಗೆ ಹೋಗುತ್ತಿದ್ದೆವು. ಹೀಗಾಗಿ ಒಂದು ವೇಳೆ ಕೆಲವು ಕ್ವ್ಯಾಕರುಗಳು ನಮ್ಮನ್ನು ಸೇರುತ್ತಾರೆಂದು ನಾವು ಯೋಚಿಸಿದ್ದರೂ ಕೂಡ ಬಹುಮತದ ಪಕ್ಷ ನಮ್ಮದಾಗುತ್ತದೆಂದು ಯಾವ ವಿಧದಿಂದಲೂ ನಮಗೆ ಖಾತ್ರಿಯಿರಲಿಲ್ಲ. ಮಿಸ್ಟರ್ ಮಾರಿಸ್ ಎಂಬೊಬ್ಬ ಕ್ವ್ಯಾಕರನು ಮಾತ್ರ ಮಸೂದೆಯನ್ನು ವಿರೋಧಿಸುವಂತೆ ಕಂಡಿತು. ಅದು ಇಲ್ಲಿಯವರೆಗೆ ಎಂದೂ ಮಂಡಿಸಲಾಗಿರಲಿಲ್ಲವೆಂದು ಅವನು ತುಂಬಾ ಸಂತಾಪ ವ್ಯಕ್ತಪಡಿಸಿದನು. ಮಿತ್ರರೆಲ್ಲ ಅದರ ವಿರುದ್ಧವಿದ್ದುದರಿಂದ ಅದು ಕಂಪನಿಯನ್ನೆ ಒಡೆಯುವಂಥ ವೈಮನಸ್ಸನ್ನು ಹುಟ್ಟಿಸಬಹುದೆಂದು ಅವನು ಹೇಳಿದನು. ಹಾಗೆ ಆಗಲಿಕ್ಕೆ ನಮಗೆ ಯಾವ ಕಾರಣವೂ ಕಾಣುವುದಿಲ್ಲ, ನಾವು ಅಲ್ಪಸಂಖ್ಯಾತರು, ಮತ್ತು ಒಂದು ವೇಳೆ ಮಿತ್ರರು ಮಸೂದೆಯ ವಿರೋಧವಿದ್ದು ನಮ್ಮನ್ನು ಸೋಲಿಸಿದರೂ ಕೂಡ, ಒಮ್ಮತದಿಂದ ನಾವು ಸಮಾಜದ ಹಿತದ ದೃಷ್ಟಿಯಿಂದ ಶರಣಾಗಲೇ ಬೇಕು ಮತ್ತು ಶರಣಾಗತಕ್ಕದ್ದಾಗಿದೆ. ವ್ಯವಹಾರದ ಸಮಯ ಬಂದೊಡನೆ ಮತಗಳನ್ನು ಹಾಕಲು ಅದನ್ನು ತರಲಾಯಿತು. ಕಾಯ್ದೆ ಪ್ರಕಾರ ನಾವು ಅದನ್ನು ಎಸಗುತ್ತೇವೆಂದು ಅವನು ನಮಗೆ ಅನುಮತಿಕೊಟ್ಟನು. ಆದರೆ ಅದನ್ನು ವಿರೋಧಿಸಲಿಕ್ಕೆ ತಕ್ಕಷ್ಟು ಸಂಖ್ಯೆಯಲ್ಲಿ ಸದಸ್ಯರು ಹಾಜರಿಲ್ಲವೆಂಬುದನ್ನು ಅವನು ನಮಗೆ ಮನವರಿಕೆ ಮಾಡಿಕೊಟ್ಟುದರಿಂದ, ಅವರ ಬರುವಿಕೆಗಾಗಿ ಸ್ವಲ್ಪ ಹೊತ್ತನ್ನು ಕೊಡುವುದು ನ್ಯಾಯಸಮ್ಮತವಾಗಿತ್ತು ಅಷ್ಟೆ.

ನಾವು ಇದನ್ನು ವಾದಿಸುತ್ತಿರುವಾಗ ಒಬ್ಬ ಸೇವಕ (Waiter)ನು ಬಂದು, ಕೆಳಗಡೆಯಲ್ಲಿ ಇಬ್ಬರು ದೊಡ್ಡ ಮನುಷ್ಯರು ನನ್ನೊಡನೆ ಮಾತಾಡಬೇಕೆಂದಿದ್ದಾರೆಂದು ತಿಳಿಸಿದನು. ನಾನು ಕೆಳಗೆ ಹೋದೆನು. ಅವರಿಬ್ಬರು ನಮ್ಮ ಕ್ವ್ಯಾಕರ್ ಮಿತ್ರರಾಗಿದ್ದುದನ್ನು ಕಂಡೆನು. ಹತ್ತಿರದ ಹೊಟೇಲೊಂದರಲ್ಲಿ ಅವರು—ಎಂಟು ಜನ ಸೇರಿರುವುದಾಗಿ ಮತ್ತು ಸಂದರ್ಭ ಒದಗಿದರೆ ಅವರೆಲ್ಲ ನಮ್ಮ ಜೊತೆಗೆ ಮತ ಹಾಕುವುದಾಗಿ, ಆದರೆ ಪರಿಸ್ಥಿತಿ ಹೀಗಾಗದೆಂದು ಅವರು ನಿರೀಕ್ಷಿಸಿರುವುದಾಗಿ, ಅಂತೇ ಅವರ ಸಹಾಯವಿಲ್ಲದೆ ನಾವು ಅದನ್ನು ಸಾಧಿಸುವುದೇ ಒಳ್ಳೆಯದೆಂದು ಆಶಿಸಿರುವುದಾಗಿ,

ಯಾಕಂದರೆ— ಅಂಥ ಮಸೂದೆಗೆ ಅವರು ಮತ ಹಾಕುವುದರಿಂದ ಅವರ ಮಿತ್ರರೊಡನೆ ಮತ್ತು ಹಿರಿಯರೊಡನೆ ವೈಮನಸ್ಸು— ಹುಟ್ಟಿಸಿಕೊಳ್ಳಬೇಕಾಗುವುದೆಂದು ಅವರು ನನಗೆ ಹೇಳಿದರು. ಹೀಗೆ ಬಹು ಮತದ ದೃಢತೆಯಿಂದ ನಾನು ಮೇಲೆ ಹೋದೆನು, ಮತ್ತು ಹಿಂಜರಿದಂತೆ ಮಾಡಿ ಇನ್ನೊಂದು ಗಂಟೆಯ ವಿಳಂಬವನ್ನು ಒಪ್ಪಿದೆನು. ಇದು ಅತ್ಯಂತ ಯೋಗ್ಯವೆಂದು ಮಿಸ್ಟರ್ ಮೋರಿಸ್ ಸಮ್ಮತಿಸಿದನು. ವಿರೋಧಿ ಪಕ್ಷದ ಅವನ ಒಬ್ಬ ಮಿತ್ರನೂ ಕಾಣಿಸಿಕೊಳ್ಳಲಿಲ್ಲ. ಈ ಬಗ್ಗೆ ಅವನು ಬಹಳ ಅಚ್ಚರಿಯನ್ನು ವ್ಯಕ್ತಪಡಿಸಿದನು. ಅಂತೇ ಒಂದು ಗಂಟೆಯ ಅವಧಿ ಮುಗಿದೊಡನೆ ನಾವು ಎಂಟಕ್ಕೆ ಒಂದು ಎಂದು ಮಸೂದೆಯನ್ನು ಜಾರಿಮಾಡಿದೆವು. ಮತ್ತು ಇಪ್ಪತ್ತೆರಡು ಕ್ವ್ಯಾಕರುಗಳಲ್ಲಿ, ಎಂಟು ಜನರು ನಮ್ಮ ಪರವಾಗಿ ಮತಹಾಕಲು ಸಿದ್ಧರಿದ್ದುದರಿಂದ ಮತ್ತು ತಮ್ಮ ಗೈರಹಾಜರಿಯಿಂದ ಹದಿಮೂರು ಮಂದಿ ಮಸೂದೆಯನ್ನು ವಿರೋಧಿಸಲು ಇಚ್ಛೆಯಿಲ್ಲವೆಂಬುದನ್ನು ತೋರಿಸಿಕೊಟ್ಟಿದ್ದರು; ಹೀಗಾಗಿ ನಾನು ಆನಂತರ ಪ್ರಾಮಾಣಿಕವಾಗಿ ಕ್ವ್ಯಾಕರುಗಳ ರಕ್ಷಣೆಯ ವಿರುದ್ಧವಾದ ಪ್ರಮಾಣವು ಒಂದಕ್ಕೆ ಇಪ್ಪತ್ತೊಂದು ಎಂದು ಲೆಕ್ಕಹಾಕಿದೆನು; ಯಾಕಂದರೆ ಇವರೆಲ್ಲ ಆ ಸಂಸ್ಥೆಯ ನಿಯಮಿತ ಸದಸ್ಯರಾಗಿದ್ದರು ಮತ್ತು ಅವರಲ್ಲಿ ಕೀರ್ತಿವಂತರಾಗಿದ್ದರು. ಹಾಗೂ ಆ ಸಭೆಯಲ್ಲಿ ಏನು ಮಂಡಿಸಲಾಗಿತ್ತೆಂಬುದರ ಬಗ್ಗೆ ಯೋಗ್ಯವಾದ ಸುದ್ದಿಯನ್ನು ಬಲ್ಲವರಾಗಿದ್ದರು.

ಸದಾ ಆ ಮತದವನೇ ಆಗಿದ್ದ ಮಾನ್ಯ ಹಾಗೂ ಪಂಡಿತ ಮಿಸ್ಟರ್ ಲೋಗನ್ ಒಬ್ಬನು ಮಾತ್ರ ಅವರಿಗೆಲ್ಲ ಒಂದು ಭಾಷಣವನ್ನು ಬರೆದು, ಅದರಲ್ಲಿ ರಕ್ಷಣಾರ್ಥವಾದ ಯುದ್ಧಕ್ಕೆ ತನ್ನ ಅಭಿಮತವನ್ನು ಬಹಿರಂಗಪಡಿಸಿದ್ದನು ಮತ್ತು ತನ್ನ ವಿವಾದವನ್ನು ಅನೇಕ ಪ್ರಬಲ ಕಾರಣಗಳಿಂದ ಸಾದರಗೊಳಿಸಿದ್ದನು. ಬುರುಜಿನ ಸಲುವಾಗಿ ಅವನು ನನ್ನ ಕೈಯಲ್ಲಿ ಅರವತ್ತು ಪೌಂಡುಗಳನ್ನು ಲೋಟರಿ ಟಿಕೆಟ್ಟುಗಳಲ್ಲಿ ವಿನಿಯೋಗಿಸಲು ಕೊಟ್ಟು ಸಂಪೂರ್ಣ ಆ ವ್ಯಾಪ್ತಿಯ ಸಲುವಾಗಿ ಯಾವ ಬಹುಮಾನಗಳನ್ನು ಹಾಕಬಹುದೆಂಬುದರ ಬಗ್ಗೆ ಸಲಹೆ-ಸೂಚನೆಗಳನ್ನು ಕೊಟ್ಟಿದ್ದನು. ಅವನು ತನ್ನ ಹಳೆಯ ಧಣಿಯಾದ ವಿಲಿಯಮ್ ಪೆನ್ ಎಂಬುವನ 'ಸಂರಕ್ಷಣೆ'ಗೆ ಸಂಬಂಧಪಟ್ಟ ಉಪಕಥೆಯನ್ನು ಹೇಳಿದನು. ತರುಣನಿದ್ದಾಗ ಅವನು ತನ್ನ ಧಣಿಯೊಂದಿಗೆ ಇಂಗ್ಲೆಂಡಿನಿಂದ ಅವನ ಕಾರ್ಯದರ್ಶಿಯಾಗಿ ಬಂದನು. ಅದು ಯುದ್ಧಕಾಲ. ಅವರ ನೌಕೆಯನ್ನು ವೈರಿಗಳದ್ದೆಂದು

ಬಗೆದು ಒಂದು ಸಶಸ್ತ್ರ ಹಡಗು ಬೆನ್ನಟ್ಟಿತು. ಅವರ ನಾಯಕನು ಸಂರಕ್ಷಣೆಗೆ ಸಿದ್ಧಮಾಡಿಕೊಂಡನು. ಆದರೆ ವಿಲಿಯಂ ಪೆನ್ ಮತ್ತು ಅವನ ಕ್ವೆಕರ್ ವೃಂದದವರಿಗೆ ತನಗೆ ಅವರು ಸಹಾಯ ಮಾಡುವುದು ಬೇಡವೆಂದೂ ಅವರು ಕ್ಯಾಬಿನಿನೊಳಗೆ ಹೋಗಬಹುದೆಂದೂ ಹೇಳಿದನು. ಜೇಮ್ಸ್ ಲೋಗನ್‌ನ ಹೊರತಾಗಿ ಮಿಕ್ಕವರೆಲ್ಲ ಹಾಗೆ ಮಾಡಿದರು. ಅವನು ಮಾತ್ರ ಹಡಗಿನಹೊರಗೆ (deck) ಇರಲು ನಿರ್ಣಯಿಸಿ ಒಂದು ಬಂದೂಕಿನ ಹತ್ತಿರ ನಿಂತುಕೊಂಡನು. ವೈರಿಯೆಂದು ಬಗೆದವರು ಮಿತ್ರರೆಂಬುದು ಸಿದ್ಧವಾಯಿತು. ಕಾರಣ ಕಾದಾಟ ಮಾಡಬೇಕಾಗಿರಲಿಲ್ಲ. ಆದರೆ ಕಾರ್ಯದರ್ಶಿಯು ತನ್ನ ಬುದ್ಧಿವಂತಿಕೆಯನ್ನು ಹೇಳಲು ಕೆಳಗೆ ಹೋದಾಗ, ವಿಲಿಯಂ ಪೆನ್ ಬಹಳ ಸಿಟ್ಟಿಗೆದ್ದು ಹಡಗವನ್ನು ರಕ್ಷಿಸುವುದರಲ್ಲಿ ಅವನು ಭಾಗವಹಿಸಿದ್ದುದಕ್ಕಾಗಿ—**ಮಿತ್ರ**ರ ತತ್ವಗಳಿಗೆ ವಿರುದ್ಧ, ಮುಖ್ಯವಾಗಿ ಹಾಗೆ ಕ್ಯಾಪ್ಟನ್‌ನಿಂದ ಅಪೇಕ್ಷಿಸಲಾಗಿರದ ಕಾರಣ – ಅವನಿಗೆ ಬೈದನು. ಈ ದೂಷಣೆಯು ಎಲ್ಲಾ ಕಂಪೆನಿಯ ಜನರ ಮುಂದಾದುದರಿಂದ ಕಾರ್ಯದರ್ಶಿಯ ಮನಸ್ಸಿಗೆ ಚುಚ್ಚಿತು, ಅವನು ಹೀಗೆ ಉತ್ತರಿಸಿದನು : "ನಾನು ನಿನ್ನ ಸೇವಕನಾಗಿದ್ದರೂ ಕೂಡ ನೀನು ಯಾಕೆ ಕೆಳಗೆ ಬರುವಂತೆ ನನಗೆ ಆಜ್ಞೆಮಾಡಲಿಲ್ಲ? ಆದರೆ ಹಡಗವು ಅಪಾಯದಲ್ಲಿದೆಯೆಂದು ನೀನು ತಿಳಿದುಕೊಂಡಾಗ ನಾನು ನಿಂತುಕೊಂಡು ಸಹಾಯಮಾಡಬೇಕೆಂದು ನೀನು ಸಾಕಷ್ಟು ಮನಸ್ಸು ಮಾಡಿರುತ್ತಿ."

ನಾನು ಅನೇಕ ವರುಷಗಳ ತನಕ ಅಸೆಂಬ್ಲಿಯಲ್ಲಿದ್ದುದರಿಂದ, ಸತತವಾಗಿ ಕ್ವೆಕರುಗಳದ್ದೇ ಅಲ್ಲಿ ಬಹುಮತವಿರುತ್ತಿತ್ತು; ಯುದ್ಧದ ವಿರುದ್ಧವಿದ್ದ ಅವರ ತತ್ವಗಳಿಂದಾಗಿ, ರಾಜಾಜ್ಞೆಯಂತೆ ಸೈನಿಕ ಸಹಾಯವನ್ನು ನೀಡುವ ಯಾಚನೆ ಬಂದಾಗ, ಅವರು ಪೇಚಿನಲ್ಲಿ ಸಿಲುಕಿಕೊಳ್ಳುವ ಸಂದರ್ಭಗಳನ್ನು ನನಗೆ ಆಗಾಗ ನೋಡಲಿಕ್ಕಾಗುತ್ತಿತ್ತು. ಒಂದು ಬದಿಯಿಂದ, ನೇರವಾದ ನಿರಾಕರಣೆಯನ್ನು ಕೊಟ್ಟು ಸರಕಾರವನ್ನು ಸಿಟ್ಟಿಗೆಬ್ಬಿಸಲು ಅವರಿಗೆ ಆಗುತ್ತಿರಲಿಲ್ಲ ಮತ್ತು ಅವರ ಮಿತ್ರರನ್ನು - ಕ್ವೆಕರ್‌ವೃಂದವನ್ನು—ಅವರ ತತ್ವಗಳಿಗೆ ವಿರುದ್ಧ ಹೋಗಿ ಒಪ್ಪಲು ಮತ್ತೊಂದು ಬದಿಯಿಂದಾಗುತ್ತಿರಲಿಲ್ಲ. ಆದುದರಿಂದ ಒಪ್ಪಿಗೆಯನ್ನು ತಪ್ಪಿಸಲು ನಾನಾ ಬಗೆಯ ನೆವಗಳನ್ನು ಮತ್ತು ಸಮ್ಮತಿಯನ್ನು ತಪ್ಪಿಸಲಸಾಧ್ಯವಾದಾಗ ಅದನ್ನು ಮರೆಮಾಡುವ ತರತರದ ವೇಷಗಳನ್ನು ಹಾಕುತ್ತಿದ್ದರು. ಕಟ್ಟಕಡೆಗೆ "ಅರಸನ ಉಪಯೊಗಾರ್ಥವಾಗಿ" ಎಂಬ ಮಾತಿನಿಂದ ಸಾಮಾನ್ಯ

ವಾಗಿ ಹಣವನ್ನು ಸಲ್ಲಿಸುವ ಪದ್ಧತಿಯಾಗಿತ್ತು ಮತ್ತು ಅದನ್ನು ಹೇಗೆ ಉಯೋಗಿಸಲಾಗುತ್ತಿತ್ತೆಂಬುದನ್ನು ಎಂದೂ ಕೇಳುತ್ತಿದ್ದಿಲ್ಲ.

ಆದರೆ ಒಂದುವೇಳೆ ಬೇಡಿಕೆಯು ನೇರವಾಗಿ ಅರಸನಿಂದ ಬಂದಿರುವುದಾಗಿರದಿದ್ದಲ್ಲಿ ಆ ಮಾತು ಅಷ್ಟೊಂದು ಯೋಗ್ಯವೆಂದು ಕಂಡುಬರಲಿಲ್ಲ. ಅಂತೇ ಬೇರೆ ಯಾವುದನ್ನಾದರೂ ಹುಡುಕಬೇಕಾಗಿತ್ತು. ಹೀಗೆ ಮದ್ದಿನ ಪುಡಿ (Powder) ಅವಶ್ಯಬಿದ್ದಾಗ (ಲೂಯಿಸ್ ಬರ್ಗಿನ ರಕ್ಷಣಾದಳದ ವರಿಗೆ ಇದಾಗಿತ್ತೆಂದು ನನಗೆನಿಸುತ್ತದೆ), ಮತ್ತು ನ್ಯೂ ಇಂಗ್ಲಂಡ ಸರಕಾರವು ಪೆನ್ಸಿಲ್ವಾನಿಯಾಕ್ಕೂ ಅದಕ್ಕಾಗಿ ತುಸು ಯಾಚನೆ ಮಾಡಿದಾಗ, ಗವರ್ನರ್ ಥೋಮಸನು ಇದನ್ನು ಬಹಳ ಒತ್ತಾಯದಿಂದ ಸಭೆಯಲ್ಲಿ (House) ಮಂಡಿಸಿದಾಗ, ಮದ್ದಿನ ಪುಡಿಯನ್ನು ಕೊಳ್ಳಲು ಅವರಿಂದ ಹಣಕ್ಕೆ ಸಮ್ಮತಿ ಕೊಡಲು ಸಾಧ್ಯವಿರಲಿಲ್ಲ, ಯಾಕಂದರೆ ಅದು ಯುದ್ಧದ ಒಂದು ಅಂಶವಾಗಿತ್ತು. ಆದರೆ ಮೂರು ಸಾವಿರ ಪೌಂಡುಗಳ ಒಂದು ಸಹಾಯವನ್ನು ನ್ಯೂ ಇಂಗ್ಲಂಡಿಗೆ ಕೊಡಲು ಗವರ್ನರನಿಗೆ ಕೊಡುವುದಕ್ಕೆ ಅವರು ಮತವಿತ್ತರು. ಅಂತೇ ಅದು ಬ್ರೆಡ್, ಹಿಟ್ಟು, ಗೋಧಿ, ಅಥವಾ ಇತರ ಧಾನ್ಯ ಕೊಳ್ಳಲು ವಿನಿಯೋಗಿಸುವುದಾಗಿತ್ತು. ಕೆಲವು ಸದಸ್ಯರು, ಸರಕಾರಕ್ಕೆ ಪೇಚನ್ನು ಕೊಡುವ ಇಚ್ಛೆಯಿದ್ದವರು, ಗವರ್ನರನಿಗೆ ಅವನು ಯಾಚಿಸಿದ ವಸ್ತುವು ಅದಾಗಿರದ್ದರಿಂದ ಆ ಷರತ್ತನ್ನು ಅಂಗೀಕರಿಸಬಾರದೆಂದು ಉಪದೇಶ ಮಾಡಿದರು, ಆದರೆ ಅವನು, "ನಾನು ಹಣವನ್ನು ತೆಗೆದುಕೊಳ್ಳುತ್ತೇನೆ, ಯಾಕಂದರೆ ಅವರ ಅರ್ಥವು ನನಗೆ ಬಹಳ ಚೆನ್ನಾಗಿ ಗೊತ್ತಾಗುತ್ತದೆ; ಇತರ ಧಾನ್ಯವೆಂದರೆ ಬಂದೂಕಿನ ಮದ್ದು (Gun-Powder)" ಎಂದು ಉತ್ತರ ಕೊಟ್ಟನು. ಅದೇ ಪ್ರಕಾರ ಅವನು ಅದನ್ನು ಖರೀದಿ ಮಾಡಿದನು. ಅವರು ಎಂದೂ ಅದಕ್ಕೆ ಆಕ್ಷೇಪವೆತ್ತಲಿಲ್ಲ.

ಈ ಸಂಗತಿಯ ಉದಾಹರಣೆಯಿಂದಲೆ ನಮ್ಮ ಅಗ್ನಿಶಾಮಕ ಸಂಸ್ಥೆಯಲ್ಲಿ ಇರುವಾಗ ಲಾಟರಿಯ ಪರವಾದ ನಮ್ಮ ಯೋಜನೆಯ ಯಶಸ್ಸಿನ ಬಗ್ಗೆ ನಾವು ಹೆದರಿದ್ದಾಗಿತ್ತು. ಅಂತೇ ಸದಸ್ಯರಲ್ಲಿ ಒಬ್ಬನಾದ ನನ್ನ ಮಿತ್ರ ಮಿಸ್ಟರ್ ಸಿಂಗ್ ಎಂಬವನೊಡನೆ ನಾನು, "ನಾವು ಪರಾಜಿತರಾದರೆ ಆ ಹಣದಿಂದ ಒಂದು ಅಗ್ನಿಯಂತ್ರ (Fire-Engine)ವನ್ನು ಕೊಳ್ಳುವ ಯೋಜನೆ ಮಾಡಿಸುವ; ಕ್ವ್ಯಾಕರುಗಳು ಅದಕ್ಕೆ ಯಾವ ತಕರಾರೂ ತೆಗೆಯಲಾರರು; ಅಂತೇ ಆಮೇಲೆ, ನೀವು ನನ್ನನ್ನು ನೇಮಿಸಿದರೆ, ಆ ವಿಷಯದ ಬಗ್ಗೆ ನಾನು ಮತ್ತು ನೀನು ಆಯೋಗವನ್ನು ಮಾಡಿ

ಕೊಂಡು ನಾವು ಒಂದು ದೊಡ್ಡ ಬಂದೂಕವನ್ನು ಕೊಂಡುಕೊಳ್ಳಬಹುದು; ಅದು ಖಂಡಿತವಾಗಿಯೂ ಒಂದು ಅಗ್ನಿಯಂತ್ರ." ಎಂದು ಹೇಳಿದೆನು. ಅದಕ್ಕೆ ಅವನು, "ದೀರ್ಘ ಕಾಲದಿಂದ ನೀನು ಅಸೆಂಬ್ಲಿಯಲ್ಲಿದ್ದು ಸಾಕಷ್ಟು ಸುಧಾರಿಸಿದಂತೆ ನನಗೆ ಕಾಣುತ್ತದೆ; ನಿನ್ನ ದ್ವಂದ್ವಾರ್ಥವುಳ್ಳ ಯೋಜನೆಯು ಅವರ ಗೋಧಿ ಅಥವಾ ಇತರ ಧಾನ್ಯಕ್ಕೆ ಯೋಗ್ಯವಾದ ಜೊತೆಯಾಗುವುದು" ಎಂದು ಹೇಳಿದನು.

ಯಾವ ಬಗೆಯ ಯುದ್ಧವೂ ನ್ಯಾಯಸಮ್ಮತವಾದುದಲ್ಲ ಎಂಬುದು ತಮ್ಮ ತತ್ವಗಳಲ್ಲಿ ಒಂದು ಎಂದು ಸ್ಥಿರಪಡಿಸಿ ಪ್ರಕಟ ಪಡಿಸಿದ ಮೂಲಕ ಕ್ವ್ಯಾಕರರು ಈ ತೊಡಕುಗಳಲ್ಲಿ ಸಿಲುಕಿ ನರಳಬೇಕಾಯಿತು. ಅಂತೇ, ಅದನ್ನು ಒಮ್ಮೆ ಪ್ರಕಟಿಸಿದ ನಂತರ, ಅವರು ತಮ್ಮ ಮನಸ್ಸುಗಳನ್ನು ಎಷ್ಟೇ ಬದಲಿಸಿದರೂ ಕೂಡ, ಸುಲಭದಿಂದ ಅದನ್ನು ರದ್ದುಮಾಡುವಂತಿರಲಿಲ್ಲ. ಇದು ನಮ್ಮಲ್ಲಿ ಮತ್ತೊಂದು ಪಕ್ಷದವರಾದ ಡಂಕರುಗಳ ಹೆಚ್ಚಿನ ವಿವೇಕದ ನಡತೆಯೆಂದು ನಾನು ಬಗೆದಿರುವುದನ್ನು ನೆನಪಿಗೆ ತರುತ್ತದೆ. ಅದು ಕಾಣಿಸಿಕೊಂಡ ಕೂಡಲೆ, ಅದರ ಸ್ಥಾಪಕರಲ್ಲಿ ಒಬ್ಬನಾದ ಮೈಖೇಲ್ ವೆಲ್‌ಫೇರ್ ಎಂಬುವನ ಪರಿಚಯವು ನನಗಾಗಿತ್ತು. ಬೇರೆ ಮತಗಳ ಮತಾಂಧರಿಂದ ತಾವು ಬಹಳ ಸಂಕಟಪಟ್ಟು ಉಚ್ಚಸ್ಥಾನಕ್ಕೆ ಹೋಗಿದ್ದಾಗಿದೆಯೆಂದು ಅವನು ನನ್ನೊಡನೆ ಆಕ್ಷೇಪವೆತ್ತಿದ್ದನು ಮತ್ತು ಅಸಹ್ಯ ತತ್ವಗಳ ಹಾಗೂ ಆಚರಣೆಗಳ ಬಗ್ಗೆ ತಾವು ತೀರಾ ದೂರದವರಾಗಿದ್ದರೂ ಕೂಡಾ ಅದರ ಅಪವಾದ ಒಂದಿದೆಯೆಂದೂ ಹೇಳಿದನು. ಹೊಸ ಮತಗಳ ಅವಸ್ಥೆಯು ಯಾವಾಗಲೂ ಹೀಗೆಂದು ಅವನಿಗೆ ಹೇಳಿದೆನು. ಅಂಥ ಆಪಾದನೆಗಳನ್ನು ಕೊನೆಗೊಳಿಸಲು, ಅವರ ಮತದ ತತ್ತ್ವೋಪದೇಶಗಳನ್ನು ಮತ್ತು ಅವುಗಳ ನೀತಿಯ ನಿಯಮಗಳನ್ನು ಪ್ರಕಟಪಡಿಸುವುದು ಒಳ್ಳೆಯದೆಂದು ನನಗೆನಿಸುತ್ತದೆ. ಇದು ಅವರಲ್ಲಿ ಸೂಚಿಸಲಾಗಿದೆ; ಆದರೆ ಇನ್ನೂ ಒಪ್ಪಿಗೆಯಾಗಿಲ್ಲವೆಂದೂ ಅದಕ್ಕೆ ಕಾರಣ, "ಮೊದಲಲ್ಲಿ ನಾವು ಒಂದು ಸಮಾಜವೆಂದು ಒಂದುಗೂಡಿದಾಗ ಒಮ್ಮೆ ನಾವು ಸತ್ಯವೆಂದು ಗ್ರಹಿಸಿಕೊಂಡ ಕೆಲವು ತತ್ವಗಳನ್ನು ತಪ್ಪುಗಳೆಂದು ಕಂಡುಕೊಳ್ಳುವಂತೆ ಹಾಗೂ ಮಿಕ್ಕವುಗಳನ್ನು— ತಪ್ಪುಗಳೆಂದು ನಾವು ತೀರ್ಮಾನಿಸಿದವುಗಳನ್ನು ನೈಜ ಸತ್ಯವೆಂದು ಕಂಡುಕೊಳ್ಳುವಂತೆ ಮಾಡಿ, ನಮ್ಮ ಮನಸ್ಸನ್ನು ತೃಪ್ತಿಪಡಿಸುವುದು ದೇವರಿಗೆ ಆನಂದವೆನಿಸಿತ್ತು. ಕಾಲಕಾಲಕ್ಕೆ ಅವನು ಹೆಚ್ಚಿನ ಬೆಳಕನ್ನು ದಯಪಾಲಿಸುವುದರಲ್ಲಿ ಸಂತಸಪಡುತ್ತಾ ಬಂದಿದ್ದಾನೆ ಮತ್ತು

ನಮ್ಮ ತತ್ವಗಳು ಸುಧಾರಿಸುತ್ತಾ ಇದ್ದವು. ಹಾಗೂ ನಮ್ಮ ತಪ್ಪುಗಳು ಕಡಿಮೆಯಾಗುತ್ತಲೂ ಇದ್ದವು. ಈ ಪ್ರಗತಿಯ ಕೊನೆಯನ್ನು ನಾವು ಮುಟ್ಟಿದ್ದೇವೋ ಇಲ್ಲವೋ ಮತ್ತು ದೈವಿಕ ಅಥವಾ ಪರಮಾರ್ಥದ ಜ್ಞಾನದ ಪರಾಕಾಷ್ಠತೆಯನ್ನು ಹೊಂದಿದ್ದೇವೋ ಇಲ್ಲವೋ ಎಂಬುದರ ಬಗ್ಗೆ ನಮಗೆ ಈಗ ಖಂಡಿತವೆನಿಸಿಲ್ಲ. ಅಂತೇ ಒಂದುವೇಳೆ ನಾವು ನಮ್ಮ ಧರ್ಮದ ಅರಿಕೆಯನ್ನು ಮುದ್ರಿಸಿದರೆ ಅದರಿಂದ ನಾವು ಬಂಧಿಸಲ್ಪಟ್ಟಂತೆ ಮತ್ತು ಅದಕ್ಕೇ ಕಟ್ಟುಬಿದ್ದಂತೆ ಆಗುವುದೆಂದು ನಮಗನಿಸುತ್ತದೆ. ಬಹುಶಃ ಇನ್ನೂ ಹೆಚ್ಚಿನ ಸುಧಾರಣೆಗಳನ್ನು ಪಡೆಯಲು ಒಪ್ಪದಂತೆಯೂ ಆಗುವುದು. ಈ ದೃಷ್ಟಿಯಿಂದ ನಮ್ಮ ಹಿಂದೆ ಬರುವವರ ಪಾಡು ಇದಕ್ಕೂ ವಿಪರೀತವಾಗುವುದು. ಯಾಕೆಂದರೆ ಅವರ ಹಿರಿಯರಾದಂಥ ಮತ್ತು ಸಂಸ್ಥಾಪಕರಾದಂಥ ನಾವು ಮಾಡಿದಂತೆ, ಯಾವುದೋ ಒಂದು ಪವಿತ್ರ ಭಾವನೆಯನ್ನು ಎಂದೆಂದಿಗೂ ತೆಗೆಯದಿರುವುದು—ಎಂದು ಅವರು ತಿಳಿದುಕೊಳ್ಳುತ್ತಾರೆ" ಎಂದು ಹೇಳಿದನು.

ಮಾನವ ಜನಾಂಗದ ಇತಿಹಾಸದಲ್ಲೇ ಇದೊಂದು ಮತದಲ್ಲಿನ ವಿನಯದ ಅದ್ವಿತೀಯ ಉದಾಹರಣೆಯಾಗಿದೆ. ಮಿಕ್ಕ ಪ್ರತಿಯೊಂದು ಮತವೂ ಸರ್ವ ಸತ್ಯವನ್ನು ದೊರಕಿಸಿಕೊಂಡಿದೆಯೆಂದು ಬಗೆದಿರುತ್ತದೆ. ಬೇರೆ ಮತಾನುಯಾಯಿಗಳು ಬಹಳ ತಪ್ಪಿತಸ್ಥರೆಂದು ತಿಳಿಯಲಾಗುವುದು. ಅವರ ಪರಿಸ್ಥಿತಿಯು ಹೀಗಿರುತ್ತದೆ. ಮಂಜಿನ ಹವೆಯಲ್ಲಿ ಪ್ರವಾಸ ಮಾಡುತ್ತಿದ್ದ ಮನುಷ್ಯನೊಬ್ಬನು ಮಾರ್ಗದಲ್ಲಿ ಅವನಿಗಿಂತ ದೂರದಲ್ಲಿ ಮುಂದಕ್ಕೆ ಇರುವವರು, ಅಂತೇ ಅವನ ಹಿಂದೆ ಇರುವವರು, ಹಾಗೂ ಇಬ್ಬದಿಗಳಲ್ಲೂ ಬಯಲಲ್ಲಿ ಇರುವ ಜನರು ಕೂಡ ಮಂಜಿನಲ್ಲಿ ಮುಳುಗಿ ಹೋದಂತೆ ಕಾಣುತ್ತಾನೆ, ಆದರೆ ಅವನ ಹತ್ತಿರದಲ್ಲಿ ಮಾತ್ರ ಎಲ್ಲಾ ಸ್ವಚ್ಛವಾಗಿದ್ದಂತೆ ಕಾಣುವುದು. ವಾಸ್ತವವಾಗಿ, ಅವನು ಕೂಡ ಅವರಲ್ಲಿ ಎಲ್ಲರಂತೆ ಅಷ್ಟೇ ಮಂಜಿನಲ್ಲಿ ಇರುತ್ತಾನೆ. ಈ ಬಗೆಯ ತೊಡಕನ್ನು ತಪ್ಪಿಸುವುದಕ್ಕೆ ಕ್ವ್ಯಾಕರುಗಳು ಇತ್ತೀಚಿಗಿನ ವರುಷಗಳಲ್ಲಿ ಕ್ರಮೇಣ ಅಸೆಂಬ್ಲಿಯಲ್ಲಿ ಮತ್ತು ನ್ಯಾಯಾಧಿಕಾರಿಗಳ ಸಭೆ (magistracy)ಯಲ್ಲಿ ಸಾರ್ವಜನಿಕ ಹುದ್ದೆಯನ್ನು ತೊರೆಯುತ್ತಿದ್ದಾರೆ. ಅವರು ತತ್ವಗಳನ್ನು ಬಿಡುವುದರ ಬದಲು ಬಹುಶಃ ಅವರು ಅಧಿಕಾರ ಬಿಡುವುದನ್ನೆ ಆರಿಸಿರುತ್ತಾರೆ.

ಕಾಲಾನುಸಾರವಾಗಿ ನೋಡಿದರೆ, ನಾನು ೧೭೪೨ರಲ್ಲಿ ಶೋಧಿಸಿದ್ದ

ಒಂದು 'ಓಪನ್ ಸ್ಟೋವ್' (open stove)ದ ಬಗ್ಗೆ ಈ ಮೊದಲೆ ಪ್ರಸ್ತಾಪಿಸಬೇಕಾಗಿತ್ತು. ಇದು ಕೋಣೆಗಳನ್ನು ಉತ್ತಮ ರೀತಿಯಿಂದ ಬೆಚ್ಚಗಿಡುವುದಕ್ಕೆ ಮತ್ತು ಅದೇ ಕಾಲಕ್ಕೆ ಸೌದೆಯ ಉಳಿತಾಯಕ್ಕೆ ನೆರವಾಗುವಂಥದು. ಯಾಕಂದರೆ ಹೊಸ ಗಾಳಿಯು ಪ್ರವೇಶಿಸುವ ಹೊತ್ತಿಗೆ ಬೆಚ್ಚಗಾಗುತ್ತಿತ್ತು. ಇದರ ಒಂದು ಮಾದರಿಯನ್ನು ನನ್ನ ಹಳೆಯ ಮಿತ್ರರಲ್ಲಿ ಒಬ್ಬನಿಗೆ ಕಾಣಿಕೆಯಾಗಿ ಕೊಟ್ಟೆನು. ಅವನಿಗೆ ಒಂದು ಕಬ್ಬಿಣದ ಕೊಲಿಮೆ (iron furnace)ಯಿದ್ದುದರಿಂದ ಈ ಸ್ಟೋವ್‌ಗಳಿಗೆ ಪ್ಲೇಟು (plates) ಗಳನ್ನು ತಯಾರಿಸುವುದು ಲಾಭದಾಯಕ ವಿಷಯವೆಂದು ಕಂಡುಕೊಂಡಾಯಿತು. ಯಾಕಂದರೆ ಅವುಗಳ ಬೇಡಿಕೆಯು ಹೆಚ್ಚಾಗುತ್ತ ಇತ್ತು. ಆ ಬೇಡಿಕೆಯನ್ನು ಮುಂದುವರಿಸಲು ನಾನೊಂದು ಕರಪುಸ್ತಕವನ್ನು ಬರೆದು ಪ್ರಕಟಿಸಿದೆನು. ಅದರ ಹೆಸರು, "ಹೊಸದಾಗಿ ಹುಡುಕಿದ ಪೆನ್ಸಿಲ್ವಾನಿಯಾದ ಒಲೆಗಳ ವೃತ್ತಾಂತ; ಅದರಲ್ಲಿ ಮುಖ್ಯವಾಗಿ ಅವುಗಳ ರಚನೆ ಹಾಗೂ ನಡೆಸುವ ವಿಧಾನವನ್ನು ವಿವರಿಸಲಾಗಿದೆ; ಕೋಣೆಗಳನ್ನು ಬೆಚ್ಚಗಿರಿಸುವ ಮಿಕ್ಕೆಲ್ಲ ಪದ್ಧತಿಗಳಿಗಿಂತಲೂ ಅವುಗಳ ಹೆಚ್ಚಿನ ಅನುಕೂಲವನ್ನು ಸ್ಪಷ್ಟಪಡಿಸಲಾಗಿದೆ; ಮತ್ತು ಅವುಗಳ ಉಪಯೋಗದ ವಿರುದ್ಧವಾಗಿ ಎತ್ತಿದ ಎಲ್ಲಾ ತಕರಾರುಗಳನ್ನು ಉತ್ತರಿಸಲಾಗಿದೆ ಮತ್ತು ಪರಿಹರಿಸಲಾಗಿದೆ," ಇತ್ಯಾದಿ. ಈ ಕರಪತ್ರಿಕೆಯು ಒಳ್ಳೆಯ ಪರಿಣಾಮವನ್ನುಂಟು ಮಾಡಿತು. ಈ ಸ್ಟೋವಿನ ರಚನೆಯನ್ನು ಅದರಲ್ಲಿ ವಿವರಿಸಿದಂತೆ ನೋಡಿ ಗವರ್ನರ್ ಥೋಮಸನು ಬಹಳ ಸಂತೋಷಪಟ್ಟು ಅದರ ಪೂರ್ಣ ಮಾರಾಟದ ಸಲುವಾಗಿ ಕೆಲ ನಿರ್ದಿಷ್ಟ ವರುಷಗಳ ಅವಧಿಯವರೆಗೆ ನನಗೆ 'ಪೇಟಂಟ್' (ಮಾರಾಟದ ಪೂರ್ಣ ಹಕ್ಕುಪತ್ರ)ನ್ನು ಕೊಡಲು ಬಂದನು. ಆದರೆ ಅಂಥ ಪ್ರಸಂಗಗಳಲ್ಲಿ ಎಂದಿನಿಂದಲೂ ನನ್ನ ಮನಸ್ಸಿನಲ್ಲಿ ಬರುತ್ತಿದ್ದ ಒಂದು ತತ್ವದ ಮೂಲಕ ನಾನು ಅದನ್ನು ನಿರಾಕರಿಸಿದೆನು. ಆ ತತ್ವವೆಂದರೆ, ಬೇರೆಯವರ ಶೋಧನೆಗಳಿಂದ ನಾವು ಹೆಚ್ಚಿನ ಅನುಕೂಲತೆಗಳನ್ನು ಹೊಂದುತ್ತ ಹೋದ ಹಾಗೆ, ನಮ್ಮ ಯಾವುದೇ ಶೋಧದಿಂದ ಬೇರೆಯವರ ಸೇವೆ ಮಾಡುವ ಪ್ರಸಂಗಕ್ಕಾಗಿ ನಾವು ಸಂತೋಷಪಡಬೇಕು-ಅಂತೇ ನಾವು ಇದನ್ನು ಉಚಿತವಾಗಿಯೂ ಮತ್ತು ಉದಾರಬುದ್ಧಿಯಿಂದಲೂ ಮಾಡತಕ್ಕದ್ದು.

ಲಂಡನಿನಲ್ಲಿ ಒಬ್ಬ ಕಮ್ಮಾರನು ಹೇಗೋ ಏನೋ ನನ್ನ ಕರಪತ್ರವನ್ನು ಸಾಕಷ್ಟು ಅರ್ಥಮಾಡಿಕೊಂಡು ಮತ್ತು ಅದನ್ನು ತನ್ನ ಸ್ವಂತದ್ದೆಂದು

ಪರಿವರ್ತಿಸಿಕೊಂಡು, ಮತ್ತು ಯಂತ್ರದಲ್ಲಿ ಕೆಲಚಿಕ್ಕಪುಟ್ಟ ಬದಲಾವಣೆಗಳನ್ನು ಮಾಡಿ,—ಇದು ಅದರ ಚಲನೆಗೆ ತುಸು ಅಡ್ಡಿಯನ್ನೆ ಒದಗಿಸಿತ್ತು—ಅಲ್ಲಿ ಅದಕ್ಕೆ ಒಂದು 'ಪೇಟೆಂಟ್' (Patent) ದೊರಕಿಸಿಕೊಂಡನು. ಅಂತೇ ನನಗೆ ಹೇಳಲಾದಂತೆ-ಆದರಿಂದ ತುಸು ಹಣವನ್ನು ಗಳಿಸಿದ್ದನು. ಅಂತೇ ಬೇರೆಯವರು ನನ್ನ ಶೋಧನೆಗಳಿಗೆ ಪೇಟೆಂಟ್ ಪಡೆದುಕೊಂಡದ್ದು ಇದೇ ಒಂದು ಉದಾಹರಣೆಯಲ್ಲ. ಆದರೆ ಯಾವಾಗಲೂ ಅಂಥ ಯಶಸ್ಸಿನಿಂದ ಅವರೇನು ಅದನ್ನು ಪಡೆದಿರಲಿಕ್ಕಿಲ್ಲ. ಇದನ್ನು ನಾನು ಎಂದೂ ವಿರೋಧಿಸುತ್ತಿದ್ದಿಲ್ಲ. ಯಾಕಂದರೆ ಪೇಟೆಂಟುಗಳಿಂದ ನಾನೇನು ಲಾಭ ಪಡೆಯಲು ಇಚ್ಛಿಸಿರಲಿಲ್ಲ ಮತ್ತು ಜಗಳಗಳನ್ನು ನಾನು ತುಚ್ಛೀಕರಿಸುತ್ತಿದ್ದೆನು. ಇಲ್ಲಿಯ ಹಾಗೂ ನೆರೆಯ ವಸಾಹತುಗಳ ಅನೇಕ ಮನೆಗಳಲ್ಲಿ ಈ ಬೆಂಕಿಯೊಲೆಗಳ ಉಪಯೋಗದಿಂದ ನಿವಾಸಿಗಳಿಗೆ ಹೇರಳವಾದ ಕಟ್ಟಿಗೆಯ ಉಳಿತಾಯವಾಗುತ್ತಿತ್ತು ಮತ್ತು ಆಗತೊಡಗಿದೆ.

ಶಾಂತಿಯು ಸ್ಥಿರವಾದ ಮೂಲಕ ಸಂಘದ ವ್ಯವಹಾರವು ಕೊನೆ ಮುಟ್ಟಿತು. ಕಾರಣ ಪುನಃ ನಾನು ಒಂದು ಬಲ್ಲಿದರ ಕೂಟ(Academy) ವನ್ನು ಸ್ಥಾಪಿಸುವುದರ ಕೆಲಸದತ್ತ ನನ್ನ ವಿಚಾರವನ್ನು ತಿರುಗಿಸಿದೆನು. ಈ ಯೋಜನೆಯ ಬಗ್ಗೆ ಕೆಲವೊಂದು ಚತುರ ಮಿತ್ರರನ್ನು ಒಟ್ಟುಗೂಡಿಸುವಂಥ ಮೊದಲ ಹೆಜ್ಜೆಯನ್ನು ಇಟ್ಟೆನು. ಇದರ ಬಗ್ಗೆ "ಜಂಟೋ" ಸಾಕಷ್ಟು ಸಹಕರಿಸಿತು. ಮುಂದಿನದೆಂದರೆ, "ಪೆನ್ಸಿಲ್ವಾನಿಯಾದಲ್ಲಿನ ಯುವಕ ಶಿಕ್ಷಣಕ್ಕೆ ಸಂಬಂಧಪಟ್ಟ ಸಲಹೆಸೂಚಗಳು" ಎಂಬ ಹೆಸರಿನ ಒಂದು ಕರಪತ್ರವನ್ನು ಬರೆದು ಪ್ರಕಟಪಡಿಸುವುದಾಗಿತ್ತು. ಇದನ್ನು ನಾನು ಪ್ರಮುಖ ನಿವಾಸಿಗಳಿಗೆ ಉಚಿತವಾಗಿ ಹಂಚಿದೆನು. ಅದರ ಓದುವಿಕೆಯಿಂದ ಅವರ ಮನಸ್ಸು ತುಸು ಸಿದ್ಧವಾಗಿದೆಯೆಂದು ನನಗೆ ಅನಿಸಿದೊಡನೆ, ಒಂದು ಬಲ್ಲವರ ಕೂಟವನ್ನು ತೆರೆಯುವುದಕ್ಕೆ ಮತ್ತು ನಡೆಸುವುದಕ್ಕೆ ಚಂದಾ ವಸೂಲು ಮಾಡಲು ನಾನು ನಿಲ್ಲುತ್ತಿದ್ದೆನು. ಈ ಚಂದಾವನ್ನು ವರುಷಂಪ್ರತಿ ಐದು ವರುಷಗಳ ತನಕ ಕಂತಿನಿಂದ ಕೊಡತಕ್ಕದ್ದಾಗಿತ್ತು. ಹೀಗೆ ಅದನ್ನು ವಿಭಾಗ ಮಾಡುವುದರಿಂದ ಚಂದಾ ಹಣವು ಹೆಚ್ಚಾಗಬಹುದೆಂದು ನಾನು ನಿರ್ಧರಿಸಿದ್ದೆನು. ಹಾಗಾಗಿದೆಯೆಂದು ನಾನು ನಂಬಿದ್ದೇನೆ. ನಾನು ಸರಿಯಾಗಿ ನೆನಪಿನಲ್ಲಿಟ್ಟದ್ದಾದರೆ ಅದು ಐದು ಸಾವಿರ ಪೌಂಡುಗಳಿಗಿಂತ ಕಡಿಮೆಯಿರಲಿಕ್ಕಿಲ್ಲ.

ಈ ಸಲಹೆ ಸೂಚನೆಗಳ ಮುನ್ನುಡಿಯಲ್ಲಿ ಅವುಗಳ ಪ್ರಕಟನೆಯು

ನನ್ನ ರಚನೆಯೆಂದು ತಿಳಿಸದೆ, ಸಾರ್ವಜನಿಕ ಹಿತಕಾರಿಯಾದ ಒಬ್ಬ ದೊಡ್ಡ ಮನುಷ್ಯರ ಕೃತಿಯೆಂದು ಹೇಳಿ, ಸಾಧ್ಯವಿದ್ದ ಮಟ್ಟಿಗೆ ನನ್ನನ್ನು ತಪ್ಪಿಸಿ ಕೊಂಡಿದ್ದೆನು. ಇದನ್ನು ನನ್ನ ರೂಢಿಯಂತೆ ಯಾವ ಸಾರ್ವಜನಿಕ ಹಿತದ ಯೋಜನೆಯ ಕರ್ತೃವೂ ನಾನೆಂದು ಸಾರ್ವಜನಿಕರ ಮುಂದೆ ಕಾಣಿಸಿಕೊಳ್ಳ ದಿರುವ ತತ್ವದಂತೆ ನಾನು ಮಾಡಿದ್ದಾಗಿತ್ತು.

ಯೋಜನೆಯನ್ನು ಕೂಡಲೆ ಕಾರ್ಯಗತಗೊಳಿಸುವುದಕ್ಕೋಸ್ಕರ, ಚಂದಾದಾರರು ತಮ್ಮಲ್ಲಿಂದ ಇಪ್ಪತ್ತನಾಲ್ಕು ಜನ ವ್ಯವಸ್ಥಾಪಕ (Trustees)ರನ್ನು ಆರಿಸಿದರು. ಮತ್ತು ಆಗ ಅಟೋರ್ನಿ–ಜನರಲ್ (Attorney-General) ಆಗಿದ್ದ ಮಿಸ್ಟರ್ ಫ್ರಾನ್ಸಿಸ್ ಹಾಗೂ ನನ್ನನ್ನು ಬಲ್ಲವರ ಕೂಟ (Academy)ದ ಆಡಳಿತೆಯ ಬಗ್ಗೆ ಘಟನೆಯನ್ನು ಸಿದ್ಧಗೊಳಿಸಲು ನೇಮಿಸಿದರು. ಅದನ್ನು ತಯಾರಿಸಿ, ರುಜು ಹಾಕಿಯಾದನಂತರ ಒಂದು ಮನೆಯನ್ನು ಬಾಡಿಗೆಗೆ ಹಿಡಿದಿದ್ದಾಯಿತು, ಗುರುಗಳನ್ನು ನೇಮಿಸಿಕೊಂಡೂ ಆಯಿತು, ಸಾಲೆಗಳೂ ತೆರೆಯಲ್ಪಟ್ಟವು- ಆ ವರುಷ ೧೭೪೯ ಎಂದು ನನಗೆನಿಸುತ್ತದೆ.

ವಿದ್ಯಾಂಸರು ತ್ವರಿತ ಗತಿಯಲ್ಲಿ ಹೆಚ್ಚತೊಡಗಿದರು. ಮನೆಯು ಬಹು ಬೇಗನೆ ಚಿಕ್ಕದೆಂದು ಕಂಡುಬಂದಿತು. ಒಂದು ತುಂಡು ಯೋಗ್ಯವಾದ ಸ್ಥಳವನ್ನು ನಾವು ಹುಡುಕತೊಡಗಿದ್ದೆವು. ನಮ್ಮ ಮೇಲೆ ಆ ದಯಾಘನನು ಕೃಪೆದೋರಿ ಸಿದ್ಧವಾಗಿದ್ದ ಒಂದು ದೊಡ್ಡ ಮನೆಯನ್ನು ನಮಗೆ ತೋರಿಸಿಕೊಟ್ಟಿದ್ದರೆ ಚಿಕ್ಕಪುಟ್ಟ ಬದಲಾವಣೆಗಳಿಂದ ಅದು ನಮ್ಮ ಉದ್ದೇಶಕ್ಕೆ ಸರಿಬೀಳುತ್ತಿತ್ತು. ಈ ಮೊದಲು ಹೇಳಲಾದಂಥ ಕಟ್ಟಡವು ಇದಾಗಿತ್ತು. ಮಿಸ್ಟರ್ ವೈಟ್‌ಫೀಲ್ಡ್‌ರ ಲೆಖ್ಖಪರಿಶೋಧಕರು ಸಿದ್ಧಪಡಿಸಿರುವಂಥಾದ್ದು ಮತ್ತು ಈ ಕೆಳಗಿನ ರೀತಿಯಲ್ಲಿ ನಮಗೆ ದೊರೆತದ್ದು.

ಈ ಕಟ್ಟಡಕ್ಕೆ ಎಲ್ಲಾ ಮತಗಳ ಜನರಿಂದ ಸಹಾಯ ಧನವು ನೀಡಲಾಗಿತ್ತೆಂಬುದು ಗಮನಿಸತಕ್ಕದ್ದಾಗಿದೆ. ವ್ಯವಸ್ಥಾಪಕರನ್ನು ಸೂಚಿಸುವಾಗ, ಕಟ್ಟಡ ಮತ್ತು ಸ್ಥಳವನ್ನು ಯಾರ ವಶದಲ್ಲಿಡಬೇಕೆಂಬುದನ್ನು ವಿಚಾರಮಾಡುವಾಗ ಜಾಗ್ರತೆ ವಹಿಸಿಕೊಳ್ಳಲಾಗುತ್ತಿತ್ತು. ಯಾವ ಮತಕ್ಕೂ ಪ್ರಾಧಾನ್ಯವನ್ನು ಕೊಡಬಾರದಾಗಿತ್ತು. ಇಲ್ಲದೆ ಹೋದಲ್ಲಿ ಕಾಲಾನುಸಾರ ಆ ಪ್ರಾಧಾನ್ಯವು ಆ ಮತದ ಉಪಯೋಗಾರ್ಥವಾಗಿ ಅಖಂಡ ಕೂಟವು ಬಳಸಲ್ಪಡುವ ಮಾರ್ಗವಾಗಬಹುದಾಗಿತ್ತು. ಇದು ಮೂಲ ಉದ್ದೇಶಕ್ಕೆ ವಿರುದ್ಧವಾಗಿತ್ತು. ಆದುದರಿಂದ ಪ್ರತಿಯೊಂದು ಮತದಿಂದ ಒಬ್ಬನನ್ನು

ನೇಮಿಸಲಾಯಿತು. ಅವರೆಂದರೆ—ಚರ್ಚ್ ಆಫ್ ಇಂಗ್ಲೆಂಡದ ಒಬ್ಬ ಪ್ರೆಸ್ಬಿಟೇರಿಯನ್, ಒಬ್ಬ ಬೇಪ್ಟಿಸ್ಟ್, ಒಬ್ಬ ಮೊರೇವಿಯನ್, ಇತ್ಯಾದಿ. ಇವರಲ್ಲಿ ಮರಣದ ಕಾರಣದಿಂದ ಯಾವ ಸ್ಥಳವಾದರೂ ಖಾಲಿ ಬಿದ್ದರೆ ಅದನ್ನು ಚಂದಾದಾರರಲ್ಲಿ ಚುನಾವಣೆಯನ್ನು ಮಾಡಿ ತುಂಬಿಸತಕ್ಕದ್ದಾಗಿತ್ತು. ಮೊರೇವಿಯನ್ ತನ್ನ ಶ್ರೋತೃಗಳನ್ನು ತೃಪ್ತಿಪಡಿಸಲಿಕ್ಕಾಗಷ್ಟೆ ಹೋದನು. ಅಂತೇ ಅವನ ಮರಣವಾದೊಡನೆ ಅವನ ಮತದವನು ಬೇರೆಯವನನ್ನು ಅಲ್ಲಿಗೆ ಕಳುಹಿಸಬಾರದೆಂದೇ ನಿರ್ಧರಿಸಿದರು. ಆಮೇಲಿನ ತೊಡಕೆಂದರೆ—ಹೊಸ ಆಯ್ಕೆಯಿಂದ ಕೆಲವೊಂದು ಬೇರೆ ಮತದಲ್ಲಿನ ಇಬ್ಬರ ಎರಡು ಸ್ಥಳಗಳನ್ನು ಹೇಗೆ ತಪ್ಪಿಸುವುದೆಂದಾಯಿತು.

ಅನೇಕ ಜನರನ್ನು ಹೆಸರಿಸಲಾಯಿತು. ಅಂತೇ ಆ ಕಾರಣಕ್ಕಾಗಿಯೇ ಯಾವ ಒಪ್ಪಿಗೆಯೂ ಆಗಲಿಲ್ಲ. ಹೀಗೆ ಕಟ್ಟಕಡೆಗೆ, ನಾನೊಬ್ಬ ಕೇವಲ ಪ್ರಾಮಾಣಿಕ ಮನುಷ್ಯನೆಂಬ ನಿರೀಕ್ಷೆಯಿಂದ ಒಬ್ಬನು ನನ್ನ ಹೆಸರನ್ನು ಹೇಳಿದನು. ಅವರಲ್ಲಿ ಪ್ರಚಾರದಲ್ಲಿದ್ದ ಯಾವ ಮತದವನೂ ಆಗಿರದಿದ್ದರಿಂದ ನನ್ನನ್ನು ಆರಿಸಲಿಕ್ಕೆ ಅಡ್ಡಿ ಇರಲಿಲ್ಲ. ಸೌಧವನ್ನು ಕಟ್ಟುವ ಹೊತ್ತಿಗೆ ಇದ್ದ ಹುರುಪು ಬಹಳ ಕಾಲದಿಂದ ಉಡುಗಿ ಹೋಗಿಯಾಗಿತ್ತು. ಮತ್ತು ಅದರ ವ್ಯವಸ್ಥಾಪಕರಿಂದ ಅದರ ಸ್ಥಳ-ಬಾಡಿಗೆಯನ್ನು ಕೊಡುವುದಕ್ಕೆ ಮತ್ತು ಆ ಕಟ್ಟಡದಿಂದುಂಟಾದ ಬೇರೆ ಕೆಲ ಸಾಲಗಳನ್ನು ತೀರಿಸಲಿಕ್ಕೆ ಹೊಸ ಸಹಾಯಧನವನ್ನು ಎತ್ತಲು ಸಾಧ್ಯವಿರಲಿಲ್ಲ, ಇದು ಅವರನ್ನು ಬಹಳ ಗಾಬರಿ ಮಾಡಿತ್ತು. ಈಗ ಕಟ್ಟಡದ ಹಾಗೂ ಬಲ್ಲವರ ಕೂಟದ ವ್ಯವಸ್ಥಾಪಕರ ಪಂಗಡದಲ್ಲಿ ಎರಡರಲ್ಲೂ ನಾನು ಸದಸ್ಯನಾದುದರಿಂದ ಎರಡರಲ್ಲೂ ಮಾತು ನಡಸಲು ನನಗೆ ಒಳ್ಳೆಯ ಸಂದರ್ಭವೊದಗಿ ಬಂದಿತು. ಅಂತೇ ಕೊನೆಗೆ ಅವರೆಲ್ಲರನ್ನೂ ಒಂದು ಒಪ್ಪಂದಕ್ಕೆ ತಂದು ಮುಟ್ಟಿಸಿದೆನು. ಅದರ ಪ್ರಕಾರ, ಕಟ್ಟಡದ ವ್ಯವಸ್ಥಾಪಕರು ಅದನ್ನು ಬಲ್ಲವರ ಕೂಟದ (Academy) ವ್ಯವಸ್ಥಾಪಕರಿಗೆ ಒಪ್ಪಿಸಬೇಕು ಮತ್ತು ಈ ಎರಡನೆಯವರು ಸಾಲವನ್ನು ತೀರಿಸಲು ತೊಡಗುವುದರಿಂದ ಕಟ್ಟಡದ ಒಂದು ಭವ್ಯವಾದ ಭವನ (Hall) ವನ್ನು ಸಾಂದರ್ಭಿಕ ಧರ್ಮೋಪದೇಶಕರ ಸಲುವಾಗಿ ಯಾವಾಗಲೂ ತೆರೆದಿಡತಕ್ಕದ್ದು—ಇದು ಅದರ ಮೂಲ ಉದ್ದೇಶವಾಗಿತ್ತು. ಮತ್ತು ಬಡಮಕ್ಕಳ ಸಲುವಾಗಿ ಒಂದು ಧರ್ಮಾರ್ಥ ಸಾಲೆಯನ್ನು ನಡೆಸಬೇಕು. ಅದಕ್ಕನುಸಾರವಾಗಿ ಕಾಗದ ಪತ್ರಗಳನ್ನೂ ಸಿದ್ಧಗೊಳಿಸಿದ್ದಾಯಿತು. ಅಂತೇ ಸಾಲವನ್ನು ಸಂದಾಯ

ಮಾಡುವುದರಿಂದ, ಬಲ್ಲವರ ಕೂಟದ ವ್ಯವಸ್ಥಾಪಕರ ವಶದಲ್ಲಿ ಕಟ್ಟಡವು ಬಂದಿತು. ಅತಿ ದೊಡ್ಡ ಭವ್ಯವಾದ ಭವನವನ್ನು ಅನೇಕ ಮಾಳಿಗೆಗಳಾಗಿ ವಿಂಗಡಿಸಿ ಮೇಲೆ ಹಾಗೂ ಕೆಳಗಡೆ ಅನೇಕ ಸಾಲೆಗಳಿಗಾಗಿ ಬೇರೆ ಬೇರೆ ಕೋಣೆಗಳನ್ನು ಮಾಡಿಸಿ ಮತ್ತು ಒಂದಿಷ್ಟು ಹೆಚ್ಚಿನ ಸ್ಥಳವನ್ನು ಖರೀದಿ ಮಾಡಿ–ಸರ್ವಸ್ವವೂ ನಮ್ಮ ಉದ್ದೇಶಕ್ಕೆ ಹೊಂದಿಕೆಯಾಗುವಂತೆ ತಯಾರಿ ಸಿದ್ಧಾಯಿತು. ಅಲ್ಲದೆ ವಿದ್ವಾಂಸರುಗಳೂ ಕಟ್ಟಡಕ್ಕೆ ಬಂದರು; ಕೆಲಸ ಗಾರರೊಡನೆ ಒಪ್ಪಿಗೆ ಮಾಡಿಕೊಳ್ಳುವ ಕಷ್ಟ ಮತ್ತು ಸಾಹಿತ್ಯ ಸಲಕರಣೆ ಗಳನ್ನು ವಿಕ್ರಯಿಸುವ ಜವಾಬ್ದಾರಿ ಹಾಗೂ ಕೆಲಸದ ಉಸ್ತು ವಾರಿಯನ್ನು ನೋಡುವುದು ನನ್ನ ತಲೆಯ ಮೇಲೆ ಬಿತ್ತು. ಆಗ ಇದು ನನ್ನ ಖಾಸಗಿ ವ್ಯವಹಾರದಲ್ಲಿ ಅಡ್ಡ ಬಾರದುದರಿಂದ ನಾನು ಇದನ್ನು ಬಹಳ ಗೆಲವಿನಿಂದ ನಡೆಸಿಕೊಳ್ಳುತ್ತಿದ್ದೆನು. ಯಾಕೆಂದರೆ ಹೋದವರುಷ ಮಿಸ್ಟರ್ ಡೇವಿಡ್ ಹಾಲ್ ಎಂಬೊಬ್ಬ ಬಹಳ ಯೋಗ್ಯ ದುಡಿಮೆಗಾರ ಹಾಗೂ ಪ್ರಾಮಾಣಿಕನಾದ ಪಾಲುಗಾರನನ್ನು ತೆಗೆದುಕೊಂಡಿದ್ದೆನು. ಅವನು ನನ್ನೊಡನೆ ನಾಲ್ಕು ವರುಷಗಳತನಕ ಕೆಲಸ ಮಾಡಿರುವುದರಿಂದ ಅವನ ಗುಣ ನಡತೆಗಳು ನನಗೆ ಚೆನ್ನಾಗಿ ವಿದಿತವಾಗಿದ್ದುವು. ಮುದ್ರಣಾ ಲಯದ ಎಲ್ಲಾ ಜವಾಬ್ದಾರಿಯನ್ನು ಅವನು ನನ್ನ ಕೈಗಳಿಂದ ತೆಗೆದು ಕೊಂಡು, ಲಾಭದ ನನ್ನ ಪಾಲನ್ನು ನಿಯಮಿತವಾಗಿ ಕಳುಹಿಸುತ್ತಿದ್ದನು. ಹದಿನೆಂಟು ತಿಂಗಳುಗಳ ತನಕ ಪಾಲುಗಾರಿಕೆಯು ನಮ್ಮಿಬ್ಬರ ಮಟ್ಟಿಗೆ ಯಶಸ್ವಿಯಾಗಿ ನಾಗಿತ್ತು.

ಬಲ್ಲವರ ಕೂಟ (academy)ದ ವ್ಯವಸ್ಥಾಪಕರು ಕೆಲಕಾಲದಲ್ಲಿ ಗವರ್ನರನ ಒಂದು ಶಾಸನದ ಮೂಲಕ ಸಂಘವೆಂದು ಏಕೀಕರಣ ಗೊಂಡರು. ಬ್ರಿಟನಿನಲ್ಲಿಯ ಸಹಾಯಧನದ ಮೂಲಕ ಅವರ ಭಂಡವಾ ಲವು ಹೆಚ್ಚಿತು, ಜಮೀನುದಾರರಿಂದ ಆಸ್ತಿಯು ಧರ್ಮಾರ್ಥ ಕೊಡಲ್ಪ ಟ್ಟಿತು. ಅದನ್ನು ಅಸೆಂಬ್ಲಿ ಆನಂತರ ಸಾಕಷ್ಟು ಹೆಚ್ಚಿಸಿತು. ಅಂತೇ ಈ ರೀತಿಯಲ್ಲಿ ಈಗಿನ ಫಿಲಡೆಲ್ಫಿಯಾದ ವಿಶ್ವವಿದ್ಯಾಲಯವು (University of Philadelphia) ಸ್ಥಾಪಿಸಲ್ಪಟ್ಟಿತು. ಪ್ರಾರಂಭದಿಂದಲೂ ನಾನು ಅದರ ಒಬ್ಬ ವ್ಯವಸ್ಥಾಪಕನಾಗಿದ್ದೆನು. ಈಗ ನಾಲ್ವತ್ತು ವರುಷಗಳಿಗೆ ಹತ್ತಿರವಾಗಿದೆ. ಅಂತೇ ಅನೇಕ ಜನ ತರುಣರು ಅದರಲ್ಲಿ ತಮ್ಮ ಶಿಕ್ಷಣ ವನ್ನು ಪಡೆದುಕೊಂಡು, ಅವರ ವಿಶೇಷ ಸಾಮರ್ಥ್ಯಗಳಿಂದ ಸಾರ್ವಜನಿಕ ಹುದ್ದೆಗಳಲ್ಲಿದ್ದುಕೊಂಡು ಮತ್ತು ನಾಡಿನ ಅಮೂಲ್ಯ ಪುರುಷರಾಗಿರುವು

ದನ್ನು ನೋಡಲು ಬಹಳ ಆನಂದವಾಗುತ್ತಿದೆ.

ಖಾಸಗಿ ವ್ಯವಹಾರದಿಂದ ಮೇಲೆ ಹೇಳಿದಂತೆ ನಾನು ನಿವೃತ್ತನಾದೊಡನೆ ನಾನು ಗಳಿಸಿದ ಸಾಕಷ್ಟಾದ ಹಾಗೂ ಹವಣಾದ ಐಶ್ವರ್ಯದಿಂದ ತೃಪ್ತಿಗೊಂಡೆನು. ನನ್ನ ಮಿಕ್ಕ ಜೀವನದಲ್ಲಿ ತತ್ವಜ್ಞಾನದ ಅಭ್ಯಾಸಕ್ಕೆ ಮತ್ತು ಮನೋರಂಜನೆಗೆ ವಿರಾಮವನ್ನು ಪಡೆದುಕೊಂಡಿದ್ದೆನು. ಇಂಗ್ಲೆಂಡಿನಿಂದ ಇಲ್ಲಿಗೆ ಉಪನ್ಯಾಸಕ್ಕಾಗಿ ಬಂದಿರುವ ಡಾಕ್ಟರ್ ಸ್ಪೆನ್ಸ್‌ನ ಎಲ್ಲಾ ಉಪಕರಣಗಳನ್ನು (apparatus) ನಾನು ಕೊಂಡುಕೊಂಡಿದ್ದೆನು. ಅಂತೇ ನನ್ನ ವಿದ್ಯುತ್ ಪ್ರಯೋಗಗಳಲ್ಲಿ ಹೆಚ್ಚಿನ ಉತ್ಸಾಹದಿಂದ ಮುಂದುವರಿದೆನು. ಆದರ ಈಗ ನನ್ನನ್ನು ವಿರಾಮದ ಮನುಷ್ಯನೆಂದು ಬಗೆದುಕೊಂಡ ಸಾರ್ವಜನಿಕರು ತಮ್ಮ ಉದ್ದೇಶಗಳಿಗೆ ನನ್ನನ್ನು ಹಿಡಿದಿಡುತ್ತಿದರು. ನಮ್ಮ ಪೌರ ಸರಕಾರದ ಪ್ರತಿಯೊಂದು ಭಾಗದವರು ಹೆಚ್ಚು ಕಡಿಮೆ ಏಕಕಾಲಕ್ಕೆ ಕೆಲವೊಂದು ಕರ್ತವ್ಯವನ್ನು ನನ್ನ ಮೇಲೆ ಹೇರುತ್ತಿದ್ದರು. ಗವರ್ನರನು ನನ್ನನ್ನು ಶಾಂತಿ ಆಯೋಗದಲ್ಲಿ ಹಾಕಿದನು; ನಗರ ಸಭೆಯವರು ನನ್ನನ್ನು ಕಾಮನ್ ಕೌನ್ಸಿಲಿಗೆ ಆರಿಸಿದರು; ನಂತರ ಬಹುಬೇಗನೆ ಪುರದ ನ್ಯಾಯಾಧೀಶನೆಂದೂ ಆರಿಸಲಾಯಿತು—ನನ್ನನ್ನು. ಇತ್ತ ಹೆಚ್ಚಿನ ನಾಗರಿಕರೆಲ್ಲ ಒಟ್ಟಿನಲ್ಲಿ ನನ್ನನ್ನು ಅವರ ಪ್ರತಿನಿಧಿಯಾಗಿ ಕಳುಹಿಸಲು ಆರಿಸಿದ್ದಾಯಿತು. ಈ ಕೊನೆಯ ಹುದ್ದೆಯು ನನಗೆ ತುಂಬಾ ಹಿತಕರವಾಗಿತ್ತು. ಯಾಕಂದರೆ, ಅಲ್ಲಿ ಬಹಳ ಕಾಲದಿಂದ ಚರ್ಚೆಯನ್ನು ಕೇಳುತ್ತ ಕುಳಿತುಕೊಂಡು ನನಗೆ ಬೇಸರ ಬಂದಿತ್ತು. ಅಲ್ಲಿ ನಾನು ಕಾರಕೂನನಾದುದರಿಂದ ಅವುಗಳಲ್ಲಿ ಭಾಗವಹಿಸಲು ಸಾಧ್ಯವಿರಲಿಲ್ಲ. ಅಂತೇ ಅವುಗಳು ಕೆಲವೊಮ್ಮೆ ತುಂಬಾ ಬೇಸರ ಹುಟ್ಟಿಸುತ್ತಿದ್ದವು—ನಾನೇ ಅದರಿಂದಾಗಿ ವಿಸ್ಮಯ ಶೂನ್ಯಗಳನ್ನು ಅಥವಾ ಚೌಕಗಳನ್ನು ಹಾಕಿಯೋ ಅಥವಾ ಬೇಸರವನ್ನು ಕಳೆಯಲು ಏನಾದರೂ ಮಾಡಿ ನನ್ನಷ್ಟಕ್ಕೆ ಮನೋರಂಜನೆ ಪಡೆಯುವ ಹೊತ್ತು ಬರುತ್ತಿತ್ತು. ಇತ್ತ ನಾನು ಆದರ ಸದಸ್ಯನಾದುದರಿಂದ ಒಳ್ಳೆಯದನ್ನು ಮಾಡುವ ನನ್ನ ಶಕ್ತಿಯು ಹೆಚ್ಚಾಗುತ್ತದೆಂದು ನಾನು ಎಣಿಸಿಕೊಂಡೆನು. ಹೀಗಿದ್ದರೂ ಕೂಡ ಈ ಎಲ್ಲಾ ಬಡತಿಗಳಿಂದ ನನ್ನ ಮಹತ್ವಾಕಾಂಕ್ಷೆಯು ಸ್ತುತಿಸಲ್ಪಟ್ಟಿದೆಯೆಂದು ಹೇಳುವುದಿಲ್ಲ. ಖಂಡಿತಕ್ಕೂ ಹಾಗೆ ಮಾತ್ರ ಆಗಿದೆ. ಯಾಕಂದರೆ-ನನ್ನ ಅಲ್ಪ ಆರಂಭವನ್ನು ಪರಿಗಣಿಸಿದರೆ ಅವುಗಳೆಲ್ಲ ನನಗೆ ದೊಡ್ಡ ವಿಷಯಗಳಾಗಿವೆ; ಮತ್ತು ಇದಕ್ಕೂ ಮಿಗಿಲಾಗಿ ಅವುಗಳು ನನಗೆ ಹೆಚ್ಚಿನ

ಆನಂದದಾಯಕದವುಗಳಾಗಿವೆ. ಯಾ ಕ ಂ ದ ರೆ—ಸಾರ್ವಜನಿಕರಿಂದ ಒಂದಿಷ್ಟೂ ಕೇಳದಿದ್ದರೂ ಕೂಡ ಸ್ವಸಂತೋಷದಿಂದ ನನಗೆ ಸದಭಿಪ್ರಾಯದ ಹೇರಳ ಪ್ರಶಸ್ತಿಪತ್ರಗಳು ಬಂದಿರುತ್ತವಷ್ಟೆ.

ಶಾಂತಿಯ ನ್ಯಾಯಾಧೀಶನ ಹುದ್ದೆಯನ್ನು ನಾನು ಅಲ್ಪಕಾಲ ಪ್ರಯತ್ನಿಸಿದ್ದಾಯಿತು. ಕೆಲವೊಂದು ಕೋರ್ಟುಗಳನ್ನು ನಡೆಸಿ, ಕಾರಣಗಳನ್ನು ಕೇಳುತ್ತ ಬೆಂಚಿನ ಮೇಲೆ ಕುಳಿತುಕೊಂಡು; ಆ ಹುದ್ದೆಯಲ್ಲಿ ಕೀರ್ತಿವಂತನಾಗಿ ಕೆಲಸ ಮಾಡಲು ಅಗತ್ಯವಾದ ಸಾಮಾನ್ಯ ಕಾಯ್ದೆಯ ಜ್ಞಾನವು ನನಗೆ ಗೊತ್ತಿದ್ದುದಕ್ಕಿಂತ ಹೆಚ್ಚು ಬೇಕಾಗಿದೆಯೆಂಬುದನ್ನು ಅರಿತುಕೊಂಡು ನಾನು ಕ್ರಮೇಣ ಅದರಿಂದ ಜಾರತೊಡಗಿದೆನು. ಅಸೆಂಬ್ಲಿಯಲ್ಲಿ ಅದಕ್ಕಿಂತಲೂ ಹೆಚ್ಚಿನ ಕರ್ತವ್ಯವನ್ನು ನಾನು ಕಾಯ್ದೆಗಳ ನಿರ್ಮಾಪಕನಾಗಿ ಮಾಡುವ ಬಂಧನಕ್ಕೊಳಪಟ್ಟಿದ್ದೇನೆಂಬ ನೆಪವನ್ನು ಹೇಳಿ ಅದರಿಂದ ನಿವೃತ್ತನಾದೆನು. ಹತ್ತು ವರುಷಗಳ ತನಕ ಈ ಮೊಕ್ತೇಸರಿಕೆಗೆ ನನ್ನ ಆಯ್ಕೆಯು ವರುಷಂ ಪ್ರತಿ ನೆರವೇರುತ್ತ ಬಂದಿತ್ತು. ನಾನು ಯಾವ ಮತದಾರನಿಗೂ ಅವನ ಮತಕ್ಕೆ ಯಾಚಿಸದಿದ್ದರೂ ಅಥವಾ ನೇರವಾಗಿ ಇಲ್ಲವೆ ಪರೋಕ್ಷವಾಗಿ ಆಯ್ಕೆಗೊಳ್ಳುವ ಯಾವ ಆಸೆಯನ್ನೂ ವ್ಯಕ್ತಪಡಿಸದಿದ್ದರೂ ಕೂಡ ಇದು ನಡೆದಿತ್ತು. ಸೌಧ (House) ದಲ್ಲಿ ನಾನು ಸ್ಥಳವನ್ನು ತೆಗೆದುಕೊಂಡ ನಂತರ ನನ್ನ ಮಗನು ಅವರ ಕಾರಕೂನನಾಗಿ ನೇಮಿಸಲ್ಪಟ್ಟನು.

ಮುಂಬರಲಿರುವ ವರುಷದಲ್ಲಿ ಇಂಡಿಯನರೊಡನೆ ಕಾರ್ಲಿಲಿಯಲ್ಲಿ ಒಂದು ಒಪ್ಪಂದ ನಡೆಯಲಿತ್ತು. ಆ ವಿಷಯದ ಬಗ್ಗೆ ಪ್ರತಿನಿಧಿಗಳಾಗಿ ಹೋಗಲು ಕೌನ್ಸಿಲಿನ ಸದಸ್ಯರಲ್ಲಿ ಕೆಲವರನ್ನು ಸೂಚಿಸಬೇಕೆಂದು ಗವರ್ನರನು ಸೌಧಕ್ಕೆ ಸುದ್ದಿ ಕಳುಹಿಸಿದನು. ಸೌಧ (House) ವು ಸಭಾಪತಿಯನ್ನು (ಮಿಸ್ಟರ್ ನೋರಿಸ್) ಮತ್ತು ನನ್ನನ್ನು ಸೂಚಿಸಿತು. ಆಯೋಗದಲ್ಲಿ ಸೇರಿದುದರಿಂದ ನಾವು ಕಾರ್ಲಿಲೆಗೆ ಹೋದೆವು. ಅದೇ ಪ್ರಕಾರ ಇಂಡಿಯನರನ್ನು ಸಂಧಿಸಿದೆವು.

ಆ ಜನರು ಅಪರಿಮಿತವಾಗಿ ಕುಡಿಯುವವರಾದುದರಿಂದ ಮತ್ತು ಹಾಗಿದ್ದಾಗ ಬಹಳ ದಂಗೆಖೋರರೂ ಜೋಶಿಸ್ತಿನವರೂ ಆಗಿದ್ದುದರಿಂದ ಅವರಿಗೆ ಯಾವ ಮದ್ಯವನ್ನೂ ಮಾರದಂತೆ ಕಟ್ಟುನಿಟ್ಟಾಗಿ ನಿಷೇಧಿಸಿದೆವು. ಇತ್ತ ಈ ನಿಷೇಧದ ಕುರಿತು ಅವರು ತಕರಾರು ತೆಗೆದಾಗ ನಾವು ಅವರಿಗೆ ಒಪ್ಪಂದದ ಕಾಲದಲ್ಲಿ ಅವರು ಅಮಲೇರದೆ ಶಾಂತ ರೀತಿಯಿಂದ ಉಳಿದರೆ

ನಮ್ಮ ವ್ಯವಹಾರವು ಮುಗಿದೊಡನೆ ಅವರಿಗೆ ಬೇಕಾದಷ್ಟು ರಮ್ (Rum) ಕೊಡುತ್ತೇವೆಂದು ಹೇಳಿದೆವು. ಅವರು ಈ ವಚನವನ್ನು ಸ್ವೀಕರಿಸಿ ಆದರಂತೆ ನಡೆದರು, ಯಾಕಂದರೆ ಅವರಿಗೆ ಮದ್ಯ ಸಿಗುತ್ತಿರಲಿಲ್ಲ. ಅಂತೇ ಒಪ್ಪಂದವು ಬಹಳ ಕ್ರಮಪ್ರಕಾರ ಶಾಂತ ರೀತಿಯಿಂದ ನಡೆಯಿತು ಮತ್ತು ಪರಸ್ಪರ ತೃಪ್ತಿಯಲ್ಲಿ ಮುಕ್ತಾಯಗೊಂಡಿತು. ಆಮೇಲೆ ಅವರು ತಮ್ಮ ಹಕ್ಕನ್ನು ಸಾಧಿಸಿ ರಮ್ ಪಡೆದುಕೊಂಡರು; ಇದು ಮಧ್ಯಾಹ್ನದ ಮೇಲೆ ಜರುಗಿತು: ಅವರು ಗಂಡಸರು, ಹೆಂಗಸರು ಮತ್ತು ಮಕ್ಕಳು ನೂರು ಜನರಿದ್ದರು, ಮತ್ತು ಪೇಟೆಯ ಸ್ವಲ್ಪ ಹೊರಗಡೆಯಲ್ಲಿ ಚೌಕಾಕೃತಿಯಲ್ಲಿ ಕಟ್ಟಲ್ಪಟ್ಟ ತಾತ್ಕಾಲಿಕ ಕೋಣೆಗಳಲ್ಲಿ ಅವರು ವಾಸವಾಗಿದ್ದರು. ಸಂಜೆಯಲ್ಲಿ ಅವರ ದೊಡ್ಡ ಬೊಬ್ಬೆಯನ್ನು ಕೇಳಿ ಆಯೋಗದವರು ಏನು ಸಂಗತಿಯೆಂದು ನೋಡಲು ಹೊರಗೆ ಬಂದರು. ಚೌಕಾಕೃತಿಯ ಮಧ್ಯದಲ್ಲಿ ಅವರು ದೊಡ್ಡ ಬೆಂಕಿಯನ್ನು (Bonfire) ಹಾಕಿದ್ದು ನಮಗೆ ಕಂಡಿತು. ಅವರೆಲ್ಲ ಕುಡಿದಿದ್ದರು. ಗಂಡಸರು ಮತ್ತು ಹೆಂಗಸರು ಜಗಳವಾಡುತ್ತ ಹೊಡೆದಾಡುತ್ತಿದ್ದರು. ಬೆಂಕಿಯ ಕೊಳ್ಳಿಗಳನ್ನು ಹಿಡಿದುಕೊಂಡು ಆ ದೊಡ್ಡ ಅಗ್ನಿಯ ಮಸುಕು ಬೆಳಕಿನಲ್ಲಿ ಒಬ್ಬರಿಗೊಬ್ಬರು ಭೀಕರವಾಗಿ ಚೀರುತ್ತ ಬಡಿದಾಡುತ್ತ ಓಡಾಡುವಾಗ ಅವರ ಅರ್ಧ ಕಪ್ಪಾದ ದೇಹಗಳು ಕಾಣುತ್ತಿದ್ದು, ನಮ್ಮ ನರಕದ ಕಲ್ಪನೆಯನ್ನು ಚೆನ್ನಾಗಿ ಹೊಂದಿಕೊಳ್ಳುವಂಥ ದೃಶ್ಯವು ಅದಾಗಿತ್ತು. ಗೊಂದಲವನ್ನು ಶಾಂತ ಮಾಡುವುದಕ್ಕೆ ಸಾಧ್ಯವಿರಲಿಲ್ಲ. ನಾವು ನಮ್ಮ ವಾಸಸ್ಥಳಕ್ಕೆ ಸೇರಿದೆವು. ಮಧ್ಯರಾತ್ರಿಯಲ್ಲಿ ಅವರಲ್ಲಿ ಕೆಲ ಜನರು ಇನ್ನೂ ರಮ್ ಕೇಳುತ್ತ ಬೊಬ್ಬಿಡುತ್ತ ನಮ್ಮ ಬಾಗಿಲಿನ ಹತ್ತಿರ ಬಂದರು. ಅದರ ಬಗ್ಗೆ ಯಾವ ವಿಚಾರವನ್ನೂ ನಾವು ಮಾಡಲಿಲ್ಲ.

ಆ ಬಗೆಯ ತೊಂದರೆಯನ್ನು ನಮಗೆ ಕೊಟ್ಟು ತಪ್ಪಿ ನಡೆದುದರ ಅರಿವಿದ್ದ ಅವರು ಮರುದಿನ ಬೆಳಿಗ್ಗೆ ತಮ್ಮಲ್ಲಿಯ ಮೂರು ಜನ ಮುದಿ ಉಪದೇಶಕರನ್ನು ನಮ್ಮ ಕ್ಷಮೆ ಕೇಳಲು ಕಳುಹಿಸಿದರು. ವಕ್ತಾರನು ತಪ್ಪನ್ನು ಒಪ್ಪಿಕೊಂಡನು, ಆದರೆ ಅದನ್ನು ರಮ್ಮಿನ ಮೇಲೆ ಹಾಕಿದನು. ಆಮೇಲೆ ರಮ್ಮನ್ನು ಕ್ಷಮಿಸಲು ಹೀಗೆ ಹೇಳುತ್ತ ಪ್ರಯತ್ನಿಸಿದನು: "ಸರ್ವಸ್ವವನ್ನು ನಿರ್ಮಿಸಿದ ಮಹಾ ಚೈತನ್ಯವಂತನು ಪ್ರತಿಯೊಂದು ವಸ್ತುವನ್ನು ಕೆಲವೊಂದು ಉಪಯೋಗಕ್ಕಾಗಿ ಮಾಡಿರುತ್ತಾನೆ. ಮತ್ತು ಯಾವ ಉಪಯೋಗಕ್ಕೆ ಒಂದು ವಸ್ತುವನ್ನು ಅವನು ನಿಯಮಿಸಿರುತ್ತಾನೋ ಆ ಉಪ

ಯೋಗಕ್ಕೆ ಅದು ಯಾವಾಗಲೂ ಬೀಳಬೇಕು. ಈಗ ಅವನು ರಮ್ ನಿರ್ಮಿಸಿದಾಗ 'ಇದು ಇಂಡಿಯನರಿಗೆ ಕುಡಿದು ಅಮಲೇರಲಿಕ್ಕಾಗಿ ಇರಲಿ' ಎಂದು ಹೇಳಿದ್ದಾನೆ, ಕಾರಣ ಅದು ಹಾಗಾಗಲೇ ಬೇಕು." ಮತ್ತು ನಿಜ ವಾಗಿಯೂ, ಒಂದು ವೇಳೆ ಭೂಮಿಯ ಮೇಲಿನ ರೈತರಿಗೆ ಸ್ಥಳ ಮಾಡಿ ಕೊಡುವುದಕ್ಕಾಗಿ ಈ ಅಸಾಗರಿಕರನ್ನು ನಾಶಮಾಡುವುದು ಆ ದಯಾಘ ನನ ಉದ್ದೇಶವಾಗಿದ್ದರೆ ಆ ಕಾರ್ಯಕ್ಕೆ ರಮ್ ನಿಯಮಿತ ಸಾಧನವಾಗಿರು ವುದು ಅಯೋಗ್ಯವಲ್ಲ ಎಂದು ಕಾಣುತ್ತದೆ. ಹಿಂದಕ್ಕೆ ಸಮುದ್ರ ಕರಾವಳಿ ಯಲ್ಲಿ ವಾಸವಾಗಿದ್ದ ಎಲ್ಲಾ ಜನಾಂಗದವರನ್ನು ಅದು ನಿರ್ನಾಮ ಮಾಡಿ ರುತ್ತದೆ."

೧೭೫೧ ರಲ್ಲಿ ಡಾ|ಥೋಮಸ್ ಬಾಂಡ್ ಎಂಬೊಬ್ಬ ನನ್ನ ಪ್ರಮುಖ ಮಿತ್ರನು ಒಂದು ದವಾಖಾನೆಯನ್ನು ಫಿಲಡೆಲ್ಫಿಯಾದಲ್ಲಿ ಸ್ಥಾಪಿಸುವ ವಿಚಾರ ಮಾಡಿದನು. (ಒಂದು ಉಪಕಾರದ ಯೋಜನೆ, ಇದನ್ನು ನಿರ್ಮಿ ಸಿದವನು ನಾನೆಂದು ಮಾಡಲಾಗಿದೆ; ಆದರೆ ಮೂಲತಃ ಅದು ಅವನದು) ಇದು ಆ ಪ್ರಾಂತದ ಅಥವಾ ಬೇರೆಯ ಬಡ ರೋಗಿಗಳ ಆರೈಕೆಗಾಗಿತ್ತು. ಅದಕ್ಕೆ ಹಣ ಸಂಗ್ರಹಿಸಲು ಪ್ರಯತ್ನ ಮಾಡುವುದರಲ್ಲಿ ತುಂಬ ಹುರುಪಿ ನವನೂ ಕುಶಲನೂ ಆಗಿದ್ದನು. ಆದರೆ ಈ ಸೂಚನೆಯು ಅಮೆರಿಕಾದಲ್ಲಿ ಹೊಸ ಮಾದರಿಯದು ಮತ್ತು ಮೊದಲಿಗೆ ಚೆನ್ನಾಗಿ ಅರ್ಥಮಾಡಲ್ಪಡದುದ ರಿಂದ ಅವನು ಅಲ್ಪ ಯಶಸ್ಸನ್ನು ಪಡೆದನು

ಕೊನೆಗೆ ಯಾವ ಸಾರ್ವಜನಿಕ ಹಿತಸಂಬಂಧದ ಯೋಜನೆಯನ್ನು ನಾನಿಲ್ಲದೆ ಸಾಗಿಸುವುದೆಂಬುದೇ ಇಲ್ಲವೆಂದು ಅವನಿಗೆ ಕಂಡುಬಂದು ಆ ಗೌರವದಿಂದ ನನ್ನಲ್ಲಿಗೆ ಬಂದನು. "ಯಾಕಂದರೆ—ನಾನು ಚಂದಾ ಕೊಡಲು ಸೂಚಿಸಿದೊಡನೆ ಅವರು ಆಗಾಗ ನನಗೆ ಈ ವಿಷಯದಲ್ಲಿ ನೀನು ಫ್ರ್ಯಾಂಕ್ಲಿನ್‌ಗೆ ಕೇಳಿರುವೆಯಾ ? ಎಂದು ಪ್ರಶ್ನಿಸುತ್ತಿದ್ದರು. ಮತ್ತು ಈ ಬಗ್ಗೆ ಅವನು ಏನು ಅಭಿಪ್ರಾಯಪಟ್ಟಿದ್ದಾನೆ? ಅಂತೇ ನಿನ್ನನ್ನು ನಾನು ಕೇಳಿಲ್ಲವೆಂದು (ಬಹುಶಃ ಇದು ನಿನ್ನ ಮಾರ್ಗಕ್ಕೆ ಹೊಂದಿಕೊಂಡಿರಲಿಕ್ಕಿಲ್ಲ ವೆಂದು ನಾನು ಬಗೆದುಕೊಂಡು) ತಿಳಿಸಿದೊಡನೆ, ಅವರು ಚಂದಾ ಕೊಡು ತ್ತಿದ್ದಿಲ್ಲ, ಆದರೆ ಆ ಬಗ್ಗೆ ವಿಚಾರಮಾಡುತ್ತೇವೆಂದು ಹೇಳುತ್ತಿದ್ದರು" ಎಂದು ಹೇಳಿದನು. ಅವನ ಯೋಜನೆಯ ಉಪಯುಕ್ತತೆಯ ಸಾಧ್ಯತೆಯನ್ನು ಮತ್ತು ಅದರ ಸ್ವರೂಪವನ್ನು ನಾನು ಕೇಳಿಕೊಂಡೆನು. ಅಂತೇ ಅವನಿಂದ ಬಹಳ ಸಮಾಧಾನಕರವಾದ ವಿವರವನ್ನು ಪಡೆದೊಡನೆ ನಾನು ಸ್ವತಃ

ಅದಕ್ಕೆ ಚಂದಾದಾರನಾಗುವುದಲ್ಲದೆ ಹೃತ್ಪೂರ್ವ ಬೇರೆಯವರಿಂದ ನಿಧಿ ಸಂಗ್ರಹಿಸುವ ಕಾರ್ಯದಲ್ಲಿ ನಿರತನಾದೆನು. ಆದರೂ ಕೂಡ ಪ್ರಥಮದಲ್ಲಿ ವಿನಂತಿ ಮಾಡಿಕೊಳ್ಳುವುದಕ್ಕಾಗಿ, ವೃತ್ತಪತ್ರಗಳಲ್ಲಿ ಬರೆದು ಜನರ ಮನಸ್ಸನ್ನು ಸಿದ್ಧಪಡಿಸಲು ನಾನು ಪ್ರಯತ್ನಿಸಿದ್ದೆನು. ಅಂಥ ಸಂದರ್ಭಗಳಲ್ಲಿ ಇದು ನನ್ನ ವಾಡಿಕೆಯ ರೂಢಿಯಾಗಿತ್ತು. ಆದರೆ ಅದನ್ನು ಅವನು ಮಾತ್ರ ಲೋಪಗೊಳಿಸಿದ್ದನು.

ಅನಂತರ ಸಹಾಯಧನವು ಹೆಚ್ಚು ಕೊಡುಗೈಯಿಂದ ಮತ್ತು ಉದಾರವಾಗಿ ದೊರೆಯಿತು. ಆದರೆ ಕ್ಷೀಣವಾಗಲಿಕ್ಕೂ ಪ್ರಾರಂಭವಾಗಿತ್ತು. ಅಸೆಂಬ್ಲಿಯಿಂದ ಏನಾದರೂ ಸಹಾಯ ದೊರೆಯದ ಹೊರತು ಅದು ಸಾಕಾಗಲಿಕ್ಕಿಲ್ಲವೆಂದು ನನಗೆನಿಸಿತು. ಆದುದರಿಂದ ಆ ಬಗ್ಗೆ ಅರ್ಜಿ ಮಾಡಲು ಸೂಚಿಸಲಾಯಿತು. ಅಂತೇ ಹಾಗೆ ಮಾಡಿದ್ದಾಯಿತು. ಪ್ರದೇಶದ ಸದಸ್ಯರು ಮೊದಲನೆ ಯೋಜನೆಯನ್ನು ಅರ್ಥಮಾಡಿಕೊಳ್ಳಲಿಲ್ಲ. ಅದು ಕೇವಲ ಪಟ್ಟಣಕ್ಕಷ್ಟೆ ಉಪಯೋಗವಾದೀತೆಂದು ಅವರು ತಕರಾರು ಮಾಡಿದರು. ಅಂತೇ ಪಟ್ಟಣಿಗರಷ್ಟೆ ಅದರ ಖರ್ಚನ್ನು ನೋಡಬೇಕೆಂದರು. ಮತ್ತು ಪಟ್ಟಣಿಗರೇ ಸ್ವತಃ ಸಾಮಾನ್ಯವಾಗಿ ಅದನ್ನು ಒಪ್ಪುತ್ತಾರೋ ಇಲ್ಲವೋ ಎಂದು ಸಂಶಯಪಟ್ಟರು. ನನ್ನ ಹೇಳಿಕೆಯು ಅದರ ವಿರುದ್ಧವಾಗಿತ್ತು. ಅಂದರೆ ನಿಃಸ್ವಾರ್ಥ ದಾನದಿಂದ ನಾವು ಎರಡುಸಾವಿರ ಪೌಂಡುಗಳನ್ನು ಕೂಡಿಸಲಿಕ್ಕೆ ಸಮರ್ಥರಾದುದರಿಂದ ಆದಕ್ಕೆ ದೊರೆತ ಬೆಂಬಲಕ್ಕೆ ಯಾವ ಸಂದೇಹವೂ ಇಲ್ಲವೆಂದು ನನ್ನ ಮಾತಾಗಿತ್ತು. ಅವರು ಅದನ್ನು ತೀರ ನಿರರ್ಥಕವಾದ ನಂಬಿಕೆಯೆಂದು ಮತ್ತು ಸಂಪೂರ್ಣ ಅಸಾಧ್ಯವಾದುದೆಂದೂ ಬಗೆದರು.

ಈ ಬಗ್ಗೆ ನಾನೊಂದು ಯೋಜನೆಯನ್ನು ಸಿದ್ಧಗೊಳಿಸಿದೆನು. ಮತ್ತು ಒಂದು ಮಸೂದೆಯನ್ನು ಮಾಡಿ ಅದರಂತೆ ಎಲ್ಲಾ ಚಂದಾದಾರರನ್ನು ಅವರ ಅರ್ಜಿಯ ಪ್ರಕಾರ ಸಂಘೀಕರಿಸುವ ಅಪ್ಪಣೆಯನ್ನು ಕೇಳುವ ಮತ್ತು ಅವರಿಗೆ ರಖಂ ಬರೆಯದ ಚೆಕ್ಕನ್ನು ಕೊಡುವ ಯೋಜನೆಯು ಅದಾಗಿತ್ತು. ಅಸೆಂಬ್ಲಿಯವರಿಗೆ ಅದು ಸರಿ ಹೋಗದೆ ಇದ್ದ ಪಕ್ಷದಲ್ಲಿ ಆ ಮಸೂದೆಯನ್ನು ರದ್ದು ಮಾಡಬಹುದೆಂಬ ಕರಾರಿನಿಂದ ಮಾತ್ರ ಈ ಅಪ್ಪಣೆಯು ದೊರೆಯಿತು. ಅಂತೇ ಮುಖ್ಯವಾದ ಕಲಮನ್ನು ಕರಾರಿನದನ್ನಾಗಿ ಮಾಡಿಕೊಂಡು ನಾನು ಅದನ್ನು ಪಡೆದೆನು. ಅದು ಹೀಗಿತ್ತು: "ಮತ್ತು ಮೇಲೆ ಹೇಳಿದ ಅಧಿಕಾರಿಗಳಿಂದ ಹೀಗೆ ನಡೆಸಲಾಗಲಿ—ಚಂದಾದಾರರು

ಒಟ್ಟುಗೂಡಿ ಸಭೆ ಸೇರಿ ತಮ್ಮ ವ್ಯವಸ್ಥಾಪಕನನ್ನು ಮತ್ತು ಕೋಶಾಧಿಕಾರಿಯನ್ನು ಆರಿಸಿದಾಗ, ಮತ್ತು ತಮ್ಮ ಸಹಾಯದಿಂದ—ಬೆಲೆಯ ನಿರಖು ರೇವಣಾತಿಯನ್ನು ಸಂಗ್ರಹಿಸಿದಾಗ (ಇದರ ವಾರ್ಷಿಕ ಬಡ್ಡಿಯನ್ನು ಮೇಲೆ ಹೇಳಲ್ಪಟ್ಟ ದವಾಖಾನೆಯಲ್ಲಿ ಬಡ ರೋಗಿಗಳನ್ನು ಧರ್ಮಾರ್ಥವಾಗಿ ಸೇರಿಸಿಕೊಂಡು ಅವರ ಪತ್ತೆ ಪಾನ ಚಿಕಿತ್ಸೆ ಸಲಹೆ ಮತ್ತು ಔಷಧಗಳಿಗೆ ಉಪಯೋಗಿಸತಕ್ಕದ್ದು), ಮತ್ತು ಇದನ್ನು ಅಸೆಂಬ್ಲಿಯ ಸಭಾಪತಿಯು ಮನಸ್ಸಿಗೆ ತೃಪ್ತಿದಾಯಕವಾಗಿ ಕಾಣುವಂತೆ ಸದ್ಯದಮಟ್ಟಿಗೆ ಮಾಡಿದಾಗ – ಅದು ಆಗ ಹೇಳಲಾದ ಸಭಾಪತಿಗೆ ನ್ಯಾಯಸಮ್ಮತವಾಗಬಹುದು, ಮತ್ತು ಅವನು ಈ ಮೂಲಕ ಪ್ರಾಂತೀಯ ಖಜಾನೆಗೆ ಎರಡು ಸಾವಿರ ಪೌಂಡುಗಳ ಒಂದು ಚೆಕ್ಕಿಗೆ,–ಎರಡು ವರುಷಗಳಲ್ಲಿ ಹೇಳಲ್ಪಟ್ಟ ದವಾಖಾನೆಯ ಕೋಶಾಧಿಕಾರಿಗೆ ಕೊಡುವಂಥದಕ್ಕೆ ಮತ್ತು ಅದನ್ನು ಸ್ಥಾಪಿಸುವುದಕ್ಕೆ, ಕಟ್ಟುವುದಕ್ಕೆ ಮತ್ತು ಅದನ್ನು ಕಾರ್ಯಗತಗೊಳಿಸುವುದಕ್ಕೆ—ಸಹಿ ಮಾಡಬೇಕಾಗುವುದು."

ಈ ಕರಾರು ಮಸೂದೆಯನ್ನು ಪಾರುಗಾಣಿಸಿತು. ಯಾಕೆಂದರೆ, ಒಪ್ಪಿಗೆಯನ್ನು ವಿರೋಧಿಸಿದ ಸದಸ್ಯರು ಈಗ ಮಾತ್ರ ಯಾವ ಖರ್ಚೂ ಇಲ್ಲದೆ ದಾನಶೂರರೆಂದೆನಿಸಿಕೊಳ್ಳುವ ಕೀರ್ತಿಯು ದೊರೆಯುತ್ತದೆಂದು ತಿಳಿದುಕೊಂಡು ಅದರ ಮಂಜೂರಾತಿಗೆ ಒಪ್ಪಿದರು. ಮತ್ತು ನಂತರ ಜನತೆಯಿಂದ ಚಂದಾ ಹಣ ಕೇಳಿಕೊಳ್ಳುವಾಗ ಕಾಯ್ದೆಯ ಕರಾರಿನ ವಚನವನ್ನು ಅವರು ಹಣ ಕೊಡಲು ಹೆಚ್ಚಿನ ಸಾಧನೆಯನ್ನಾಗಿ ನಾವು ಮುಂದೆ ಮಾಡಿದೆವು. ಇದರಿಂದಾಗಿ ಪ್ರತಿಯೊಬ್ಬನ ಸಹಾಯವು ಇಮ್ಮಡಿಸುವುದರಿಂದ—ಎರಡು ವಿಧದಲ್ಲಿ ಹೀಗೆ ಕಾಯ್ದೆಯು ಕೆಲಸ ಮಾಡಿತು. ಅಗತ್ಯವಿದ್ದ ಹಣಕ್ಕಿಂತ ಹೆಚ್ಚು ಬಹುಬೇಗನೆ ಕೂಡಿತು; ಅದೇ ರೀತಿಯಲ್ಲಿ ಚಂದಾ ಹಣವು ಮೀರಿತು. ಅಂತೇ ನಾವು ಸಾರ್ವಜನಿಕ ಪಾರಿತೋಷಕಕ್ಕೆ ಹಕ್ಕುದಾರರಾಗಿ ಅದನ್ನು ಪಡೆದೆವು. ಇದು ನಮ್ಮ ಯೋಜನೆಯನ್ನು ಕಾರ್ಯಗತಗೊಳಿಸಲು ನಮಗೆ ಸಹಕರಿಸಿತು ಒಂದು ಅನುಕೂಲವಾದ ಹಾಗೂ ಸುಂದರವಾದ ಕಟ್ಟಡವು ಬೇಗನೆ ನಿರ್ಮಾಣಗೊಂಡಿತು. ಸತತ ಅನುಭವದಿಂದ ಸಂಸ್ಥೆಯು ಉಪಯುಕ್ತವಾದುದೆಂದು ಕಂಡುಬಂದಿತು. ಅಂತೇ ಅದು ಇಂದಿನತನಕವೂ ಏಳಿಗೆಯಲ್ಲಿದೆ. ಮತ್ತು ಯಾವ ನನ್ನ ರಾಜಕೀಯ ಯುಕ್ತಿಯ ಯಶಸ್ಸಿನಿಂದ ಆಗ ಅಷ್ಟೊಂದು ತೃಪ್ತಿಯು ನನಗೆ ದೊರೆತದ್ದು ಅಥವಾ ಅದನ್ನು ಅನಂತರ ವಿಚಾರ

ಮಾಡಿಕೊಂಡಾಗ ಒಂದಿಷ್ಟಾದರೂ ಕುತಂತ್ರದ ಉಪಯೋಗ ಮಾಡಿದ್ದಕ್ಕಾಗಿ ನಾನು ಬಹಳ ಸಹಜವಾಗಿ ಕ್ಷಮೆ ಯಾಚಿಸಿದ್ದು ನನಗೆ ನೆನಪಿಲ್ಲ.

ಈ ಹೊತ್ತಿನ ಸುಮಾರಿಗೆ ರೆವರೆಂಡ್ ಗಿಲ್ಬರ್ಟ್ ಟೆನೆಂಟ್ ಎಂಬ ಇನ್ನೊಬ್ಬ ಯೋಜಕನು ಒಂದು ಹೊಸ ಸಭಾಭವನವನ್ನು ನಿರ್ಮಿಸುವುದಕ್ಕೆ ಚಂದಾ ಹಣ ಕೂಡಿಸುವುದರಲ್ಲಿ ನಾನು ಅವನಿಗೆ ಸಹಾಯ ಮಾಡಬಹುದೆಂದು ವಿನಂತಿಸುತ್ತ ನನ್ನ ಬಳಿಗೆ ಬಂದನು. ಅದು ಪ್ರೆಸ್ಬಿಟೇರಿಯನರಲ್ಲಿ ಅವನು ಕೂಡಿ ಹಾಕಿದ್ದ ಧಾರ್ಮಿಕ ಗೋಷ್ಠಿಯವರ ಉಪಯೋಗಾರ್ಥವಾಗಿ ಆಗಿತ್ತು. ಈ ಶ್ರೋತೃಗಳು ಮೂಲತ: ಮಿಸ್ಟರ್ ವೈಟ್‌ಫೀಲ್ಡನ ಶಿಷ್ಯರಾಗಿದ್ದರು. ನನ್ನ ಸಹ-ನಾಗರಿಕರನ್ನು ಪದೇಪದೇ ಚಂದಾ ಹಣ ಎತ್ತುವುದಕ್ಕೋಸ್ಕರ ವಿನಂತಿಸುತ್ತ ಅತೃಪ್ತರನ್ನಾಗಿ ಮಾಡಲು ಮನಸ್ಸಿಲ್ಲದ ಕಾರಣ ನಾನು ಖಡಾಖಡಿಯಾಗಿ ನಿರಾಕರಿಸಿದೆನು. ಅವನು ಆನಂತರ ಉದಾರಿಗಳ ಮತ್ತು ಸಾರ್ವಜನಿಕ ಹಿತದೃಷ್ಟಿಯುಳ್ಳ ಜನರ ಪಟ್ಟಿಯನ್ನು ದೀರ್ಘ ಅನುಭವದಿಂದ ಬಲ್ಲ ನನ್ನಿಂದ ಪಡೆಯಲು ಅಪೇಕ್ಷಿಸಿದನು. ಇದು ಕೂಡ ನನ್ನಿಂದ ಸಾಧ್ಯವಾಗದುದೆಂದು ನಾನು ಬಗೆದೆನು- ನನ್ನ ವಿನಂತಿಗೆ ಅವರು ಸಹೃದಯತೆಯಿಂದ ಸಹಾಯ ನೀಡಿದ ಮೇಲೆ, ಅವರನ್ನು ಬೇರೆ ಬೇಡುವವರಿಂದ ತೊಂದರೆಗೀಡಾಗುವಂತೆ ಗುರುತು ಮಾಡಿಕೊಡುವುದು ಅಯೋಗ್ಯವೆಂದು ಬಗೆದೆನು. ಆದುದರಿಂದ ಅಂಥ ಪಟ್ಟಿಯನ್ನು ಕೊಡಲು ನಿರಾಕರಿಸಿದೆನು. ಆಮೇಲೆ ಅವನು ಕಟ್ಟಕಡೆಗೆ ನನ್ನ ಉಪದೇಶವನ್ನಾದರೂ ಅವನಿಗೆ ಕೊಡಬೇಕೆಂದು ಇಚ್ಛಿಸಿದನು. "ಅದನ್ನು ನಾನು ಕೊಡಲು ಸಿದ್ಧನಿದ್ದೇನೆ, ಮತ್ತು ಪ್ರಥಮದಲ್ಲಿ ಯಾರು ಏನಾದರೂ ಒಂದಿಷ್ಟು ಕೊಡುತ್ತಾರೆಂದು ನಿನಗೆ ಗೊತ್ತಿದೆಯೋ ಅಂಥವರೊಡನೆಲ್ಲ ಕೇಳಲು ನಾನು ನಿನಗೆ ಸೂಚಿಸುತ್ತೇನೆ. ಮುಂದೆ, ಯಾರು ಕೊಡುತ್ತಾರೋ ಇಲ್ಲವೋ ಎಂದು ನಿನಗೆ ಖಂಡಿತವಿಲ್ಲದವರೊಡನೆ ಕೇಳು ಮತ್ತು ಅವರಿಗೆ ನಿನಗೆ ಕೊಟ್ಟಂಥವರ ಯಾದಿಯನ್ನು ತೋರಿಸಬೇಕು, ಮತ್ತು ಕೊನೆಯದಾಗಿ ಏನೂ ಕೊಡುವುದಿಲ್ಲವೆಂದು ನಿನಗೆ ಖಾತ್ರಿಯಿದ್ದವರನ್ನು ಅಲಕ್ಷಿಸಬಾರದು. ಯಾಕಂದರೆ ಅವರಲ್ಲಿ ಕೆಲವರ ಬಗ್ಗೆ ನೀನು ತಪ್ಪು ತಿಳಿದುಕೊಂಡಿರಬಹುದು" ಎಂದು ಹೇಳಿದೆನು. ಅವನು ನಕ್ಕನು ಮತ್ತು ನನಗೆ ಅಭಿನಂದನೆ ಸಲ್ಲಿಸಿದನು. ಅಲ್ಲದೆ ನನ್ನ ಸಲಹೆಯನ್ನು ಸ್ವೀಕರಿಸುವುದಾಗಿ ಹೇಳಿದನು. ಅವನು ಹಾಗೆ ಮಾಡಿದನು, ಯಾಕಂದರೆ ಅವನು ಪ್ರತಿಯೊಬ್ಬನನ್ನೂ ಕೇಳಿದನು, ಮತ್ತು ಅವನು ಎಣಿಸಿದು

ದಕ್ಕಿಂತ ಹೆಚ್ಚಿನ ನಿಧಿಯನ್ನು ಸಂಪಾದಿಸಿದನು, ಅದರಿಂದ ಆರ್ಚ-ಸ್ಟ್ರೀಟಿನ (Arch-Street)ನಲ್ಲಿ ನೆಲೆಸಿರುವ ವಿಶಾಲವಾದ ಹಾಗೂ ಭವ್ಯವಾದ ಸಭಾಭವನವನ್ನು ಅವನು ಕಟ್ಟಿಸಿದನು.

ಅಂದವಾಗಿ ಕ್ರಮಬದ್ಧವಾದ ರೀತಿಯಲ್ಲಿ ನಮ್ಮ ಪಟ್ಟಣವು ನಿರ್ಮಾಣ ಗೊಂಡಿದ್ದರೂ, ಬೀದಿಗಳು ನೇರವಾಗಿ, ಉದ್ದವಾಗಿ ಒಂದಕ್ಕೊಂದು ಸಮ ಕೋನದಲ್ಲಿ ಹಾಯ್ದು ಹೋಗಿದ್ದರೂ ಕೂಡ ಉದ್ದಕ್ಕೂ ಅವುಗಳು ಅನಾಚ್ಛಾದಿತವಾಗಿ ನರಳುವ ಅಪಮಾನಕ್ಕೆ ಗುರಿಯಾಗಿದ್ದವು. ಶೀತಹವೆಯಲ್ಲಿ ಭಾರವಾದ ಬಂಡಿಗಳ ಚಕ್ರಗಳು ಅವುಗಳನ್ನು ಉತ್ತು ಜವುಳುಗೊಳಿಸುತ್ತಿದ್ದವು. ಇದರಿಂದ ಅವುಗಳಲ್ಲಿ ಹಾದು ಹೋಗುವುದು ಕಠಿಣವಾಗುತ್ತಿತ್ತು; ಮತ್ತು ಒಣ ಹವೆಯಲ್ಲಿ ಧೂಳು ಅಸಹನೀಯವಾಗಿತ್ತು. ಜೆರಸೀ ಮಾರ್ಕೆಟ್ (Jersey Market) ಎಂದು ಕರೆಯಲ್ಪಡುವ ಸ್ಥಳದ ಹತ್ತಿರದಲ್ಲಿ ನಾನು ವಾಸವಾಗಿದ್ದೆನು. ಪಟ್ಟಣಿಗರು ತಮ್ಮ ಜೀವನಾವಶ್ಯಕ ವಸ್ತುಗಳನ್ನು ಕೊಂಡುಕೊಳ್ಳುವಾಗ ಕೆಸರಿನಲ್ಲಿ ಅತ್ತಿತ್ತ ಹೋಗುವುದನ್ನು ಕಷ್ಟದಿಂದ ಕಂಡಿದ್ದೆನು. ಆ ಮಾರ್ಕೆಟ್ಟಿನ ಮಧ್ಯದಿಂದ ಕೆಳಗೆ ಒಂದು ಉದ್ದದ ಪಟ್ಟಿಯಷ್ಟು ಸ್ಥಳವನ್ನು ಇಟ್ಟಿಗೆಗಳಿಂದ ಉದ್ದಕ್ಕೆ ಮುಚ್ಚಿಸಲಾಗಿದೆ. ಹೀಗಾಗಿ ಮಾರ್ಕೆಟ್ಟಿನಲ್ಲಿ ಒಮ್ಮೆಯಾದರೂ ಕೂಡ ಅವರು ಬಲವಾಗಿ ಕಾಲೂರಬಹುದು. ಆದರೆ ಹೆಚ್ಚಾಗಿ ಅಲ್ಲಿಗೆ ಹೋಗುವುದರಲ್ಲೇ ಪಾದರಕ್ಷೆಗಳು ಕೆಸರಿನಲ್ಲಿ ಮುಳುಗಿ ಹೋಗಿರುತ್ತವೆ. ಈ ವಿಷಯ ಮಾತನಾಡಿ ಮತ್ತು ಲೇಖನ ಬರೆದು, ದೀರ್ಘಕಾಲದ ತರುವಾಯ ಮಾರ್ಕೆಟ್ಟಿನಿಂದ ಇಟ್ಟಿಂಗಿಯ ಕಾಲುದಾರಿಯವರೆಗೆ ಬೀದಿಯನ್ನು ಕಲ್ಲುಗಳಿಂದ ಮುಚ್ಚಿಕೆ ಹಾಕಿಸಲು ನಾನು ಕಾರಣನಾದೆನು. ಅದು ಮನೆಗಳ ಆಚೆ ಎರಡು ಬದಿಗಳಲ್ಲೂ ಹಾಕಲ್ಪಟ್ಟಿತ್ತು. ಇದರಿಂದ ಕೆಲ ಕಾಲದವರೆಗೆ ಒಣವಾದ ರಕ್ಷೆಗಳಿಂದ ಮಾರ್ಕೆಟಿಗೆ ಸುಲಭದಿಂದ ಪ್ರವೇಶ ಮಾಡಲಿಕ್ಕಾಯಿತು. ಆದರ ಮಿಕ್ಕ ಬೀದಿಗಳು ಕಲ್ಲಿನಿಂದ ಮುಚ್ಚಲ್ಪಡದುದರಿಂದ ಈ ಮುಚ್ಚಿಕೆಯ (Pavement) ಮೇಲೆ ಕೆಸರಿನಿಂದ ಗಾಡಿಯೊಂದು ಬಂದೊಡನೆ ಅದು ತನ್ನ ಕೆಸರನ್ನು ಅಲುಗಾಡಿಸಿ ಅದರ ಮೇಲೆ ಹಾಗೆ ಬಿಟ್ಟು ಹೋಗುತ್ತಿತ್ತು. ಅಂತೇ ಅದು ಬೇಗನೆ ಕೆಸರು-ಕೊಚ್ಚೆಯಿಂದ ತುಂಬಿಹೋಗುತ್ತಿತ್ತು. ಪಟ್ಟಣದಲ್ಲಿ ಇನ್ನೂ ಕಸಗುಡಿಸುವವರು ಇಲ್ಲದುದರಿಂದ ಅದನ್ನು ತೆಗೆಯಲಾಗಲಿಲ್ಲ

ಸ್ವಲ್ಪ ವಿಚಾರ ನಡೆಸಿದ ಮೇಲೆ ಮುಚ್ಚಿಕೆಯ ರಸ್ತೆಯ ಮೇಲಿನ

ಹೊಲಸನ್ನು ವಾರಕ್ಕೆ ಎರಡು ಸಲ ಗುಡಿಸಿ, ಎಲ್ಲಾ ನೆರೆಹೊರೆಯ ಬಾಗಿಲು ಗಳ ಮುಂದಿನಿಂದ ದೂರ ಒಯ್ದು ಬಿಸಾಡಿ, ಸ್ವಚ್ಛವಿಡುವ ಕೆಲಸವನ್ನು ಪ್ರತಿಯೊಂದು ಮನೆಯವರಿಂದ ತಿಂಗಳಿಗೆ ಆರು ಪೆನ್ನಿಗಳನ್ನು ಪಡೆದು ಮಾಡಲು ಸಿದ್ಧವಿರುವ ಒಬ್ಬ ಬಡ ಕೆಲಸಗಾರನಾದ ಮನುಷ್ಯನು ನನಗೆ ದೊರೆತನು. ಆನಂತರ ಈ ಅಲ್ಪ ಖರ್ಚಿನಿಂದ ನೆರೆಹೊರೆಯವರಿಗೆ ದೊರೆಯ ಬಹುದಾದ ಅನುಕೂಲತೆಗಳು, ಜನರ ಕಾಲುಗಳಿಂದ ಅಷ್ಟೊಂದು ಧೂಳು ಮನೆಯೊಳಗೆ ಬಾರದುದರಿಂದ ನಮ್ಮ ಮನೆಗಳನ್ನು ಸ್ವಚ್ಛವಿಡಲು ಆಗುವ ಹೆಚ್ಚಿನ ಸೌಲಭ್ಯ, ಗಿರಾಕಿಗಳು ಬಹಳ ಸುಲಭದಿಂದ ಅಂಗಡಿಗಳಿಗೆ ಬಂದು-ಹೋಗುವುದರಿಂದ ವ್ಯಾಪಾರದ ಲಾಭ; ಮತ್ತು ಗಾಳಿ ಬೀಸುವಾಗ ಅವರ ಅಂಗಡಿಗಳ ಸಾಮಾನುಗಳ ಮೇಲೆ ಧೂಳು ಹೋಗಿ ಕೂಡದಿರುವುದು ಇತ್ಯಾದಿ–ಇತ್ಯಾದಿಯನ್ನೆಲ್ಲ ನಾನು ಒಂದು ಲೇಖನದಲ್ಲಿ ಬರೆದು ಪ್ರಕಟಿಸಿ ಅವರ ಮುಂದೆ ಇಟ್ಟೆನು. ಪ್ರತಿಯೊಂದು ಮನೆಗೆ ಒಂದು ಲೇಖನವನ್ನು ಕಳುಹಿಸಿದೆನು, ಮತ್ತು ಒಂದೆರಡು ದಿವಸದಲ್ಲಿ ಸುತ್ತಾಡಿ ಆರು ಪೆನ್ಸ್ ಕೊಟ್ಟು ಚಂದಾದಾರರಾಗಿ ಈ ಒಪ್ಪಂದಕ್ಕೆ ಯಾರು ಒಪ್ಪುತ್ತಾರೆಂದು ನೋಡ ಹೊರಟೆನು. ಅದನ್ನು ಸರ್ವರೂ ಒಮ್ಮುಖದಿಂದ ಒಪ್ಪಿ ಸಹಿ ಹಾಕಿದ್ದರು. ಅಂತೇ ಸದ್ಯದ ಮಟ್ಟಿಗೆ ಉತ್ತಮ ರೀತಿಯಿಂದ ಕಾರ್ಯಗತ ವಾಗಿಯೂ ಬಿಟ್ಟಿತು. ಪಟ್ಟಣದ ಎಲ್ಲಾ ನಿವಾಸಿಗಳು ಮಾರ್ಕೆಟಿನ ಸುತ್ತು ಮುತ್ತಲಿನ ಮುಚ್ಚಿಕೆಯ ರಸ್ತೆಯ ಸ್ವಚ್ಛತೆಯಿಂದ ಸಂತೋಷಪಟ್ಟರು. ಇದು ಎಲ್ಲರಿಗೂ ಅನುಕೂಲವಾಗಿದ್ದುದರಿಂದ ಎಲ್ಲಾ ಬೀದಿಗಳಿಗೂ ಮುಚ್ಚಿ ಕೆಯಾಗಬೇಕೆಂಬ ಸಾಮಾನ್ಯ ಅಪೇಕ್ಷೆಯನ್ನೆ ಇದು ಸೂಚಿಸಿತು. ಅಂತೇ ಈ ಉದ್ದೇಶಕ್ಕಾಗಿ ಕರ ಕೊಡಲು ಒಪ್ಪುವ ಹಾಗೆ ಹೆಚ್ಚಿನ ರೀತಿಯಲ್ಲಿ ಜನರನ್ನು ಪರಿವರ್ತಿಸಿತು.

ಕೆಲ ಸಮಯದ ಮೇಲೆ ಪಟ್ಟಣದ ರಸ್ತೆಗಳಿಗೆ ಮುಚ್ಚಿಕೆ ಮಾಡುವ ಒಂದು ಮಸೂದೆಯನ್ನು ತಯಾರಿಸಿ ಅಸೆಂಬ್ಲಿಯಲ್ಲಿ ತಂದೆನು. ಅದು ೧೭೫೭ರಲ್ಲಿ ನಾನು ಇಂಗ್ಲಂಡಿಗೆ ಹೋಗುವುದರ ಸ್ವಲ್ಪ ಮೊದಲಾಗಿತ್ತು, ಮತ್ತು ನಾನು ಹೋಗುವ* ತನಕ ಅದು ಸ್ವೀಕೃತವಾಗಲಿಲ್ಲ ಆಮೇಲೆ ಕಂದಾಯದಲ್ಲಿ ಬದಲಾವಣೆ ಮಾಡಿ, ಇದು ಒಳ್ಳೆಯದೆಂದು ನನಗೆ ಅನಿಸ ಲಿಲ್ಲ; ಆದರೆ ಬೀದಿಗಳನ್ನು ಹಾಸುಗಲ್ಲಿಂದ ಮುಚ್ಚಿಸುವುದಲ್ಲದೆ ದೀಪಗಳಿಂದ

---

ಮತಗಳನ್ನು ನೋಡಿರಿ.

ಬೆಳಗಿಸುವ ಹೆಚ್ಚಿನ ಸೌಲಭ್ಯದೊಂದಿಗೆ ಅದು ಸ್ವೀಕೃತವಾಯಿತು. ಇದು ಬಹು ದೊಡ್ಡ ಸುಧಾರಣೆ. ಇದು ವೈಯಕ್ತಿಕವಾಗಿ ದಿವಂಗತ ಮಿಸ್ಟರ್ ಜೋನ್ ಕ್ಲಿಫ್ಟನ್ ಎಂಬವನಿಂದಾಗಿತ್ತು. ಅವನು ದೀಪದ ಉಪಯುಕ್ತತೆಯ ಮಾದರಿಯನ್ನು ತನ್ನ ಮನೆಯ ಬಾಗಿಲ ಹತ್ತಿರ ಒಂದನ್ನು ಇಟ್ಟು ತೋರಿಸಿ, ಮೊದಲಬಾರಿಗೆ ಪಟ್ಟಣವನ್ನು ದೀಪಗಳಿಂದ ಬೆಳಗಿಸುವ ವಿಚಾರ ಜನರ ಮನಸ್ಸಿಗೆ ನಾಟುವಂತೆ ಮಾಡಿದನು. ಈ ಸಾರ್ವಜನಿಕ ಹಿತಸಂಬಂಧದ ಮರ್ಯಾದೆಯನ್ನು ಕೂಡ ನನಗೆ ನೀಡಲಾಗಿದೆ. ಆದರೆ ಅದು ನಿಜವಾಗಿಯೂ ಆ ದೊಡ್ಡ ಮನುಷ್ಯನಿಗೆ ಸೇರಿದ್ದು. ಆದರೆ ಅವನ ಮಾದರಿಯನ್ನು ನಾನೇನೋ ಅನುಸರಿಸಿದ್ದು ಅಹುದು ಮತ್ತು ನಮ್ಮ ದೀಪಗಳ ಆಕಾರದ ವಿಷಯದಲ್ಲಿ ತುಸು ಘನತೆಯನ್ನು ಪಡೆಯಲು ನಾನು ಹಕ್ಕುದಾರನಾಗಿದ್ದೇನೆ. ಲಂಡನಿನಿಂದ ನಮಗೆ ಮೊದಲ ಸಲ ಸರಭರಾಯಿಯಾದ ದುಂಡು ದೀಪ(globe lamps)ಗಳಿಗಿಂತ ಇದು ಬೇರೆಯಾಗಿರುತ್ತದಷ್ಟೆ. ಅವುಗಳು ಈ ವಿಷಯದಲ್ಲಿ ಅಯೋಗ್ಯವಾಗಿವೆಯೆಂದು ಕಂಡು ಬಂದಿತು: ಕೆಳಗಿನಿಂದ ಅವುಗಳು ಗಾಳಿ ಸೇರಿಸಿಕೊಳ್ಳುತ್ತಿದ್ದಿಲ್ಲ; ಆದುದರಿಂದ ಸರಾಗವಾಗಿ ಹೊಗೆಯು ಮೇಲಿಂದ ಹೊರಗೆ ಹೋಗುತ್ತಿರಲಿಲ್ಲ, ಆದರೆ ಗ್ಲೋಬಿನಲ್ಲೆ ಸುತ್ತಾಡುತ್ತಿತ್ತು, ಅದರ ಒಳಗಡೆಯಲ್ಲೆ ಸೇರಿಕೊಂಡು ಬಹು ಬೇಗನೆ ಅವುಗಳು ನೀಡುವ ಬೆಳಕನ್ನು ತಡೆದು ಹಿಡಿಯುತ್ತಿತ್ತು. ಅಲ್ಲದೆ ಪ್ರತಿದಿನ ಅವುಗಳನ್ನು ಸ್ವಚ್ಛವಾಗಿ ಒರಸುವ ತೊಂದರೆ ಕೂಡ ಬೇರೆ ಕಾಡುತ್ತಿತ್ತು. ಅಂತೇ ಆಕಸ್ಮಿಕವಾಗಿ ಎಲ್ಲಾದರೂ ಒಂದು ಪೆಟ್ಟುಬಿದ್ದರೆ ಅದು ಸರ್ವನಾಶವಾಗುತ್ತಿತ್ತು ಮತ್ತು ಸಂಪೂರ್ಣ ನಿರುಪಯುಕ್ತವಾಗುತ್ತಿತ್ತು. ಆದುದರಿಂದ ನಾನು ಅವುಗಳನ್ನು ನಾಲ್ಕು ಚಪ್ಪಟೆಯಾದ ಗಾಜಿನ ತುಂಡುಗಳಿಂದ ಕೂಡಿಸಿ, ಮೇಲಕ್ಕೆ ಒಂದು ಉದ್ದವಾದ ನಳಿಕೆಯನ್ನು ಹೊಗೆ ಮೇಲೆ ಹೋಗಲು ಬಿಟ್ಟು ಮತ್ತು ಕೆಳಗಿನಿಂದ ಗಾಳಿ ಹೋಗಲು ಚಿಕ್ಕ-ತೂತುಗಳನ್ನು ಇಟ್ಟು, ಹೊಗೆಯು ಮೇಲೇರಲು ಸಹಾಯವಾಗುವಂತೆ ತಯಾರಿಸಲು ಸೂಚಿಸಿದೆನು. ಈ ವಿಧಾನದಿಂದ ಅವುಗಳು ಸ್ವಚ್ಛವಾಗಿ ಇಡಲ್ಪಡುತ್ತಿದ್ದವು. ಮತ್ತು ಲಂಡನ್ ದೀಪಗಳ ಹಾಗೆ ಕೆಲ ತಾಸುಗಳಲ್ಲೆ ಕಪ್ಪಾಗಿ ಬಿಡುತ್ತಿದ್ದಿಲ್ಲ. ಬದಲು ಬೆಳಗಿನ ತನಕ ಪ್ರಕಾಶಮಾನವಾಗಿ ಉರಿಯುತ್ತಿದ್ದುವು. ಮತ್ತು ಆಕಸ್ಮಿಕ ಹೊಡೆತವು ಸಾಮಾನ್ಯವಾಗಿ ಕೇವಲ ಒಂದೇ ಕಾಜಿನ ಹಲಗೆಯನ್ನು ಒಡೆಯಬಹುದಾಗಿತ್ತಷ್ಟೆ. ಅದು ಸುಲಭದಿಂದ ಸರಿಪಡಿಸಬಹುದಾಗಿತ್ತು.

ವಾಕ್ಸ್‌ಹಾಲಿನಲ್ಲಿ ಉಪಯೋಗಿಸುತ್ತಿದ್ದ ಗ್ಲೋಬ್ ದೀಪಗಳನ್ನು ಸ್ವಚ್ಛವಾಗಿಡುವ ತಳದಲ್ಲಿನ ಸಹಾಯಕ ತಂತುಗಳನ್ನು ತಮ್ಮ ಬೀದಿಯ ದೀಪಗಳಿಗೇಕೆ ಬಳಸಲು ಲಂಡನಿನವರು ಕಲಿಯಲಿಲ್ಲವೆಂದು ನನಗೆ ಕೆಲ ವೊಮ್ಮೆ ಅಚ್ಚರಿಯೆನಿಸುತ್ತದೆ. ಆದರೆ ಈ ತೂತುಗಳು ಮತ್ತೊಂದು ಉದ್ದೇಶದಿಂದ ಮಾಡಲ್ಪಟ್ಟಿವೆಯೆಂದು ಕಾಣುತ್ತದೆ, ಅದೆಂದರೆ—ಬಹು ತೀವ್ರವಾಗಿ ಬತ್ತಿಗೆ ಬೆಂಕಿಯನ್ನು ಅವುಗಳಲ್ಲಿ ತೂಗಾಡುತ್ತಿರುವ ಚಿಕ್ಕ ಮೇಣದಿಂದ ಮುಟ್ಟಿಸಲಿಕ್ಕೆ. ಗಾಳಿ ಒಳಗೆ ತೆಗೆದುಕೊಳ್ಳುವುದು ಇನ್ನೊಂದು ಉಪಯೋಗವಾಗಿತ್ತೆಂದು ಅವರು ವಿಚಾರ ಮಾಡಿದಂತೆ ಕಂಡು ಬರುವುದಿಲ್ಲ. ಅಂತೆ ಈ ಕಾರಣದಿಂದ ದೀಪಗಳನ್ನು ಹೊತ್ತಿಸಿ ಕೆಲ ತಾಸುಗಳು ಕಳೆದ ನಂತರ ಲಂಡನಿನ ಬೀದಿಗಳು ಬಹಳ ಬಡವಾಗಿ ಬೆಳಗಿಸ ಲ್ಪಡುತ್ತಿದ್ದವು.

ಈ ಸುಧಾರಣೆಗಳನ್ನು ಸೂಚಿಸುವಾಗ, ಲಂಡನಿನಲ್ಲಿದ್ದಾಗ ನಾನು ಪ್ರಸ್ತಾಪ ಮಾಡಿದ, ಡಾ। ಫೋದರ್‌ಜಿಲ್ ಎಂಬೊಬ್ಬ ನನಗೆ ಗೊತ್ತಿದ್ದ ಒಳ್ಳೆಯ ಮನುಷ್ಯನ ನೆನಪು ಬರುತ್ತದೆ. ಇವನು ಉಪಯುಕ್ತ ಯೋಜ ನೆಗಳ ಬಹು ದೊಡ್ಡ ಪ್ರವರ್ತಕನಾಗಿಯೂ ಇದ್ದನು. ಬೀದಿಗಳು ಒಣಗಿ ರುವಾಗ ಗುಡಿಸದಿರುವುದನ್ನು ಮತ್ತು ಹಗುರವಾದ ಧೂಳು ಒಟ್ಟಿಗೆ ಅತ್ತಿತ್ತ ಬಿದ್ದಿರುವುದನ್ನು ನಾನು ನಿರೀಕ್ಷಿಸಿದ್ದೆನು. ಅದು ಶೀತ ಹವೆಯಿಂದ ಕೆಸರಾಗಿ ಬೀಳುವ ತನಕ ಅದೇ ಪಾಡಿನಲ್ಲಿರುತ್ತಿತ್ತು. ಆನಂತರ ಅಷ್ಟು ದಪ್ಪನಾಗಿ ಬೀದಿಯ ಮುಚ್ಚಿಗೆಯ ಮೇಲೆ ಬಿದ್ದು, ಕೆಲದಿನಗಳ ಮೇಲೆ ಅಲ್ಲಿಂದ ಸಂಚಾರವಿರುತ್ತಿದ್ದಿಲ್ಲ. ಆದರೆ ಬಡ ಜನರು ಕಸಪೊರಕೆಯಿಂದ ಗುಡಿಸಿ ಸ್ವಚ್ಛವಾಗಿಟ್ಟ ದಾರಿಗಳಲ್ಲಿ—ಮೇಲೆ ತೆರೆದಿದ್ದ ಬಂಡಿಗಳಲ್ಲಿ ಬಹಳ ಕಷ್ಟ ದಿಂದ ಒಟ್ಟುಗೂಡಿಸಿ ಬಾಚಿ ಕಸವನ್ನು ತುಂಬಿಸಿಕೊಂಡು ಹೋಗುವಾಗ— ಇತ್ತ ಅದರ ಬದಿಗಳಲ್ಲಿದ್ದ ಬೀದಿಯ ಪ್ರತಿಯೊಂದು ಏರಿ-ಇಳಿಜಾರಿನ ಧಡಿಕೆಗೆ ಕೆಸರು ಅಲುಗಾಡಿ ಕೆಳಗೆ ಬಿದ್ದು—ಕೆಲವೊಮ್ಮೆ ಕಾಲ್ನಡೆಯಿಂದ ಸಾಗುವ ಪ್ರಯಾಣಿಕರನ್ನು ತೊಂದರೆಗೀಡು ಮಾಡಿದಂತಾಗುತ್ತಿತ್ತು. ಧೂಳು ತುಂಬಿದ ಬೀದಿಗಳನ್ನು ಗುಡಿಸದೆ ಬಿಡುವುದಕ್ಕೆ ಕೊಡಲ್ಪಟ್ಟ ಕಾರಣ ವೆಂದರೆ—ಅಂಗಡಿ ಮತ್ತು ಮನೆಗಳ ಕಿಟಕಿಗಳ ಮುಖಾಂತರ ಧೂಳು ಒಳಗೆ ಹಾರುತ್ತದೆಂಬುದಾಗಿತ್ತು.

ಒಂದು ಆಕಸ್ಮಿಕ ಘಟನೆಯಿಂದ ಬಹಳ ಸ್ವಲ್ಪ ಸಮಯದಲ್ಲಿ ಎಷ್ಟೊಂದು ಕಸ ಗುಡಿಸುವುದು ನಡೆಯಬಹುದೆಂಬುದು ನನಗೆ ತಿಳಿದು

ಬಂದಿರುತ್ತದೆ. ಒಂದು ದಿನ ಬೆಳಿಗ್ಗೆ, ಕ್ರೇವನ್ ಸ್ಟ್ರೀಟಿನ ನನ್ನ ಮನೆಯ ಮುಂದೆ ರಸ್ತೆಯನ್ನು ಒಬ್ಬಳು ಬಡ ಮುದುಕಿಯು ಬರ್ಚ್ (birch) ಕಸಬರಿಕೆಯನ್ನು ಹಿಡಿದುಕೊಂಡು ಕಸಗುಡಿಸುವುದನ್ನು ಕಂಡೆನು. ಅವಳು ಬಹಳ ಕಳೆಗುಂದಿ ನಿತ್ರಾಣವಾಗಿದ್ದಂತೆ ಕಂಡಿತು. ದುಸ್ತರವಾದ ಬೇನೆಯಿಂದ ಎದ್ದು ಆದೇ ಬಂದವಳಂತೆ ಕಾಣುತ್ತಿದ್ದಳು. ಅವಳಿಗೆ ಅಲ್ಲಿ ಕಸಗುಡಿಸುವಂತೆ ಯಾರು ಹಚ್ಚಿದರೆಂದು ನಾನು ಕೇಳಿದೆನು. "ಯಾರೂ ಅಲ್ಲ, ಆದರೆ ನಾನು ಬಹಳ ಬಡವಳು ಮತ್ತು ಕಷ್ಟದಲ್ಲಿ ಇದ್ದೇನೆ, ನಾನು ದೊಡ್ಡ ಮನುಷ್ಯರ ಮನೆ ಮುಂದೆ ಗುಡಿಸುತ್ತೇನೆ ಮತ್ತು ಅವರು ನನಗೆ ಏನಾದರೂ ಕೊಡಬಹುದೆಂದು ಆಶಿಸುತ್ತೇನೆ" ಎಂದು ಅವಳು ಹೇಳಿದಳು. ಇಡೀ ಬೀದಿಯನ್ನೆಲ್ಲ ಗುಡಿಸಿ ಬರಲು ಕಳುಹಿಸಿದೆನು, ಅವಳಿಗೆ ಒಂದು ಶಿಲ್ಲಿಂಗ್ ಕೊಡುವುದೆಂದು ಹೇಳಿದ್ದೆನು. ಇದು ಒಂಬತ್ತು ಗಂಟೆಯ ಹೊತ್ತಿಗೆ. ಹನ್ನೆರಡು ಗಂಟೆಗೆ ಅವಳು ಶಿಲ್ಲಿಂಗಿಗೆ ಬಂದಳು. ಮೊದಲಿಗೆ ಅವಳ ಕೆಲಸದ ನಾವಧಾನತೆಯನ್ನು ಕಂಡ ನಾನು ಅಷ್ಟು ಬೇಗನೆ ಅವಳದು ಆ ಕೆಲಸವಾಗಿರಬಹುದೆಂದು ನಂಬುವುದು ನನಗಾಗಲಿಲ್ಲ. ಅಂತೇ ಅದನ್ನು ಪರೀಕ್ಷೆಮಾಡಲು ನನ್ನ ಸೇವಕನನ್ನು ಕಳುಹಿಸಿದೆನು. ಇಡೀ ಬೀದಿಯು ಉತ್ತಮ ರೀತಿಯಿಂದ ಸ್ವಚ್ಛಮಾಡಲ್ಪಟ್ಟಿದೆಯೆಂದು ಮತ್ತು ಎಲ್ಲಾ ಧೂಳು ಗಟಾರದಲ್ಲಿದೆಯೆಂದು ಅವನು ವರದಿ ಮಾಡಿದನು. ಈ ಗಟಾರವು ಮಧ್ಯದಲ್ಲಿತ್ತು. ಮುಂದಿನ ಮಳೆಯು ಅದನ್ನೆಲ್ಲ ತೊಳೆದುಕೊಂಡು ಹೋಗುತ್ತಿತ್ತು. ಹೀಗಾಗಿ ರಸ್ತೆಯ ಮುಚ್ಚಿಕೆ ಹಾಗೂ ಗಟಾರ ಕೂಡ ಸಂಪೂರ್ಣ ಸ್ವಚ್ಛವಾಗುತ್ತಿದ್ದವು.

ಆ ಮೇಲೆ ನಾನು ಆ ದುರ್ಬಲ ಹೆಣ್ಣುಮಗಳು ಅಂಥ ಬೀದಿಯನ್ನು ಮೂರು ಗಂಟೆಯಲ್ಲಿ ಗುಡಿಸುವುದಾದರೆ ಒಬ್ಬ ಶಕ್ತಿವಂತನಾದ ಮತ್ತು ಚಟುವಟಿಕೆಯುಳ್ಳ ಮನುಷ್ಯನು ಅದನ್ನು ಅದರ ಅರ್ಧ ಕಾಲಾವಧಿಯಲ್ಲಿ ಮಾಡಬಹುದೆಂದು ನಿರ್ಧಾರ ಮಾಡಿದೆನು. ಈಗ ಇಲ್ಲಿ ಇಂಥ ನೇರವಾದ ಬೀದಿಗಳಲ್ಲಿ ಪ್ರತಿಯೊಂದು ಬದಿಗೆ ಒಂದರಂತೆ ಕಾಲುದಾರಿಯ ಹತ್ತಿರ ಎರಡು ಗಟಾರಗಳು ಇರುವುದಕ್ಕಿಂತ ನಡುವಿನಲ್ಲಿ ಒಂದೇ ಗಟಾರವಿರುವುದರ ಅನುಕೂಲತೆಯನ್ನು ವಿವರಿಸಲೇನು ? ಯಾಕಂದರೆ ಒಂದು ಬೀದಿಯಲ್ಲಿ ಬೀಳುವ ಮಳೆಯೆಲ್ಲ ಎರಡೂ ಬದಿಗಳಿಂದ ಓಡಿ ನಡುವಿನಲ್ಲಿ ಸೇರುತ್ತದೆ, ಅಲ್ಲಿ ಅದು ಮುಂದೆ ಸಿಗುವ ಎಲ್ಲಾ ಕೆಸರನ್ನು ತೊಳೆದುಕೊಂಡು ಹೋಗುವಷ್ಟು ಬಲವಾದ ಪ್ರವಾಹವನ್ನು ನಿರ್ಮಿಸುತ್ತದೆ; ಆದರೆ ಇಬ್ಭಾಗ

ವಾಗಿ ಎರಡು ಗಟಾರಗಳನ್ನು ಮಾಡಿದರೆ ಅದು ಹೆಚ್ಚಾಗಿ ಯಾವುದನ್ನೂ ಸ್ವಚ್ಛಮಾಡಲು ದುರ್ಬಲವಾಗಿರುತ್ತದೆ, ಮತ್ತು ತನಗೆ ದೊರೆತ ಕೊಳೆ ಮಣ್ಣನ್ನು ಕೆಸರನ್ನಾಗಿ ಮಾಡಿಬಿಡುವುದು, ಹೀಗಾಗಿ ಬಂಡಿಗಳ ಚಕ್ರಗಳು ಮತ್ತು ಕುದುರೆಯ ಕಾಲುಗಳಿಗೆ ಅದು ಕಾಲುದಾರಿಯ ಮುಚ್ಚಿಕೆಯ ಮೇಲೆ ಸಿಕ್ಕಿ ಅತ್ತಿತ್ತ ಚದರಿ ಹೋಗುವುದು. ಇದರಿಂದ ಅದು ಕೊಳಕಾಗಿ ಜಾರುವುದು. ಮತ್ತು ಕೆಲವೊಮ್ಮೆ ನಡೆದುಕೊಂಡು ಹೋಗುವವರ ಮೇಲೆ ಸಿಡಿಯುತ್ತದೆ. ಒಳ್ಳೆಯ ಡಾಕ್ಟರರಿಗೆ ತಿಳಿಯಪಡಿಸಿದ ನನ್ನ ಸೂಚನೆಗಳು ಕೆಳಗಿನಂತಿವೆ :

"ಲಂಡನ್ ಮತ್ತು ವೆಸ್ಟ್‌ಮಿನಿಸ್ಟರಿನ ಬೀದಿಗಳ ಹೆಚ್ಚು ಪ್ರಭಾವಯುಕ್ತವಾದ ಸ್ವಚ್ಛತೆಗೆ ಮತ್ತು ಸ್ವಚ್ಛವಾಗಿ ಅವುಗಳನ್ನು ಇಡುವುದಕ್ಕೆ ಅನೇಕ ಗುತ್ತಿಗೆದಾರರನ್ನು ಬೇಸಿಗೆ ಕಾಲದಲ್ಲಿಯ ಎಲ್ಲಾ ಕೊಳೆ ಧೂಳನ್ನು ಗುಡಿಸಲು ನೇಮಿಸಬೇಕೆಂದು ಸೂಚನೆಯಾಗಿರುತ್ತದೆ, ಮತ್ತು ಬೇರೆ ಸಮಯದಲ್ಲಿ ಸಂಗ್ರಹವಾದ ಕೆಸರುಮಣ್ಣನ್ನು—ಅನೇಕಬೀದಿಗಳಲ್ಲಿ ಪ್ರತಿಯೊಂದುಕಡೆಯಲ್ಲಿ ಶೇಖರವಾದದ್ದು ಮತ್ತು ಅವನ ಸುತ್ತಮುತ್ತಲಿರವುದು -ಒಯ್ಯುವ ಉದ್ದೇಶಕ್ಕೆ ಕಸಪೊರಕೆ ಮತ್ತು ಯೋಗ್ಯವಾದ ಸಲಕರಣೆಗಳನ್ನು ಅವರಿಗೆ ಒದಗಿಸತಕ್ಕದ್ದು; ಮತ್ತು ಅವರ ಕೆಲಸಕ್ಕೆ ಇಟ್ಟುಕೊಳ್ಳುವ ಬಡಜನರಿಗೆ ಕೊಡಲು ಇವುಗಳು ಯೋಗ್ಯವಾದ ಸ್ಥಳದಲ್ಲಿ ಸಿದ್ಧವಾಗಿರಬೇಕು.

"ಬೇಸಿಗೆಯ ಒಣ ತಿಂಗಳುಗಳಲ್ಲಿ ಯೋಗ್ಯ ಅಂತರದಲ್ಲಿ ಎಲ್ಲಾ ಕಸಕೊಚ್ಚೆಯನ್ನು ಗುಡಿಸಿ ಒಂದೆಡೆಗೆ, ಸಾಮಾನ್ಯವಾಗಿ ಮನೆಗಳ ಕಿಟಕಿ ಮತ್ತು ಅಂಗಡಿಗಳನ್ನು ತೆರೆಯುವುದಕ್ಕಿಂತ ಮೊದಲು ರಾಶಿ ಮಾಡಬೇಕು. ಆಗ ಮುಚ್ಚಿದ ಬಂಡಿಗಳಲ್ಲಿ ಝಾಡಮಾಲಿಗಳು ಇದನ್ನೆಲ್ಲ ಹೊತ್ತುಕೊಂಡು ಕೂಡಾ ಒಯ್ಯಬಹುದು.

"ಕಸಕೊಳಚೆಯೆಲ್ಲ ರಾಶಿ ಮಾಡಿದ್ದು ಮತ್ತೆ ತಿರುಗ ಬಂಡಿಗಳ ಚಕ್ರಗಳ ಮತ್ತು ಕುದುರೆಗಳ ಕಾಲಿನ ತುಳಿತದಿಂದ ಹರಡಿ—ಚದರಿ ಹೋಗಲು ಬಿಡತಕ್ಕದ್ದಲ್ಲ. ಅದಕ್ಕೆ ಝಾಡಮಾಲಿಗಳಿಗೆ ಬಂಡಿಗಳ ಚಕ್ರಗಳಿಗಿಂತ ಬಹಳ ಮೇಲೆ ಇಡಲಾಗದ ಮತ್ತು ಕೆಳಗೆ ಸ್ಲೈಡರುಗಳ (sliders) ಮೇಲೆ ಇಡುವ ಪೆಟ್ಟಿಗೆಗಳನ್ನು (bodies)—ಜಾಲರಿಯ ತಳವುಳ್ಳವುಗಳನ್ನು—ಒದಗಿಸಿ ಕೊಡಬೇಕು. ಇವುಗಳಲ್ಲಿ ಬುಡಕ್ಕೆ ಹುಲ್ಲನ್ನು ಹಾಸಿದರೆ ಕೆಸರನ್ನು ಬಿಸಾಡಿದಾಗ ಅದು ನಿಲ್ಲುತ್ತದೆ ಮತ್ತು ನೀರನ್ನು ಕೆಳಕ್ಕೆ ಸೋರಿಹೋಗಲು ಬಿಡುವುದು, ಇದರಿಂದ ಅದು ಬಹಳ ಹಗುರವಾಗು

ವುದು ಯಾಕಂದರೆ ನೀರು ಆದರ ಭಾರದ ಹೆಚ್ಚಿನ ಅಂಶವಾಗಿರುತ್ತದೆ. ಬಂಡಿಗಳ ಈ ಪೆಟ್ಟಿಗೆಗಳನ್ನು ಅನುಕೂಲವಾದ ಸ್ಥಳಗಳಲ್ಲಿ ಇಡತಕ್ಕದ್ದು, ಮತ್ತು ಕೈ ಬಂಡಿಗಳಲ್ಲಿ ಅಲ್ಲಿಗೆ ಕೆಸರನ್ನು ತರಬೇಕು. ಅಲ್ಲಿ ಅದರ ನೀರು ಸೋರಿ ಹೋಗುವ ತನಕ ಅವರು ಅಲ್ಲಿಯೇ ಇರತಕ್ಕದ್ದು. ಆಮೇಲೆ ಅವುಗಳನ್ನು ಎಳೆದುಕೊಂಡು ಹೋಗಲು ಕುದುರೆಗಳನ್ನು ತರತಕ್ಕದ್ದು."

ಅನಂತರದಲ್ಲಿ ಈ ಸೂಚನೆಯ ದ್ವಿತೀಯ ಭಾಗದ ಸಾಧ್ಯತೆಯ ವಿಷಯದಲ್ಲಿ ನನಗೆ ಸಂಶಯವಿತ್ತು. ಯಾಕಂದರೆ ಕೆಲವೊಂದು ಬೀದಿಗಳ ಇಕ್ಕಟ್ಟಿನಿಂದ ಹೆಚ್ಚಿನ ದೂರವನ್ನು ಸಾಗಲು ಬಹು ಭಾರವನ್ನು ಸಹಿಸುವಂತೆ ಸೋಸುವ–ಜಾಳಿಗೆಯ ಬಂಡಿಡಬ್ಬಿಯನ್ನು ಇಡುವುದು ಕಷ್ಟದಾಯಕವಾಗಿತ್ತು. ಆದರೆ ಮೊದಲಿನ ಭಾಗವು ಇನ್ನೂ ಸಾಧ್ಯವಾಗಿದೆಯೆಂಬ ಅಭಿಪ್ರಾಯದವನಾಗಿದ್ದೇನೆ. ಯಾಕಂದರೆ ಅಂಗಡಿಗಳು ತೆರೆಯುವ ಮೊದಲು ಬೇಸಿಗೆಯಲ್ಲಿ ಧೂಳನ್ನು ಗುಡಿಸಿ ದೂರ ಒಯ್ಯಬೇಕೆಂಬುದು ಸಾಧ್ಯವೆಂಬುದಕ್ಕೆ-ಹಗಲು ಬಹಳ ಉದ್ದವಾಗಿರುತ್ತದೆ ಮತ್ತು ಒಂದು ದಿನ ಬೆಳಿಗ್ಗೆ ನಾನು ಸ್ಟ್ರಾಂಡ್‌ನಿಂದ (Strand) ಫ್ಲೀಟ್-ಸ್ಟ್ರೀಟ್ (Fleet-Street)ನ ನಡುವೆ ವಿಹಾರಕ್ಕೆ ಹೊರಟಾಗ–ಸುಮಾರು ಏಳು ಗಂಟೆಯ ಹೊತ್ತಿಗೆ ಸೂರ್ಯನು ಮೇಲೆ ಬಂದು ಮೂರು ಗಂಟೆ ಮೀರಿದ್ದರೂ ಕೂಡ, ಬೆಳಗು ಸಾಕಷ್ಟಾಗಿದ್ದರೂ ಸಹ, ಒಂದು ಅಂಗಡಿಯೂ ತೆರೆಯದಿದ್ದುದನ್ನು ನಾನು ನಿರೀಕ್ಷಿಸಿದ್ದಾಗಿರುತ್ತದೆ; ಮತ್ತು ಲಂಡನಿನ ವಸತಿಗಾರರು ಸ್ವಸಂತೋಷದಿಂದ ಮೇಣಬತ್ತಿಯ ಬೆಳಕಿನಲ್ಲಿ ಹೆಚ್ಚು ಜೀವಿಸುವುದನ್ನು ಅಪೇಕ್ಷಿಸಿದುದರಿಂದ ಮತ್ತು ಬೆಳಗಾದರೂ ಬಹುಕಾಲದವರೆಗೆ ನಿದ್ರಿಸುತ್ತಿದ್ದು ಸ್ವಲ್ಪ ತಪ್ಪಾಗಿ ಮೇಣಬತ್ತಿಯ ಕರದಮೇಲೆ ಹಾಗೂ ಮೇಣದ ವಿಪರೀತ ಕ್ರಯದ ಬಗ್ಗೆ ಆಗಾಗ ದೂರುತ್ತಿದ್ದಾರೆ.

ಈ ಚಿಕ್ಕ-ಪುಟ್ಟ ವಿಷಯಗಳು ಮನಸ್ಸಿಗೆ ಒಯ್ಯುವಂಥವುಗಳಲ್ಲ ಅಥವಾ ಹೇಳಲು ಯೋಗ್ಯವಾದವುಗಳಲ್ಲವೆಂದು ಕೆಲವರು ಎಣಿಸಬಹುದು. ಆದರೆ ಗಾಳಿ ಬೀಸಿದ ದಿನ ಒಬ್ಬನ ಕಣ್ಣಿಗೆ ಧೂಳು ಹೋದರೆ ಅಥವಾ ಒಂದು ಅಂಗಡಿಯಲ್ಲಿ ಧೂಳು ಸೇರಿದರೆ ಅದು ಅಷ್ಟೊಂದು ಮಹತ್ವದ್ದಲ್ಲ. ಆದರೂ ಕೂಡ ಜನನಿಬಿಡವಾದ ಪಟ್ಟಣದಲ್ಲಿ ಇಂಥ ಅನೇಕ ಉದಾಹರಣೆಗಳು ಮತ್ತು ಆಗಾಗ ಅವುಗಳ ಪುನರಾವರ್ತನೆಯಾಗುವುದು ಅದಕ್ಕೆ ಮಹತ್ವವನ್ನು ಮತ್ತು ಪರಿಣಾಮವನ್ನು ಕೊಡುತ್ತದೆ. ಬಹುಶಃ ಹೀಗೆ ಅವರು ಇಂಥ ಅಲ್ಪವೆಂದು ತೋರುವ ವಿಷಯಗಳಿಗೆ ಲಕ್ಷ್ಯಕೊಡುವವರನ್ನು ಬಹಳ

ಕಠೋರವಾಗಿ ನಿಂದಿಸಲಾರರೆಂದು ಕಾಣುತ್ತದೆ. ದಿನದಿನವೂ ಸಂಭವಿಸುವ ಚಿಕ್ಕ-ಪುಟ್ಟ ಅನುಕೂಲತೆಗಳಿಂದ ಉಂಟಾಗುವಷ್ಟು ಮಹದಾನಂದವು ಮನುಷ್ಯನಿಗೆ ಅಪರೂಪಕ್ಕೆ ದೊರೆಯುವ ಬಹುದೊಡ್ಡ ಐಶ್ವರ್ಯದ ಸಂಗತಿಗಳಿಂದ ಉಂಟಾಗುವುದಿಲ್ಲ. ಹೀಗೆ ನೀವು ಒಬ್ಬ ತರುಣ ಬಡ ಮನುಷ್ಯನಿಗೆ ಸ್ವತಃ ಕ್ಷೌರ ಮಾಡಿಕೊಳ್ಳಲಿಕ್ಕೆ ಮತ್ತು ಅವನ ಬಾಳನ್ನು ಯೋಗ್ಯ ಸ್ಥಿತಿಯಲ್ಲಿಡಲು ಕಲಿಸಿದರೆ ಅವನಿಗೆ ಸಾವಿರ ಗಿನಿಗಳನ್ನು ಕೊಡುವುದಕ್ಕಿಂತ ಹೆಚ್ಚಿನ ಸುಖವನ್ನು ನೀವು ದೊರಕಿಸಿಕೊಟ್ಟಂತಾಗುವುದು. ಹಣವು ಬೇಗನೆ ಖರ್ಚಾದೀತು. ಅದನ್ನು ಮೂರ್ಖತನದಿಂದ ವ್ಯಯಮಾಡಿದ ದುಃಖವಷ್ಟೆ ಉಳಿಯುತ್ತದೆ. ಆದರ ಮೇಲಿನ ಉದಾಹರಣೆಯಲ್ಲಿ ಅವನು ಆಗಾಗ ಹಜಾಮನಿಗಾಗಿ ಕಾದುಕೂಡುವ ತೊಂದರೆಯನ್ನು ಮತ್ತು ಕೆಲವೊಮ್ಮೆ ಅವನ ಕೊಳಕು ಬೆರಳುಗಳನ್ನೂ ಸಹಿಸಲಸಾಧ್ಯವಾದ ಶ್ವಾಸವನ್ನೂ ಮತ್ತು ಮೊಂಡಾದ ಕತ್ತಿಗಳನ್ನೂ ತಪ್ಪಿಸಿಕೊಳ್ಳುತ್ತಾನೆ. ತನಗೆ ಬಹಳ ಅನುಕೂಲವಿದ್ದಾಗ ಅವನು ಕ್ಷೌರ ಮಾಡಿಕೊಳ್ಳುತ್ತಾನೆ ಮತ್ತು ಅದನ್ನು ಉತ್ತಮ ಸಾಧನದಿಂದ ಮಾಡಿಕೊಂಡ ಆನಂದವನ್ನು ದಿನದಿನವೂ ಅನುಭವಿಸುತ್ತಾನೆ. ಈ ಭಾವನೆಗಳಿಂದ ಹಿಂದಿನ ಕೆಲ ಪುಟಗಳನ್ನು ತೊಂದರೆಗೀಡು ಮಾಡಿದ್ದಾಗಿರುತ್ತದೆ. ಅವುಗಳು ನಾನು ಪ್ರೀತಿಸುವಂಥ ಪಟ್ಟಣಕ್ಕೆ ಒಂದಲ್ಲ ಒಂದು ಕಾಲಕ್ಕೆ ಉಪಯೋಗ ಬೀಳುವಂಥ ಸೂಚನೆಗಳನ್ನು ಒದಗಿಸಬಹುವೆಂದು ಆಶಿಸಿದ್ದೇನೆ. ಯಾಕಂದರೆ ಅಲ್ಲಿ ಬಹಳ ವರುಷಗಳ ತನಕ ಸುಖದಿಂದ ನಾನು ಜೀವಿಸಿದ್ದೇನೆ. ಮತ್ತು ಅಮೇರಿಕಾದಲ್ಲಿನ ನಮ್ಮ ಕೆಲವೊಂದು ಪೇಟೆಗಳಿಗೂ ಅದು ಉಪಯುಕ್ತವಾದೀತು.

ಕೆಲ ಕಾಲದ ತನಕ ಅಮೇರಿಕಾದ ಪೋಸ್ಟಮಾಸ್ಟರ್ ಜನರಲನಿಂದ ಅವನ ಅನೇಕ ಕಚೇರಿಗಳನ್ನು ನಿಯಂತ್ರಿಸುವುದಕ್ಕೆ ಮತ್ತು ಆಫೀಸರರನ್ನು ನಡೆಸಿಕೊಂಡು ಹೋಗುವುದಕ್ಕೆ, ಅವನ ಲೆಕ್ಕಾಧಿಕಾರಿಯಾಗಿ (comptrol-ler) ಕೆಲಸ ಮಾಡಿದುದರಿಂದ, ೧೭೫೩ರಲ್ಲಿ ಅವನು ತೀರಿಕೊಂಡನಂತರ ಮಿಸ್ಟರ್ ವಿಲಿಯಂ ಹಂಟರನ ಜೊತೆಗೆ ಅವನ ಅಧಿಕಾರ ಪಡೆಯಲು ಇಂಗ್ಲೆಂಡಿನ ಪೋಸ್ಟ ಮಾಸ್ಟರ್ ಜನರಲನ ಆಯೋಗದ ಮೂಲಕ ನೇಮಿಸಲ್ಪಟ್ಟೆನು. ಅಮೇರಿಕನರ ಕಚೇರಿಯು ಇದುವರೆಗೆ ಏನನ್ನೂ ಇಂಗ್ಲೆಂಡಿನದಕ್ಕೆ ಕೊಟ್ಟಿದ್ದಿರಲಿಲ್ಲ. ಒಂದು ವರುಷದಲ್ಲಿ ನಮಗೆ ಆರು ಸಾವಿರ ಪೌಂಡುಗಳು ದೊರೆಯಬಹುದಾಗಿತ್ತು—ಕಚೇರಿಯ ಲಾಭದಿಂದ ಅಷ್ಟರ ಮೊಬಲಗನ್ನು ನಮಗೆ ದೊರಕಿಸಲಿಕ್ಕೆ ಸಾಧ್ಯವಿದ್ದರೆ ಮಾತ್ರ. ಇದನ್ನು ಮಾಡಲು

ಅನೇಕ ಬಗೆಯ ಸುಧಾರಣೆಗಳ ಅವಶ್ಯಕತೆಯಿತ್ತು. ಇವುಗಳಲ್ಲಿ ಕೆಲವು ಮೊದಲಿಗೆ ಸಹಜವಾಗಿ ವೆಚ್ಚದವುಗಳಾಗಿದ್ದವು. ಹೀಗಾಗಿ ಮೊದಲಿನ ನಾಲ್ಕು ವರುಷಗಳಲ್ಲಿ ಒಂಬೈನೂರು ಪೌಂಡುಗಳ ಸಾಲವು ನಮ್ಮ ಆಫೀಸಿಗೆ ಬಿದ್ದಿತು. ಆದರೆ ಆನಂತರ ಅದು ನಮಗೆ ಹಿಂದಿರುಗಿ ಸಂದಾಯ ಮಾಡಲಿಕ್ಕೆ ಸಾಧ್ಯವಾಯಿತು. ಮತ್ತು ಮಂತ್ರಿಗಳ ಕುಚೇಷ್ಟೆಯಿಂದ,—ಇದರ ಬಗ್ಗೆ ನಾನು ತರುವಾಯ ಹೇಳುತ್ತೇನೆ—ನಾನು ಪದಚ್ಯುತನಾಗುವ ಮೊದಲು ರಾಜ್ಯದ ಖಜಾನೆಗೆ ಐಯರ್ಲಂಡಿನ ಪೋಸ್ಟ್ ಆಫೀಸಿನಿಂದ **ಮೂರು ಪಟ್ಟು** ಕಂದಾಯವು ಅದು ಸಂಪೂರ್ಣ ಕೊಡುವಂತೆ ಮಾಡಿದ್ದೆವು. ಆ ಅವಿವೇಕದ ವ್ಯವಹಾರದ ನಂತರ ಅದರಿಂದ ಒಂದು ಫಾರ್ದಿಂಗನ್ನೂ ಕೂಡ ಪಡೆದಿಲ್ಲ !

ಪೋಸ್ಟ್ ಆಫೀಸಿನ ವ್ಯವಹಾರವು ಈ ವರುಷ ನಾನು ನ್ಯೂ ಇಂಗ್ಲೆಂಡಿಗೆ ಪ್ರಯಾಣ ಹೂಡುವಂತೆ ಮಾಡಿತು. ಅಲ್ಲಿ ಅವರೇ ನಡೆಸುತ್ತಿದ್ದ ಕಾಲೇಜ್ ಆಫ್ ಕೇಂಬ್ರಿಜ್‌ದಿಂದ ಮಾಸ್ಟರ್ ಆಫ್ ಆರ್ಟ್ಸ ಪದವಿಯನ್ನು ನನಗೆ ದಯಪಾಲಿಸಿದರು. ಕನೆಕ್ಟಿಕಟ್‌ನಲ್ಲಿರುವ ಯೇಲ್ (yale) ಕಾಲೇಜು ಕೂಡ ಈ ಮೊದಲು ನನಗೆ ಇಂಥ ಗೌರವವನ್ನು ಕೊಟ್ಟಿತ್ತು. ಹೀಗೆ ಯಾವ ಕಾಲೇಜಿನಲ್ಲಿಯೂ ಅಭ್ಯಾಸ ಮಾಡದೆ ಅವರ ಗೌರವವನ್ನು ನಾನು ಪಡೆಯುವಂತಾಯಿತು. ಪ್ರಾಕೃತಿಕ ತತ್ವಜ್ಞಾನದ (Natural Philosophy) ವಿದ್ಯುತ್ ವಿಭಾಗದಲ್ಲಿನ ನನ್ನ ಸುಧಾರಣೆ ಮತ್ತು ಸಂಶೋಧನೆಗಳ ಕುರಿತಾಗಿ ಅವರು ನನಗೆ ಮಾನ್ಯ ಮಾಡಿದ್ದಾಗಿತ್ತು.

೧೭೫೪ ರಲ್ಲಿ ಮತ್ತೊಮ್ಮೆ ಫ್ರಾನ್ಸಿನೊಡನೆ ಯುದ್ಧದ ಸಂಭವ ಕಂಡುಬಂದುದರಿಂದ, ಲಾರ್ಡ ಆಫ್ ಟ್ರೇಡ್ (Lord of Trade)ನ ಆಜ್ಞೆಯಂತೆ ಬೇರೆ ಬೇರೆ ವಸಾಹತುಗಳ ಪ್ರತಿನಿಧಿಗಳ ಸಭೆಯೊಂದು ಅಲ್ಬನಿಯಲ್ಲಿ, ಆರು ರಾಷ್ಟ್ರಗಳ (Six Nations) ಮುಖಂಡರೊಡನೆ ನಮ್ಮ ಮತ್ತು ಅವರ ರಾಷ್ಟ್ರವನ್ನು ರಕ್ಷಿಸುವ ಮಾರ್ಗವನ್ನು ಚರ್ಚಿಸುವುದಕ್ಕಾಗಿ ಸೇರಲಿಕ್ಕಿತ್ತು. ಈ ಆಜ್ಞೆಯನ್ನು ಗವರ್ನರ್ ಹೆಮಿಲ್ಟನನು ಪಡೆದುಕೊಂಡು ವಿಧಾನಸಭೆಗೆ ಅದನ್ನು ತಿಳಿಯಪಡಿಸಿ ಈ ಸಂದರ್ಭದಲ್ಲಿ ಇಂಡಿಯನ್ನರಿಗೆ ಯೋಗ್ಯ ಬಹುಮಾನಗಳನ್ನು ಅವರು ನೀಡಬೇಕಾಗಿ ವಿನಂತಿ ಮಾಡಿದನು ಮತ್ತು ಸಭಾಪತಿ (ಮಿಸ್ಟರ್ ನೋರಿಸ್) ಹಾಗೂ ನನ್ನ ಹೆಸರನ್ನು ಪೆನ್ಸಿಲ್ವಾನಿಯಾದ ಪ್ರತಿನಿಧಿಗಳೆಂದು ಕೆಲಸ ಮಾಡಲು ಮಿಸ್ಟರ್ ಥೋಮಸ್ ಪೆನ್ ಮತ್ತು ಮಿಸ್ಟರ್ ಸೆಕ್ರೆಟರಿ ಪೀಟರ್ಸ್ ಇವರೊಡನೆ ಸೇರಲು

ಸೂಚಿಸಿದನು ವಿಧಾನಸಭೆಯು ಹೆಸರುಗಳನ್ನು ಸ್ವೀಕರಿಸಿತು ಮತ್ತು ಬಹುಮಾನಕ್ಕಾಗಿ ಸಾಹಿತ್ಯ–ಸಾಮಾಗ್ರಿಗಳನ್ನು ಸಿದ್ಧಗೊಳಿಸಿಕೊಟ್ಟಿತು. ಅವರು ಹೆಚ್ಚಾಗಿ ಹೊರಗಿನ ಪ್ರಾಂತಗಳೊಡನೆ ಸಲುಗೆ ಹೂಡಲು ಮನಸ್ಸು ಮಾಡಿರದಿದ್ದರೂ ನಾವು ಮಾತ್ರ ಅಲ್ಬನಿಯಲ್ಲಿ ಮಿಕ್ಕ ಪ್ರತಿನಿಧಿಗಳನ್ನು ಜೂನ್ ತಿಂಗಳ ಮಧ್ಯದಲ್ಲಿ ಭೇಟಿಯಾದೆವು

ರಕ್ಷಣೆಯು ಅಗತ್ಯವಿದ್ದ ಮಟ್ಟಿಗೆ ಮತ್ತು ಮಿಕ್ಕ ಮಹತ್ವದ ಸಾಮಾನ್ಯ ಉದ್ದೇಶಗಳಿಗೆ ಎಲ್ಲಾ ವಸಾಹತುಗಳು ಒಂದೇ ಸರಕಾರದ ಕೈಕೆಳಗೆ ಒಟ್ಟುಗೂಡುವಂಥ ಒಂದು ಯೋಜನೆಯನ್ನು ಅಲ್ಲಿಗೆ ಹೋಗುವ ಮಾರ್ಗದಲ್ಲಿ ನಾನು ಸಿದ್ಧಪಡಿಸಿದೆನು. ನ್ಯೂಯಾರ್ಕಿನಿಂದ ನಾವು ಸಾಗುತ್ತಿರುವಾಗ, ಸಾರ್ವಜನಿಕ ವಿಷಯಗಳಲ್ಲಿ ಘನ ಜ್ಞಾನವುಳ್ಳ ಮಿಸ್ಟರ್ ಜೇಮ್ಸ್ ಅಲೆಗ್ಸಾಂಡರ್ ಮತ್ತು ಕೆನಡಿ ಎಂಬಿಬ್ಬರು ದೊಡ್ಡ ಮನುಷ್ಯರಿಗೆ ನನ್ನ ಯೋಜನೆಯನ್ನು ತೋರಿಸಿದೆನು. ಅವರ ಪ್ರಶಂಸೆಯಿಂದ ದೃಢಪಟ್ಟುದರಿಂದ ನಾನು ಅದನ್ನು ಕಾಂಗ್ರೆಸ್ಸಿನ ಮುಂದಿಡಲು ಧೈರ್ಯ ಪಡೆದೆನು. ಪ್ರತಿನಿಧಿಗಳಲ್ಲಿ ಅನೇಕರು ಅದೇ ಬಗೆಯ ಯೋಜನೆಯನ್ನು ರಚಿಸಿರುವುದಾಗಿ ಆಗ ಕಂಡುಬಂದಿತು. ಏಕೀಕರಣವು ಆಗಬೇಕೋ, ಹೇಗೆಂಬುದರ ಬಗ್ಗೆ ಪ್ರಥಮದಲ್ಲಿ ಒಂದು ಪ್ರಶ್ನೆಯನ್ನು ಚರ್ಚಿಸಲಾಯಿತು. ಅದು ಆಗಬೇಕೆಂದು ಬಹುಮತದಿಂದ ಸ್ವೀಕೃತವಾಯಿತು. ಒಂದು ಸಮಿತಿಯು ಅನೇಕ ಯೋಜನೆಗಳನ್ನು ವಿವೇಚಿಸಿಕೊಂಡು ವರದಿಮಾಡಲು ಆಗ ನೇಮಿಸಲ್ಪಟ್ಟಿತು. ಪ್ರತಿಯೊಂದು ವಸಾಹತಿನಿಂದ ಒಬ್ಬ ಸದಸ್ಯನು ಅದರಲ್ಲಿದ್ದನು. ನನ್ನ ಯೋಜನೆಯು ಉತ್ತಮವೆಂದು ಆರಿಸಲ್ಪಟ್ಟಿತು ಮತ್ತು ಕೆಲ ತಿದ್ದುಪಾಟುಗಳೊಡನೆ ಅದೇ ಪ್ರಕಾರ ವರದಿ ಮಾಡಿದ್ದಾಯಿತು.

ಈ ಯೋಜನೆಯಂತೆ ಸಾಮಾನ್ಯ ಸರಕಾರವು ಒಬ್ಬ ಪ್ರೆಸಿಡೆಂಟ ಜನರಲ್ (President–General) ನಿಂದ ಆಡಳಿತೆ ನಡೆಸಲ್ಪಡತಕ್ಕದ್ದಾಗಿತ್ತು. ಅವನು ರಾಜನಿಂದ ನೇಮಿಸಲ್ಪಟ್ಟವನು ಮತ್ತು ಆಧರಿಸಲ್ಪಟ್ಟವನಾಗಿರತಕ್ಕದ್ದು. ಅನೇಕ ವಸಾಹತುಗಳ ಅಸೆಂಬ್ಲಿಯಲ್ಲಿ ಜನರಿಂದ ಆರಿಸಲ್ಪಟ್ಟ ಪ್ರತಿನಿಧಿಗಳು ಒಂದು ಉಚ್ಚ ಮಂಡಲವನ್ನು ನಿರ್ಮಿಸಬೇಕಾಗಿತ್ತು. ಇಂಡಿಯನ್ ವ್ಯವಹಾರದ ಜೊತೆಗೆ ಕಾಂಗ್ರೆಸ್ಸಿನಲ್ಲಿ ಇದರ ಬಗ್ಗೆ ಪ್ರತಿದಿನವೂ ಚರ್ಚೆ ನಡೆಯುತ್ತಿತ್ತು. ಅನೇಕ ತಕರಾರುಗಳು ಮತ್ತು ತೊಂದರೆಗಳು ತಲೆದೋರಿದವು. ಆದರೆ ಕಟ್ಟಕಡೆಗೆ ಅವುಗಳೆಲ್ಲ ನಿವಾರಿಸಲ್ಪಟ್ಟುವು ಮತ್ತು ಯೋಜನೆಯು ಸರ್ವಾನುಮತದಿಂದ ಸ್ವೀಕೃತವಾಯಿತು.

ಹಾಗೂ ಅದರ ಪ್ರತಿಗಳು ಬೋರ್ಡ್ ಆಫ್ ಟ್ರೇಡಿಗೆ (Board of Trade) ಮತ್ತು ಹಲವಾರು ಪ್ರಾಂತಗಳ ಅಸೆಂಬ್ಲಿಗಳಿಗೆ ವಿತರಣೆಗೊಳ್ಳು ವಂತೆ ಆಜ್ಞೆಯಾಯಿತು. ಅದರ ದೈವ ವಿಲಕ್ಷಣವಾಗಿತ್ತು : ಅದರಲ್ಲಿ ತುಂಬಾ **ರಾಜಾಧಿಕಾರ** (Prerogative) ಉಂಟೆಂದು ಅಸೆಂಬ್ಲಿ ಗಳೆಲ್ಲ ಬಗೆದುದರಿಂದ ಅದನ್ನು ಸ್ವೀಕರಿಸಲಿಲ್ಲ, ಮತ್ತು ಇಂಗ್ಲೆಂಡಿನಲ್ಲಿ ಅದು ಬಹಳ ಪ್ರಜಾಸತ್ತಾತ್ಮಕ (Democratic) ವಾಗಿದೆಯೆಂದು ನಿರ್ಧರಿಸಲ್ಪಟ್ಟಿತು. ಆದುದರಿಂದ ಬೋರ್ಡ್ ಆಫ್ ಟ್ರೇಡ್ ಅದನ್ನು ಒಪ್ಪಲೂ ಇಲ್ಲ ಮತ್ತು ಮಾನ್ಯ ಅರಸನ ಮಂಜೂರಾತಿಗೆ ಅದನ್ನು ಶಿಫಾ ರಸು ಮಾಡಲೂ ಇಲ್ಲ. ಆದರೆ ಇದೇ ಉದ್ದೇಶವನ್ನು ಉತ್ತಮ ರೀತಿ ಯಿಂದ ನೆರವೇರಿಸುತ್ತದೆಂದು ಬಗೆಯಲಾದ ಇನ್ನೊಂದು ಯೋಜನೆಯು ರೂಪಿಸಲ್ಪಟ್ಟಿತು. ಇದರ ಪ್ರಕಾರ ಪ್ರಾಂತಗಳ ಗವರ್ನರರು ಅನುಕ್ರಮ ವಾದ ತಮ್ಮ ಅಸೆಂಬ್ಲಿಯಿಂದ ಕೆಲ ಸದಸ್ಯರೊಡನೆ ಸೇರಿಕೊಂಡು ಸೈನ್ಯ ವನ್ನು ಕೂಡಿಸುವ ಮತ್ತು ಕೋಟೆಗಳನ್ನು ಕಟ್ಟುವ ಇತ್ಯಾದಿ ಆಜ್ಞೆ ಮಾಡು ವುದೆಂದೂ ಮತ್ತು ಇದರ ವೆಚ್ಚವನ್ನು ಗ್ರೇಟ್ ಬ್ರಿಟನ್ನಿನ ಟ್ರೆಜರಿಯಿಂದ ಪಡೆಯಬೇಕೆಂತಲೂ ಸಿಕ್ಷಯಿಸಲ್ಪಟ್ಟಿತು. ಇದನ್ನು ಆನಂತರ ಪಾರ್ಲಿ ಮೆಂಟಿನ ಒಂದು ಕಾಯ್ದೆಯಿಂದ ಅಮೇರಿಕಾದ ಮೇಲೆ ಕಂದಾಯ ಹೇರಿ ಹಿಂದಕ್ಕೆ ಕೊಡುವುದಾಗಿತ್ತು. ನನ್ನ ಯೋಜನೆ ಹಾಗೂ ಅದಕ್ಕೆ ಬೆಂಬಲ ವಾದ ನನ್ನ ಕಾರಣಗಳು ಪ್ರಕಟವಾದ ನನ್ನ ರಾಜಕೀಯ ಲೇಖನಗಳಲ್ಲಿ ದೊರೆಯಬಹುದು.

ಬೋಸ್ಟನಿನಲ್ಲಿ ಚಳಿಗಾಲವು ನಡೆಯುತ್ತಿದ್ದುದರಿಂದ ಎರಡು ಯೋಜ ನೆಗಳ ಕುರಿತಾಗಿ ನಾನು ಗವರ್ನರ್ ಶಿರ್ಲೆಯ ಸಂಗಡ ತುಂಬಾ ಮಾತು ಕತೆ ನಡೆಸಿದ್ದೆನು. ನಮ್ಮಿಬ್ಬರೊಳಗೆ ಆ ಸಂದರ್ಭದಲ್ಲಿ ಏನು ನಡೆಯಿತ್ತೆಂ ಬುದರ ಕೆಲ ಭಾಗವು ಕೂಡಾ ಆ ಲೇಖನಗಳಲ್ಲಿ ಕಂಡು ಬರಬಹುದು. ನನ್ನ ಯೋಜನೆಗೆ ವ್ಯತಿರಿಕ್ತವಾದ ಮತ್ತು ವಿರುದ್ಧವಾದ ವಿಚಾರಗಳು ನಿಜ ವಾದ ಸಾಧನಗಳೋ ಎಂಬ ಸಂಶಯವನ್ನು ನನ್ನಲ್ಲುಂಟುಮಾಡುತ್ತದೆ. ಅಂತೇ ಅದನ್ನು ಸ್ವೀಕರಿಸಿ ಕಾರ್ಯಗತಗೊಳಿಸಿದ್ದರೆ ಎರಡೂ ಪಕ್ಷಗಳಿಗೂ ಹಿತವಾಗುತ್ತಿತ್ತೆಂದು ನಾನು ಈಗಲೂ ಅಭಿಪ್ರಾಯಪಡುತ್ತೇನೆ. ಹಾಗೆ ಏಕೀಕೃತಗೊಂಡ ವಸಾಹತುಗಳು ತಮ್ಮಷ್ಟಕ್ಕೆ ರಕ್ಷಿಸಿಕೊಳ್ಳಲು ಸಾಕಷ್ಟು ಶಕ್ತಿಯುತವಾಗುತ್ತಿದ್ದವು; ಇಂಗ್ಲೆಂಡಿನ ಸೈನ್ಯದ ಅಗತ್ಯವೂ ಕೂಡ ಆನಂತರ ಬೀಳಬಹುದಾಗಿರಲಿಲ್ಲ; ಆದರೂ ಆನಂತರ ಅಮೇರಿಕಾಕ್ಕೆ ಕರ

ಹೇರುವ ನಟನೆ ಹಾಗೂ ಅದರಿಂದ ತಲೆದೋರಿದ ರಕ್ತಯುತ ಜಗಳ ಕೂಡಾ ತಪ್ಪ ಬಹುದಾಗಿತ್ತು. ಆದರೆ ಅಂಥ ತಪ್ಪುಗಳೇನು ಹೊಸದಲ್ಲ. ರಾಜ್ಯ ಹಾಗೂ ರಾಜಕುಮಾರರ ತಪ್ಪುಗಳಿಂದ ಇತಿಹಾಸವು ತುಳುಕುತ್ತಿದೆ.

"ನೆಲೆಸಿರುವ ಜಗದ ಸುತ್ತಲು ನೋಡು, ಎಷ್ಟು ಸ್ವಲ್ಪ ಜನರು
ತಮ್ಮ ಒಳ್ಳಿತನು ಬಲ್ಲರು, ಅಥವಾ, ತಿಳಿದು ಅದರಂತೆ ನಡೆವರು!"

ತಮ್ಮ ಕೈಯಲ್ಲಿ ಬಹಳ ಹೆಚ್ಚಿನ ವ್ಯವಹಾರವಿರುವುದರಿಂದ ಆಡಳಿತೆ ನಡೆಸುವವರು ಸಾಮಾನ್ಯವಾಗಿ ಹೊಸ ಯೋಜನೆಗಳತ್ತ ಗಮನವೀಯುವ ಮತ್ತು ಅವುಗಳನ್ನು ಕಾರ್ಯಗತ ಗೊಳಿಸುವ ತೊಂದರೆಪಟ್ಟುಕೊಳ್ಳಲು ಬಯಸುವುದಿಲ್ಲ. ಆದುದರಿಂದ ಅತ್ಯುತ್ತಮ ಸಾರ್ವಜನಿಕ ಹಿತದ ಉಪಾಯ ಗಳು (measures) **ತತ್ಪೂರ್ವದ ಬುದ್ಧಿವಂತಿಕೆಯಿಂದ ಕೈಕೊಳ್ಳ ಲಾಗುವುದು ವಿರಳ, ಬದಲು ಸಂದರ್ಭದ ಬಲಾತ್ಕಾರದಿಂದ ನಡೆ ಯುತ್ತಿರುವುದೇ ಹೆಚ್ಚು.**

ಪೆನ್ಸಿಲ್ವಾನಿಯಾದ ಗವರ್ನರನು ಅದನ್ನು ಅಸೆಂಬ್ಲಿಗೆ ಕಳುಹಿಸಿ ಯೋಜನೆಯ ಬಗ್ಗೆ ತನ್ನ ಪ್ರಶಂಸೆಯನ್ನು ವ್ಯಕ್ತಪಡಿಸಿದನು : "ಬಹಳ ವಿಶದವಾಗಿ ಮತ್ತು ಬಲವಾದ ತರ್ಕಬುದ್ಧಿಯಿಂದ ಅವನು ರಚಿಸಿದಂತೆ ಕಂಡುಬರುವುದರಿಂದ ಅವರ ಅನುಕೂಲಾಗ್ರವಾದ ಮತ್ತು ಹೆಚ್ಚಿನ ಶೀಘ್ರ ಅವ ಗಾಹನೆಗೆ ಯೋಗ್ಯವಾಗಿದೆಯೆಂದು ಶಿಫಾರಸು ಮಾಡಲಾಗಿದೆ." ಹೀಗಿದ್ದರೂ ಕೂಡ, ಒಬ್ಬ ಸದಸ್ಯನ ಕಾರುಭಾರದಲ್ಲಿ ಮತ್ತು ನಾನು ಗೈರುಹಾಜರಿ ಯಾಗಿದ್ದಾಗ ಅಸೆಂಬ್ಲಿಯು ಅದನ್ನು ತೆಗೆದುಕೊಂಡಿತು, ಅದು ಬಹಳ ಯೋಗ್ಯವಾದುದೆಂದು ನನಗೆನಿಸಲಿಲ್ಲ. ಮತ್ತು ಅದರತ್ತ ಏನೂ ಲಕ್ಷ್ಯ ಕೊಡದೆ, ನನ್ನ ಜಂಘಾಬಲವೆ ಕುಸಿದು ಹೋಗುವಂತೆ—ಅದನ್ನು ನಿರಾ ಕರಿಸಿಬಿಟ್ಟಿತು.

ಈ ವರುಷ ಬೋಸ್ಟನಿನ ನನ್ನ ಪ್ರವಾಸದಲ್ಲಿ ನಮ್ಮ ಹೊಸ ಗವ ರ್ನರ್ ಮಿಸ್ಟರ್ ಮೋರಿಸನನ್ನು ನ್ಯೂಯಾರ್ಕಿನಲ್ಲಿ ಕಂಡೆನು. ಅವನು ಇಂಗ್ಲೆಂಡಿನಿಂದ ಆದೇ ಆಗ ಅಲ್ಲಿಗೆ ತಲುಪಿದ್ದನು. ಈ ಹಿಂದೆ ಅವನೊಡನೆ ನನ್ನ ಸಲುಗೆಯ ಗೆಳೆತನವಿತ್ತು. ಮಿಸ್ಟರ್ ಹ್ಯಾಮಿಲ್ಟನನನ್ನು ಪದಚ್ಯುತ ಗೊಳಿಸಲು ಅವನು ಒಂದು ಆಯೋಗವನ್ನು ತಂದಿದ್ದನು. ಖಾಸಗಿ ಒಡೆ ತನದ ಆಜ್ಞೆಗಳು ಅವನಿಗೆ ತಂದೊಡ್ಡಿದ್ದ ಜಗಳಗಳಿಂದ ಅವನು ಬೇಸತ್ತು ಹೋಗಿದ್ದುದರಿಂದ ಹ್ಯಾಮಿಲ್ಟನನು ರಾಜಿನಾಮೆ ಕೊಟ್ಟಿದ್ದನು. ಆಡಳಿ ತೆಯು ಅಸಂತೋಷದಾಯಕವಾಗಿದೆಯೆಂದು ತಾನು ಗ್ರಹಿಸಿಕೊಳ್ಳಲೇ

ಬೇಕು ಎಂದು ನಾನು ಯೋಚಿಸಿದ್ದೇನೋ ಹೇಗೆಂದು ಮಿಸ್ಟರ್ ಮೋರಿಸ್ ನನಗೆ ಕೇಳಿದನು. "ಇಲ್ಲ; ನೀನು ಅಸೆಂಬ್ಲಿಯಲ್ಲಿ ಯಾವ ವಿವಾದ ದಲ್ಲಿಯೂ ಸೇರದಂತೆ ಜಾಗ್ರತೆ ವಹಿಸಿಕೊಂಡರೆ ಮಾತ್ರ ಅದರ ವಿರುದ್ಧ ನೀನು ಬಹಳ ಸಂತೋಷವನ್ನು ಪಡೆಯಬಹುದು."—ಎಂದು ನಾನು ಹೇಳಿ ದೆನು. ಆಗ ಅವನು ಬಹಳ ಆನಂದದಿಂದ, "ನನ್ನ ಪ್ರಿಯ ಮಿತ್ರನೆ, ನಾನು ವಿವಾದಗಳನ್ನು ತಪ್ಪಿಸಲು ನೀನು ಹೇಗೆ ಉಪದೇಶ ಮಾಡುವೆ? ವಾದ ಮಾಡುವುದು ನನಗೆ ನೆಚ್ಚಿನ ವಿಷಯವೆಂದು ನಿನಗೆ ಗೊತ್ತುಂಟು; ಅದು ನನ್ನ ಬಹು ದೊಡ್ಡ ಆನಂದಗಳಲ್ಲಿ ಒಂದು, ಆದರೂ ಕೂಡ ನಿನ್ನ ಉಪದೇಶದಲ್ಲಿ ನನಗಿರುವ ವಿಶ್ವಾಸವನ್ನು ತೋರಿಸುವುದಕ್ಕಾಗಿ ಸಾಧ್ಯವಾದಲ್ಲಿ ಅವುಗಳನ್ನು ತಪ್ಪಿಸುವೆನೆಂದು ನಾನು ನಿನಗೆ ವಚನ ಕೊಡುತ್ತೇನೆ." ಎಂದು ಹೇಳಿದನು. ವಿವಾದವನ್ನು ಮೆಚ್ಚಲು ಅವನಿಗೆ ಕೆಲವು ಕಾರಣ ಗಳಿದ್ದವು. ನಿರರ್ಗಳ ವಾಣಿಯಿದ್ದುದರಿಂದ ಮತ್ತು ಬಹಳ ಸೂಕ್ಷ್ಮ ಕುತರ್ಕಿಯಾಗಿದ್ದುದರಿಂದ ಅವನು ಸಾಮಾನ್ಯವಾಗಿ ಸಂಭಾಷಣೆಯ ವಾದ ಗಳಲ್ಲಿ ಯಶಸ್ವಿಯಾಗುತ್ತಿದ್ದನು. ಹುಡುಗನಾಗಿದ್ದಾಗಿನಿಂದ ಅವನು ಅದ ರಲ್ಲಿ ಬೆಳೆದು ಬಂದವನು. ಯಾಕಂದರೆ ಊಟವಾದ ನಂತರ ತನ್ನ ಟೇಬ ಲಿನಲ್ಲಿ ವಿರಮಿಸುತ್ತಿದ್ದಾಗ ಅವನ ತಂದೆಯು ತನ್ನ ಮನೋರಂಜನೆಗಾಗಿ ಒಬ್ಬರಿಗೊಬ್ಬರು ವಿವಾದ ನಡೆಸುವ ರೂಢಿಯನ್ನು ಮಕ್ಕಳಿಗಿಟ್ಟಿದ್ದನೆಂದು ನಾನು ಕೇಳಿದ್ದೇನೆ. ಆದರೆ ಈ ಪದ್ಧತಿಯು ಸಾಧುವಾದುದೆಂದು ನನಗೆನಿಸು ವುದಿಲ್ಲ. ಯಾಕಂದರೆ ವಿವಾದ ಹೂಡುವ, ಪ್ರತಿಕ್ಷೇಪಿಸುವ ಮತ್ತು ಬಾಯಿ ಬಡೆಯುವಂಥ ನನ್ನ ಅನುಭವದಲ್ಲಿ ಬಂದ ಜನರೆಲ್ಲ ತಮ್ಮ ಕಾರ್ಯ ಗಳಲ್ಲಿ ಸಾಮಾನ್ಯವಾಗಿ ದುರ್ದೈವಿಗಳಾಗಿದ್ದಾರೆ. ಕೆಲವೊಮ್ಮೆ ಅವರು ಜಯಗಳಿಸುತ್ತಾರೆ, ಆದರೆ ಅವರೆಂದೂ ಸುಹೃದಯತೆಯನ್ನು ಪಡೆಯುವು ದಿಲ್ಲ—ಅದು ಅವರಿಗೆ ಬಹಳ ಉಪಯೋಗವಾಗುವಂತಹದ್ದು. ಅವನು ಫಿಲಡೆಲ್ಫಿಯಾಕ್ಕೆ ಹೋಗುವವನು ಮತ್ತು ನಾನು ಬೋಸ್ಟನಿಗೆ ಹೋಗುವವ ನಾದುದರಿಂದ, ನಾವು ಒಬ್ಬರನ್ನೊಬ್ಬರು ಬೀಳ್ಕೊಟ್ಟೆವು.

ಮರಳುವಾಗ ನ್ಯೂಯಾರ್ಕಿನಲ್ಲಿ ನನಗೆ ಅಸೆಂಬ್ಲಿಯ ಮತಗಳು ದೊರೆತವು. ಅವನು ನನಗಿತ್ತ ವಚನವಾದರೂ ಕೂಡ ಅವನು ಮತ್ತು ವಿಧಾನ ಸಭೆಯು ಪ್ರದೀರ್ಘ ಜಗಳದಲ್ಲಿ ತೊಡಗಿದ್ದಾರೆಂಬುದು ಅದರಿಂದ ಕಂಡು ಬಂದಿತು; ಅಂತೇ ಅವನು ಸರಕಾರದಲ್ಲಿ ಇದ್ದ ಕಾಲದವರೆಗೂ ಅವರಿಬ್ಬರ ನಡುವೆ ಅದೊಂದು ದೀರ್ಘ ಯುದ್ಧವಾಗಿಯೇ ಉಳಿದಿತ್ತು.

ಅದರಲ್ಲಿ ನನ್ನ ಪಾಲೂ ಇತ್ತು. ಯಾಕಂದರೆ—ಅಸೆಂಬ್ಲಿಯ ನನ್ನ ಸ್ಥಾನಕ್ಕೆ ಮರಳಿದ ಕೂಡಲೆ ಅವನ ಭಾಷಣಗಳನ್ನು ಮತ್ತು ಸಂದೇಶಗಳನ್ನು ಉತ್ತರಿಸುವ ಪ್ರತಿಯೊಂದು ಸಮಿತಿಯಲ್ಲೂ ಹಾಕಲ್ಪಡುತ್ತಿದ್ದೆ ಮತ್ತು ಆ ಸಮಿತಿಗಳು ಯಾವಾಗಲೂ ನನ್ನನ್ನು ನಕಲು ರಚಿಸಲಿಕ್ಕೇ ಇಚ್ಛಿಸುತ್ತಿದ್ದವು. ನಮ್ಮ ಉತ್ತರಗಳು ಮತ್ತು ಅವನ ಸಂದೇಶಗಳು ಹೆಚ್ಚಾಗಿ ಒರಟಾಗಿಯೇ ಇರುತ್ತಿದ್ದವು, ಮತ್ತು ಕೆಲವೊಮ್ಮೆ ಅಯೋಗ್ಯವಾದ ಬೈಗಳಿಂದ ಕೂಡಿರುತ್ತಿದ್ದವು; ಅಂತೇ ನಾನು ಅಸೆಂಬ್ಲಿಯ ಕಡೆಯಿಂದ ಬರೆಯುತ್ತಿದ್ದೇನೆಂದು ಅವನು ತಿಳಿದುದರಿಂದ, ನಾವು ಒಬ್ಬರಿಗೊಬ್ಬರು ಭೇಟಿಯಾದಾಗ ನಾವು ಕುತ್ತಿಗೆ ಕೊಯ್ಯುವುದನ್ನು ತಪ್ಪಿಸಿಕೊಳ್ಳುವುದು ಬಹಳ ಕಷ್ಟವೆಂದು ಯಾರಾದರೂ ಬಗೆಯಬಹುದಾಗಿತ್ತು. ಆದರೆ ಅವನು ಬಹಳ ಒಳ್ಳೆಯ ಸ್ವಭಾವದ ಮನುಷ್ಯನಾಗಿದ್ದನು. ಈ ವಿವಾದದಿಂದ ಯಾವ ರೀತಿಯಿಂದಲೂ ನನ್ನ ಹಾಗೂ ಅವನ ಮಧ್ಯೆ ವೈಯಕ್ತಿಕ ಭೇದವು ತಲೆದೋರಲಿಲ್ಲ. ಅಲ್ಲದೆ ಆಗಾಗ ಒಟ್ಟಿಗೆ ಭೋಜನ ಮಾಡುತ್ತಿದ್ದನು.

ಈ ಸಾರ್ವಜನಿಕ ಜಗಳವು ಪ್ರಕೋಪಕ್ಕೆ ಮುಟ್ಟಿರುವಂಥ ಒಂದು ದಿನ ಮಧ್ಯಾಹ್ನ ನಾವು ಬೀದಿಯಲ್ಲಿ ಭೇಟಿಯಾದೆವು. "ಫ್ರಾಂಕ್ಲಿನ್, ನೀನು ಇವತ್ತು ಸಂಜೆ ನನ್ನ ಸಂಗಡ ಮನೆಗೆ ಹೋಗಲೇಬೇಕು; ನೀನು ಮೆಚ್ಚುವಂಥ ಕೆಲ ಮಂಡಲಿಯವರನ್ನು ನಾನು ಬರಮಾಡಿಸಿದ್ದೇನೆ." ಎಂದು ಅವನು ಹೇಳಿ ನನ್ನ ಕೈಹಿಡಿದುಕೊಂಡು ತನ್ನ ಮನೆಗೆ ಕರೆದುಕೊಂಡು ಹೋದನು. ರಾತ್ರಿಯೂಟದ ತರುವಾಯ ಮದ್ಯವನ್ನು ಸೇವಿಸುತ್ತಿರುವ ಕಾಲಕ್ಕೆ, ಸಂತಸದ ಮಾತುಕತೆಯಲ್ಲಿ ವಿನೋದದಿಂದ ಅವನು ಸೆಂಕೋಪಾಂಝೂನ ವಿಚಾರವನ್ನು ತಾನು ಬಹಳ ಮೆಚ್ಚಿರುವುದಾಗಿ ಹೇಳಿದನು. ಸೆಂಕೋ ಪಾಂಝೂನಿಗೆ ಒಂದು ಸರಕಾರವನ್ನು ಕೊಡುವುದೆಂದು ಪ್ರಸ್ತಾಪಿಸಿದಾಗ ಅದು ಕರಿಯರ ಸರಕಾರವಾದೀತೆಂದು ಅವನು ವಿನಂತಿಸಿದನು. ಯಾಕಂದರೆ ಆಗ ಒಂದು ವೇಳೆ ಅವನು ತನ್ನ ಜನರೊಂದಿಗೆ ಒಪ್ಪದಿದ್ದರೆ ಅವನು ಅವರಿಗೆ ಮಾರಬಹುದಾಗಿತ್ತು. ನನ್ನ ಬದಿಯಲ್ಲಿ ಕುಳಿತುಕೊಂಡ ಅವನ ಮಿತ್ರರಲ್ಲಿ ಒಬ್ಬನು, "ಫ್ರಾಂಕ್ಲಿನ್, ಈ ಮೂರ್ಖ ಕ್ವಾಕರುಗಳ ಪಕ್ಷ ಕಟ್ಟಿಕೊಂಡು ನೀನು ಯಾಕೆ ಸಾಗಿರುವಿ? ಅವರನ್ನು ನೀನು ಮಾರಿದ್ದಕ್ಕೆ ಒಳ್ಳೆಯದಾಗುತ್ತಿದ್ದಿಲ್ಲವೇ? ಮಾಲೀಕನು ನಿನಗೆ ಒಳ್ಳೆಯ ಕ್ರಯ ಕೊಟ್ಟನು." ಎಂದು ಹೇಳಿದನು. "ಗವರ್ನರನು ಇನ್ನೂ ಸಾಕಷ್ಟು ಅವರನ್ನು ಕಪ್ಪುಗೊಳಿಸಲಿಲ್ಲ" ಎಂದು ನಾನು ಹೇಳಿದೆನು

ನಿಜವಾಗಿಯೂ ಅವನು ತನ್ನ ಎಲ್ಲಾ ಸಂದೇಶಗಳಿಂದ ಅಸೆಂಬ್ಲಿಯನ್ನು ಕಪ್ಪುಗೊಳಿಸಲು ಬಹಳ ಕಷ್ಟಪಟ್ಟು ಪ್ರಯತ್ನಿಸಿದ್ದಾಗಿತ್ತು. ಆದರೆ ಅವನು ಎಷ್ಟು ಬೇಗ ಅವರಿಗೆ ಕಪ್ಪು ಬಳಿದಿದ್ದಾನೆ ಅಷ್ಟೇ ಬೇಗನೆ ಅವರು ಅದನ್ನು ಅಳಿಸಿ ತೆಗೆದು ಅವನ ಮುಖಕ್ಕೆ ಮರಳಿ ದಪ್ಪವಾಗಿ ಬಳಿದಿದ್ದರು; ಹೀಗಾಗಿ ತಾನು ನೀಗ್ರೋ ಮಾಡಲ್ಪಡುವೆನೆಂಬುದನ್ನು ಕಂಡುಕೊಂಡು ಅವನು ಮತ್ತು ಅವನ ಹಾಗೆ ಮಿಸ್ಟರ್ ಹ್ಯಾಮಿಲ್ಟನ್ ಕೂಡಾ ಜಗಳದ ಬಗ್ಗೆ ಬೇಸತ್ತು ಹೋದರು ಮತ್ತು ಸರಕಾರವನ್ನು ಬಿಟ್ಟುಕೊಟ್ಟು ಹೋಗಿದ್ದಾಗಿತ್ತು.

* ಈ ಸಾರ್ವಜನಿಕ ಜಗಳಗಳೆಲ್ಲ ತಳದಲ್ಲಿ ಖಾಸಗಿ ಒಡೆತನದ ಮೂಲಕವಾಗಿದ್ದವು. ತಮ್ಮ ಪ್ರಾಂತಗಳ ರಕ್ಷಣೆಯ ಸಲುವಾಗಿ ಯಾವ ತರಹದ ವೆಚ್ಚವನ್ನು ಹಾಕಬೇಕಾಗಿ ಬಂದಾಗ ನಮ್ಮ ವಂಶ ಪಾರಂಪರ್ಯವಾಗಿ ಬಂದ ಗವರ್ನರರು ಅವನಂಬಿಕೆಯ ಅಲ್ಪತನದಿಂದ ತಮ್ಮ ಕೈಕೆಳಗಿನ ಸಹಾಯಕರು ಅವಶ್ಯವಿರುವಂಥ ಕರವನ್ನು ಹೇರುವ ಯಾವ ಕಾಯ್ದೆಯನ್ನೂ ಜಾರಿ ಮಾಡದಂತೆ—ಅದೇ ಕಾಯ್ದೆಯಲ್ಲಿ ತಮ್ಮ ವಿಶಾಲ ಆಸ್ತಿ-ಸೊತ್ತುಗಳು ಕರಬಾಹಿರವೆಂದು ವಿಶದವಾಗಿ ಉಲ್ಲೇಖವಾಗದ ಹೊರತು-ಆಜ್ಞೆ ಮಾಡುತ್ತಿದ್ದರು. ಅಲ್ಲದೆ ಇಂಥ ಆಜ್ಞೆಗಳನ್ನು ಪರಿಪಾಲಿಸುವಂತೆ ತಮ್ಮ ಸಹಾಯಕರಿಂದ ಅವರು ದಸ್ತಾವೇಜು(Bonds)ಗಳನ್ನು ತೆಗೆದುಕೊಳ್ಳುತ್ತಿದ್ದರು. ಕಟ್ಟಕಡೆಗೆ ಕಡ್ಡಾಯವಾಗಿ ತಲೆಬಾಗಿಸಬೇಕಾಗಿ ಬಂದಿದ್ದರೂ ಕೂಡ ಮೂರು ವರುಷಗಳ ತನಕ ಈ ಅನ್ಯಾಯವನ್ನು ಅಸೆಂಬ್ಲಿಗಳು ತಡೆಗಟ್ಟಿದ್ದವು. ಕೊನೇ ಕಾಲಕ್ಕೆ ಗವರ್ನರ್ ಮೋರಿಸನ ಸ್ಥಾನಕ್ಕೆ ಬಂದ ಕ್ಯಾಪ್ಟನ್ ಡೆನ್ನಿಯು ಈ ಆಜ್ಞೆಗಳನ್ನು ಮೀರಲು ಧೈರ್ಯಮಾಡಿದನು. ಅದು ಹೇಗೆ ಕಾರ್ಯಗತವಾಯಿತೆಂದು ಈನಂತರ ನಾನು ತಿಳಿಯಪಡಿಸುತ್ತೇನೆ.

ಆದರೆ ನನ್ನ ಕಥೆಯಲ್ಲಿ ನಾನು ಬಹಳ ಮುಂದೆ ಹೋಗಿದ್ದೇನೆ: ಗವರ್ನರ್ ಮೋರಿಸನ ಆಡಳಿತೆಯ ಕಾಲದಲ್ಲಿ ನಡೆದ ಇನ್ನೂ ಕೆಲವು ವ್ಯವಹಾರಗಳನ್ನು ಹೇಳಲಿಕ್ಕಿದೆ.

ಒಂದು ರೀತಿಯಿಂದ ಯುದ್ಧವು ಫ್ರಾನ್ಸಿನೊಡನೆ ಪ್ರಾರಂಭವಾದುದ

---

* ಮೋರಿಸನ ಕಾಲದಲ್ಲಿ ನನ್ನ ಕಾರ್ಯಗಳು ಮಿಲಿಟರಿ, ಇತ್ಯಾದಿ :—
[ಮಾರ್ಜಿನಿನ ಟಿಪ್ಪಣಿ]

ರಿಂದ ಮ್ಯಾಸ್ಯಾಚ್ಯುಸೆಟ್ಸ್ ಕೊಲ್ಲಿ (Massachusetts Bay) ಯ ಸರಕಾರವು ರಾಜಾಜ್ಞೆಯ(Crown Point) ವಿಷಯದ ಮೇಲೆ ಒಂದು ದಾಳಿಯ ಯೋಜನೆ ಹೂಡಿತ್ತು. ಮತ್ತು ಮಿಸ್ಟರ್ ಕ್ವಿನ್ಸಿಯನ್ನು ಪೆನ್ಸಿಲ್ವಾನಿಯಾಕ್ಕೆ ಹಾಗೂ ಮಿಸ್ಟರ್ ಪೌನಲ್, ಅನಂತರ ಗವರ್ನರ್ ಪೌನಲ್‌ನನ್ನು ನ್ಯೂಯಾರ್ಕಿಗೆ ಸಹಾಯವನ್ನು ಯಾಚಿಸುವುದಕ್ಕೆ ಕಳುಹಿಸಲಾಗಿತ್ತು. ನಾನು ಅಸೆಂಬ್ಲಿಯಲ್ಲಿ ಇದ್ದುದರಿಂದ ಅದರ ಬಗೆಯನ್ನು ಅರಿತಿದ್ದೆನು ಮತ್ತು ಮಿಸ್ಟರ್ ಕ್ವಿನ್ಸಿಯ ದೇಶದವನಾದುದರಿಂದ ಅವನು ನನ್ನ ಪ್ರಭಾವಕ್ಕೆ ಹಾಗೂ ಸಹಾಯಕ್ಕೆ ನನಗೆ ಕೇಳಿಕೊಂಡನು. ನಾನು ಅವರಿಗೆ ಅವನ ಭಾಷಣವನ್ನು ಓದಿ ಹೇಳಿದೆನು. ಅದು ಒಳ್ಳೆಯ ರೀತಿಯಿಂದ ಸ್ವೀಕರಿಸಲ್ಪಟ್ಟಿತು. ಅವರು ಹತ್ತು ಸಾವಿರ ಪೌಂಡುಗಳ ಸಹಾಯವನ್ನು ನೀಡಲು ಮತವಿತ್ತರು. ಅದನ್ನು ಆಹಾರ ಸಾಮಗ್ರಿಗಳಲ್ಲಿ ಕೊಡತಕ್ಕದ್ದೆಂದಾಗಿತ್ತು. ಆದರೆ ಗವರ್ನರನು ಅವರ ಮಸೂದೆಗೆ (ಅದರಲ್ಲಿ ಈ ಮೊಬಲಗಿನೊಂದಿಗೆ ಅರಸನ ಉಪಯೋಗಕ್ಕೆ ನೀಡಲಾದ ಬೇರೆ ಹಣವೂ ಸೇರಿಕೊಂಡಿತ್ತು)—ಅವಶ್ಯ ಬೀಳುವಂಥ ತರದ ಯಾವ ಭಾಗವೂ ಖಾಸಗಿ ಒಡೆತನದ ಆಸ್ತಿಪಾಸ್ತಿಗಳ ಮೇಲೆ ಬೀಳದಂಥ ಒಂದು ಕಲಮನ್ನು ಅದಕ್ಕೆ ಸೇರಿಸದ ಹೊರತು—ತನ್ನ ಸಮ್ಮತಿಯನ್ನು ಕೊಡಲು ನಿರಾಕರಿಸಿದನು. ನ್ಯೂ ಇಂಗ್ಲೆಂಡಿಗೆ ಪರಿಣಾಮಕಾರಿಯಾದ ಸಹಾಯವನ್ನು ಮಾಡಲು ಅಸೆಂಬ್ಲಿಯವರು ಬಹಳ ಆಸೆಪಟ್ಟಿದ್ದರೂ ಕೂಡ ಅದನ್ನು ಹೇಗೆ ಸಾಧಿಸಬೇಕೆಂಬುದರ ಬಗೆಯಿಂದ ನಷ್ಟಕ್ಕೊಳಗಾಗಿದ್ದರು. ಮಿಸ್ಟರ್ ಕ್ವಿನ್ಸಿಯು ಗವರ್ನರನ ಸಮ್ಮತಿಯನ್ನು ಪಡೆಯಲು ಅವನೊಡನೆ ಬಹಳ ತ್ರಾಸಪಟ್ಟು ಪ್ರಯತ್ನಿಸಿದನು, ಆದರೆ ಅವನು ಮಾತ್ರ ಮೊಂಡನಾಗಿದ್ದನು.

ಆಮೇಲೆ ಗವರ್ನರನಿಲ್ಲದೆ ಲೋನ್ ಆಫೀಸಿನ (Loan office) ಟ್ರಸ್ಟಿಗಳ ಆಜ್ಞೆಯಂತೆ ವ್ಯವಹಾರವನ್ನು ಸಾಗಿಸುವ ರೀತಿಯನ್ನು ನಾನು ಸೂಚಿಸಿದೆನು. ಹೀಗೆ ಕಾಯ್ದೆ ಪ್ರಕಾರ ಅಸೆಂಬ್ಲಿಗೆ ಪಡೆಯುವ ಹಕ್ಕು ಇತ್ತು. ಆಗ ಅಲ್ಪ ಅಥವಾ ಏನೂ ಹಣ ಆಫೀಸಿನಲ್ಲಿ ಇರಲಿಲ್ಲ. ಆದುದರಿಂದ ಈ ಹಣವನ್ನು (orders) ಒಂದು ವರುಷದಲ್ಲಿ ಕೊಡತಕ್ಕದ್ದೆಂದು ಮತ್ತು ಶೇಕಡಾ ಐದರಂತೆ ಬಡ್ಡಿಯನ್ನೂ ಪಡೆಯುವದೆಂದು ನಾನು ಪ್ರಸ್ತಾಪ ಮಾಡಿದೆನು. ಈ ಹಣದಿಂದ (orders) ಆಹಾರ ಸಾಮಗ್ರಿಗಳನ್ನು ಸುಲಭವಾಗಿ ಕೊಂಡುಕೊಳ್ಳಬಹುದೆಂದು ನಾನು ತಿಳಿದುಕೊಂಡೆನು. ಯಾವ ರೀತಿಯಲ್ಲೂ ಅನುಮಾನಿಸದೆ ಅಸೆಂಬ್ಲಿಯು ಸೂಚನೆಯನ್ನು ಸ್ವೀಕ

ರಿಸಿತು. ಹಣದ ಆಜ್ಞಾಪತ್ರವನ್ನು (orders) ಆ ಕೂಡಲೆ ಮುದ್ರಿಸಿದ್ದಾಯಿತು. ಅಂತೇ ಅವುಗಳಿಗೆ ರುಜು ಮಾಡಿ ಕಳುಹಿಸಿಕೊಡುವ ಸಮಿತಿಯಲ್ಲಿ ನಾನೂ ಒಬ್ಬನಾಗಿದ್ದೆ. ಅವುಗಳನ್ನು ಕೊಡುವುದಕ್ಕೆ ವೊಬಲಗು (fund) ಎಂದರೆ–ಸಾಲದಮೇಲೆ ಆಗ ಪ್ರಾಂತದಲ್ಲಿ ಪ್ರಚಲಿತವಿದ್ದ ಎಲ್ಲಾ ಕಾಗದದ ಹಣದ (paper currency) ಬಡ್ಡಿಯೊಡನೆ ಅಬಕಾರಿ (excise)ಯಿಂದ ದೊರೆಯುವ ತೀರ್ವೆಯಾಗಿತ್ತು; ಇದು ಬೇಕಾದುದಕ್ಕಿಂತ ಸಾಕಷ್ಟು ಹೆಚ್ಚಾಗಿದೆಯೆಂದು ತಿಳಿದುಬಂದ ಮೂಲಕ, ಅವರು ಶೀಘ್ರ ಸಾಲ (instant credit)ವನ್ನು ಪಡೆದರು; ಅಂತೇ ಆಹಾರ ಸಾಮಗ್ರಿಗಳಿಗೆ ಕೊಡಲು ಮಾತ್ರ ಹಣ ಪಡೆಯುವುದಲ್ಲದೆ, ಅನೇಕ ಹಣವಂತರು - ದೋಖ ಹಣ ಸಂಗ್ರಹದಲ್ಲಿ ಬಿದ್ದಿರುವಂಥವರು - ಅದನ್ನು ಆ ಆಜ್ಞಾಪತ್ರಗಳಲ್ಲಿ (orders) ವಿನಿಯೋಗಿಸಿದರು. ಇದು ಅವರಿಗೆ ಲಾಭದಾಯಕವೆಂದು ಕಂಡುಬಂದಿತು, ಯಾಕಂದರೆ ಅವುಗಳು ಕೈಯಲ್ಲಿದ್ದಾಗ ಬಡ್ಡಿಯನ್ನು ಪಡೆಯುತ್ತಿದ್ದವು ಮತ್ತು ಅವುಗಳನ್ನು ಯಾವ ಸಂದರ್ಭದಲ್ಲಿ ಬೇಕಾದರೂ ಹಣದಂತೆ ಉಪಯೋಗಿಸಬಹುದಾಗಿತ್ತು; ಹೀಗಾಗಿ ಅವುಗಳೆಲ್ಲ ಬಹಳ ತುರುಸಿನಿಂದ ಮಾರಾಟವಾದುವು, ಮತ್ತು ಕೆಲವೇ ವಾರಗಳಲ್ಲಿ ಅವುಗಳಲ್ಲಿ ಒಂದೂ ಕಾಣಲಿಕ್ಕೆ ಸಿಗಲಿಲ್ಲ. ಈ ರೀತಿಯಲ್ಲಿ ಮಹತ್ವದ ಈ ಕಾರ್ಯವು ನನ್ನ ಸಾಧನೆಯಿಂದ ಪೂರ್ಣಗೊಂಡಿತು. ಮನದುಂಬುವ ಬಿನ್ನವತ್ತಳೆಯಲ್ಲಿ ಮಿಸ್ಟರ್ ಕ್ವಿನ್ಸಿಯು ಅಸೆಂಬ್ಲಿಗೆ ತನ್ನ ಧನ್ಯವಾದಗಳನ್ನು ಅರ್ಪಿಸಿದನು. ತನ್ನ ರಾಯಭಾರದ ಯಶಸ್ಸಿನಿಂದ ಸಂತೋಷಿತನಾಗಿ ಮನೆಗೆ ಹೋದನು. ಆನಂತರ ಎಂದೂ ನನ್ನಲ್ಲಿ ಆದರದ ಹಾಗೂ ಪ್ರೇಮದ ಗೆಳೆತನವನ್ನಿಟ್ಟಿದ್ದನು.

ಅಲ್ಬನಿಯಲ್ಲಿ ನಿರ್ಣಯವಾದಂತೆ ವಸಾಹತುಗಳ ಏಕೀಕರಣವಾಗಲು ಅಪ್ಪಣೆ ಕೊಡಲು ಒಪ್ಪದೆ ಮತ್ತು ಆ ಏಕೀಕೃತರ ರಕ್ಷಣೆಯಲ್ಲಿ ನಂಬಿಗೆಯಿಡದೆ, ಇಲ್ಲದೆ ಹೋದಲ್ಲಿ ಆ ಮೂಲಕ ಅವರು ಶಕ್ತಿಯನ್ನು ಹೆಚ್ಚಿಸಿಕೊಂಡಾರೆಂದು ಮತ್ತು ತಮ್ಮ ಸ್ವಶಕ್ತಿಯ ಅರಿವುಂಟುಮಾಡಿಕೊಳ್ಳಬಹುದೆಂದು ಅವರ ಬಗ್ಗೆ ಈ ಕಾಲದಲ್ಲಿ ಸಂಶಯ ಅಸೂಯೆಗಳು ನಡೆದು, ಜನರಲ್ ಬ್ರೆಡೊಕ್‌ನನ್ನು ಇಂಗ್ಲೀಷ ನಿಯಮಿತ ಸೈನ್ಯದ ಎರಡು ದಂಡುಗಳೊಡನೆ ಬ್ರಿಟಿಷ ಸರಕಾರವು ಆ ಉದ್ದೇಶಕ್ಕಾಗಿ ಕಳುಹಿಸಿಕೊಟ್ಟಿತು. ಅವನು ವರ್ಜಿನಿಯಾದ ಅಲೆಕ್ಸಾಂಡ್ರಿಯಾದಲ್ಲಿ ಇಳಿದು ಅಲ್ಲಿಂದ ಮೇರಿಲ್ಯಾಂಡಿನ ಫ್ರೆಡ್ರಿಕ್‌ಟೌನಿಗೆ ಸಾಗಿದನು; ಅಲ್ಲಿ ಬಂಡಿಗಳ (Carriages) ಸಲುವಾಗಿ

ಅವನು ತಂಗಿದನು. ಯಾವುದೋ ಸುದ್ದಿಗಾರರಿಂದ, ಸೇವೆಗೆ ವಿರುದ್ಧ ನಡೆದ ಮೂಲಕ ನಮ್ಮ ಅಸೆಂಬ್ಲಿಯ ಬಗ್ಗೆ ಅವನು ಕಠೋರವಾಗಿ ಪೂರ್ವಾಗ್ರಹದೋಷದಿಂದ ಪೀಡಿತನಾಗಿದ್ದಾನೆಂದು ತಿಳಿದುಕೊಂಡು, ಅವನನ್ನು ಕಾದುಕೊಂಡು—ಅವನ ವತಿಯಿಂದ ಎಂದಲ್ಲದೆ—ಪೋಸ್ಟ್‌ಮಾಸ್ಟರ್ ಜನರಲ್‌ನೆಂದು ಅವನ ಹಾಗೂ ಹಲವಾರು ಪ್ರಾಂತಗಳ ಗವರ್ನರುಗಳೊಳಗಿನ ಪತ್ರವ್ಯವಹಾರವನ್ನು ಅತ್ಯಂತ ಶೀಘ್ರವಾಗಿ ಮತ್ತು ಖಾತ್ರಿಯಾಗಿ ನಡೆಸುವ ರೀತಿಯನ್ನು ನಿರ್ಣಯ ಮಾಡುವ ಪ್ರಸ್ತಾಪದಿಂದ-ನಟನೆ ಮಾಡಿ ಅವನನ್ನು ಸಂಧಿಸಬೇಕೆಂದು ಅಸೆಂಬ್ಲಿ ಇಚ್ಛಿಸಿತು. ಗವರ್ನರುಗಳ ಜೊತೆಗೆ ಅವನು ಅಗತ್ಯವಾಗಿಯೂ ಸತತ ಪತ್ರವ್ಯವಹಾರವನ್ನು ಇಟ್ಟಿರಬೇಕಾಗಿತ್ತು. ಆ ಬಗ್ಗೆ ಅವರು ನನಗೆ ಖರ್ಚು ಕೊಡಲು ನಿರ್ಧರಿಸಿದರು. ಈ ಪ್ರಯಾಣದಲ್ಲಿ ನನ್ನ ಜೊತೆಗೆ ನನ್ನ ಮಗನೂ ಬಂದಿದ್ದನು.

ವಾಗೀನುಗಳನ್ನು ಸಂಗ್ರಹಿಸಲು ಮ್ಯಾರಿಲ್ಯಾಂಡ್ ಮತ್ತು ವರ್ಜಿನಿಯಾದ ಹಿಂಭಾಗಗಳಿಂದ ಕಳುಹಿಸಲ್ಪಟ್ಟವರು ಹಿಂದಿರುಗುವುದನ್ನು ಬಹಳ ತವಕದಿಂದ ಕಾದುಕುಳಿತಿರುವ ಆ ಜನರಲನನ್ನು ನಾವು ಫ್ರೆಡ್ರಿಕ್ ಟೌನಿನಲ್ಲಿ ಕಂಡೆವು. ಅವನ ಸಂಗಡ ಬಹಳ ದಿನಸಗಳ ತನಕ ಉಳಕೊಂಡಿದ್ದೆನು. ಅವನೊಡನೆ ಪ್ರತಿ ದಿನವೂ ಭೋಜನ ಮಾಡಿದ್ದಾಯಿತು. ಅಂತೇ ಅವನಲ್ಲಿನ ಪೂರ್ವಾಗ್ರಹಗಳನ್ನೆಲ್ಲ ನಿರ್ಮೂಲ ಮಾಡಲು ಒಳ್ಳೆಯ ಸಂಧಿಯು ದೊರಕಿತ್ತು. ಅವನು ಅಲ್ಲಿ ತಂಗುವ ಮೊದಲು ನೈಜವಾಗಿಯೂ ಅಸೆಂಬ್ಲಿಯು ಏನು ಮಾಡಿದೆ ಮತ್ತು ಅವನ ಕಾರ್ಯವನ್ನು ಸಾಗಿಸಲು ಇನ್ನೂ ಏನು ಮಾಡಲು ಇಚ್ಛಿಸುತ್ತಿದೆಯೆಂಬ ಸುದ್ದಿಯನ್ನು ತಿಳಿಸಿ ಇದು ನಡೆದಿತ್ತು. ನಾನು ಅಲ್ಲಿಂದ ಹೊರಡಲಿಕ್ಕೆ ಸಿದ್ಧವಾದಾಗ ದೊರೆತ ವಾಗೀನುಗಳ ಯಾದಿಯು ತರಲ್ಪಟ್ಟಿತು. ಇದರಿಂದ ಅವುಗಳು ಕೇವಲ ಇಪ್ಪತ್ತೈದು ಇವೆಯೆಂದು ಮತ್ತು ಅವೆಲ್ಲವೂ ಕೆಲಸಕ್ಕೆ ಬರುವ ಸ್ಥಿತಿಯಲ್ಲಿಲ್ಲವೆಂದು ತಿಳಿದು ಬಂದಿತು. ಜನರಲ್ (general) ಹಾಗೂ ಎಲ್ಲಾ ಆಫೀಸರರುಗಳು ಆಶ್ಚರ್ಯಗೊಂಡರು. ಅಸಾಧ್ಯ ಕೃತ್ಯವೆಂದಾದ ಮೂಲಕ ದಾಳಿಯು ಆಗ ಕೊನೆಗೊಂಡಿತು ಎಂದು ಸಾರಿದರು. ಅಂತೇ ಅವರನ್ನು ಮೂರ್ಖತನದಿಂದ ಅವರ ಸಾಮಾನು—ಸರಂಜಾಮು, ಗಂಟು ಗದಡಿ ಮೊದಲಾದವುಗಳನ್ನು ಸಾಗಿಸುವ ವಾಹನಗಳಿಲ್ಲದ ನಾಡಿನಲ್ಲಿ ನೆಲೆವೂರಿಸಿದ್ದಕ್ಕಾಗಿ ಮಂತ್ರಿಗಳ ಬಗ್ಗೆ ವಿಷಾದಪಟ್ಟುಕೊಂಡರು. ಈ ಬಗ್ಗೆ ಅವರಿಗೆ ನೂರಐವತ್ತಕ್ಕೆ ಕಡಿಮೆಯಿಲ್ಲದಷ್ಟು ವಾಗೀನು (Wagons) ಗಳು ಅವಶ್ಯವಿದ್ದವು.

ಅವರು ಪೆನ್ಸಿಲ್ವಾನಿಯಾದಲ್ಲಿ ಬೀಡು ಹಾಕದಿರುವುದು ದುರ್ದೈವದ ವಿಷಯವೆಂದು ಮತ್ತು ಆ ಊರಿನಲ್ಲಿ ಪ್ರತಿಯೊಬ್ಬ ರೈತನಿಗೂ ತನ್ನದಾದ ಒಂದು ವಾಗೀನು ಇರುತ್ತದೆಂದು ನಾನು ಹೇಳಿದೆನು. ಜನರಲ್ ನನ್ನ ಮಾತುಗಳನ್ನು ಕುತೂಹಲದಿಂದ ಆಲಿಸಿಕೊಂಡವನೇ, "ಹಾಗಾದರೆ, ಅಲ್ಲಿ ನೀನು ಸಾಕಷ್ಟು ಪ್ರಭಾವಶಾಲಿಯಾದ ವ್ಯಕ್ತಿಯಾಗಿರಬೇಕು, ನಮಗಾಗಿ ಅವುಗಳನ್ನು ದೊರಕಿಸಿಕೊಡಲಿಕ್ಕೂ ನಿನಗೆ ಸಾಧ್ಯವಿರಬಹುದು; ಅಂತೇ ನೀನು ಅದನ್ನು ಕೈಕೊಳ್ಳಬೇಕೆಂದು ನಾನು ಕೇಳಿಕೊಳ್ಳುತ್ತೇನೆ" ಎಂದು ಹೇಳಿದನು. ವಾಗೀನುಗಳನ್ನು ಯಾವ ಕರಾರಿನ ಮೇಲೆ ಪಡೆಯಬಹುದೆಂದು ನಾನು ಕೇಳಿದೆನು; ಮತ್ತು ನನಗೆ ಅವಶ್ಯವೆನಿಸಿದ ಕರಾರಿನಂತೆ ಬರೆಯನ್ನು ನಾನು ಪತ್ರಿಕೆಯಲ್ಲಿ ಹಾಕುವವನಿದ್ದೆನು. ಇದನ್ನು ನಾನು ಮಾಡಿದೆನು, ಮತ್ತು ಅವರು ಕೂಡಾ ಅದಕ್ಕೆ ಒಪ್ಪಿದರು; ಅಂತೇ ಅದಕ್ಕಾಗಿ-ಒಂದು ಆಯೋಗ ಹಾಗೂ ಆಜ್ಞೆಗಳನ್ನು ಅನುಗುಣವಾಗಿ ಆ ಕೂಡಲೆ ತಯಾರಿಸಿದ್ದಾಯಿತು. ನಾನು ಲ್ಯಾಂಕೆಸ್ಟರಿಗೆ ಬಂದು ತಲಪಿದೊಡನೆ ಆ ಕರಾರುಗಳಾವುವೆಂಬುದನ್ನು ನಾನು ಪತ್ರಿಕೆಯಲ್ಲಿ ಜಾಹೀರಾತು ಕೊಟ್ಟು ಪ್ರಕಟಗೊಳಿಸಿದೆನು. ಅದರಿಂದ ಉಂಟಾದ ದೊಡ್ಡ ಹಾಗೂ ತ್ವರಿತ ಪರಿಣಾಮದಿಂದ ಅದೊಂದು ಬಗೆಯ ಕುತೂಹಲದ ವಿಷಯವಾಗಿದೆ. ಅದನ್ನು ನಾನು ಸಾಕಷ್ಟು ದೀರ್ಘವಾಗಿ ಕೆಳಗೆ ತೋರಿಸುತ್ತೇನೆ :

"ಜಾಹೀರಾತು.

"ಲ್ಯಾಂಕೆಸ್ಟರ್, ಏಪ್ರಿಲ್ ೨೬, ೧೭೫೫.

"ಈಗ ಒಂದು ನೂರ ಐವತ್ತು ವಾಗೀನುಗಳು, ಪ್ರತಿಯೊಂದು ವಾಗೀನಿಗೆ ನಾಲ್ಕು ಕುದುರೆಗಳಂತೆ; ಮತ್ತು ಹದಿನೈದು ನೂರು ಜೀನು ಅಥವ ತಡಿ ಕುದುರೆಗಳು; ವಿಲ್ಸ್ ಕ್ರೀಕಿ (Will's Creek) ನಲ್ಲಿ ಅದೇ ತಾನೆ ಸೇರ್ಪಡೆಯಾಗಲಿರುವ ಘನ ರಾಜಶ್ರೀಯ ದಂಡುಗಳ ಸೇವೆಗಾಗಿ ಬೇಕಾಗಿರುವುದರಿಂದ, ಮತ್ತು ಘನ ಮಾನ್ಯ ಜನರಲ್ ಬ್ರೆಡ್ಡೋಕ್‌ನು ಇವುಗಳನ್ನೆಲ್ಲ ಗುತ್ತಿಗೆಗೆ ಪಡೆಯುವ ಹಕ್ಕನ್ನು ನನಗೆ ದಯಪಾಲಿಸಲು ಮನಸ್ಸು ಮಾಡಿದ್ದರಿಂದ, ನಾನು ಈ ಮೂಲಕ ನೋಟೀಸು ಕೊಡುವುದೇನೆಂದರೆ—ಈ ಉದ್ದೇಶಕ್ಕಾಗಿ ಇಂದಿನಿಂದ ಮುಂದಿನ ಬುಧವಾರದವರೆಗೆ ಲ್ಯಾಂಕೆಸ್ಟರಿನಲ್ಲಿ ಮತ್ತು ನ್ಯೂಯಾರ್ಕಿನಲ್ಲಿ ಮುಂದಿನ ಗುರುವಾರ ಬೆಳಗಿನಿಂದ ಶುಕ್ರವಾರ ಸಂಜೆಯವರೆಗೆ- ವಾಗೀನುಗಳನ್ನು ಮತ್ತು ಕುದುರೆ ಜೋಡುಗಳನ್ನು, ಅಥವಾ ಒಂಟಿ ಕುದುರೆಗಳನ್ನು ಈ ಕೆಳಗಿನ

ಕರಾರಿನ ಮೇಲೆ ಹೊಂದಿಸಿ ವ್ಯವಹಾರ ಮಾಡಲು ಸಿದ್ಧನಿರುತ್ತೇನೆ; ಅವುಗಳೆಂದರೆ: ೧. ನಾಲ್ಕು ಕುದುರೆಗಳು ಮತ್ತು ಒಬ್ಬ ಸಾರಥಿಯಿಂದ ಕೂಡಿದ ಪ್ರತಿಯೊಂದು ವಾಗೀನಿಗೆ ಪ್ರತಿ ದಿನಕ್ಕೆ (Per Diem) ಹದಿನೈದು ಶಿಲ್ಲಿಂಗುಗಳನ್ನು ಕೊಡಲಾಗುವುದು; ಮತ್ತು ಜೀನು ಅಥವಾ ಬೇರೆ ಸಾಮಾನು-ಸರಂಜಾಮಿನ ಯೋಗ್ಯವಾದ ಪ್ರತಿಯೊಂದು ಕುದುರೆಗೆ ಪ್ರತಿ ದಿನಕ್ಕೆ ಎರಡು ಶಿಲ್ಲಿಂಗುಗಳು ಹಾಗೂ ತಡಿಯಿಲ್ಲದ ಪ್ರತಿಯೊಂದು ಸಮರ್ಥ ಕುದುರೆಗೆ ಪ್ರತಿ ದಿನಕ್ಕೆ ಹದಿನೆಂಟು ಪೆನ್ನು ಕೊಡಲಾಗುವುದು. ೨. ವಿಲ್ಸ್ ಕ್ರೀಕಿನಲ್ಲಿ ಅವರು ದಂಡಿಗೆ ಸೇರಿದ ದಿನದಿಂದ ಸಂಬಳ ಪ್ರಾರಂಭವಾಗುತ್ತದೆ; ಅದು ಮೇ ೨೦ ರಂದು ಅಥವಾ ಅದರ ಮೊದಲೇ ಆಗಿರುತ್ತದೆ ; ಮತ್ತು ವಿಲ್ಸ್ ಕ್ರೀಕಿಗೆ ಬರುವ ಮತ್ತು ಅವುಗಳನ್ನು ಕೆಲಸದಿಂದ ಮುಕ್ತಮಾಡಿದ ಮೇಲೆ ಮನೆಗೆ ಹೋಗುವ ಹೆಚ್ಚಿನ ಕಾಲದಲ್ಲಿ ಯೋಗ್ಯ ಭತ್ತೆಯು ಕೊಡಲ್ಪಡುವುದು. ೩. ಪ್ರತಿಯೊಂದು ವಾಗೀನು ಮತ್ತು ಜೋಡು, ಮತ್ತು ಪ್ರತಿಯೊಂದು ಜೀನು ಅಥವಾ ತಡಿ ಕುದುರೆಯು ನನ್ನಿಂದ ಹಾಗೂ ಮಾಲೀಕನಿಂದ ಆರಿಸಿದ ಮೂರನೆಯ ಮನುಷ್ಯನಿಂದ ಬೆಲೆ ಕಟ್ಟಲ್ಪಡತಕ್ಕದ್ದು; ಮತ್ತು ಒಂದುವೇಳೆ ಯಾರಾದರೂ ವಾಗೀನು, ಜೋಡು (Team) ಅಥವಾ ಸೇನೆಯಲ್ಲಿರುವ ಬೇರೆ ಕುದುರೆ ನಷ್ಟವಾದಲ್ಲಿ ಮೇಲಿನ ಲೆಕ್ಕಕ್ಕೆ ಅನುಗುಣವಾದ ಕ್ರಯವು ಸಮ್ಮತವಾಗಿದೆ ಮತ್ತು ಕೊಡಲ್ಪಡುವುದು. ೪. ಬೇಕಾಗಿದ್ದ ಪಕ್ಷದಲ್ಲಿ ಏಳು ದಿವಸಗಳ ಸಂಬಳವು ಮುಂಗಡವಾಗಿ ಕೈಯಲ್ಲೇ ನನ್ನಿಂದ ಗುತ್ತಿಗೆ ನಡೆಯುವ ಹೊತ್ತಿಗೆ ಕೊಡಲ್ಪಡುವುದು. ಮತ್ತು ಬಾಕಿ ಉಳಿದದ್ದು ಜನರಲ್ ಬ್ರೆಡ್ಡೋಕ್ ಅಥವಾ ದಂಡಿನ ಸಂಬಳ ಕೊಡುವ ಅಧಿಕಾರಿಯಿಂದ, ಅವರನ್ನು ಕೆಲಸದಿಂದ ಮುಕ್ತಗೊಳಿಸುವ ಹೊತ್ತಿಗೆ, ಅಥವಾ ಅದನ್ನು ಕೇಳಲಾದ ಕಾಲ-ಕಾಲಕ್ಕೆ ಕೊಡಲ್ಪಡುವುದು. ೫. ವಾಗೀನುಗಳ ಸಾರಥಿಗಳು, ಇಲ್ಲವೆ ಬಾಡಿಗೆಗೆ ಪಡೆದುಕೊಂಡ ಕುದುರೆಗಳ ಮನುಷ್ಯರು; ಯಾವ ಕಾರಣದಿಂದಲೂ ಕೂಡ ಬೇರೆ ರೀತಿಯಲ್ಲಿ-ಅವರ ವಾಗೀನುಗಳನ್ನು ನಡೆಸುವುದಲ್ಲದೆ ಮತ್ತು ಕುದುರೆಗಳ ದೇಖರೇಖಿ ನೋಡಿಕೊಳ್ಳುವುದಕ್ಕಲ್ಲದೆ-ಯಾವ ಕೆಲಸಕ್ಕೂ ನಿಯಮಿಸಲ್ಪಡುವುದಿಲ್ಲ. ೬. ಎಲ್ಲಾ ಓಟು ಧಾನ್ಯದ, ಇಂಡಿಯನ್ ಕಾಳುಗಳ ಅಥವಾ ಕುದುರೆಗಳು ಇಲ್ಲವೆ ವಾಗೀನುಗಳು ಶಿಬಿರಕ್ಕೆ ತರುವ ಯಾವ ಮೇವನ್ನು, ಕುದುರೆಗಳ ಜೀವನಕ್ಕೆ ಅಗತ್ಯವುಳ್ಳದ್ದಕ್ಕಿಂತ ಹೆಚ್ಚಿನದನ್ನೆಲ್ಲ—ದಂಡಿನ ಉಪಯೋಗಕ್ಕೆ ತೆಗೆದುಕೊಳ್ಳಲಾಗುವುದು

ಮತ್ತು ಅದಕ್ಕೆ ಯೋಗ್ಯವಾದ ಕ್ರಯವನ್ನು ಕೊಡಲಾಗುತ್ತದೆ.

"ಟಿಪ್ಪಣಿ:— ನನ್ನ ಮಗ, ವಿಲಿಯಂ ಫ್ರಾಂಕ್ಲಿನ್‌ನು ಈ ಬಗೆಯ ಗುತ್ತಿಗೆಯನ್ನು ಕಂಬರ್ಲಂಡ್ ಪರಗನೆಯಲ್ಲಿ ಯಾವ ಮನುಷ್ಯನೊಡನೆ ಕೂಡಾ ನಡೆಸಲು ಹಕ್ಕುದಾರನಾಗಿದ್ದಾನೆ.

"ಬಿ. ಫ್ರಾಂಕ್ಲಿನ್."

"ಲ್ಯಾಂಕೆಸ್ಟರ್, ಯೋರ್ಕ್ ಮತ್ತು ಕಂಬರ್ಲಂಡ್ ಪರಗಣೆಗಳ ನಿವಾಸಿಗಳ ಗಮನಕ್ಕೆ.

"ಗೆಳೆಯರೇ ಮತ್ತು ನಾಡಿನವರೇ,

"ಕೆಲವು ದಿವಸಗಳ ಹಿಂದಿನಿಂದ ಫ್ರೆಡ್ರಿಕ್‌ದ ಶಿಬಿರಕ್ಕೆ ಪ್ರಾಸಂಗಿಕ ವಾಗಿ ಹೋಗಿಬಂದುದರಿಂದ, ನನಗೆ ಜನರಲ್ (general) ಮತ್ತು ಆಫೀಸರರುಗಳು—ತಮಗೆ ಕುದುರೆಗಳ ಮತ್ತು ಬಂಡಿಗಳ (Carriages) ಸರಭರಾಯಿ ಆಗದುದರಿಂದ, ಈ ಪ್ರಾಂತದಿಂದವುಗಳನ್ನು ನೀರಿಕ್ಷಿಸಿದಂತೆ ಮತ್ತು ಅವುಗಳನ್ನು ಒದಗಿಸುವುದರಲ್ಲಿ ಇದು ಅತ್ಯಂತ ಸಮರ್ಥವೆಂದು ಬಗೆದುದರಿಂದ—ಬಹಳ ಕಂಗೆಟ್ಟು ಹೋಗಿರುವುದು ಕಂಡು ಬಂದಿತು; ಆದರೆ ನಮ್ಮ ಗವರ್ನರ್ ಹಾಗೂ ಅಸೆಂಬ್ಲಿಯ ನಡುವಿನ ಅಂತಃ ಕಲಹ ಗಳ ಮುಖಾಂತರ ಹಣವನ್ನು ಒದಗಿಸಲಾಗಲಿಲ್ಲ, ಅಲ್ಲದೆ ಆ ಉದ್ದೇಶ ಕ್ಕಾಗಿ ಯಾವಕ್ರಮವೂ ಕೈಕೊಳ್ಳಲ್ಪಡಲಿಲ್ಲ.

"ಅಗತ್ಯವಾಗಿರುಷ್ಟು ಉತ್ತಮವಾದ ಬಂಡಿಗಳನ್ನು ಮತ್ತು ಕುದುರೆ ಗಳನ್ನು ಬಲಾತ್ಕಾರದಿಂದ ವಶಪಡಿಸಿಕೊಳ್ಳಲಿಕ್ಕೆ ಹಾಗೂ ಅವುಗಳನ್ನು ನಡೆ ಸಲಿಕ್ಕೆ ಮತ್ತು ಅವುಗಳ ಕಾಳಜಿ ವಹಿಸಲು ಬೇಕಾಗುವಷ್ಟು ಜನರನ್ನು ಕಡ್ಡಾಯಪಡಿಸಲು ಈ ಕೂಡಲೆ ಒಂದು ಸಶಸ್ತ್ರ ಸೈನ್ಯವನ್ನು ಈ ಪರಗಣೆ ಗಳಿಗೆ ಕಳುಹಿಸುವ ನಿರ್ಣಯವನ್ನು ಪ್ರಸ್ತಾಪಿಸಲಾಗಿರುತ್ತದೆ.

ಇಂಥ ಪ್ರಸಂಗದಲ್ಲಿ ಬ್ರಿಟಿಷ ಸೈನಿಕರ ದೌಡು ಈ ಪರಗಣೆಗಳಲ್ಲಿ, ಮುಖ್ಯವಾಗ ಅವರು ಈಗಿರುವ ಸ್ಥಿತಿಯನ್ನು ಪರಿಗಣಿಸಿದಾಗ, ಮತ್ತು ನಮ್ಮ ವಿರುದ್ಧ ಅವರಿಗಿರುವ ಸೇಡನ್ನು ನೆನೆದಾಗ; ಹೆಚ್ಚಿನ ಹಾಗೂ ಭೀಕರ ಕಷ್ಟ-ನಷ್ಟಗಳಿಂದ ಪರಿಣಮಿಸುವುದೆಂದು ನನ್ನ ಆಲೋಚನೆಯಾಗಿರುತ್ತದೆ, ಅಂತೇ ಈ ಕಾರಣದಿಂದ ಹೆಚ್ಚಿನ ಆತುರತೆಯಿಂದ ಮೊದಲಲ್ಲಿ ಸಾಧುವಾದ ಹಾಗೂ ನ್ಯಾಯವಾದ ಮಾರ್ಗದಿಂದ ಏನನ್ನು ಮಾಡಲು ಸಾಧ್ಯವೋ ಅದನ್ನು ಮಾಡಲು ಪ್ರಯತ್ನಿಸುವ ತೊಂದರೆಯನ್ನು ನಾನು ತೆಗೆದುಕೊಂಡಿ ರುತ್ತೇನೆ. ಹಿಂದುಳಿದ ಈ ಪರಿಗಣೆಗಳ ಜನರು ಇತ್ತೀಚೆಗೆ ಇಲ್ಲಿ ಸಾಕಷ್ಟು

ಕಾಗದದ ಹಣದ ಅಗತ್ಯವಿದೆಯೆಂದು ಅಸೆಂಬ್ಲಿಗೆ ದೂರು ಕೊಟ್ಟಿರುತ್ತಾರೆ; ಗಣನೀಯವಾದ ಹಣದ ಮೊಬಲಗನ್ನು ಪಡೆಯುವ ಹಾಗೂ ನಿಮ್ಮಲ್ಲಿ ಹಂಚಿಕೊಳ್ಳುವಂಥ ಸಂಧಿಯು ಈಗ ನಿಮಗಿದೆ; ಯಾಕಂದರೆ ಈ ದಾಳಿಯ ಕೆಲಸವು ಮುಂದುವರಿಯಬೇಕಾದಲ್ಲಿ ಊಹಿಸಲಾದ ಸಾಧ್ಯ ಅವಧಿಯಾದ ನೂರಯಿಪ್ಪತ್ತು ದಿವಸಗಳಿಗೂ ಮೀರಬಹುದಾದುದರಿಂದ ಈ ವಾಗೀನು ಹಾಗೂ ಕುದುರೆಗಳ ಬಾಡಿಗೆಯು ಮೂವತ್ತು ಸಾವಿರ ಪೌಂಡುಗಳನ್ನು ದಾಟಿ ಹೋಗುವುದು. ಇದನ್ನು ನಿಮಗೆ ಅರಸನ ಖಜಾನೆಯಿಂದ ಬೆಳ್ಳಿ–ಬಂಗಾರದ ರೂಪದಲ್ಲಿ ಕೊಡಲಾಗುವುದು.

"ಕೆಲಸವು ಹಗುರವಾದುದು ಮತ್ತು ಸುಲಭವಾದುದಾಗಿರುತ್ತದೆ, ಯಾಕಂದರೆ ಪ್ರತಿದಿನಕ್ಕೆ ಹನ್ನೆರಡು ಮೈಲಿಗಿಂತ ಹೆಚ್ಚು ಸೈನ್ಯವು ಸಾಗಲಾರದು ಮತ್ತು ಸೈನ್ಯದ ಹಿತ-ರಕ್ಷಣೆಗೆ ತೀರಾ ಅಗತ್ಯವಾಗಿರುವ ಸಾಹಿತ್ಯ-ಸಾಮಗ್ರಿಗಳನ್ನು ಹೊತ್ತುಕೊಂಡು ಒಯ್ಯುವಂಥ ವಾಗೀನುಗಳು ಮತ್ತು ತಡಿಕುದುರೆಗಳು ಸೈನ್ಯದೊಡನೆ ನಡೆಯಲೇಬೇಕಾದ ಕಾರಣ, ಮತ್ತು ಅವುಗಳಿಗಿಂತ ವೇಗವಾಗಿ ಹೋಗಬಾರದಾಗಿರುವುದರಿಂದ, ಮತ್ತು ಅವುಗಳು ಸೈನ್ಯದ ಸಲುವಾಗಿಯೇ ಇದ್ದ ಕಾರಣ, ಯಾವಾಗಲೂ ಅವುಗಳನ್ನು ಎಲ್ಲಿ ಹೆಚ್ಚಿಗೆ ಸುರಕ್ಷಿತವಾಗಿ ಇಡಲಿಕ್ಕೆ ಸಾಧ್ಯವಿದೆಯೋ ಅಲ್ಲಿ ಇಡಲಾಗುವುದು—ಇದು ಪ್ರವಾಸದಲ್ಲಿ ಆಗಬಹುದು ಅಥವಾ ಶಿಬಿರದಲ್ಲಿಯೂ ಆಗಬಹುದು.

"ನೀವು ನಾನು ನಂಬಿದಂತೆ ಇದ್ದರೆ, ಘನ ರಾಜ್ಯಶ್ರೀಗೆ ನೀವು ಒಳ್ಳೆಯವರಾಗಿ ಮತ್ತು ವಿಧೇಯರಾಗಿ ನೈಜವಾಗಿಯೂ ಇರುವುದಾದಲ್ಲಿ, ನೀವು ಈಗ ಬಹು ಉಪಯುಕ್ತವಾದ ಸೇವೆಯನ್ನು ಸಲ್ಲಿಸಬಹುದಾಗಿದ, ಮತ್ತು ಅದನ್ನು ನಿಮಗೆ ಹಗುರ ಮಾಡಿಕೊಳ್ಳಲೂ ಬಹುದು; ಯಾಕೆಂದರೆ ಅವರವರ ತೋಟಗಳ ವ್ಯವಸಾಯದಿಂದ ಒಂದು ವಾಗೀನು ಮತ್ತು ನಾಲ್ಕು ಕುದುರೆ ಹಾಗೂ ಒಬ್ಬ ಸಾರಥಿಯನ್ನು ಕೊಡಲು ಸಾಧ್ಯವಿಲ್ಲದ ಅಂಥ ಮೂವರು ಅಥವಾ ನಾಲ್ವರು ಒಟ್ಟಿಗೆ ಕೂಡಿ ಅದನ್ನು ಮಾಡಬಹುದು; ಒಬ್ಬನು ವಾಗೀನು ಕೊಡುವುದು, ಮತ್ತೊಬ್ಬನು ಒಂದು ಅಥವಾ ಎರಡು ಕುದುರೆಗಳನ್ನು ಕೊಡುವುದು, ಮತ್ತು ಇನ್ನೊಬ್ಬನು ಒಬ್ಬ ಸಾರಥಿಯನ್ನು ಸಲ್ಲಿಸುವುದು. ತರುವಾಯದಲ್ಲಿ - ಸಂಬಳವನ್ನು ತ್ರೈರಾಶಿಕಕ್ಕನುಗುಣವಾಗಿ ನಿಮ್ಮಲ್ಲಿ ವಿಭಾಗಿಸುವುದು. ಆದರೆ ಒಂದುವೇಳೆ ನೀವು ಈ ಸೇವೆಯನ್ನು ಸ್ವಸಂತೋಷದಿಂದ ನಿಮ್ಮ ರಾಷ್ಟ್ರಕ್ಕೆ ಮತ್ತು ರಾಜನಿಗೆ—ಇಂಥ ಉತ್ತಮ ಸಂಬಳ ಹಾಗೂ ಯೋಗ್ಯವಾದ ಕರಾರುಗಳನ್ನು ನಿಮಗೆ ನೀಡಿ

ದಾಗ ಕೂಡಾ ಪಲ್ಲಿಸದೆ ಹೋದಲ್ಲಿ,-ನಿಮ್ಮ ವಿಧೇಯತೆಯು ತೀವ್ರ ಸಂಶಯು ಕ್ಕೊಳಪಡುವುದು. ರಾಜನ ವ್ಯವಹಾರವನ್ನು ಕೊನೆಗಾಣಿಸಲೇ ಬೇಕು. ಅಷ್ಟೊಂದು ದೂರದಿಂದ ನಿಮ್ಮ ರಕ್ಷಣೆಯ ಸಲುವಾಗಿ ಬಂದಿರುವ ಇಷ್ಟೆಲ್ಲ ಚುರುಕಿನ ಸೈನ್ಯಗಳು:- ನಿಮ್ಮಿಂದ ಯೋಗ್ಯವಾಗಿ ಅಪೇಕ್ಷಿಸಲ್ಪಟ್ಟದನ್ನು ನೆರವೇರಿಸುವುದರಲ್ಲಿ ನೀವು ಹಿಂದುಳಿದುದರಿಂದ - ಸೋಮಾರಿತನದಿಂದ ನಿಲ್ಲಲೇಬಾರದು. ವಾಗೀನುಗಳು ಮತ್ತು ಕುದುರೆಗಳು ದೊರೆಯಲೇ ಬೇಕು. ಕ್ರೂರ - ಕಠೋರ ಮಾರ್ಗಗಳನ್ನು ಬಹುಶಃ ಉಪಯೋಗ ಮಾಡಲಾ ದೀತು. ಮತ್ತು ನಿಮಗೆ ಅದರ ಪ್ರತಿಫಲ ಎಲ್ಲಿ ದೊರೆಯುತ್ತದೋ ಅಲ್ಲಿಗೆ ನೀವು ನೋಡಿಕೊಂಡು ಹೋಗಬೇಕಾದೀತು. ಅಂತೇ ನಿಮ್ಮ ಪ್ರಸಂಗವು ಬಹುಶಃ ತುಸು ಕರುಣಾಜನಕವಾದೀತು ಅಥವಾ ಲೆಕ್ಕಿಸಲಿಕ್ಕೆ ಬಾರದಾ ದೀತು.

"ಒಳ್ಳೆಯದನ್ನು ಮಾಡಲು ಪ್ರಯತ್ನಿಸುವುದರ ಹೊರತಾಗಿ ಮಿಕ್ಕ ಯಾವ ಮುಖ್ಯವಾದ ಆಸಕ್ತಿಯೂ ಈ ಕಾರ್ಯದಲ್ಲಿ ನನ್ನದಿಲ್ಲ, ನನ್ನ ಕಷ್ಟಕ್ಕೆ ನನಗೆ ಕೇವಲ ಕೆಲಸವಷ್ಟು ದೊರೆತೀತು. ಒಂದು ವೇಳೆ ವಾಗೀನು ಗಳನ್ನು ಮತ್ತು ಕುದುರೆಗಳನ್ನು ಪಡೆಯುವ ಈ ಮಾರ್ಗವೂ ಯಶಸ್ವಿಯಾ ಗುವ ಸಂಭವವಿಲ್ಲದಿದ್ದಲ್ಲಿ ಜನರಲನಿಗೆ ಹದಿನಾಲ್ಕು ದಿವಸಗಳಲ್ಲಿ ಸುದ್ದಿ ಕಳುಹಿಸಿ ನಾನು ಋಣಿಯಾಗಬೇಕಾಗಿದೆ; ಮತ್ತು ಸಶಸ್ತ್ರ ಸರದಾರ ಸರ್ ಜೋನ್ ಸೈಂಟ್ ಕ್ಲೇಯರ್‌ನು ಕೆಲ ಸೈನಿಕರ ಪಡೆಯೊಡನೆ ಈ ಉದ್ದೇಶ ಕ್ಕಾಗಿ ಪ್ರಾಂತವನ್ನು ಆಕ್ರಮಿಸುತ್ತಾನೆಂದು ನನ್ನ ಊಹೆಯಾಗಿರುತ್ತದೆ, ಇದನ್ನು ಕೇಳಲು ನನಗೆ ಬಹಳ ದುಃಖವಾದೀತು, ಯಾಕಂದರೆ ಸತ್ಯವಾಗಿ ಮತ್ತು ವಿಶ್ವಾಸಪೂರ್ವಕವಾಗಿ ನಾನು ನಿಮ್ಮ ಗೆಳೆಯ ಹಾಗೂ ನಿಮಗೆ ಶುಭಕೋರುವವನಾಗಿದ್ದೇನೆ-

" ಬಿ. ಫ್ರಾಂಕ್ಲಿನ್."

ನನಗೆ ಜನರಲನಿಂದ ಸುಮಾರು ಎಂಟು ನೂರು ಪೌಂಡುಗಳು ವಾಗೀನು ಮಾಲಿಕರು ಮೊದಲಾದವರಿಗೆ ಮುಂಗಡ ಹಣ ಕೊಡಲು ದೊರೆ ತವು. ಆದರೆ ಆ ಮೊಬಲಗು ಕಡಿಮೆ ಬಿದ್ದ ಮೂಲಕ ಅದಕ್ಕಿಂತಲೂ ಇನ್ನೂರು ಪೌಂಡುಗಳನ್ನು ಹೆಚ್ಚು ನಾನು ಮುಂಗಡ ಕೊಟ್ಟೆನು, ಮತ್ತು ಎರಡು ವಾರಗಳಲ್ಲಿ ನೂರಐವತ್ತು ವಾಗೀನುಗಳು ಎರಡು ನೂರ ಐವತ್ತೊಂ ಬತ್ತು ಕುದುರೆಗಳೊಂದಿಗೆ ಶಿಬಿರದತ್ತ ಸಾಗುತ್ತಿದ್ದವು. ಯಾವುದಾದರೂ ವಾಗೀನು ಅಥವಾ ಕುದುರೆಯು ನಷ್ಟವಾದ ಪ್ರಸಂಗದಲ್ಲಿ ಕಟ್ಟದ ಬೆಲೆ

ಗುನುಗುಣವಾಗಿ ಕ್ರಯವು ಕೊಡಲಾಗುವುದೆಂದು ಜಾಹೀರಾತಿನಲ್ಲಿ ವಚನ ವಿತ್ತಾಗಿತ್ತು. ಮಾಲೀಕರು ತಮಗೆ ಜನರಲ್ ಬ್ರೆಡ್ಡೋಕನ ಪರಿಚಯು ವಿಲ್ಲೆಂದು ಅಥವಾ ಅವನ ವಚನದ ಬಗ್ಗೆ ಯಾವ ಆಧಾರವಿದೆಯೆಂದು ನೆವ ಹೇಳಲಿಕ್ಕೆ ಹತ್ತಿದ್ದರು. ಈ ವಿಷಯದಲ್ಲಿ ನನ್ನ ದಸ್ತಾವೇಜಿ (bond)ಗೆ ಒತ್ತಾಯಪಡಿಸಿದರು, ನಾನು ಅದೇ ಪ್ರಕಾರ ಅವರಿಗೆ ಅದನ್ನು ಕೊಟ್ಟ ದಾಯಿತು.

ನಾನು ಶಿಬಿರದಲ್ಲಿದ್ದಾಗ, ಒಂದು ದಿನ ಸಂಜೆ ಕರ್ನಲ್ ಡನ್‌ಬಾರನ ದಂಡಿನ ಆಫೀಸರುಗಳ ಜೊತೆಯಲ್ಲಿ ರಾತ್ರಿಯೂಟ ಮಾಡುತ್ತಿರುವಾಗ ಅವನು ತನ್ನ ಕೈಕೆಳಗಿನವರ ವಿಷಯವನ್ನು ನನಗೆ ಹೇಳಿದನು. ಅವರು ಸಾಮಾನ್ಯವಾಗಿ ಸಂಪತ್ತುಳ್ಳವರಲ್ಲ, ಮತ್ತು ಈ ತುಟಾಗ್ರತೆಯ ದೇಶದಲ್ಲಿ— ಬಹಳ ದೀರ್ಘ ಪ್ರವಾಸಮಾಡಲಿಕ್ಕೆ ಬೇಕಾದ ಸಾಹಿತ್ಯ-ಸಾಮುಗ್ರಿಗಳಿರುವ ಉಗ್ರಾಣದಲ್ಲಿ ಅವರು ಕೆಟ್ಟ ರೀತಿಯಿಂದ ವರ್ತಿಸಬಹುದು. ಕಾಡಿನ ಮಧ್ಯ ದಿಂದ ನಾಗಬೇಕಾದುದರಿಂದ ಅಲ್ಲಿ ಏನನ್ನು ಕೊಂಡುಕೊಳ್ಳಲಿಕ್ಕೆ ಆಸ್ಪದ ವಿರುವುದಿಲ್ಲವೆಂದು ನನಗೆ ಹೇಳಿದನು. ಅವರ ವಿಷಯದ ಬಗ್ಗೆ ನಾನು ಕನಿ ಕರಪಟ್ಟೆನು, ಮತ್ತು ಅವರಿಗೆ ಸ್ವಲ್ಪ ಸುಖವನ್ನು ದೊರಕಿಸಿಕೊಡಲು ಪ್ರಯ ತ್ನಿಸಬೇಕೆಂದು ನಿರ್ಧರಿಸಿದೆನು. ನನ್ನ ಮನೋಗತದ ಬಗ್ಗೆ ಮಾತ್ರ ಅವನಿಗೆ ಏನನ್ನೂ ಹೇಳಲಿಲ್ಲ. ಆದರೆ ಮರುದಿನ ಬೆಳಿಗ್ಗೆ ಅಸೆಂಬ್ಲಿಗೆ ಬಹಳ ಕನಿಕರ ದಿಂದ ಈ ಅಧಿಕಾರಿಗಳ ಅವಸ್ಥೆಯನ್ನು ಶಿಫಾರಸುಮಾಡಿ ಅವರ ಕಾಳಜಿ ತೆಗೆದುಕೊಳ್ಳುವಂತೆ ಬರೆದೆನು. ಸಮಿತಿಯ ಕೈಯಲ್ಲಿ ಸಾರ್ವಜನಿಕ ಹಣ ಸ್ವಲ್ಪವಿತ್ತು. ಮತ್ತು ಅವರಿಗೆ ನಿತ್ಯಉಪಯೋಗದ ವಸ್ತುಗಳ ಮತ್ತು ಖಾದ್ಯ ಪದಾರ್ಥಗಳ ಬಹುಮಾನವೊಂದನ್ನು ಕಳುಹಿಸಬೇಕೆಂದು ಸೂಚಿಸಿ ದ್ದೆನು. ಶಿಬಿರ ಜೀವನದ ಹಾಗೂ ಅದರ ಆವಶ್ಯಕತೆಗಳ ಬಗ್ಗೆ ಸ್ವಲ್ಪ ಅನು ಭವವಿದ್ದ ನನ್ನ ಮಗನು ನನಗಾಗಿ ಒಂದು ಯಾದಿಯನ್ನು ರಚಿಸಿದನು. ಅದನ್ನು ನನ್ನ ಪತ್ರದ ಸಂಗಡ ಸೇರಿಸಿದೆನು. ಸಮಿತಿಯು ಅದನ್ನು ಮಂಜೂರು ಮಾಡಿತು. ನಿಶ್ಚಲ ಪ್ರಯತ್ನ ಮಾಡಿ, ನನ್ನ ಮಗನ ಉಸ್ತುವಾರಿಯಲ್ಲಿ— ಶಿಬಿರಕ್ಕೆ ವಾಗೀನುಗಳು ಬಂದು ಸೇರಿದೊಡನೆ ಉಗ್ರಾಣ (store) ಗಳೂ ಬಂದು ತಲಪಿದವು. ಅವುಗಳಲ್ಲಿ ಇಪ್ಪತ್ತು ಕಟ್ಟುಗಳಿದ್ದವು (Parcels). ಪ್ರತಿಯೊಂದರಲ್ಲಿ ಕೆಳಗಿನಂತೆ ವಸ್ತುಗಳಿದ್ದವು—

೬ ಪೌಂಡು ರೊಟ್ಟಿ ಸಕ್ಕರೆ.

೬ ಪೌಂಡು ಮಸ್ಕೊವಾಡೊ do

೧ ಪೌಂಡು ಉತ್ತಮ ಹಸುರು ಚಹಾ.
೧ ಪೌಂಡು ಬೊಹಿಯಾ do.
೬ ಪೌಂಡು ಉತ್ತಮ ಕಾಫಿ ಹುಡಿ.
೬ ಪೌಂಡು ಚಾಕಲೇಟ.
೧-೨ Cwt. ಉತ್ತಮ ಬಿಳಿ ಬಿಸ್ಕೀಟು.
೧-೨ ಪೌಂಡು ಮೆಣಸು.
೧ ಕ್ವಾರ್ಟ ಉತ್ತಮ ಬಿಳಿ ಮದಿರಾ ಹುಳಿರಸ.
೧ ಗ್ಲೋಸೆಸ್ಟರ್ ಹಾಲುಗೆಡ್ಡೆ.
೧ ೨೦ ಪೌಂಡುಗಳ ಉತ್ತಮ ಬೆಣ್ಣೆಯಿರುವ ಸಣ್ಣ ಪಿಪಾಯಿ.
೨ ಡಜನ್ ಹಳೆಯ ಮದಿಯರಾ ವೈನ್.
೨ ಗ್ಯಾಲನ್ ಜಮೈಕಾ ಸ್ಪಿರಿಟ್.
೧ ಬಾಟ್ಲಿ ಸಾಸಿವೆಯ ಪುಡಿ.
೨ ಚೆನ್ನಾಗಿ ಕರಿದ ಪ್ರಾಣಿಯ ತೊಡೆಗಳು.
೧-೨ ಡಜನ್ ಒಣಗಿದ ನಾಲಗೆಗಳು.
೬ ಪೌಂಡು ಅಕ್ಕಿ.
೬ ಪೌಂಡು ಒಣದ್ರಾಕ್ಷೆ.

ಈ ಇಪ್ಪತ್ತು ಕಟ್ಟುಗಳನ್ನು ಇಪ್ಪತ್ತು ಕುದುರೆಗಳ ಮೇಲೆ ಹೊರಿಸಲಾಗಿತ್ತು. ಪ್ರತಿಯೊಂದು ಕಟ್ಟನ್ನು ಕುದುರೆಯೊಡನೆ ಒಬ್ಬ ಅಧಿಕಾರಿಗೆ ಬಹುಮಾನವಾಗಿ ಕೊಡುವುದಾಗಿತ್ತು. ಇವುಗಳನ್ನು ಬಹಳ ಆದರದಿಂದ ಪಡಕೊಳ್ಳಲಾಯಿತು. ಅಂತೇ ಎರಡೂ ದಂಡುಗಳ ಕರ್ನಲುಗಳಿಂದ ಅತ್ಯಂತ ವಿಶ್ವಾಸಪೂರ್ವಕ ಪದಗಳಿಂದ ನನಗೆ ಕಾಗದಗಳ ಮೂಲಕ ಉಪಕಾರಸ್ಮರಣೆಯನ್ನು ತಿಳಿಸಲಾಯಿತು. ಜನರಲ್‌ನು ಕೂಡಾ ಅವನಿಗೆ ವಾಗೀನು ಮೊದಲಾದವುಗಳನ್ನು ದೊರಕಿಸಿ ಕೊಡುವುದರಲ್ಲಿ ನಾನು ಮಾಡಿದ ಕೆಲಸದಿಂದಾಗಿ ಬಹಳ ತೃಪ್ತಗೊಂಡಿದ್ದನು. ಉಪಕಾರ ಸ್ಮರಣೆ ಮಾಡಮಾಡುತ್ತ ಅವನು ಸಂತೋಷದಿಂದ ನಾನು ವಿತರಣೆಗೆ ಬಳಸಿದ ಹಣವನ್ನು ನನಗೆ ಸಲ್ಲಿಸಿದನು. ಅಂತೇ ಅವನ ಜೊತೆಗೆ ಆಹಾರ ಸಾಮಗ್ರಿಗಳನ್ನು ಕಳುಹಿಸುವುದರಲ್ಲಿ ನನ್ನ ಮುಂದಿನ ಸಹಾಯವನ್ನೂ ವಿನಂತಿಸಿದ್ದಾಯಿತು. ನಾನು ಇದನ್ನು ಕೂಡಾ ಕೈಕೊಂಡೆನು ಮತ್ತು ಬಹಳ ತ್ವರಿತದಿಂದ ಅವನ ಸೋಲನ್ನು ನಾವು ಕೇಳುವತನಕ ಈ ಕಾರ್ಯಕ್ಕಾಗಿ ನನ್ನ ಸ್ವಂತದ ಹಣವನ್ನೆ ಮುಂಗಡ ಕೊಡುತ್ತ ಒಂದು ಸಾವಿರಕ್ಕಿಂತ

ಮೇಲ್ಪಟ್ಟು ಪೌಂಡು ಸ್ಟರ್ಲಿಂಗನ್ನು ವೆಚ್ಚಮಾಡಿ ಅದರಲ್ಲಿ ತೊಡಗಿದ್ದಾಯಿತು. ಇದರ ಲೆಕ್ಕವನ್ನು ನಾನು ಅವನಿಗೆ ಕಳುಹಿಸಿದ್ದೆನು. ಅದು ಅವನ ಕೈಗೆ ಹೋಯಿತು. ಸುದೈವದಿಂದ ನನಗೆ-ಯುದ್ಧದ ಕೆಲ ದಿವಸಗಳ ಮೊದಲು-ಆಕೂಡಲೆ ಅವನು ಸಂಬಳ ಬಟವಾಡೆಯ ಅಧಿಕಾರಿಗೆ ಒಂದು ಆಜ್ಞೆಯನ್ನು ಕಳುಹಿಸಿ, ಒಂದು ಸಾವಿರ ಪೌಂಡುಗಳ ದುಂಡು ಸಂಖ್ಯೆಯ ಮೊಬಲಗನ್ನು-ಉಳಿದುದನ್ನು ಮುಂದಿನ ಲೆಕ್ಕಾಚಾರಕ್ಕೆ ಬಿಟ್ಟುಕೊಟ್ಟು-ಸಂದಾಯ ಮಾಡಿದನು. ಆ ಉಳಿದ ಲೆಕ್ಕವನ್ನು ಆ ತರುವಾಯ ಮತ್ತೆಂದೂ ನನ್ನಿಂದ ಪಡೆಯಲಿಕ್ಕೆ ಸಾಧ್ಯವಾಗದ ಮೂಲಕ ನಾನು ಈ ಮೊಬಲಗನ್ನು ಸುದೈವವೆಂದೇ ಪರಿಗಣಿಸುತ್ತೇನೆ.

ಈ ಜನರಲನು ಒಬ್ಬ ಚತುರ ಮನುಷ್ಯನೆಂದು ನಾನು ಬಗೆದಿದ್ದೇನೆ ಮತ್ತು ಬಹುಶಃ ಯಾವುದಾದರೂ ಯುರೋಪಿಯನ್ ಯುದ್ಧದಲ್ಲಿ ಉತ್ತಮ ಅಧಿಕಾರಿಯೆಂದು ಖ್ಯಾತಿಯನ್ನು ಪಡೆಯಬಹುದಾಗಿತ್ತು. ಆದರೆ ಅವನಲ್ಲಿ ಮಿತಿಮೀರಿದ ಆತ್ಮವಿಶ್ವಾಸವಿತ್ತು ಮತ್ತು ನಿಯಮಿತ ಸೈನ್ಯದ ಸ್ಥಿರತೆಯ ಬಗ್ಗೆ ಅತಿ ದೊಡ್ಡ ಅಭಿಪ್ರಾಯ ಹಾಗೂ ಅಮೇರಿಕನ್ ಮತ್ತು ಇಂಡಿಯನರ ವಿಷಯದಲ್ಲಿ ಬಹಳ ಅಲ್ಪವಾದ ಭಾವನೆಯೂ ಅವನಲ್ಲಿತ್ತು. ನಮ್ಮ ಇಂಡಿಯನ್ ದುಬಾಸಿಯಾದ ಜೋರ್ಜ ಕ್ರೊಹಾನನು ಅವನಲ್ಲಿಯ ನೂರು ಜನರ ಸಂಗಡ ಬಂದು ದಂಡಯಾತ್ರೆಯಲ್ಲಿ ಸೇರಿದನು. ಒಂದುವೇಳೆ ಅವನು ಅವರನ್ನೆಲ್ಲ ಪ್ರೇಮದಿಂದ ನಡೆಸಿಕೊಂಡಿದ್ದರೆ ಅವನ ಸೈನ್ಯಕ್ಕೆ ಅವರು ಸಹಾಯಕರು ಸ್ಕಾಟ್ಸ್-ಇತ್ಯಾದಿಗಳಾಗಿ ಬಹಳ ಉಪಯೋಗ ಬೀಳುತ್ತಿದ್ದರು. ಆದರೆ ಅವನು ಅವರನ್ನು ಕೀಳುಗಳೆದು ತಿರಸ್ಕರಿಸಿದನು. ಅಂತೇ ಅವರು ಕ್ರಮೇಣ ಅವನನ್ನು ಬಿಟ್ಟು ತೊಲಗಿದರು.

ಅವನೊಡನೆ ಒಂದು ದಿನ ಸಂಭಾಷಣೆ ಗೈಯುತ್ತಿದ್ದಾಗ ಅವನು ತನ್ನ ಉದ್ದಿಷ್ಟ ಮುನ್ನಡೆಯ ಬಗ್ಗೆ ಕೆಲ ವಿವರವನ್ನು ಕೊಡುತ್ತಿದ್ದನು. "ಫೋರ್ಟ ಡ್ಯುಕ್ವೆಸ್‌ನ್ನು ಕೈವಶ ಮಾಡಿಕೊಂಡನಂತರ ನಾನು ನಾಯ್ಗರಾಕ್ಕೆ ಮುಂದುವರಿಯಬೇಕು. ಮತ್ತು, ಅದನ್ನು ಪಡೆದ ಮೇಲೆ, ಫ್ರೊಂಟಿನ್ಯಾಕಿಗೆ ನಡೆಯುವುದು—ಕಾಲವು ಸಮಯವನ್ನು ದೊರಕಿಸಿಕೊಟ್ಟರೆ; ಹಾಗೆ ಕೊಡುತ್ತದೆಂದು ನನಗೆನಿಸುತ್ತದೆ, ಯಾಕಂದರೆ ಡ್ಯುಕ್ವೆಸ್ ಮೂರು ಅಥವಾ ನಾಲ್ಕು ದಿವಸಗಳಿಗಿಂತ ಹೆಚ್ಚು ಕಾಲ ನನ್ನನ್ನು ನಿಲ್ಲಿಸುವುದಿಲ್ಲ; ಆ ಮೇಲೆ ನನ್ನ ನಾಯ್ಗರಾ ದಂಡಯಾತ್ರೆಗೆ ಯಾವುದೂ ಅಡ್ಡ ಬರುವುದು ನನಗೆ ಕಾಣಿಸುವುದಿಲ್ಲ." ಎಂದು ಅವನು ಹೇಳಿದನು. ಅವನ ಸೈನ್ಯವು ಸಾಗಲೇ

ಬೇಕಾಗಿದ್ದ, ಬಹಳ ಇಕ್ಕಟ್ಟಾದ, ಅವರಿಗಾಗಿ ಕಾಡು ಮೇಡುಗಳನ್ನು ಕಡಿದು ಮಾಡಿದ, ಮಾರ್ಗದ ಪ್ರದೀರ್ಘತೆಯನ್ನು ಮೊದಲೇ ಮನಸ್ಸಿನಲ್ಲಿ ಕಂಡುಕೊಂಡು; ಮತ್ತು ಇರೋಕ್ವಿಸ್ ದೇಶಕ್ಕೆ ದಾಳಿಮಾಡಿದ ಹದಿನೈದು ನೂರು ಫ್ರೆಂಚರ ಈ ಹಿಂದಿನ ಸೋಲನ್ನು ಓದಿರುವುದು ಕೂಡಾ ನೆನಪಿಗೆ ತಂದುಕೊಂಡು; ನಾನು ಕೆಲ ಸಂಶಯಗಳನ್ನು ಮತ್ತು ತುಸು ಹೆದರಿಕೆಯನ್ನು ದಂಡಯಾತ್ರೆಯ ಪ್ರಸಂಗದ ಕುರಿತು ಗ್ರಹಿಸಿಕೊಂಡಿದ್ದೆನು. "ಮಾನ್ಯನೆ, ಖಂಡಿತವಾಗಿಯೂ ಹೇಳಬೇಕಾದರೆ, ನೀನು ಡ್ಯುಕ್ವೆನ್‌ದ ಮುಂದೆ ಯುದ್ಧಾಸ್ತ್ರಗಳಿಂದ ಉತ್ತಮ ರೀತಿಯಲ್ಲಿ ಸಜ್ಜುಗೊಂಡಿರುವ ಈ ಉಚ್ಚ ಸೈನ್ಯಗಳೊಂದಿಗೆ ತಲಪಿದ್ದಾದರೆ,—ಆ ಸ್ಥಳವೂ ಇನ್ನೂ ವರೆಗೆ ಸಂಪೂರ್ಣವಾಗಿ ಬಲಕಾಯಿಸಲ್ಪಡಲಿಲ್ಲ ನಾವು ಕೇಳಿದ ಹಾಗೆ—ಯಾವ ಬಲವಾದ ದುರ್ಗರಕ್ಷಕರು ಕೂಡ ಬಹುಶಃ ಬಹಳ ಅಲ್ಪ ಕಾಲದ ರಕ್ಷಣೆಯನ್ನು ನೋಡಿಕೊಳ್ಳಬಹುದು. ನಿನ್ನ ದಂಡಯಾತ್ರೆಗೆ ಉಂಟಾಗ ಬಹುದಾದ ಅಪಾಯದ ಏಕಮಾತ್ರ ಅಡ್ಡಿಯನ್ನು ನಾನು ಕಲ್ಪಿಸಿದುದೆಂದರೆ ಇಂಡಿಯನ್ನರ ಹೊಂಚು ಹಾಕಿ ಕುಳಿತ ಗುಂಪುಗಳದ್ದು, ಸತತ ಅಭ್ಯಾಸದಿಂದ ಅವರು ಹಾಗೆ ಹೊಂಚು ಹಾಕಿ ದಾಳಿ ಮಾಡುವುದರಲ್ಲಿ ಚತುರರಾಗಿದ್ದಾರೆ. ಮತ್ತು ಸುಮಾರು ನಾಲ್ಕು ಮೈಲು ಉದ್ದದ ಇಕ್ಕಟ್ಟಿನ ಮಾರ್ಗದ,—ಇದನ್ನು ನಿನ್ನ ಸೈನ್ಯವು ತಯಾರಿಸಲೇ ಬೇಕು,—ಪಕ್ಕಗಳಲ್ಲಿ ಆಕಸ್ಮಾತ್ತಾಗಿ ದಾಳಿಗೆ ಎಡೆ ದೊರೆಯಲ್ಪಡಬಹುದು. ಅಂತೇ ಒಂದು ದಾರವನ್ನು ಹಲವು ತುಂಡುಗಳಾಗಿ ಮಾಡಿದಂತಿರುವ—ಈ ಅಂತರದ ಮೂಲಕ ಒಬ್ಬರಿಗೊಬ್ಬರು ಸಹಾಯ ಮಾಡಲು ಯೋಗ್ಯ ಹೊತ್ತಿಗೆ ಮೇಲೆ ಬಾರದಂತಾಗುವುದು." ಎಂದಿಷ್ಟೆ ಹೇಳಲು ನಾನು ಧೈರ್ಯ ಮಾಡಿದೆನು.

ಅವನು ನನ್ನ ಅಜ್ಞಾನದ ಬಗ್ಗೆ ನಕ್ಕನು, ಮತ್ತು "ಈ ಅನಾಗರಿಕರು ನಿಮ್ಮ ಕಚ್ಚಾ ಅಮೇರಿಕನ್ ಸೈನ್ಯ ಪಡೆಗೆ ಭಯಂಕರ ವೈರಿಗಳಾಗಬಹುದು ಮಾತ್ರ, ಆದರೆ ಮಹರಾಯನೆ, ರಾಜನ ನಿಯಮಿತ ಹಾಗೂ ಶಿಸ್ತಿನ ಸೈನ್ಯ ಪಡೆಯವರ ಮುಂದೆ ಅವರು ಏನಾದರೂ ವಿಶೇಷ ಕೃತ್ಯ ಮಾಡುವುದು ಅಸಾಧ್ಯವಾಗಿದೆ." ಎಂದು ಉತ್ತರಿಸಿದನು. ಸೈನ್ಯದ ಮನುಷ್ಯನೊಡನೆ ಅವನ ಉದ್ಯೋಗದ ವಿಷಯದಲ್ಲಿ ವಾದಿಸುವುದರ ಅಯುಕ್ತತೆಯ ಬಗ್ಗೆ ನಾನು ಎಚ್ಚರವಾಗಿದ್ದೆನು ಮತ್ತು ಯಾವ ಮಾತನ್ನೂ ನಂತರ ಹೇಳಲಿಲ್ಲ. ಏನೇ ಆಗಲಿ, ವೈರಿಗಳು ನಾನು ಸಂಶಯ ವ್ಯಕ್ತಪಡಿಸಿದಂತೆ ಅವರ ಬಲಗಳಿಗೆ ತೆರೆಬಿಡಲ್ಪಟ್ಟ ದೀರ್ಘ ಪ್ರವಾಸದ ಮಾರ್ಗದ

ಲಾಭವನ್ನೇನೋ ಪಡೆಯಲಿಲ್ಲ. ಆದರೆ ಸ್ಥಳದ ಒಂಬತ್ತು ಮೈಲುಗಳ ಅಂತರದಲ್ಲಿ ಬರುವವರೆಗೆ ಯಾವ ಅಡೆತಡೆಗಳಿಲ್ಲದೆ ಅವುಗಳನ್ನು ಸಾಗ ಬಿಟ್ಟರು. ಆಮೇಲೆ ಅವರೆಲ್ಲ ಹೆಚ್ಚಾಗಿ ಒಂದೆಡೆ ಸೇರಿದಾಗ (ಯಾಕಂದರೆ ಅವರಲ್ಲ ಅದೇ ಆಗ ಒಂದು ನದಿಯನ್ನು ದಾಟಿದ್ದರು, ಅಲ್ಲಿಎಲ್ಲರೂ ಬರುವ ತನಕ ಸೈನ್ಯವು ತಂಗಿತ್ತು), ಮತ್ತು ಅದು ಸಾಗಿರುವ ಎಲ್ಲ ಭಾಗಗಳಿಗಿಂತ ಹೆಚ್ಚು ವಿಶಾಲವಾದ ಬಯಲು ಅಡವಿಯ ಭಾಗದಲ್ಲಿ, ಮುಂದೆ ಹೋಗಿ ರುವ ಅದರ ರಕ್ಷಕನ ಮೇಲೆ–ಮರಗಿಡ–ಪೊದರುಗಳ ಹಿಂದಿನಿಂದ ಭೀಕರ ಅಗ್ನಿಯನ್ನು ಎಬ್ಬಿಸಿ ದಾಳಿ ಮಾಡಿದರು. ವೈರಿಗಳು ಹತ್ತಿರ ಇರುವುದ ರಿಂದ ಜನರಲನ ಅನುಭವಕ್ಕೆ ಬಂದ ಪ್ರಥಮ ಜ್ಞಾನವಾಗಿತ್ತು. ಈ ರಕ್ಷ ಕನು ಅಸ್ಥಿರನಾದ ಮೂಲಕ, ಸೈನ್ಯದ ಸಹಾಯಕ್ಕಾಗಿ ಜನರಲನು ಧಾವಿಸಿ ದನು. ಇದು ವಾಗೀನು, ಗಂಟು-ಮೂಟೆ ಮತ್ತು ಕುದುರೆಗಳ ಮಧ್ಯದಲ್ಲಿ ಬಹಳ ಗೊಂದಲದಿಂದ ನಡೆಯಿತು; ಇತ್ತ ಅದೇ ಕ್ಷಣಕ್ಕೆ ಅವರ ಬದಿಯಲ್ಲಿ ಅಗ್ನಿ ಬಂದಿತು: ಅಧಿಕಾರಿಗಳೆಲ್ಲ ಕುದುರೆಗಳ ಮೇಲಿದ್ದುದರಿಂದ ಬಹಳ ಸುಲಭದಿಂದ ಬೇರ್ಪಡಿಸಲ್ಪಡುತ್ತಿದ್ದರು, ಮತ್ತು ಗುರುತಿನ ಚಿಹ್ನೆಗಳಂತೆ ಇರಿಯಲ್ಪಟ್ಟರು ಮತ್ತು ಕೂಡಲೆ ಧರೆಗೆ ಉರುಳಿ ಬಿದ್ದರು! ಮತ್ತು ಅಡ್ಡಾ ದಿಡ್ಡಿಯಾಗಿ ಸೈನಿಕರೆಲ್ಲ ಯಾವ ಆಜ್ಞೆಯನ್ನು ಕೇಳದೆ ಅಥವಾ ಆಜ್ಞೆಯೇ ಇಲ್ಲದೆ ಒಂದೆಡೆ ಗುಂಪುಕಟ್ಟಿದರು, ಮತ್ತು ಅವರಲ್ಲಿ ಮೂರನೆಯ ಎರಡ ರಷ್ಟು ಜನರು ಸಾಯುವವರೆಗೆ ನಿಂತಲ್ಲೆ ಗುಂಡು ಹೊಡೆಯಲ್ಪಟ್ಟರು; ನಂತರ ಒಂದು ಆಕಸ್ಮಿಕ ಭಯದಿಂದ ಗಾಬರಿಗೊಂಡು ಎಲ್ಲರೂ ಅವಸರ ಪಟ್ಟುಕೊಂಡು ಹಾರಿ ಓಡಿದರು.

ವಾಗೀನಿನ ಸಾರಥಿಗಳು ತಮ್ಮ ಜೋಡಿನಿಂದ ಪ್ರತಿಯೊಬ್ಬರೂ ಒಂದೊಂದು ಕುದುರೆ ತೆಗೆದುಕೊಂಡು ಓಟ ಕಿತ್ತರು; ಅವರ ಉದಾಹರಣೆ ಯನ್ನು ಆ ಕೂಡಲೇ ಬೇರೆಯವರೂ ಅನುಸರಿಸಿದರು; ಹೀಗಾಗಿ ಎಲ್ಲಾ ವಾಗೀನುಗಳನ್ನು ಆಹಾರ ಸಾಮಗ್ರಿಗಳನ್ನು ಶಸ್ತ್ರಾಸ್ತ್ರಗಳನ್ನು ಮತ್ತು ಉಗ್ರಾಣ ಗಳನ್ನು ವೈರಿಗಳ ವಶಕ್ಕೆ ಬಿಟ್ಟುಕೊಟ್ಟಂತಾಯಿತು. ಜನರಲನು ಗಾಯ ಗೊಂಡುದರಿಂದ ಬಹಳ ಕಷ್ಟದಿಂದ ತರಲ್ಪಟ್ಟನು; ಅವನ ಕಾರ್ಯದರ್ಶಿ ಮಿಸ್ಟರ್ ಶಿರ್ಲೆಯು ಅವನ ಬದಿಯಲ್ಲಿ ಸತ್ತುಬಿದ್ದಿದ್ದನು. ಮತ್ತು ಎಂಬ ತ್ತಾರು ಆಫೀಸರುಗಳ ಪೈಕಿ ಅರುವತ್ತಮೂರು ಮಂದಿ ಕೊಲ್ಲಲ್ಪಟ್ಟದ್ದರು ಅಥವಾ ಗಾಯಗೊಂಡಿದ್ದರು ಹಾಗೂ ಹನ್ನೊಂದು ನೂರು ಜನರಲ್ಲ ಏಳು ನೂರ ಹದಿನಾಲ್ಕು ಜನರು ಹತರಾಗಿದ್ದರು. ಈ ಹನ್ನೊಂದ ನೂರು

ಜನರು ಅಖಂಡ ಸೈನ್ಯದಿಂದ ಆಯ್ದು ತೆಗೆದ ಮುಂದಿಯಾಗಿದ್ದರು; ಈ ಉಳಿದವರು ಕರ್ನಲ್ ಡನ್‌ಬಾರನ ಜೊತೆಗೆ ಹಿಂದೆ ಉಳಿದಿದ್ದರು; ಅವನು ಭಾರವಾದ ಉಗ್ರಾಣದ ಸಾಹಿತ್ಯ ಸಾಮಗ್ರಿ, ಆಹಾರ ವಸ್ತು ಮತ್ತು-ಗಂಟು ಮೂಟೆಗಳ ಜೊತೆಗೆ ಬರತಕ್ಕವನಿದ್ದನು. ಫ್ಲೈಯರುಗಳು (flyers) ಹಿಂಬಾಲಿಸಿದೆ ಇದ್ದುದರಿಂದ ಡನ್‌ಬಾರನ ಶಿಬಿರಕ್ಕೆ ಬಂದು ತಲಪಿದರು, ಮತ್ತು ಅವರು ತಮ್ಮ ಸಂಗಡ ತಂದ ಆಕಸ್ಮಿಕ ಬೆದರಿಕೆಯು ಅವನನ್ನು ಮತ್ತು ಅವನ ಜನರನ್ನು ತಕ್ಷಣ ಎದೆ ಒಡೆಯುವಂತೆ ಮಾಡಿತು. ಅಂತೇ ಅವನ ಸಂಗಡ ಈಗ ಒಂದು ಸಾವಿರಕ್ಕಿಂತ ಹೆಚ್ಚು ಜನರು ಇದ್ದರೂ ಕೂಡ —ಮತ್ತು ಬ್ರೆಡ್ಡೋಕನನ್ನು ಸೋಲಿಸಿದ ವೈರಿಗಳು ಬಹಳ ಮಾಡಿ ಇಂಡಿಯನ್‌ರು ಮತ್ತು ಫ್ರೆಂಚರು ಒಟ್ಟಿಗೆ ನಾಲ್ಕು ನೂರಕ್ಕಿಂತ ಹೆಚ್ಚಾಗಲಿಕ್ಕಿಲ್ಲ,— ಕಳೆದ ಗೌರವವನ್ನು ಸ್ವಲ್ಪವಾದರೂ ಪಡೆಯಲು ಮುಂದೆ ಸಾಗಿ ಪ್ರಯತ್ನಿಸುವುದರ ಬದಲು, ಅವನು ಎಲ್ಲಾ ಉಗ್ರಾಣ, ಮದ್ದು-ಗುಂಡು , ಇತ್ಯಾದಿಗಳನ್ನೆಲ್ಲ ನಾಶಪಡಿಸಲು ಆಜ್ಞೆಮಾಡಿದನು. ಯಾಕಂದರೆ, ರಾಣಿಯತ್ತ ಪಲಾಯನ ಹೂಡುವಾಗ ಅವನಿಗೆ ಸಹಕರಿಸಲು ಹೆಚ್ಚು ಕುದುರೆಗಳು ದೊರೆಯಬಹುದಾಗಿತ್ತು. ಅವನಿಗೆ ಅಲ್ಲಿ ವರ್ಜೀನಿಯಾ, ಮೇರಿಲ್ಯಾಂಡ ಮತ್ತು ಪೆನ್ಸಿಲ್ವಾನಿಯಾದ ಗವರ್ನರುಗಳಿಂದ ಗಡಿನಾಡಿನಲ್ಲಿ ಅಲ್ಲಿಯ ನಿವಾಸಿಗಳ ರಕ್ಷಣೆಯ ಸಲುವಾಗಿ ಅವನು ಸೈನ್ಯವಿಡಬೇಕೆಂಬ ವಿನಂತಿಯು ತಲುಪಿತು. ಆದರೆ ಫಿಲಡೆಲ್ಫಿಯಾಕ್ಕೆ ಮುಟ್ಟುವ ತನಕ ಸ್ವತಃ ತಾನೇ ಸುರಕ್ಷಿತವಾಗಿರುವುದನ್ನು ನಂಬದೆ ಅವನು ತನ್ನ ಶೀಘ್ರ ಯಾತ್ರೆಯನ್ನು ಆ ದೇಶದಿಂದ ಮುಂದುವರಿಸಿಯೇ ಬಿಟ್ಟನು. ಫಿಲಡೆಲ್ಫಿಯಾದ ನಿವಾಸಿಗಳು ಅಲ್ಲಿ ಅವನನ್ನು ರಕ್ಷಿಸಬಹುದಾಗಿತ್ತು; ಅಮೆರಿಕನರಾದ ನಮಗೆ ಈ ಎಲ್ಲಾ ವ್ಯವಹಾರವು ಬ್ರಿಟಿಷ್ ನಿಯಮಿತ ದಂಡಿನ ಶಕ್ತಿಯ ಬಗ್ಗೆ ಅತ್ಯುಚ್ಚವಾಗಿದ್ದ ನಮ್ಮ ಭಾವನೆಯು ನಿಶ್ಚಿತವಾದುದಲ್ಲವೆಂಬುದಕ್ಕೆ ಪ್ರಥಮ ಸಂಶಯವನ್ನುಂಟುಮಾಡಿತು

ಅವರ ಪ್ರಥಮ ಯಾತ್ರೆಯಲ್ಲಿ ಕೂಡ, ಅವರು ತಮ್ಮ ಬಂದರಿನಿಂದ ಠಾಣೆಯನ್ನು ದಾಟಿ ಹೋಗಿ ದೂರದವರೆಗೂ ಸಹ ನಿವಾಸಿಗಳನ್ನೆಲ್ಲ ಕೊಳ್ಳೆ ಹೊಡೆದು ಮತ್ತು ಸುಲಿಗೆ ಮಾಡಿ -, ಒಟ್ಟಿನಲ್ಲಿ ಕೆಲ ಬಡ ಸಂಸಾರಗಳನ್ನು ನಾಶಗೊಳಿಸುತ್ತ ಹೋಗುವುದಲ್ಲದೆ ಒಂದು ವೇಳೆ ಅವರು ಎದುರು ನಿಂತರೆ ಅವರ ಮಾನಹಾನಿ ಮಾಡುತ್ತ, ಬೈಯುತ್ತ ಮತ್ತು ಸೆರೆಯಲ್ಲಿ ಹಾಕುತ್ತ ಕೂಡ ಹೋಗಿದ್ದರು. ಇಂಥ ರಕ್ಷಕರ ಮೋಸದಿಂದ ಹೊರಗೆ

ಬರಲು ಇದು ನಮಗೆ ಸಾಕಾಗಿತ್ತು—ಒಂದುವೇಳೆ ನೈಜವಾಗಿಯೂ ರಕ್ಷಕರು ಬೇಕಾಗಿದ್ದಲ್ಲಿ ಮಾತ್ರ. ನಮ್ಮ ಫ್ರೆಂಚ್ ಮಿತ್ರರ ನಡತೆಯು ೧೭೮೧ರಲ್ಲಿ ಅದೆಷ್ಟು ಭಿನ್ನವಾಗಿತ್ತು ! ಅವರು ನಮ್ಮ ದೇಶದ ತೀರ ನಿಬಿಡವಾದ ಜನವಸತಿಯುಳ್ಳ ಭಾಗವಾದ ರೋಡೇ ಐಲ್ಯಾಂಡಿನಿಂದ ವರ್ಜಿನಿಯಾದ ತನಕ, ಏಳುನೂರು ಮೈಲುಗಳಷ್ಟು ಸ್ಥಳದಲ್ಲಿ ದಂಡಯಾತ್ರೆ ಹೋಗುವಾಗ ಒಂದು ಹಂದಿಗಾಗಲಿ, ಒಂದು ಕೋಳಿಮರಿಗಾಗಲಿ ಅಥವಾ ಒಂದು ಸೇಬಿಗಾಗಲಿ ಕೈಹಚ್ಚದೆ ಯಾವ ತರಹದ ಅಲ್ಪ ದೂರು ಕೂಡಾ ಬರುವಂಥ ಪ್ರಸಂಗ ತಂದೊಡ್ಡಿರಲಿಲ್ಲ.

ಶಿಬಿರದಲ್ಲಿ ಜನರಲ್‌ನ ಸಹಾಯಕರಲ್ಲಿ ಒಬ್ಬನಾಗಿದ್ದ ಕ್ಯಾಪ್ಟನ್ ಒರ್ಮೆಯು ಚಿಂತಾಜನಕವಾದ ಬಗೆಯಲ್ಲಿ ಗಾಯಗೊಂಡ ಮೂಲಕ ಅವನ ಸಂಗಡ ತರಲ್ಪಟ್ಟನು. ಅಂತೇ ಆವನ ಮರಣದ ತನಕವೂ ಸಂಗಾತಿಯಾಗಿಯೆ ಉಳಿದನು. ಅವನ ಸಾವು ಕೆಲವೆ ದಿವಸಗಳಲ್ಲಿ ಸಂಭವಿಸಿತ್ತು. ಆತನು ಮೊದಲ ಹಗಲೆಲ್ಲ ಸಂಪೂರ್ಣ ಮೌನವಾಗಿದ್ದನೆಂದು ನನಗೆ ಹೇಳಿದನು, ಮತ್ತು ರಾತ್ರಿಯಲ್ಲಿ, "**ಅದನ್ನು ಯಾರು ಎಣಿಸಬಹುದಾಗಿತ್ತು?**" ಎಂದಿಷ್ಟೆ ಹೇಳಿದನು. ಮುಂದಿನ ಹಗಲೆಲ್ಲ ಅವನು ಪುನಃ ಮೌನವಾಗಿದ್ದನು. ಕಟ್ಟಕಡೆಗೆ, "**ಅವರೊಡನೆ ಹೇಗೆ ಕಾರ್ಯ ನಡೆಸಬೇಕೆಂದು ನಾವು ಮುಂದಿನ ಸಲ ಚೆನ್ನಾಗಿ ತಿಳಿದುಕೊಳ್ಳಬೇಕು.**" ಎಂದು ಮಾತ್ರ ಹೇಳಿ, ಕೆಲ ನಿಮಿಷಗಳ ತರುವಾಯ ಸತ್ತು ಹೋದನು.

ಕಾರ್ಯದರ್ಶಿಯ ಕಾಗದ ಪತ್ರಗಳು, ಜನರಲನ ಎಲ್ಲಾ ಆಜ್ಞೆ, ಸಲಹೆ ಸೂಚನೆ ಮತ್ತು ಪತ್ರ ವ್ಯವಹಾರಗಳೊಂದಿಗೆ— ವೈರಿಯ ಕೈಗೆ ದೊರೆತವು. ಅವರು ಕೆಲವು ಲೇಖನಗಳನ್ನು ಆಯ್ದು ಫ್ರೆಂಚಿನಲ್ಲಿ ಭಾಷಾಂತರಿಸಿ ಯುದ್ಧವು ಸಾರಲ್ಪಡುವ ಮೊದಲು ಬ್ರಿಟಿಷ್ ಕೋರ್ಟಿನ ವೈರ ಭಾವನೆಗಳನ್ನು ಸಿದ್ಧಪಡಿಸಲು ಪ್ರಕಟಗೊಳಿಸಿದರು. ಇವುಗಳಲ್ಲಿ ಕೆಲ ಪತ್ರಗಳನ್ನು, ಮಂತ್ರಿಮಂಡಲಕ್ಕೆ ಜನರಲನು ಬರೆದವುಗಳನ್ನು ನಾನು ನೋಡಿದ್ದೇನೆ. ಅವುಗಳಲ್ಲಿ ನಾನು ಸೈನ್ಯಕ್ಕೆ ಸಲ್ಲಿಸಿದ ಅಪಾರ ಸೇವೆಯ ಕುರಿತು ಉತ್ತಮವಾಗಿ ಬರೆದು ಅವರ ಅವಗಾಹನೆಗಾಗಿ ನನ್ನನ್ನು ಶಿಫಾರಸು ಮಾಡಲಾಗಿತ್ತು. ಡೆವಿಡ್ ಹ್ಯೂಮನು ಕೂಡ, ಕೆಲವು ವರುಷಗಳ ತನಕ ಲಾರ್ಡ ಹಾರ್ಟಫೋರ್ಡನ ಕಾರ್ಯದರ್ಶಿಯಾಗಿದ್ದವನು, ಫ್ರಾನ್ಸಿನಲ್ಲಿ ಎರಡನೆಯವನು ಮಂತ್ರಿಯಾಗಿದ್ದಾಗ; ಮತ್ತು ಆ ತರುವಾಯ ಜನರಲ್ ಕೋನ

ವೇಯು ಸೆಕ್ರೆಟರಿ ಆಫ್ ಸ್ಟೇಟ ಆಗಿದ್ದಾಗ ಅವನ ಕಾರ್ಯದರ್ಶಿಯಾಗಿ ದ್ದಂಥವನು—ಆ ಆಫೀಸಿನಲ್ಲಿ ಕೂಡ ಬ್ರೇಡ್ಡೋಕನು ನನ್ನನ್ನು ತುಂಬಾ ಶಿಫಾರಸು ಮಾಡಿದ ಪತ್ರಗಳನ್ನು ನೋಡಿದ್ದೇನೆಂದು ನನಗೆ ಹೇಳಿದ್ದನು. ಆದರೆ, ದಾಳಿಯೇ ದುರ್ದೈವಕ್ಕೊಳಗಾದ ಮೂಲಕ ನನ್ನ ಸೇವೆಯು ಅಷ್ಟೊಂದು ಘನವಾದದ್ದೆಂದು ಬಗೆಯಲಾಗಲಿಲ್ಲವೆಂದು ಕಾಣುತ್ತದೆ. ಹೀಗಾಗಿ ಆ ಶಿಫಾರಸುಗಳು ಎಂದೂ ನನಗೆ ಯಾವ ಪ್ರಯೋಜನಕ್ಕೂ ಬೀಳಲಿಲ್ಲ.

ಅವನಿಂದಲೇ ಸ್ವತಃ ಬಹುಮಾನವೆಂದು ನಾನು ಕೇವಲ ಒಂದನ್ನು ಮಾತ್ರ ಕೇಳಿದೆನು. ಅದೆಂದರೆ–ಅವನು ತನ್ನ ಆಫೀಸರುಗಳಿಗೆ ಇನ್ನು ಬೆಲೆಗೆ ಪಡೆದ ಸೇವಕರನ್ನು ಭರ್ತಿಮಾಡಿಕೊಳ್ಳಬಾರದೆಂದು ಆಜ್ಞೆ ಮಾಡ ಬೇಕು, ಮತ್ತು ಇಲ್ಲಿಯವರೆಗೆ ಭರ್ತಿಮಾಡಿಕೊಂಡವರನ್ನು ಮುಕ್ತ ಮಾಡ ಬೇಕು. ಇದನ್ನು ಅವನು ಕೂಡಲೆ ದಯಪಾಲಿಸಿದನು ಮತ್ತು ಅದೇ ಪ್ರಕಾರ ಅನೇಕರು ಅವರ ಒಡೆಯರುಗಳಿಗೆ ಹಿಂದೆ ಕೊಡಲ್ಪಟ್ಟರು— ನನ್ನ ಬೇಡಿಕೆಯಂತೆ. ಡನ್‌ಬಾರನಿಗೆ ಆಜ್ಞೆಯನ್ನು ಕಳುಹಿಸಲಾದಾಗ ಅವನು ಅಷ್ಟೊಂದು ಉದಾರಿಯಾಗಿರಲಿಲ್ಲ. ಅವನ ಪರಾವರ್ತನೆಯಲ್ಲಿ ಅಥವಾ ಪಲಾಯನದಲ್ಲಿ ಅವನು ಫಿಲಡೆಲ್ಫಿಯಾದಲ್ಲಿದ್ದ ಮೂಲಕ, ಅವನು ಭರ್ತಿ ಮಾಡಿಕೊಂಡ ಲ್ಯಾಂಕಸ್ಟರ್ ಪರಗಣಿಯ ಮೂವರು ಬಡ ಒಕ್ಕಲಿಗರ ಸೇವಕರನ್ನು ಮುಕ್ತಗೊಳಿಸಲು, ಆ ವಿಷಯದಲ್ಲಿ ಈಗಿನ ಜನರಲನ ಆಜ್ಞೆಯನ್ನು ನೆನಪಿಗೆ ತಂದುಕೊಟ್ಟ ನಾನು ಅವನಿಗೆ ಕೇಳಿಕೊಂಡಿದ್ದೆನು. ಒಡೆಯರುಗಳು ಟ್ರೆಂಟನ್‌ಗೆ ಅವನಿದ್ದಲ್ಲಿಗೆ ಬಂದರೆ, ಅಲ್ಲಿ ಕೆಲ ದಿವಸಗಳಲ್ಲಿ ಅವನ ನ್ಯೂಯಾರ್ಕ ಪ್ರವಾಸದ ಹೊತ್ತಿಗೆ ಅವನು ನಿಲ್ಲುವುದರಿಂದ ಅವರ ಮನುಷ್ಯರನ್ನು ಒಪ್ಪಿಸುವುದಾಗಿ ನನಗೆ ವಚನವಿತ್ತನು. ಅದೇ ಪ್ರಕಾರ ಅವರು ಟ್ರೆಂಟನಿಗೆ ಹೋಗುವ ಖರ್ಚು ಹಾಗೂ ತೊಂದರೆಯನ್ನು ವಹಿಸಿ ಕೊಂಡರು, ಇತ್ತ ಅವರಿಗೆ ಬಹು ದೊಡ್ಡ ನಷ್ಟ ಹಾಗೂ ನಿರಾಸೆಯೊದಗುವ ಹಾಗೆ—ಅವನು ಅಲ್ಲಿ ತನ್ನ ವಚನದಂತೆ ನಡೆಯಲು ನಿರಾಕರಿಸಿದನು.

ವಾಗೀನು ಹಾಗೂ ಕುದುರೆಗಳು ನಷ್ಟವಾದುವೆಂದು ಸಾಮಾನ್ಯ ವಾಗಿ ಎಲ್ಲರಿಗೂ ತಿಳಿದೊಡನೆ ಎಲ್ಲಾ ಮಾಲಿಕರುಗಳು—ಅವರಿಗೆ ಕೊಡುತ್ತೇ ನೆಂದು ಮಾಡಿದ ಬೆಲೆಯ ರಖಮಿಗಾಗಿ–ನಾನು ಬೋಂಡು ಕ್ಕೊಟ್ಟಂತೆ ನನ್ನಲ್ಲಿಗೆ ಬಂದರು. ಅವರ ಬೇಡಿಕೆಗಳು ನನಗೆ ಸಾಕಷ್ಟು ರೀತಿಯ ತೊಂದರೆ ಕೊಟ್ಟವು. ಸಂಬಳ ಬಟವಾಡೆಯ ಅಧಿಕಾರಿಯ ಕೈಯಲ್ಲಿ

ಹಣವು ಸಿದ್ಧವಾಗಿದೆಯೆಂದು ನಾನು ಅವರಿಗೆ ತಿಳಿಯಪಡಿಸುವುದು, ಆದರೆ ಅದನ್ನು ಪಡೆಯುವುದಕ್ಕೆ ಮೊದಲು ಜನರಲ್ ಶಿರ್ಲೆಯಿಂದ ಆಜ್ಞೆ ದೊರಕಿಸಲೇಬೇಕಾಗಿತ್ತು, ಮತ್ತು ಅದಕ್ಕಾಗಿ ನಾನು ಜನರಲನಿಗೆ ಕಾಗದದ ಮೂಲಕ ಕೇಳಿಕೊಂಡಿದ್ದೇನೆಂದು ಅವರಿಗೆ ಖಾತ್ರಿಪಡಿಸುವುದು; ಆದರೆ, ಅವನು ಬಹಳ ದೂರವಿದ್ದ ಕಾರಣ ಉತ್ತರವು ಬೇಗ ದೊರೆಯದಿರುವುದು, ಮತ್ತು ಅವರಿಗೆ ತಾಳ್ಮೆ ಇರಲೇಬೇಕಾದದ್ದು,-ಇಷ್ಟೆಲ್ಲ ತೃಪ್ತಿಗೊಳಿಸುವುದಕ್ಕೆ ಸಾಕಾಗದಿದ್ದುದರಿಂದ ಕೆಲವರು ನನ್ನ ಮೇಲೆ ಖಟ್ಲೆ ಹಾಕಲು ಪ್ರಾರಂಭಿಸಿದರು. ಹಕ್ಕಿನ ಬೇಡಿಕೆಗಳನ್ನು ಪರಿಶೀಲಿಸುವುದಕ್ಕೆ ಮತ್ತು ಹಣ ಸಂದಾಯ ಮಾಡುವುದಕ್ಕೆ ಪ್ರತಿನಿಧಿಗಳನ್ನು ನೇಮಿಸಿ ಜನರಲ್ ಶಿರ್ಲೆಯು ಕಟ್ಟಕಡೆಗೆ ನನ್ನನ್ನು ಈ ಭೀಕರ ಪರಿಸ್ಥಿತಿಯಿಂದ ಪಾರುಗೊಳಿಸಿದನು. ಅದು ಇಪ್ಪತ್ತು ಸಾವಿರ ಪೌಂಡುಗಳ ಹತ್ತಿರ ಬಂದಿತ್ತು, ಇದನ್ನು ಸಂದಾಯ ಮಾಡುವುದೆಂದರೆ ನನ್ನ ಸರ್ವನಾಶವೇ ಆಗಬಹುದಾಗಿತ್ತು.

ಈ ಸೋಲಿನ ಸುದ್ದಿಯು ನಮಗೆ ಬರುವ ಮೊದಲು, ಒಂದು ದೊಡ್ಡ ಬಾಣಬಿರುಸಿನ ಕಾರ್ಯಕ್ರಮದ ವೆಚ್ಚವನ್ನು ಸಂಗ್ರಹಿಸಲು ಚಂದಾ ಕೂಡಿಸುವುಕ್ಕಾಗಿ ಕಾಗದ ಹಿಡಿದುಕೊಂಡು ಇಬ್ಬರು ಡಾಕ್ಟರರ ಬಾಂಡಗಳು ನನ್ನಲ್ಲಿಗೆ ಬಂದರು. ಇದು ನಾವು ಫೋರ್ಟಡ್ಯುಕ್ವೆನ್‌ನ್ನು ಪಡೆದ ಸುದ್ದಿಯನ್ನು ತಿಳಿದೊಡನೆ ಮನೋರಂಜನೆಯಲ್ಲಿ ಅದನ್ನು ತೋರ್ಪಡಿಸುವುದರ ಉದ್ದೇಶದಿಂದ ನಡೆಯಲಿತ್ತು. ನಾನು ಒರಟಾಗಿ ನೋಡಿದೆನು. ನಮಗೆ ಮನೋರಂಜನೆಯನ್ನನುಭವಿಸುವ ಪ್ರಸಂಗವಿದೆಯೆಂದು ನಾವು ತಿಳಿದ ಮೇಲೆ ಅದರ ಸಿದ್ಧತೆಗೆ ಸಾಕಷ್ಟು ಹೊತ್ತಿದೆಯೆಂದು ನಾನು ಹೇಳಿದ್ದೆನೆಂದು ನನಗೆನಿಸುತ್ತದೆ. ಆ ಕೂಡಲೆ ಅವರ ಸೂಚನೆಗೆ ನಾನು ಸಮ್ಮತಿಸದುದರಿಂದ ಅವರು ಅಚ್ಚರಿಗೊಂಡ ಹಾಗೆ ಕಂಡಿತು. "ಯಾಕೆ ಆ ಡು....! ಆ ಕೋಟೆಯು ವಶಪಡಿಸಲಿಕ್ಕಾಗಲಾರದೆಂದು ನೀನು ಖಂಡಿತವಾಗಿಯೂ ಎಣಿಸಿರುವೆಯಾ?" ಎಂದು ಅವರಲ್ಲಿ ಒಬ್ಬನು ಹೇಳಿದನು. "ಅದು ವಶಪಡಿಸಿಕೊಳ್ಳಲಿಕ್ಕಾಗದೆಂಬುದು ನನಗೇನು ಗೊತ್ತಿಲ್ಲ, ಆದರೆ ಯುದ್ಧದ ಪ್ರಸಂಗಗಳು ಅತ್ಯಂತ ಅಸ್ಥಿರವಾದವುಗಳೆಂಬುದು ನನಗೆ ಗೊತ್ತುಂಟು." ನನ್ನ ಸಂಶಯದ ಕಾರಣಗಳನ್ನು ನಾನು ಅವರಿಗೆ ಕೊಟ್ಟೆನು. ಚಂದಾ ಎತ್ತುವುದನ್ನು ನಿಲ್ಲಿಸಿದ್ದಾಯಿತು. ಬಾಣಬಿರುಸಿನ ಕಾರ್ಯಕ್ರಮವನ್ನು ಏರ್ಪಡಿಸಿದ್ದಾಗಿದ್ದರೆ ಆದರಿಂದ ಉಂಟಾಗುವ ಮಾನ

ಭಂಗವನ್ನು ಯೋಜಕರು ತಪ್ಪಿಸಿಕೊಂಡರು. ಅನಂತರ ಯಾವುದೋ ಒಂದು ಪ್ರಸಂಗದಲ್ಲಿ—ಫ್ರಾಂಕ್ಲಿನ್ನನು ಅನಿಷ್ಟ ನುಡಿಯುವುದು ತನಗೆ ಸೇರುವುದಿಲ್ಲವೆಂದು ಡಾ| ಬೋಂಡ್ ಹೇಳಿದ್ದನು.

ಬ್ರೆಡ್ಡೋಕನ ಸೋಲಿನ ಮೊದಲಲ್ಲಿ, ಸಂದೇಶಗಳ ಮೇಲೆ ಸಂದೇಶಗಳನ್ನು ಕಳುಹಿಸಿ ಎಸೆಂಬ್ಲಿಯನ್ನು ಸತತ ತೊಂದರೆಗೀಡುಮಾಡಿದ್ದ ಗವರ್ನರ್ ಮೋರಿಸನು, ಪ್ರಾಂತಗಳ ರಕ್ಷಣೆಯ ಸಲುವಾಗಿ ಮಿಕ್ಕವರ ಸಂಗಡ, ಒಡೆಯರ ಆಸ್ತಿಗಳ ಮೇಲೆ ಕರ ಹಾಕದೆ ಹಣ ಎತ್ತುವ ಕಾಯ್ದೆಗಳನ್ನು ಮಾಡುವುದರಲ್ಲಿ ಅವರನ್ನು ಸೋಲಿಸಬೇಕೆಂದು ಮಾಡಿದ್ದವನು ಮತ್ತು ಆ ಬಗೆಯ ನವಲತ್ತಿನ ಕಲಂ ಇಲ್ಲದ ಮೂಲಕ ಅವರ ಎಲ್ಲಾ ಮಸೂದೆಗಳನ್ನು ತಿರಸ್ಕರಿಸಿದಂಥವನು, ಈಗ ಅಪಾಯ ಹಾಗೂ ಅಗತ್ಯ ಹೆಚ್ಚಾಗಿದ್ದುದರಿಂದ, ಯಶಸ್ಸಿನ ಬಗ್ಗೆ ಬಹಳ ನಿರೀಕ್ಷೆಯಿಟ್ಟುಕೊಂಡು ತನ್ನ ದಾಳಿಯನ್ನು ಇಮ್ಮಡಿಸಿದನು: ಹೇಗಾದರೂ ಕೂಡ ತಮ್ಮ ಪಕ್ಷಕ್ಕೆ ನ್ಯಾಯವುಂಟು ಮತ್ತು ಗವರ್ನರನಿಗೆ ಹಣದ ಮಸೂದೆಗಳನ್ನು ತಿದ್ದಲು ಅಧಿಕಾರ ಕೊಟ್ಟದಾದರೆ ಅಗತ್ಯವಾದ ಒಂದು ಹಕ್ಕನ್ನು ಬಿಟ್ಟುಕೊಟ್ಟಂತಾಗುವುದೆಂದು ನಂಬಿ ಅವರು ಸ್ಥಿರವಾದ ನಿಲುವೆಯನ್ನೆ ಮುಂದುವರಿಸಿದರು. ಹಾಗೆಂದು, ಕೊನೆಯದಾದ ಒಂದರಲ್ಲಿ, ಇದು ಐವತ್ತು ಸಾವಿರ ಪೌಂಡುಗಳನ್ನು ನೀಡುವುದಕ್ಕಾಗಿತ್ತು, ಅವನಿಂದ ಪ್ರಸ್ತಾಪಿಸಲ್ಪಟ್ಟ ತಿದ್ದುಪಾಟು ಕೇವಲ ಒಂದು ಶಬ್ದವು ಮಾತ್ರ ಇದ್ದಿತು. “ಎಲ್ಲಾ ಆಸ್ತಿಗಳು, ಸ್ಥಿರ ಮತ್ತು ಖಾಸಗಿ, ಕರಕ್ಕೆ ಒಳಗಾಗಿ ಒಡೆಯರವುಗಳು ಕೂಡ ಇದರಿಂದ ಹೊರಪಡಿಸಿಲ್ಲ.” ಎಂದು ಆ ಮಸೂದೆ ಹೇಳುತ್ತಿತ್ತು. ಅವನ ತಿದ್ದುಪಾಟು ಓದಲ್ಪಡಲಿಲ್ಲ ಮಾತ್ರ, ಬಹಳ ಚಿಕ್ಕದು ಆದರೆ ಬಹಳ ಮಹತ್ವದ ಬದಲಾವಣೆಯಾಗಿತ್ತು. ಆದರೂ ಕೂಡ, ಈ ಅನರ್ಥದ ಸುದ್ದಿಯು ಇಂಗ್ಲೆಂಡಿಗೆ ತಲಪಿದೊಡನೆ, ಅಲ್ಲಿದ್ದ ನಮ್ಮ ಗೆಳೆಯರು—ಇವರಿಗೆ ಗವರ್ನರನ ಸಂದೇಶಗಳಿಗೆ ಅಸೆಂಬ್ಲಿಯು ಕೊಟ್ಟಿರುವ ಉತ್ತರಗಳ ಕಾಗದ ಪತ್ರಗಳು ತಲುಪುವ ಜಾಗ್ರತೆ ವಹಿಸಿದ್ದೆವು—ಒಡೆಯರ ಮೇಲೆ ಅವರ ಅಲ್ಪತನಕ್ಕಾಗಿ ಮತ್ತು ಅಂಥ ಆಜ್ಞೆಗಳನ್ನು ಅವರ ಗವರ್ನರನಿಗೆ ನೀಡುವ ಅನ್ಯಾಯಕ್ಕಾಗಿ ಅವರ ವಿರುದ್ಧ ತಕರಾರು ಎಬ್ಬಿಸಿದರು. ಅವರ ಪ್ರಾಂತದ ರಕ್ಷಣೆಯ ಬಗ್ಗೆ ಅಡ್ಡಿ ಮಾಡಿದುದರಿಂದ ಅವರು ಅದರ ಬಗ್ಗೆ ತಮಗಿದ್ದ ಹಕ್ಕನ್ನು ಕೂಡ ಕಳೆದುಕೊಂಡರೆಂದು ಹೇಳುವ ತನಕವೂ ಕೆಲವರು ಹೋದರು. ಇದರಿಂದ ಅವರು ಬೆದರಿಹೋದರು, ಮತ್ತು ಅವರ ರಿಸಿ

ವರ್-ಜನರಲ (receiver-general)ನಿಗೆ ಆಜ್ಞೆಯನ್ನು ಕಳುಹಿಸಿ ಐದು ಸಾವಿರ ಪೌಂಡುಗಳನ್ನು ಅಂಥ ಉದ್ದೇಶಕ್ಕಾಗಿ ಅಸೆಂಬ್ಲಿಯು ಕೊಡುವ ಹಣದಲ್ಲಿ ಇದನ್ನು ಸೇರಿಸಲಿಕ್ಕೆ ಹೇಳಿದರು.

ಇದನ್ನು ಸಭೆಗೆ (House) ತಿಳಿಯಪಡಿಸಲಾಯಿತು ಮತ್ತು ಅವರ ಪಾಲಿನ ಸಾರ್ವಜನಿಕ ಕರದ ಬದಲಾಗಿ ಬಂದ ಹಣವೆಂದು ಸ್ವೀಕರಿಸಿಕೊಳ್ಳಲಾಯಿತು, ಮತ್ತು ಒಂದು ಹೊಸ ಮಸೂದೆಯು ಸವಲತ್ತಿನ ಕಲಮಿನ ಜೊತೆಗೆ ಸಿದ್ಧಪಡಿಸಲಾಯಿತು. ಅದೇ ಪ್ರಕಾರ ಅದು ಸ್ವೀಕೃತವಾಯಿತು. ಈ ಕಾರ್ಯದಿಂದ ಅರುವತ್ತು ಸಾವಿರ ಪೌಂಡು ಹಣವನ್ನು ಹಂಚುವ ಸಮಿತಿಯಲ್ಲಿ ಒಬ್ಬ ಸದಸ್ಯನಾಗಿ ಆರಿಸಲ್ಪಟ್ಟೆನು. ಮಸೂದೆಯನ್ನು ರೂಪಿಸುವುದರಲ್ಲಿ ಮತ್ತು ಅದನ್ನು ಸ್ವೀಕೃತ ಪಡಿಸುವುದರಲ್ಲಿ ನಾನು ಚಟುವಟಿಕೆಯನ್ನು ವಹಿಸುತ್ತಾ ಇದ್ದೆನು. ಅದೇ ಕಾಲಕ್ಕೆ ಒಂದು ಐಚ್ಛಿಕ ಪೌರಸೈನ್ಯವನ್ನು ಸ್ಥಾಪಿಸುವ ಹಾಗೂ ಶಿಸ್ತು ಪಡಿಸುವ ಮಸೂದೆಯನ್ನು ಸಿದ್ಧಗೊಳಿಸಿದ್ದೆನು. ಇದನ್ನು ಹೆಚ್ಚಿನ ತೊಂದರೆಯಿಲ್ಲದೆ ನಾನು ಅಸೆಂಬ್ಲಿಯ ಮೂಲಕ ಸ್ವೀಕಾರ ಮಾಡಿದೆನು. ಯಾಕಂದರೆ ಅದರಲ್ಲಿ ಕ್ವಾಕರುಗಳಿಗೆ ಸ್ವತಂತ್ರವಾಗಿ ವರ್ತಿಸಲು ಎಡೆ ಕೊಡುವ ಜಾಗ್ರತೆಯನ್ನು ವಹಿಸಲಾಗಿತ್ತು. ಪೌರಸೈನ್ಯವನ್ನು ಕಟ್ಟುವುದಕ್ಕೋಸ್ಕರ ಸಂಘವನ್ನು ಉನ್ನತಗೊಳಿಸುವುದಕ್ಕಾಗಿ ಅಂಥ ಪೌರಸೈನ್ಯದ ಬಗ್ಗೆ ನನಗೆ ತೋಚಿದ ಎಲ್ಲಾ ತಕರಾರುಗಳಿಗೆ ಉತ್ತರಿಸಿ ವಿವರಿಸುವಂಥ ಒಂದು ಸಂಭಾಷಣೆಯನ್ನು* ಬರೆದೆನು. ಅದನ್ನು ಮುದ್ರಿಸಿದ್ದಾಯಿತು. ನಾನು ಬಗೆದ ಹಾಗೆ ಸಾಕಷ್ಟು ಪರಿಣಾಮವೂ ಆಯಿತು.

ಇತ್ತ ಪಟ್ಟಣ ಹಾಗೂ ಹಳ್ಳಿಗಳಲ್ಲಿ ಅನೇಕ ಕೂಟಗಳು ನಿರ್ಮಾಣಗೊಳ್ಳುತ್ತಿದ್ದು ತಮ್ಮ ಕವಾಯತುಗಳನ್ನು ಕಲಿತುಕೊಳ್ಳುತ್ತಿದ್ದವು. ನಮ್ಮ ವಾಯುವ್ಯ ಗಡಿಯನ್ನು ನನ್ನ ವಶಕ್ಕೆ ತೆಗೆದುಕೊಳ್ಳಲು ಬಿಟ್ಟು ಕೊಟ್ಟನು. ಅದು ವೈರಿಗಳಿಂದ ಆವರಿಸಲ್ಪಟ್ಟಿತ್ತು. ನಿವಾಸಿಗಳ ರಕ್ಷಣೆಯ ಸಲುವಾಗಿ ಸೈನ್ಯವನ್ನು ಕೂಡಿಸುವುದು ಮತ್ತು ಕೋಟೆಯ ಸಾಲುಗಳನ್ನು ನಿರ್ಮಿಸುವುದು ನನಗೆ ಬಿಡಲಾಯಿತು. ಈ ಬಗ್ಗೆ ನಾನು ಉತ್ತಮ ರೀತಿಯಲ್ಲಿ ಅರ್ಹನಾಗಿದ್ದೇನೆಂದು ನನಗನಿಸದಿದ್ದರೂ ಕೂಡ ಈ ಸೈನಿಕ ವ್ಯವಹಾರವನ್ನು ಕೈಕೊಂಡೆನು. ಸಂಪೂರ್ಣ ಅಧಿಕಾರವುಳ್ಳ ಒಂದು ಆಯೋಗವನ್ನು ಅವನು ನನಗೆ ಕೊಟ್ಟನು. ಮತ್ತು ಆಯೋಗದ (Commission) ಕೆಲ ಭಾಗವನ್ನು ಖಾಲಿಯಾಗಿ—ಅದರಲ್ಲಿ ನನಗೆ ಸಮರ್ಥರೆಂದು

ತೋಚಿದ ಅಧಿಕಾರಿಗಳನ್ನು ಸೇರಿಸಿಕೊಳ್ಳಲು—ನನಗೆ ಕೊಟ್ಟನು. ಜನರನ್ನು ತೆಗೆದುಕೊಳ್ಳವುದರಲ್ಲಿ ನನಗೇನು ಅಂಥ ತೊಂದರೆಯೊದಗಿಬರಲಿಲ್ಲ. ಯಾಕಂದರೆ ಐದುನೂರ ನಾಲ್ವತ್ತು ಮಂದಿ ನನ್ನ ಆಜ್ಞೆಯೊಳಗೆ ಬಂದರು. ನನ್ನ ಮಗ, ಹಿಂದಕ್ಕೆ ಕೆನಡಾದ ವಿರುದ್ಧ ನಡೆಸಿದ ಯುದ್ಧದ ಸೈನ್ಯದಲ್ಲಿ ಅಧಿಕಾರಿಯಾಗಿದ್ದವನು, ನನ್ನ ಶಿಬಿರ ಸಹಾಯಕ (aid-de-Camp) ನಾಗಿದ್ದನು. ಮತ್ತು ನನಗೆ ತುಂಬಾ ಉಪಯುಕ್ತನಾಗಿದ್ದನು. ಮೊರೇ ವಿಯನ್ನರು ವಾಸವಾಗಿರುವಂಥ ಗ್ನೆಡನ್ ಹಟ್ ಎಂಬ ಒಂದು ಗ್ರಾಮವನ್ನು ಇಂಡಿಯನ್ನರು ಸುಟ್ಟುಹಾಕಿದ್ದರು ಮತ್ತು ಸಿಪಾಯಿಗಳ ಮೇಲೆ ದಾಳಿ ಮಾಡಿದ್ದರು. ಆದರೆ ಈ ಸ್ಥಳವು ಒಂದು ಕೋಟೆಗೆ ಯೋಗ್ಯವಾದ ಜಾಗ ವೆಂದು ಬಗೆಯಲಾಗಿತ್ತು.

ಅಲ್ಲಿಗೆ ಸಾಗಲು ಕಂಪನಿಗಳನ್ನೆಲ್ಲ ನಾನು ಬೆತ್ಲೆಹೇಮದಲ್ಲಿ ಕೂಡಿಸಿ ದೆನು. ಅದು ಆ ಜನರ ಮುಖ್ಯ ಸ್ಥಾನವಾಗಿತ್ತು. ರಕ್ಷಣೆಗೆ ಅಷ್ಟೊಂದು ಉತ್ತಮವಾದ ಸ್ಥಳವು ಅದೆಂದು ಕಾಣಲು ನಾನು ಅಚ್ಚರಿಗೊಂಡೆನು. ಗ್ನೆಡೆನ್ ಹಟ್‌ದ ವಿನಾಶವು ಅವರೆಲ್ಲರ ಅಪಾಯವನ್ನು ಶಂಕಿಸುವಂತೆ ಮಾಡಿತು. ಪ್ರಮುಖ ಕಟ್ಟಡಗಳು ಒಂದು ಕಟ್ಟಿಗೆಯ ಬೇಲಿಯಿಂದ ರಕ್ಷಿಸಲ್ಪಟ್ಟಿದ್ದವು. ಅವರು ನ್ಯೂಯಾರ್ಕಿನಿಂದ ಒಂದು ನಿರ್ದಿಷ್ಟ ಪ್ರಮಾಣ ದಲ್ಲಿ ಮದ್ದು-ಗುಂಡು ಹಾಗೂ ಶಸ್ತ್ರಾಸ್ತ್ರಗಳನ್ನು ಖರೀದಿ ಮಾಡಿದ್ದರು. ಅದಲ್ಲದೆ ಅವರು ತಮ್ಮ ಮನೆಗಳ ಕಿಟಕಿಗಳ ಹತ್ತಿರ ಸಾಕಷ್ಟು ಪ್ರಮಾಣ ದಲ್ಲಿ ಚಿಕ್ಕ ಪುಟ್ಟ ಮುಚ್ಚಿಕೆಯ (Paving) ಕಲ್ಲುಗಳನ್ನು ಇಟ್ಟಿದ್ದರು. ಇವುಗಳನ್ನು ಯಾವ ಇಂಡಿಯನನಾದರೂ ಅವರ ಮೇಲೆ ಬಲಾತ್ಕಾರ ಮಾಡಲು ಪ್ರಯತ್ನಿಸಿದರೆ ಅವನ ತಲೆಯಮೇಲೆ ಅವರ ಹೆಂಗಸರು ಬಿಸಾಡ ಲಿಕ್ಕೆ ಹಾಗೆ ಇಡಲಾಗಿತ್ತು. ಸಶಸ್ತ್ರ ಸೋದರರು ಕೂಡ ಕಾವಲಾಗಿದ್ದರು, ಮತ್ತು ಯಾವ ದುರ್ಗರಕ್ಷಕ ಪಟ್ಟಣದಂತೆ ಪದ್ಧತಿ ಪ್ರಕಾರ ಬಿಡುಗಡೆಹೊಂದು ತ್ತಿದ್ದರು. ಬಿಶಪ್ ಸ್ಪೆಂಜನ್‌ಬರ್ಗನ ಸಂಗಡ ಸಂಭಾಷಣೆ ಮಾಡುವಾಗ ನನ್ನ ಈ ಅಚ್ಚರಿಯನ್ನು ಪ್ರಸ್ತಾಪಿಸಿದೆನು. ಯಾಕಂದರೆ, ವಸಾಹತು ಗಳಲ್ಲಿ ಅವರನ್ನು ಯಾವ ಸೈನಿಕ ಚಟುವಟಿಕೆಯಿಂದಲೂ ಮುಕ್ತಗೊಳಿಸು

---

* ಈ ಸಂಭಾಷಣೆ ಮತ್ತು ಪೌರಸೈನ್ಯದ ಕಾಯ್ದೆಗಳು "ಜಂಟ್ಲ್‌ಮನ್ಸ್ ಮ್ಯಾಗಝಿನ್" ಫೆಬ್ರುವರಿ ಮತ್ತು ಮಾರ್ಚ್, ೧೭೫೬—ಇವರಲ್ಲಿವೆ. [ಮಾರ್ಜಿನ್ ಟಿಪ್ಪಣಿ.]

ವಂಥ ಒಂದು ಕಾಯ್ದೆಯನ್ನು ಅವರು ಪಾರ್ಲಿಮೆಂಟಿನಿಂದ ದೊರಕಿಸಿದ್ದಾರೆಂದು ತಿಳಿದುಕೊಂಡು, ಅವರು ಮನಸ್ಸಾಕ್ಷಿಯಾಗಿ ಶಸ್ತ್ರಗಳನ್ನು ವಿವೇಕತನದಿಂದ ಧರಿಸಿದ್ದಾರೆಂದು ನಾನು ಬಗೆದಿದ್ದೆನು. ಅವರದು ನಿರ್ದಿಷ್ಟ ಕಾಯ್ದೆಯೇನು ಅದಲ್ಲವೆಂದು ಅವನು ಉತ್ತರಿಸಿದನು. ಆದರೆ ಆ ಕಾಯ್ದೆಯನ್ನು ಅವರು ಪಡೆದುಕೊಳ್ಳುವ ಹೊತ್ತಿನಲ್ಲಿ ಅದೊಂದು ನಿಯಮವೆಂದು ಅವರ ಅನೇಕ ಜನರಿಂದ ತರ್ಕಿಸಲಾಗಿತ್ತು. ಹೀಗಿದ್ದರೂ ಕೂಡ, ಈ ಸಂದರ್ಭದಲ್ಲಿ ಅವರಿಗೂ ಅಚ್ಚರಿ ಹುಟ್ಟುವಂತೆ ಅದು ಬಹಳ ಕಡಿಮೆ ಜನರಿಂದ ಆಚರಿಸಲ್ಪಡುತ್ತದೆಂದು ಕಂಡುಕೊಂಡರು. ಅವರು ತಮ್ಮಿಷ್ಟಕ್ಕೆ ಮೋಸ ಮಾಡಿಕೊಂಡರು ಅಥವಾ ಪಾರ್ಲಿಮೆಂಟನ್ನು ಮೋಸಗೊಳಿಸಿದರೆಂದು ಕಾಣುತ್ತದೆ. ಆದರೆ ವ್ಯವಹಾರ ಜ್ಞಾನವು, ಈಗಿನ ಅಪಾಯವು ಕೂಡಿದ್ದರೂ ಸಹ, ಕೆಲವೊಮ್ಮೆ ಹುಂಬತನದ ಅಭಿಪ್ರಾಯಗಳಿಗಿಂತ ಬಲವಾಗಿ ಪರಿಣಾಮಕಾರಿಯಾಗುವುದು.

ಕೋಟೆಗಳನ್ನು ಕಟ್ಟುವಂಥ ಈ ವ್ಯವಹಾರಕ್ಕೆ ನಾವು ತೊಡಗುವಾಗ ಜನವರಿ ತಿಂಗಳ ಪ್ರಾರಂಭವಾಗಿತ್ತು. ನಾನು ಒಂದು ಸೈನ್ಯವಿಭಾಗವನ್ನು ಮಿನಿಸಿಂಕಿನತ್ತ, ನಾಡಿನ ಆ ಮೇಲ್ಭಾಗದ ಸುರಕ್ಷತೆಗಾಗಿ ಒಂದು ಕೋಟೆಯನ್ನು ಕಟ್ಟುವ ಸಲಹೆಯಿಂದ ಮತ್ತು ಮತ್ತೊಂದನ್ನು ಕೆಳಭಾಗಕ್ಕೆ ಅದೇ ಬಗೆಯ ಸಲಹೆಯಿಂದ, ಆಜ್ಞೆಮಾಡಿ ಕಳುಹಿಸಿದೆನು. ಅಂತೆ ನನ್ನ ಮಿಕ್ಕ ಸೈನ್ಯದೊಡನೆ ಗ್ನಡನ್ ಹಟ್‌ಗೆ ನಾನೆ ಹೋಗುವುದೆಂದು ನಿರ್ಣಯಿಸಿದೆನು. ಅಲ್ಲಿ ಬಹಳ ಬೇಗನೆ ಒಂದು ಕೋಟೆಯು ಅಗತ್ಯವಿದೆಯೆಂದು ಬಗೆಯಲಾಗಿತ್ತು. ನಮ್ಮ ಉಪಕರಣ, ಸಾಹಿತ್ಯ ಸಾಮುಗ್ರಿ, ಗಂಟುಗಡಡಿ ಮೊದಲಾದವುಗಳಿಗೆ ಐದು ವಾಗೀನುಗಳನ್ನು ನನಗೆ ದೊರಕಿಸಿಕೊಟ್ಟರು.

ನಾವು ಬೆತ್ಲೆಹೇಮನ್ನು ಬಿಡುವುದಕ್ಕೆ ಸ್ವಲ್ಪ ಮೊದಲು, ತಮ್ಮ ತೋಟಗಳಿಂದ ಇಂಡಿಯನರಿಂದ ಹೊರದೂಡಲ್ಪಟ್ಟ ಹನ್ನೊಂದು ಜನ ರೈತರು ಕೋವಿ ತುಪಾಕಿಗಳನ್ನು ಯಾಚಿಸುತ್ತ ನನ್ನ ಬಳಿಗೆ ಬಂದರು. ಅಂದರೆ—ಹಾಗೆ ಅವರು ಹೋಗಿ ತಮ್ಮ ಜಾನುವಾರುಗಳನ್ನು ಮರಳಿ ತರುವವರಾಗಿದ್ದರು. ಪ್ರತಿಯೊಬ್ಬರಿಗೂ ಸಾಕಷ್ಟು ಮದ್ದಿನೊಂದಿಗೆ ಒಂದೊಂದು ಕೋವಿಯನ್ನು ಕೊಟ್ಟೆನು. ಮಳೆ ಪ್ರಾರಂಭವಾಗುವ ಹೊತ್ತಿಗೆ ನಾವಿನ್ನೂ ಹೆಚ್ಚು ಮೈಲು ದೂರ ಸಾಗಿರಲಿಲ್ಲ, ಮತ್ತು ಹಗಲೆಲ್ಲ ಮಳೆಯೇ ಸುರಿಯತೊಡಗಿತ್ತು; ನಮಗೆ ಯಾವ ತರಹದ ಆಶ್ರಯವನ್ನು ಪಡೆಯಲಿಕ್ಕೂ ಅಲ್ಲಿ ಜನವಸತಿಯೇ ಇರಲಿಲ್ಲ. ಒಬ್ಬ ಜರ್ಮನನ ಮನೆಗೆ

ಬರುವ ತನಕ ರಾತ್ರಿಯು ಸಮಾಪಿಸುವವರೆಗೆ ಹೀಗೇ ಇತ್ತು. ಅಲ್ಲಿ ಅವನ ಉಗ್ರಾಣದಲ್ಲಿ ನಾವೆಲ್ಲರೂ ಒತ್ತಟ್ಟಿಗೆ ಹೇಗೋ ಬಿದ್ದುಕೊಂಡೆವು. ನೀರಿನಿಂದ ಎಷ್ಟು ಒದ್ದೆಯಾಗಲಿಕ್ಕೆ ಸಾಧ್ಯವಿತ್ತೋ ಅಷ್ಟಾಗಿದ್ದೆವು. ನಮ್ಮ ದಂಡಯಾತ್ರೆಯಲ್ಲಿ ನಾವು ಮಳೆಗೆ ಸಿಕ್ಕದದ್ದುದು ಪುಣ್ಯವೆನ್ನಬೇಕು. ಯಾಕಂದರೆ, ನಮ್ಮ ಶಸ್ತ್ರಾಸ್ತ್ರಗಳು ತೀರ ಸಾಮಾನ್ಯವಾಗಿದ್ದವು. ಮತ್ತು ನಮ್ಮ ಜನರಿಂದ ಕೋವಿಯ ಕೀಲಿ (locks) ಗಳನ್ನು ನೀರು ತಾಗದಂತೆ ಇಡಲು ಸಾಧ್ಯವಿರಲಿಲ್ಲ. ಆ ಬಗೆಯ ಯುಕ್ತಿಯಲ್ಲಿ ಇಂಡಿಯನ್ನರು ಚತುರರಾಗಿದ್ದರು. ಅದು ನಮ್ಮವರಲ್ಲಿ ಇರಲಿಲ್ಲ. ಮೇಲೆ ಹೇಳಲಾದ ಹನ್ನೊಂದು ಜನ ಬಡ ರೈತರನ್ನು ಅವರು ಅಂದು ಸಂದಿಸಿ, ಅವರಲ್ಲಿ ಹತ್ತು ಮಂದಿಯನ್ನು ಕೊಂದಿದ್ದರು. ಮಳೆಯಿಂದ ಮದ್ದಿನ ಪುಡಿಯು ಒದ್ದೆಯಾಗಿರದಿದ್ದರೆ ತನ್ನ ಸಂಗಡಿಗರ ಕೋವಿಗಳು ಹಾಗೆ ನಿಷ್ಪ್ರಯೋಜಕವಾಗುತ್ತಿದ್ದಿಲ್ಲವೆಂದು ತಪ್ಪಿಸಿಕೊಂಡ ಆ ಒಬ್ಬನು ತಿಳಿಸಿದನು.

ಮರುದಿನ ಹವೆಯು ಉತ್ತಮವಾದುದರಿಂದ ನಮ್ಮ ದಂಡಯಾತ್ರೆಯನ್ನು ಮುಂದುವರಿಸಿದೆವು, ಅಂತೇ ನಿರ್ಜನ ಪ್ರದೇಶವಾದ ಗ್ನೆಡನ್ ಹಟ್‌ಗೆ ಬಂದು ತಲಪಿದೆವು. ಹತ್ತಿರದಲ್ಲಿ ಒಂದು ಕೊರೆಯುವ ಗಿರಣಿಯಿತ್ತು, ಅದರ ಸುತ್ತಮುತ್ತಲೂ ಅನೇಕ ತೆಳ್ಳಗಿನ ಹಲಗೆಗಳ ರಾಶಿಗಳನ್ನು ಹಾಕಲಾಗಿತ್ತು; ಅದರಿಂದ ನಾವು ಬೇಗನೆ ಗುಡಿಸಲು ಕಟ್ಟಿಕೊಂಡು ಬಿಡಾರ ಹೂಡಿದೆವು. ಅಂಥ ಶೀತವಾದ ಕಾಲದಲ್ಲಿ ಅತ್ಯಂತ ಅಗತ್ಯವಾದ ವಿಷಯವಿದಾಗಿತ್ತು. ಯಾಕಂದರೆ ನಮ್ಮಲ್ಲಿ ಡೇರೆಗಳಿರಲಿಲ್ಲ. ನಮ್ಮ ಮೊದಲನೆಯ ಕೆಲಸವೆಂದರೆ ನಮಗೆ ಅಲ್ಲಿ ದೊರೆತ ಸತ್ತ ಜನರನ್ನು ಯೋಗ್ಯವಾಗಿ ಹುಗಿಯುವುದಾಗಿತ್ತು. ಅವರನ್ನು ಅರ್ಧ–ಮರ್ಧ ಊರಿನ ಜನರು ಹುಗಿದಿದ್ದರು.

ಮರುದಿವಸ ಬೆಳಗ್ಗೆ ನಮ್ಮ ಕೋಟೆಯ ಯೋಜನೆ ಹಾಕಿ ಸ್ಥಳ ಹುಡುಕಿದ್ದಾಯಿತು. ಅದರ ಸುತ್ತಳತೆಯು ನಾಲ್ಕು ನೂರ ಐವತ್ತೈದು ಫೀಟು ಅಳತೆಯುಳ್ಳದ್ದಾಗಿತ್ತು. ಅದಕ್ಕೆ ಒಂದು ಫೂಟು ಅಡ್ಡಳತೆಯುಳ್ಳಂಥ ಮರಗಳಿಂದ ಮಾಡಲ್ಪಟ್ಟ ಒಂದರ ನಂತರ ಒಂದಿಡುವ ಬೇಲಿಯ ಕಂಬಗಳು ಅಷ್ಟೇ ಬೇಕಾಗಿದ್ದವು. ನಮ್ಮಲ್ಲಿ ಎಪ್ಪತ್ತು ಕೊಡಲಿಗಳಿದ್ದವು. ಆ ಕೊಡಲಿಗಳನ್ನೆಲ್ಲ ಮರಗಳನ್ನು ಕಡಿಯುವುದರಲ್ಲಿ ತೊಡಗಿಸಿದ್ದಾಯಿತು. ಅಂತೇ ಅದರಲ್ಲಿ ನಮ್ಮ ಜನರು ತುಂಬ ಚತುರರಾಗಿದ್ದುದರಿಂದ ಬಹಳ ತ್ವರಿತದಿಂದ ಕೆಲಸವಾಯಿತು. ಮರಗಳು ಅಷ್ಟು ತೀವ್ರವಾಗಿ ಉರುಳು

ವುದನ್ನು ನೋಡಿ ಎರಡು ಜನರು ಒಂದು ದೇವದಾರು ಮರವನ್ನು ಕಡಿಯು ಲಿಕ್ಕೆ ತೊಡಗುವಾಗ ನನ್ನ ಗಡಿಯಾರವನ್ನು ನೋಡುವ ಕುತೂಹಲ ನನ ಗಾಯಿತು. ಆರು ನಿಮಿಷಗಳಲ್ಲಿ ಅವರು ಅದನ್ನು ನೆಲಕ್ಕುರುಳಿಸಿದ್ದರು. ಅಂತೇ ಅದು ಹದಿನಾಲ್ಕು ಇಂಚು ಅಡ್ಡಳತೆಯುಳ್ಳದೆಂದು ನಾನು ಕಂಡು ಕೊಂಡೆನು. ಪ್ರತಿಯೊಂದು ದೇವದಾರು ಮರದಿಂದ ಹದಿನೆಂಟು ಅಡಿ ಉದ್ದವಾದ ಮತ್ತು ಒಂದು ತುದಿಯಲ್ಲಿ ಚೂಪಾದ ಮೂರು ಬೇಲಿಯ ಗೂಟಗಳಾಗುತ್ತಿದ್ದವು. ಇತ್ತ ಇವುಗಳನ್ನು ಸಿದ್ಧಗೊಳಿಸುವಾಗ, ನಮ್ಮ ಜನರು ಸುತ್ತಲೆಲ್ಲ ಮೂರು ಅಡಿ ಆಳದ ಹೊಂಡಗಳನ್ನು ತೋಡುತ್ತಿದ್ದರು, ಅವುಗಳಲ್ಲಿ ಈ ಕಂಬಗಳನ್ನು ನೆಡುವುದಾಗಿತ್ತು. ನಮ್ಮ ವಾಗೀನುಗಳ ಬಾಡಿಗಳನ್ನು (bodies) ಕಳಚಿದುದರಿಂದ ಮತ್ತು ಮುಂದಿನ ಹಾಗೂ ಹಿಂದಿನ ಚಕ್ರಗಳನ್ನು, ಎರಡು ಭಾಗಗಳನ್ನೂ ಜೋಡಿಸಿರುವಂಥ ನಡು ಕೋಲಿನ ಪಿನ್ನನ್ನು ತೆಗೆದು – ಬೇರ್ಪಡಿಸಿ, ನಮ್ಮ ಒಟ್ಟು ಹತ್ತು ಬಂಡಿ ಗಳು-ಪ್ರತಿಯೊಂದಕ್ಕೆ ಎರಡು ಕುದುರೆಗಳಂತೆ - ಕಾಡಿನಿಂದ ನಿರ್ದಿಷ್ಟ ಸ್ಥಳಕ್ಕೆ ಕಂಬಗಳನ್ನು ಸಾಗಿಸಲಿಕ್ಕೆ ಇದ್ದವು. ಅವುಗಳನ್ನು ನಿಲ್ಲಿಸಿದೊಡನೆ ನಮ್ಮ ಬಡಗಿಗಳು ಒಳಗಿನಿಂದ ಸುತ್ತಲೂ ತೆಳ್ಳಗಿನ ಹಲಗೆಗಳಿಂದ ಒಂದು ವೇದಿಕೆಯನ್ನು ಕಟ್ಟಿದರು, ಅದು ಸುಮಾರು ಆರು ಅಡಿ ಎತ್ತರವಾಗಿತ್ತು. ಇದರ ಮೇಲೆ ನಿಂತುಕೊಂಡು ಕೂತು - ಕಿಂಡಿಗಳಿಂದ ಜನರು ಗುಂಡು ಹಾರಿಸಲಿಕ್ಕಾಗಿತ್ತು. ನಮ್ಮಲ್ಲಿ ಒಂದು ತಿರುಗಣೆಯ ಕೋವಿ (swivel gun)ಯಿತ್ತು. ಇದನ್ನು ನಾವು ಒಂದು ಕೋನದಲ್ಲಿ ಏರಿಸಿದೆವು. ಅಂತೇ ಅದನ್ನು ಸ್ಥಿರಗೊಳಿಸಿದೊಡನೆ ಗುಂಡು ಹಾರಿಸಿಯೇ ಬಿಟ್ಟೆವು. ನಮ್ಮಲ್ಲಿ ಇಂಥ ವಸ್ತುಗಳಿವೆಯೆಂದು, ಯಾರಾದರೂ ಇದನ್ನು ಕೇಳುವ ಅಂತರದಲ್ಲಿ ದ್ದರೆ, ಇಂಡಿಯನ್ನರಿಗೆ ತಿಳಿಯುವುದಕ್ಕಾಗಿ ಹಾಗೆ ಹಾರಿಸಿದ್ದಾಗಿತ್ತು. ಹೀಗೆ ನಮ್ಮ ಕೋಟೆ,— ಇಷ್ಟು ಕಷ್ಟಕರವಾದ ಒಂದು ಕಟ್ಟಿಗೆಯ ಬೇಲಿಗೆ ಇಂಥ ಅದ್ಭುತ ಹೆಸರನ್ನು ಕೊಡುವುದಾದರೆ ಅಷ್ಟೊಂದು ಬಲವಾಗಿ ಮಳೆಯು ಸುರಿಯುತ್ತಿದ್ದು ದಿನದಿಂದ ದಿನಕ್ಕೆ ಜನರಿಂದ ಕೆಲಸಮಾಡಲು ಅಸಾಧ್ಯವಾಗಿದ್ದರೂ ಕೂಡ, ಒಂದು ವಾರದಲ್ಲಿ ಮುಗಿಯಿತು.

ಜನರು ಯಾವಾಗ ಉದ್ಯೋಗದಲ್ಲಿ ಇರುತ್ತಾರೋ ಆವಾಗ ಉತ್ತಮ ರೀತಿಯಲ್ಲಿ ತೃಪ್ತರಾಗಿರುತ್ತಾರೆಂಬುದನ್ನು ನಿರೀಕ್ಷಿಸುವ ಪ್ರಸಂಗವು ನನಗೆ ಇದರಿಂದ ದೊರೆತಿತು. ಯಾಕಂದರೆ ಕೆಲಸ ಮಾಡಿದ ದಿವಸಗಳಲ್ಲಿ ಅವರು ಒಳ್ಳೆಯ ರೀತಿಯಲ್ಲಿದ್ದು ಸಂತೋಷದಿಂದ ಇರುತ್ತಿದ್ದರು ಮತ್ತು ದಿನದ

ಕೆಲಸವನ್ನು ಮಾಡಿದ್ದೇವೆಂಬ ಆತ್ಮಸಂತೃಪ್ತಿಯೂ ಅವರಿಗೆ ಇರುತ್ತಿತ್ತು. ಸಂಜೆಯನ್ನು ವಿನೋದದಿಂದ ಕಳೆಯುತ್ತ ಇದ್ದರು; ಆದರೆ ನಮ್ಮ ನಿರುದ್ಯೋಗದ ದಿವಸಗಳಲ್ಲಿ ಅವರು ಜಗಳಗಂಟರೂ ಗಲಭೆಗಾರರೂ ಆಗಿರುತ್ತಿದ್ದರು. ತಮ್ಮ ಬ್ರೆಡ್, ಪೋರ್ಕ್ ಮೊದಲಾದವುಗಳಲ್ಲಿ ತಪ್ಪು ಹುಡುಕಿ ತೆಗೆಯುತ್ತಿದ್ದರು. ಮತ್ತು ಸತತ ದುರ್ಭಾವನೆಗಳಿಂದ ತುಂಬಿರುತ್ತಿದ್ದರು. ಇದು ಒಬ್ಬ ಸಮುದ್ರ- ನಾಯಕನನ್ನು ನನ್ನ ನೆನಪಿಗೆ ತಂದಿತು. ತನ್ನ ಜನರನ್ನು ಸತತ ಕೆಲಸದಲ್ಲಿಡುವುದೊಂದು ಅವನ ನಿಯಮವಾಗಿತ್ತು. ಒಮ್ಮೆ ಅವನ ಸಂಗಾತಿಯು ಅವರೆಲ್ಲ ಕೆಲಸಮಾಡಿ ಮುಗಿಸಿದ್ದಾರೆ ಮತ್ತು ಇನ್ನು ಅವರನ್ನು ಕೆಲಸಕ್ಕೆ ಹಚ್ಚಲು ಏನೂ ಇಲ್ಲವೆಂದು ಅವನಿಗೆ ಹೇಳಿದಾಗ, "ಹೋ! ಅವರನ್ನು ಲಂಗರು ಉಜ್ಜಲಿಕ್ಕೆ ಹಚ್ಚು," ಎಂದು ನುಡಿದನು.

ಎಷ್ಟು ಹೀನವಾಗಿದ್ದರೂ ಕೂಡ, ಈ ಬಗೆಯ ಕೋಟೆಯು ಮದ್ದುಗುಂಡುಗಳಿಲ್ಲದ ಇಂಡಿಯನ್ನರ ವಿರುದ್ಧ ಸಾಕಷ್ಟು ರೀತಿಯಲ್ಲಿ ರಕ್ಷಣೆಯಾಗಿತ್ತು. ನಮ್ಮ ಮಟ್ಟಿಗೆ ಈಗ ನಾವು ಸಾಕಷ್ಟು ಸುರಕ್ಷಿತವಾಗಿ ನೆಲೆಸಿರುವುದನ್ನು ಕಂಡುಕೊಂಡು ಮತ್ತು ಪ್ರಸಂಗವಶಾತ್ ಹಿಮ್ಮೆಟ್ಟಿ ಹೋಗಲಿಕ್ಕು ಸ್ಥಳವಿದ್ದ ಕಾರಣ ಗುಂಪು-ಗುಂಪುಗಳಾಗಿ ನಾವು ನೆರೆಹೊರೆಯ ಊರಿಗೆ ನಿಷ್ಠುರವಾಗಿ ದಾಳಿ ಮಾಡುತ್ತ ಹೋಗುವ ಧೈರ್ಯ ತೋರಿಸಿದೆವು. ನಮಗೆ ಯಾವ ಇಂಡಿಯನ್ನನ ಭೇಟಿಯೂ ಆಗಲಿಲ್ಲ. ಆದರೆ ಅಕ್ಕಪಕ್ಕದ ಗುಡ್ಡ-ಕಾಡುಗಳಲ್ಲಿ ನಮ್ಮ ಮುನ್ನಡೆಯನ್ನು ಕಾದುಕೊಂಡು ಅವರು ಕೂತಿದ್ದ ಸ್ಥಳಗಳನ್ನು ನಾವು ಕಂಡೆವು. ಅವರು ಆ ಸ್ಥಳಗಳಲ್ಲಿ ಹಾಕಿದ ಹಂಚಿಕೆಯಲ್ಲಿ ಒಂದು ಕಲೆಯಿತ್ತು. ಅದರ ಬಗ್ಗೆ ಹೇಳುವುದು ಯೋಗ್ಯವೆಂದು ಕಾಣುತ್ತದೆ. ಅದು ಚಳಿಗಾಲವಾದುದರಿಂದ ಅವರಿಗೆ ಒಂದು ಬೆಂಕಿಯ ಕುಂಡವು ಅಗತ್ಯವಾಗಿ ಬೇಕಿತ್ತು. ಆದರೆ ನೆಲದ ಮೇಲಿನ ಸಾಮಾನ್ಯವಾದ ಒಂದು ಅಗ್ನಿ ಕುಂಡವು ಅದರ ಬೆಳಕಿನ ಮೂಲಕ ಅವರ ವಸತಿಯನ್ನು ದೂರದಿಂದ ತಿಳಿಯಪಡಿಸಬಹುದಾಗಿತ್ತು. ಆದುದರಿಂದ ಅವರು ಸುಮಾರು ಮೂರು ಅಡಿ ಅಡ್ಡಳತೆಯುಳ್ಳ ಹೊಂಡಗಳನ್ನು ನೆಲದಲ್ಲಿ ತೋಡಿದ್ದರು. ಅಂತೇ ಅದು ತುಸು ಆಳವೂ ಆಗಿತ್ತು. ಅಲ್ಲಿ ಅವರು ತಮ್ಮ ಕೈಕೊಡಲಿಗಳಿಂದ ಕಾಡಿನಲ್ಲಿ ಉರಿದಿದ್ದ ಮರದ ತುಂಡುಗಳ ಬದಿಯಿಂದ ಇದ್ದಲಿಯನ್ನು ತುಂಡರಿಸಿ ತೆಗೆದುದನ್ನು ನಾವು ನೋಡಿದ್ದೆವು. ಈ ಇದ್ದಲಿ (Coal) ಯಿಂದ ಹೊಂಡಗಳಲ್ಲಿ ಅವರು ಚಿಕ್ಕ

ಅಗ್ನಿಷ್ಟಿಕೆಯನ್ನು ಹಾಕುತ್ತಿದ್ದರು, ಮತ್ತು ನೆಲ್ಲೆ ಹಾಗೂ ಹುಲ್ಲಿನಲ್ಲಿ ಅವರ ದೇಹಗಳ ಗುರುತುಗಳನ್ನು ನಾವು ನಿರೀಕ್ಷಿಸಿದ್ದೆವು. ಸುತ್ತ ಮುತ್ತೆಲ್ಲ ಒರಗಿಕೊಂಡು, ಕಾಲುಗಳನ್ನು ಕೆಳಗಿನ ಹೊಂಡದಲ್ಲಿ ಇಳಿಯಬಿಟ್ಟುದರಿಂದ ಹಾಗೆ ಗುರುತುಗಳಾಗಿದ್ದವು. ಇದು ಅವರ ಕಾಲುಗಳನ್ನು ಬೆಚ್ಚಗಿಡುವುದಕ್ಕಾಗಿತ್ತು. ಅಂತೇ ಇದೊಂದು ಅವರ ಬಗ್ಗೆ ಪ್ರಮುಖ ವಿಷಯವಾಗಿತ್ತು. ಹೀಗೆ ನಿರ್ವಹಿಸಿದ ಈ ಬಗೆಯ ಅಗ್ನಿಯು ಅದರ ಬೆಳಕಿನಿಂದ, ಜ್ವಾಲೆ ಕಿಡಿಯಿಂದ, ಅಥವಾ ಹೊಗೆಯಿಂದಾಗಲೀ ಅವರನ್ನು ಪತ್ತೆಗೊಳಿಸುತ್ತಿರಲಿಲ್ಲ; ಅವರ ಸಂಖ್ಯೆಯು ಅಷ್ಟೊಂದು ದೊಡ್ಡದಿವೆಯೆಂದು ಕಂಡುಬರಲಿಲ್ಲ. ಅಂತೇ ಅವರ ಕೈಸೆರೆಗೆ ಸಿಗಲು ನಾವು ಅನೇಕ ಜನರಿದ್ದುದರಿಂದ ಅಸಾಧ್ಯವೆಂಬುದು ಅವರಿಗೆ ತಿಳಿದಂತೆಯೂ ಕಂಡುಬಂದಿತು.

ನಮ್ಮ ಸರಕಾರಿ ಪಾದ್ರಿಯಾಗಿ ಮಿಸ್ಟರ್ ಬಿಟ್ಟೀ ಎಂಬೊಬ್ಬ ಪ್ರೆಸ್ಬಿಟೇರಿಯನ್ ಉತ್ಸಾಹಶಾಲಿಯಾದ ಮಂತ್ರಿಯಿದ್ದನು. ಸಾಮಾನ್ಯವಾಗಿ ಜನರು ತನ್ನ ಧರ್ಮೋಪದೇಶ ಹಾಗೂ ಪ್ರಾರ್ಥನೆಗಳಿಗೆ ಉಪಸ್ಥಿತರಾಗುವುದೇ ಇಲ್ಲವೆಂದು ಅವನು ನನ್ನೊಡನೆ ದೂರು ಹೇಳಿದನು. ಅವರನ್ನು ಭರ್ತಿ ಮಾಡಿಕೊಂಡಾಗ ಸಂಬಳ ಹಾಗೂ ವಸತಿಯಲ್ಲದೆ ಪ್ರತಿ ದಿನಕ್ಕೆ ಒಂದು ಜಿಲ್ (gill) ಕಬ್ಬಿನ ಮದ್ಯ ಕೊಡುವುದೆಂದು ಅವರಿಗೆ ವಚನ ನೀಡಲಾಗಿತ್ತು. ಅದು ಅವರಿಗೆ ತಪ್ಪದೆ ಕ್ರಮ ಪ್ರಕಾರ ಅರ್ಧ ಬೆಳಿಗ್ಗೆ ಮತ್ತು ಉಳಿದ ಅರ್ಧ ಸಂಜೆಗೆ ಕೊಡಲಾಗುತ್ತಿತ್ತು. ಅಂತೇ ಅದನ್ನು ಪಡೆಯಲು ಅವರು ಕ್ಲುಪ್ತ ಸಮಯಕ್ಕೆ ಬಂದು ನಿಲ್ಲುವುದನ್ನು ನಾನು ನಿರೀಕ್ಷಿಸಿದೆನು ; ಆ ಬಗ್ಗೆ ನಾನು ಮಿಸ್ಟರ್ ಬಿಟ್ಟೀಗೆ, "ಬಹುಶಃ ಈ ಕಬ್ಬಿನ ಮದ್ಯದ ಪಾರುಪತ್ಯಗಾರನಾಗಿ ನೀನು ಕೆಲಸ ಮಾಡುವುದು ನಿನ್ನ ಉದ್ಯೋಗದ ಮರ್ಯಾದೆಗೆ ಕೀಳು, ಆದರೆ ಒಂದು ವೇಳೆ ನೀನು ಅದನ್ನು ಹಂಚುವ ವ್ಯವಹಾರ ಮಾಡುವುದಿದ್ದರೆ ಕೇವಲ ಪ್ರಾರ್ಥನೆ ಆದ ಕೂಡಲೆ ಮಾಡು, ಅಂದರೆ ಅವರೆಲ್ಲ ನಿನ್ನ ಬಳಿ ಸೇರಿದಂತಾಗುವುದು." ಎಂದು ಹೇಳಿದೆನು. ಈ ವಿಚಾರ ಅವನಿಗೆ ಸೇರಿಬಂದಿತು. ಕೆಲಸ ಕೈಗೊಂಡೇಬಿಟ್ಟನು. ಮತ್ತು ಮದ್ಯವನ್ನು ಅಳೆಯುವ ಕೆಲ ಜನರೊಂದಿಗೆ ಸೇರಿ, ತೃಪ್ತಿಕರವಾಗಿಯೂ ಮತ್ತು ಇದುವರೆಗೆ ಪ್ರಾರ್ಥನೆಗೆ ಜನರು ಈ ರೀತಿ ತುಂಬಿದ್ದಿರಲಿಲ್ಲ. ಹೀಗಾಗಿ ದೇವರ ಸೇವೆಗೆ ಹೇರಳವಾಗಿಯೂ ಉಪಸ್ಥಿತರಾಗದುದಕ್ಕೆ ಕೆಲ ಸೈನಿಕ ಕಾಯ್ದೆಗಳಿಂದ ಶಿಕ್ಷೆ ವಿಧಿಸುವುದಕ್ಕಿಂತ ಈ ಪದ್ಧತಿಯು ಉತ್ತಮವಾದು

ದೆಂದು ನಾನು ಎಣಿಸಿದೆನು.

ಈ ವ್ಯವಹಾರವನ್ನು ನಾನು ಅದೇ ಮುಗಿಸಲಿಕ್ಕೆ ಹತ್ತಿದ್ದೆನಷ್ಟೆ ಮತ್ತು ನನ್ನ ಕೋಟೆಯನ್ನು ಸಾಹಿತ್ಯ-ಸಾಮಗ್ರಿಗಳಿಂದ ತುಂಬಿಸಿಟ್ಟಿದ್ದೆ ಮಾತ್ರ, ಆಗ ಗವರ್ನರನಿಂದ ಒಂದು ಪತ್ರ ಬಂದಿತು. ಅದರಲ್ಲಿ ಅವನು ಅಸೆಂಬ್ಲಿಯನ್ನು ಕರೆದಿರುವುದಾಗಿ ಬರೆದಿದ್ದನು. ಮತ್ತು ನಾನು ಅದಕ್ಕೆ ಹಾಜರಿರುವುದನ್ನು ಅವನು ಅಪೇಕ್ಷಿಸಿದ್ದನು, ಮತ್ತು ಗಡಿನಾಡಿನಲ್ಲಿಯ ವಿಷಯಗಳ ಸ್ಥಿತಿಗತಿಯಿಂದ ನಾನು ಅಲ್ಲಿ ಇನ್ನು ಮುಂದೆ ನಿಲ್ಲುವ ಅವಶ್ಯಕತೆ ಇಲ್ಲದಿದ್ದಲ್ಲಿ ನಾನು ಹೋಗಬೇಕೆಂದು ನನಗೆ ತಿಳಿಸಿದ್ದನು. ನನ್ನ ಮಿತ್ರರು ಕೂಡ ತಮ್ಮ ಪತ್ರಗಳ ಮೂಲಕ ನನಗೆ ಸಾಧ್ಯವಿದ್ದಲ್ಲಿ ಮೀಟಿಂಗಿನಲ್ಲಿರಲು ಒತ್ತಾಯಪಡಿಸುತ್ತಿದ್ದರು. ನನ್ನ ಉದ್ದಿಷ್ಟ ನಾಲ್ಕು ಕೋಟೆಗಳು ಈಗ ಪೂರ್ಣಗೊಂಡ ಮೂಲಕ, ಮತ್ತು ಆ ರಕ್ಷಣೆಯಿಂದ ನಿವಾಸಿಗಳೆಲ್ಲ ಹೊಲಗಳಲ್ಲಿರಲು ತೃಪ್ತರಾದುದರಿಂದ ನಾನು ಮರಳುವ ನಿರ್ಣಯ ಮಾಡಿದೆನು; ಇದಕ್ಕೂ ಹೆಚ್ಚಾಗಿ, ಇಂಡಿಯನ್ ಯುದ್ಧದಲ್ಲಿ ನ್ಯೂ ಇಂಗ್ಲೆಂಡ್ ಆಫೀಸರನಾಗಿ ಅನುಭವವಿದ್ದ ಕರ್ನಲ್ ಕ್ಲಾಫಾಮನು ನಮ್ಮ ಠಾಣ್ಯಕ್ಕೆ ಬಂದು ದರ್ಶನವಿತ್ತುದರಿಂದ ಅಧಿಕಾರವನ್ನು ಸ್ವೀಕರಿಸಲು ಒಪ್ಪಿಕೊಂಡನು. ನಾನು ಅವನಿಗೆ ಕಮಿಷನನ್ನು (Commission) ಕೊಟ್ಟೆನು ಮತ್ತು ದುರ್ಗರಕ್ಷಕ ಸೈನ್ಯದ ಪರೇಡು ಮಾಡಿಸಿ ಅವರ ಸಮ್ಮುಖದಲ್ಲಿ ಅದನ್ನು ಓದಿ ಹೇಳಿದ್ದಾಯಿತು ಮತ್ತು ತನ್ನ ಬುದ್ಧಿವಂತಿಕೆಯಿಂದ ಮಿಲಿಟರಿ ವಿಷಯಗಳಲ್ಲಿ ಪ್ರವೀಣನಿದ್ದುದರಿಂದ ನನಗಿಂತ ಅವರನ್ನು ತರಬೇತುಗೊಳಿಸುವುದರಲ್ಲಿ ಹೆಚ್ಚು ಯೋಗ್ಯವಾದ ಅಧಿಕಾರಿಯೆಂದು ಅವನನ್ನು ಅವರಿಗೆ ಪರಿಚಯ ಮಾಡಿ ಕೊಟ್ಟೆನು ಅಂತೇ ಅವರಿಗೆ ತುಸು ಉಪದೇಶ ಮಾಡಿದ್ದೂ ಆಯಿತು, ಮತ್ತು ನನ್ನ ಬಿಡುಗಡೆ ಮಾಡಿಕೊಂಡೆನು. ಬೆತ್ಲೆಹೇಮಿನಷ್ಟು ದೂರದ ತನಕವೂ ನಾನು ದೇಹರಕ್ಷಕರಿಂದ ಕಳುಹಿಸಲ್ಪಟ್ಟೆನು. ಅಲ್ಲಿ ಹಿಂದೆ ಪಟ್ಟ ಆಯಾಸವನ್ನು ನಿವಾರಿಸಿಕೊಳ್ಳಲು ನಾನು ಕೆಲವು ದಿವಸಗಳವರೆಗೆ ವಿಶ್ರಾಂತಿ ತೆಗೆದುಕೊಂಡೆನು. ಉತ್ತಮವಾದ ಹಾಸಿಗೆಯ ಮೇಲೆ ಮಲಗಿದ್ದುದರಿಂದ ಮೊದಲ ರಾತ್ರಿ ನಾನು ನಿದ್ದೆ ಮಾಡಿದ್ದೆ ಇಲ್ಲ. ಯಾಕಂದರೆ ನಮ್ಮ ಗ್ನೇಡನದ ಗುಡಿಸಲಿನಲ್ಲಿಯ ಒಂದೋ ಅಥವಾ ಎರಡು ಜಮಖಾನಗಳಿಂದ ಕೂಡಿದ ನೆಲದ ಮೇಲಿನ ಬಿರುಸಾದ ವಸತಿಗಿಂತ ಅದು ತೀರ ಭಿನ್ನವಾಗಿತ್ತು.

ನಾನು ಬೆತ್ಲೆಹೇಮಿನಲ್ಲಿ ಇದ್ದಾಗ ಮೊರೇವಿಯನರ ರೂಢಿ-ನಿಯಮಗಳ

ಬಗ್ಗೆ ತುಸು ಕೇಳಿಕೊಂಡೆನು: ಅವರಲ್ಲಿ ಕೆಲವರು ನನ್ನ ಜೊತೆಗಿದ್ದರು, ಮತ್ತು ಎಲ್ಲರೂ ನನ್ನ ಬಗ್ಗೆ ತುಂಬಾ ಪ್ರೇಮದಿಂದ ವರ್ತಿಸಿದ್ದರು. ಅವರು ಒಂದು ಕುಟುಂಬಕ್ಕಾಗಿ ದುಡಿಯುತ್ತಿದ್ದರು. ಒಂದೇ ಟೇಬಲಿನಲ್ಲಿ ಊಟ ಮಾಡುತ್ತಿದ್ದರು ಮತ್ತು ಒಂದೇ ಶಯನಗೃಹದಲ್ಲಿ ಅನೇಕ ಜನರು ಒಟ್ಟಿಗೆ ಮಲಗುತ್ತಿದ್ದರೆಂಬುದು ನನಗೆ ಕಂಡುಬಂದಿತು. ಶಯನಗೃಹದಲ್ಲಿ ಕೆಳಗಡೆಯಲ್ಲಿ ಮಾಡಿದ ನಿರ್ದಿಷ್ಟ ಅಂತರದಲ್ಲಿ ಎಲ್ಲಾ ಕಡೆಗೂ ತೂತುಗಳಿದ್ದುದು ತೋರಿತು. ತರ್ಕಬದ್ಧವಾಗಿ ಅದು ಹವೆಯ ಬದಲಾವಣೆಗೋಸ್ಕರವೆಂದು ನಾನು ತಿಳಿದುಕೊಂಡೆನು. ನಾನು ಅವರ ಚರ್ಚಿಗೂ ಹೋಗಿದ್ದೆ. ಅಲ್ಲಿ ನನಗೆ ಉತ್ತಮ ಗಾಯನದಿಂದ ಮನೋರಂಜನೆಯಾಯಿತು. ವಾದ್ಯಗೋಷ್ಠಿಯು ತಂಬೂರಿ, ಗಾಳಿವಾದ (hautboys,) ಕೊಳಲು, ಕ್ಲೆರಿನೆಟ್ ಇತ್ಯಾದಿಗಳಿಂದ ಕೂಡಿಕೊಂಡು ಬಾಜಿಸಲಾಗುತ್ತಿತ್ತು. ನಮ್ಮಲ್ಲಿಯ ಸಾಮಾನ್ಯವಾದ ವಾಡಿಕೆಯ ಹಾಗೆ ಅವರ ಧರ್ಮೋಪದೇಶಗಳು ಯಾವಾಗಲೂ ಗಂಡಸರು, ಹೆಂಗಸರು ಮತ್ತು ಮಕ್ಕಳಿಂದ ಕೂಡಿದ ಮಿಶ್ರ ಶ್ರೋತೃವೃಂದಕ್ಕೆ ಕೊಡಲ್ಪಡುತ್ತಿದ್ದಿಲ್ಲವೆಂಬುದನ್ನು ನಾನು ಅರಿತುಕೊಂಡೆನು. ಆದರೆ ಅವರು ಕೆಲವೊಮ್ಮೆ ವಿವಾಹಿತರನ್ನು ಸೇರಿಸುತ್ತಿದ್ದರು; ಮತ್ತೊಂದುಸಲ ಅವರ ಪತ್ನಿಯರನ್ನು ಮತ್ತು ತರುಣರನ್ನು, ತರುಣಿಯರನ್ನು ಹಾಗೂ ಇನ್ನೊಂದು ಸಲ ಚಿಕ್ಕ ಮಕ್ಕಳನ್ನು —ಹೀಗೆ ಪ್ರತಿಯೊಂದು ವಿಭಾಗದಿಂದ ಶ್ರೋತೃಗಳನ್ನು ಸೇರಿಸುತ್ತಿದ್ದರು. ನಾನು ಕೇಳಿದ ಧರ್ಮೋಪದೇಶವು ಮಕ್ಕಳಿಗೆ ಮಾಡಿದಂಥಾದ್ದು. ಹುಡುಗರೆಲ್ಲ ಒಳಗೆ ಬಂದುಕೊಂಡು ಸಾಲಾಗಿ ಇಡಲ್ಪಟ್ಟ ಬೆಂಚುಗಳಲ್ಲಿ ಕೂತರು; ಹುಡುಗರು ಒಬ್ಬ ತರುಣ ಶಿಕ್ಷಕನ ಕೈಕೆಳಗೆ ಹಾಗೂ ಹುಡುಗಿಯರು ಒಬ್ಬ ತರುಣಿ ಶಿಕ್ಷಕಿಯ ಕೈಕೆಳಗೆ ಇರುತ್ತಿದ್ದರು. ವ್ಯಾಖ್ಯಾನವು ಅವರ ಸಾಮರ್ಥ್ಯಕ್ಕೆ ತಕ್ಕಂತೆ ಹೊಂದಿಸಿಕೊಂಡ ಹಾಗೆ ಇತ್ತು; ಮತ್ತು ಮನದುಂಬುವ ಹಾಗೂ ತಿಳಿಯುವ ರೀತಿಯಲ್ಲಿ ವ್ಯಾಖ್ಯಾನ ಮಾಡಲಾಗುತ್ತಿತು. ಅವರೆಲ್ಲ ಒಳ್ಳೆಯವರಾಗುವ ರೀತಿಯಲ್ಲಿ ಅವರನ್ನು ಉಬ್ಬಿಸಿ ತಿಳಿಯಪಡಿಸುತ್ತಿದ್ದರು. ಅವರು ಬಹಳ ಶಿಸ್ತಿನಿಂದ ವರ್ತಿಸುತ್ತಿದ್ದರು, ಆದರೆ ನಿರ್ವಿಣ್ಣರಾಗಿ ಮತ್ತು ಅನಾರೋಗ್ಯದಿಂದ ಇರುವಂತೆ ಕಾಣುತ್ತಿದ್ದರು. ಹೀಗಾಗಿ ಅವರನ್ನು ಬಹಳ ನಾಡಿ ಕೋಣೆಯೊಳಗಿಟ್ಟಿರಬೇಕು ಅಥವಾ ಯೋಗ್ಯವಾದ ವ್ಯಾಯಾಮ ಅವರಿಗೆ ದೊರೆಯಲ್ಲವೆಂದು ನನಗೆ ಸಂಶಯ ಉಂಟಾಯಿತು.

ಮೊರೇವಿಯನ್ ಮದುವೆಗಳ ಕುರಿತಾಗಿ,-ಅವುಗಳು ಹೆಚ್ಚಾಗಿ

ಅದೃಷ್ಟ ಪರೀಕ್ಷೆಯ ಮೂಲಕ (Lot) ನಡೆಯುತ್ತವೆಯೆಂಬ ಸುದ್ದಿಯು ನಿಜವೊ ಅಲ್ಲವೊ ಎಂದು ನಾನು ಕೇಳಿದೆನು. ವಿಶಿಷ್ಟ ಸಂದರ್ಭಗಳಲ್ಲಿ ಆ ಪದ್ಧತಿಯು ಪ್ರಯೋಗಿಸಲ್ಪಡುತ್ತದೆಂದು ನನಗೆ ಹೇಳಿದರು. ಸಾಮಾನ್ಯವಾಗಿ ಒಬ್ಬ ತರುಣನು ತನಗೆ ಮದುವೆಯಾಗಬೇಕೆಂದು ಕಂಡುಕೊಂಡಾಗ, ಅವನು ತನ್ನ ಪಂಗಡದ ಹಿರಿಯರಿಗೆ ಹೇಳುತ್ತಿದ್ದನು; ಅವರು ತರುಣಿಯರನ್ನು ನೋಡಿಕೊಳ್ಳುತ್ತಿರುವ ಹಿರಿಯ ಹೆಣ್ಣು ಮಕ್ಕಳಿಗೆ ತಿಳಿಸುತ್ತಿದರು. ಸ್ತ್ರೀಪುರುಷ ಜಾತಿಯ ಹಿರಿಯರು ಅನುಕ್ರಮವಾಗಿ ತಮ್ಮ ಪೈಕಿಯವರ ಸ್ವಭಾವ ಹಾಗೂ ಮನೋಭಾವಗಳನ್ನು ಚೆನ್ನಾಗಿ ಅರಿತಿರುವ ಮೂಲಕ ಯಾವ ಸಂಬಂಧವು ಯೋಗ್ಯವಾದುವೆಂದು ಚೆನ್ನಾಗಿ ನಿರ್ಧರಿಸಬಹುದು, ಅಂತೇ ಅವರ ನಿರ್ಣಯಗಳು ಸಾಮಾನ್ಯವಾಗಿ ಸ್ವೀಕರಿಸಲ್ಪಡುತ್ತವೆ. ಆದರೆ ಉದಾಹರಣಾರ್ಥವಾಗಿ ಒಂದುವೇಳೆ, ಇಬ್ಬರು ಅಥವಾ ಮೂವರು ತರುಣಿಯರು ಒಬ್ಬ ತರುಣನಿಗೆ ಸಮವಾಗಿ ಯೋಗ್ಯವೆಂದು ಕಂಡು ಬಂದಲ್ಲಿ, ಆಗ ದೈವ ಪರೀಕ್ಷೆಯತ್ತ ತೆರಳಲಾಗುವುದು. ಪರಸ್ಪರ ಗಂಡು–ಹೆಣ್ಣು ತಮ್ಮ ಆಯ್ಕೆಯನ್ನು ಮಾಡಿಕೊಳ್ಳದೆ ಮದುವೆ ಆನಲ್ಲಿ ಯಾರಾದರೊಬ್ಬರು ದುಃಖಕ್ಕೆ ಒಳಗಾಗುವ ಸಂಭವ ಒದಗಬಹುದೆಂದು ನಾನು ತಕರಾರು ಮಾಡಿದೆನು. "ಹಾಗೆ ನೀವು ಅವರ ಸಂಗಾತಿಯನ್ನು ಅವರಿಗೇ ಆರಿಸಲು ಬಿಟ್ಟರೂ ಕೂಡ ಅಸುಖಿಗಳಾಗಬಹುದು." ಎಂದು ನನ್ನ ಸಂಗಡಿಗನು ಉತ್ತರಿಸಿದನು. ಹೌದು, ನನ್ನಿಂದ ಅದನ್ನು ನಿರಾಕರಿಸಲಿಕ್ಕೆ ಆಗಲಿಲ್ಲ.

ಫಿಲಡೆಲ್ಫಿಯಾದಿಂದ ಮರಳಿದ ಮೇಲೆ ಸಂಘ (association)ವು ತೇಲಿಕೊಂಡು ನಡೆಯುತ್ತಿರುವುದನ್ನು ಕಂಡೆನು. ನಿವಾಸಿಗಳು-ಕ್ವ್ಯಾಕರುಗಳಲ್ಲದವರೇ ಹೆಚ್ಚಾಗಿ ಅದರಲ್ಲಿ ಸೇರಿಕೊಂಡಿದ್ದರು. ಅವರು ತಮ್ಮೊಳಗೇ ಕಂಪನಿಗಳನ್ನು ಮಾಡಿಕೊಂಡಿದ್ದರು. ಮತ್ತು ಕ್ಯಾಪ್ಟನುಗಳನ್ನು, ಲೆಫ್ಟಿನೆಂಟುಗಳನ್ನು ಹಾಗೂ ಪತಾಕೆಗಳನ್ನು ಹೊಸ ಕಾಯ್ದೆಯ ಪ್ರಕಾರ ಆರಿಸಿಕೊಂಡಿದ್ದರು. ಡಾ॥ ಬಿ. ಯು ನನ್ನನ್ನು ಭೇಟಿ ಮಾಡಿ, ಕಾಯ್ದೆಗೆ ಸಾಮಾನ್ಯವಾಗಿ ಒಳ್ಳೆಯ ಅಭಿಪ್ರಾಯ ದೊರೆಯಲು ತಾನು ಪಟ್ಟ ಕಷ್ಟಗಳ ವರದಿಯನ್ನು ಮಾಡಿದನು, ಮತ್ತು ಆ ಪ್ರಯತ್ನಕ್ಕೆ ಹೆಚ್ಚಿನದನ್ನೆಲ್ಲ ಹೊರಿಸಿದನು. ನನ್ನ "ಸಂಭಾಷಣೆ" (Dialogue)ಗೆ ಎಲ್ಲವನ್ನೂ ನಿರ್ದೇಶಿಸುವ ಹೆಮ್ಮೆಯು ನನಗಿತ್ತು. ಆದರೂ ಕೂಡ ಅವನು ಸರಿಯಾದುದನ್ನೆ ಹೇಳಿದಾನೆಂಬುದನ್ನು ತಿಳಿಯದೆ, ಅವನ ಅಭಿಪ್ರಾಯವನ್ನೆ ದೃಢಪಡಿಸಿ;

ಕೊಂಡು ಸಂತೋಷಪಡುವಂತೆ ಅವನನ್ನು ಬಿಟ್ಟನು. ಇಂಥ ಪ್ರಸಂಗಗಳಲ್ಲಿ ಈ ಮಾರ್ಗವು ಅತ್ಯುತ್ತಮವಾದುದೆಂದು ನಾನು ಸಾಮಾನ್ಯವಾಗಿ ನಿರ್ಧರಿಸುತ್ತೇನೆ. ಆಫೀಸರುಗಳೆಲ್ಲ ಸೇರಿಕೊಂಡು ರೆಜಿಮೆಂಟಿನ ಕರ್ನಲನೆಂದು ನನ್ನನ್ನು ಆರಿಸಿದರು, ಅದನ್ನು ಈಸಲ ನಾನು ಸ್ವೀಕರಿಸಿದೆನು. ನಮ್ಮಲ್ಲಿ ಎಷ್ಟು ಕಂಪೆನಿಗಳು (companies) ಇದ್ದವೆಂಬುದು ನನಗೆ ಮರತು ಹೋಗಿದೆ. ಆದರೆ ನಾವು ಸುಮಾರು ಹನ್ನೆರಡು ನೂರು ರೂಪವಂತರಾದ ಜನರನ್ನು, ಒಂದು ಸಶಸ್ತ್ರ ಕಂಪೆನಿಯೊಡನೆ ಪರೇಡು (parade) ಮಾಡಿಸುತ್ತಿದ್ದೆವು. ಈ ಕಂಪೆನಿಯವರಿಗೆ ಆರು ಹಿತ್ತಾಳೆಯ ಹಗುರ ಬಂದೂಕಗಳನ್ನು (brass field-pieces) ಕೊಡಲಾಗಿತ್ತು. ಇವುಗಳನ್ನು ಉಪಯೋಗಿಸುವುದರಲ್ಲಿ ಅಷ್ಟೊಂದು ಪರಿಣತಿಯನ್ನು ಅವರು ಹೊಂದಿದ್ದರಲ್ಲಾ—ಒಂದು ಮಿನಿಟಿನಲ್ಲಿ ಹನ್ನೆರಡು ಸಲ ಅವುಗಳನ್ನು ಈಡು ಮಾಡುತ್ತಿದ್ದರು. ನನ್ನ ಜೊತೆಗೆ ಮನೆಗೆ ಬಂದಂಥ ನನ್ನ ರೆಜಿಮೆಂಟನ್ನು ಮೊದಲಬಾರಿಗೆ ವಿಮರ್ಶೆ ಮಾಡಿದೆನು. ಅವರು ಮನೆಗೆ ಬಂದವರು ಸೆಲ್ಯೂಟ್ ಮಾಡಿ ಕೆಲ ಮದ್ದು-ಗುಂಡಿನ ಸುತ್ತಗಳನ್ನು ಹಾರಿಸಿದರು ಇದರಿಂದಾಗಿ ನಡುಕು ಹುಟ್ಟಿ ನನ್ನ ವಿದ್ಯುತ್ ಸಲಕರಣೆಗಳ ಕಾಜುಗಳು ಒಡೆದು ಹೋದವು. ಹೀಗೆ ನನ್ನ ಹೊಸ ಮರ್ಯಾದೆಯು ಅಷ್ಟೊಂದು ಬೇಗ ಒಡೆಯುವುದಾಗಿದೆಯೆಂದು ಸಿದ್ಧಪಡಿಸಿಕೊಟ್ಟಿತು. ಯಾಕೆಂದರೆ ನಮ್ಮ ಎಲ್ಲಾ ಕಮೀಷನುಗಳು (commissions) ಇಂಗ್ಲೆಂಡಿನಲ್ಲಿ ಒಂದು ಕಾಯ್ದೆಯು ರದ್ದಾದ ಮೂಲಕ ಒಡೆದುಹೋದವು

ನನ್ನ ಕರ್ನಲ್‌ಗಿರಿಯ ಚಿಕ್ಕ ಅವಧಿಯ ಕಾಲದಲ್ಲಿ, ವರ್ಜಿನಿಯಾಕ್ಕೆ ಯಾತ್ರೆ ಹೊರಡುವ ಸಮಯಕ್ಕೆ, ನನ್ನ ರೆಜಿಮೆಂಟಿನ ಆಫೀಸರುಗಳೆಲ್ಲ, ನನ್ನನ್ನು ಪಟ್ಟಣದ ಹೊರಗೆ ಚಿಕ್ಕ ಹಳ್ಳದ (Lower Ferry) ತನಕವೂ ಕೂಡ ಮೃಗಾಪಲಿನಿಂದ ಕಳುಹಿಸುವುದು ತಮಗೆ ಯೋಗ್ಯವಾದುದೆಂಬ ವಿಚಾರವನ್ನು ತಲೆಯಲ್ಲಿ ಹಾಕಿಕೊಂಡರು. ನಾನು ಅದೇ ಕುದುರೆ ಏರುವ ಹೊತ್ತಿಗೆ, ಮುವ್ವತ್ತರಿಂದ—ನಾಲ್ವತ್ತರ ಸಂಖ್ಯೆಯಲ್ಲಿ ಅವರು ನನ್ನ ಮನೆ ಬಾಗಿಲಿಗೆ, ಕುದುರೆ ಏರಿಕೊಂಡು ಸಮವಸ್ತ್ರಧಾರಿಗಳಾಗಿ ಬಂದು ನಿಂತರು. ಈ ಯೋಜನೆಯ ಬಗ್ಗೆ ಮೊದಲಲ್ಲಿ ನನಗೇನೂ ತಿಳಿಯಪಡಿಸಿರಲಿಲ್ಲ ಅಥವಾ ಇದನ್ನು ನಾನು ತಡೆದು ಬಿಡುತ್ತಿದ್ದೆನು. ಯಾಕಂದರೆ ಯಾವ ಪ್ರಸಂಗದಲ್ಲಾಗಲಿ ರಾಜ್ಯದ ಅಧಿಕಾರಿಯೆಂದು ತೋರಿಸಿಕೊಳ್ಳುವುದಕ್ಕೆ ನಾನು ವಿರುದ್ಧವಾಗಿದ್ದೆನು. ಅವರು ಕಾಣಿಸಿಕೊಂ

ಡೊಡನೆ ನಾನು ತುಂಬಾ ಕಳವಳಗೊಂಡೆನು. ಯಾಕೆಂದರೆ-ನನ್ನ ಜೊತೆಗೆ ಅವರು ನಡೆಯುವುದನ್ನು ತಪ್ಪಿಸಲು ನನಗೆ ಸಾಧ್ಯವಿರಲಿಲ್ಲ. ಇದಕ್ಕಿಂತ ಪರಿಸ್ಥಿತಿ ಹದಗೆಟ್ಟು ಹೋದುದೆಂದರೆ-ನಾವು ಮುಂದುವರಿಯಲಿಕ್ಕೆ ತೊಡಗಿ ದೊಡನೆ ಅವರು ತಮ್ಮ ಕತ್ತಿಗಳನ್ನು ಹೊರಗೆಳೆದುಕೊಂಡು ದಾರಿಗುಂಟ ಅದನ್ನು ನಗ್ನವಾಗಿ ಹಿಡಿದುಕೊಂಡೆ ಸಾಗಿದರು. ಯಾರೊ ಒಬ್ಬರು ಇದರ ವೃತ್ತಾಂತವನ್ನು ಒಡೆಯರಿಗೆ ಬರೆದು ತಿಳಿಸಿದರು. ಇದರಿಂದ ಅವರಿಗೆ ತುಂಬಾ ರೇಗಿತು. ಅವನು ಪ್ರಾಂತದಲ್ಲಿದ್ದಾಗ ಅವನಿಗೆಂದೂ ಇಂಥ ಗೌರವ ನೀಡಿರಲಿಲ್ಲ ಅಥವಾ ಅವನು ಯಾವ ಗವರ್ನರನಿಗೂ ಅದನ್ನು ಮಾಡಿರಲಿಲ್ಲ. ಅಂತೇ ಅದು ರಾಜ್ಯವಂಶದ ರಾಜಕುಮಾರರಿಗೆ ಮಾತ್ರ ಯೋಗ್ಯವಾದು ದೆಂದು ಅವನು ಹೇಳಿದನು; ಅಂಥ ವಿಷಯಗಳ ವರ್ತನೆಯ ಬಗ್ಗೆ ಏನೂ ಅರಿಯದ ನನಗೆ ಅದು ಸ್ವಲ್ಪವಾದರೂ ತಿಳಿದುದಾದರೆ ಸತ್ಯವಾದೀತು ಮತ್ತು ಈಗಲೂ ಆ ಬಗ್ಗೆ ನನಗೆ ಏನೂ ಗೊತ್ತಿಲ್ಲ.

ಈ ಮೂರ್ಖ ವಿಷಯವು ಕೂಡ ನನ್ನ ಬಗ್ಗೆ ಅವನ ಮತ್ಸರವನ್ನು ಬಹಳ ಹೆಚ್ಚಿಸಿತು, ಅದೇನು ಈ ಮೊದಲು ಕಡಿಮೆಯಾಗಿರಲಿಲ್ಲ. ಅಸೆಂಬ್ಲಿ ಯಲ್ಲಿ ಅವನ ಆಸ್ತಿಯ ಕರವನ್ನು ಮುಕ್ತಗೊಳಿಸುವ ಬಗ್ಗೆ ನಾನು ಯಾವಾ ಗಲೂ ಬಹಳ ತೀವ್ರವಾಗಿ ವಿರೋಧಿಸಿದುದರಿಂದ ಅವನು ಹಾಗೆ ಮತ್ಸರ ವಿಟ್ಟಿದ್ದನು. ಅಂತೇ ಆದರ ಬಗ್ಗೆ ಹೋರಾಡುವ ಅವನ ಅಲ್ಪತನ ಹಾಗೂ ಅನ್ಯಾಯದ ಬಗ್ಗೆ ಯಾವ ಬಲವಾದ ಯೋಜನೆಯೂ ಅವನಿಗಿರಲಿಲ್ಲ. ರಾಜಸೇವೆಯ ನಡುವಿನ ದೊಡ್ಡ ತಡೆಯೆಂದು, ಹಣ ಎತ್ತುವ ಯೋಗ್ಯ ವಾದ ಮಸೂದೆಗಳ ರೂಪವನ್ನು ಅಸೆಂಬ್ಲಿಯಲ್ಲಿ ವರ್ಚಸ್ಸು ಬೀರಿ ತಪ್ಪಿಸು ವವನೆಂದು, ನನ್ನ ಬಗ್ಗೆ ಮಂತ್ರಿಮಂಡಲಕ್ಕೆ ದೂರು ಕೊಟ್ಟನು, ಮತ್ತು ನನ್ನ ಆಫೀಸರರ ಜೊತೆಗಿನ ಈ ಪರೇಡನ್ನು (Parade), ತನ್ನ ಕೈಯಿಂದ ಪ್ರಾಂತದ ಸರಕಾರವನ್ನು ಬಲಾತ್ಕಾರದಿಂದ ಕಸಿದುಕೊಳ್ಳುವುದರ ಉದಾ ಹರಣೆಯಾಗಿ ಅವನು ಮುಂದೆ ತಂದನು. ನನ್ನನ್ನು ನೌಕರಿಯಿಂದ ಕಡಿಮೆಮಾಡಲು, ಪೋಸ್ಟ-ಮಾಸ್ಟರ್ ಜನರಲ್ ಆಗಿದ್ದ ಸರ್ ಎವೆರಾರ್ಡ್ ಫಾಕ್ನರನಿಗೆ ಕೂಡಾ ಅವನು ಕೇಳಿಕೊಂಡನು; ಆದರೆ ಇದರಿಂದ ಒಂದು ಸಭ್ಯ ಬುದ್ಧಿವಾದವಲ್ಲದೆ ಬೇರೆ ಏನೂ ದೊರೆಯಲಿಲ್ಲ.

ಗವರ್ನರ್ ಹಾಗೂ ಅಸೆಂಬ್ಲಿಯ ನಡುವೆ ಸತತ ಘರ್ಷಣೆ ನಡೆ ದಾಗ್ಯೂ ಕೂಡ, ಅಸೆಂಬ್ಲಿಯ ಸದಸ್ಯನಾಗಿದ್ದ ನನ್ನ ಪಾಲು ಅದರಲ್ಲಿ ಸಾಕಷ್ಟು ಇದ್ದರೂ ಸಹ, ಆ ದೊಡ್ಡ ಮನುಷ್ಯನ ಹಾಗೂ ನನ್ನ ಮಧ್ಯ

ಒಂದು ಸಭ್ಯ ಸಂಬಂಧವು ಇನ್ನೂ ಕೂಡ ಇದ್ದೇ ಇತ್ತು. ಅಂತೇ ನಾವೆಂದೂ ಯಾವ ವೈಯಕ್ತಿಕ ಭೇದವನ್ನು ಕಲ್ಪಿಸಿಕೊಂಡಿರಲಿಲ್ಲ. ಅವನ ಸಂದೇಶ ಗಳಿಗೆ ಕೊಟ್ಟ ಉತ್ತರಗಳನ್ನು ನಾನು ಬರೆದುದೆಂದು ಅವನಿಗೆ ತಿಳಿದರೂ ಕೂಡ ಅವನು ನನ್ನ ಬಗ್ಗೆ ಸ್ವಲ್ಪ ಅಥವಾ ಏನೂ ಕೋಪಗೊಳ್ಳದಿರುವುದನ್ನು ನೆನೆದು, ಅನಂತರ ನಾನು ಕೆಲವೊಮ್ಮೆ ಅದು ಅವನ ಉದ್ಯೋಗದ ಅಭ್ಯಾಸ ವೆಂದು ಬಗೆದಿದ್ದೇನೆ. ಲಾಯರನಾಗಿ ಬೆಳೆದುದರಿಂದ ಅವನು ನಮ್ಮಿಬ್ಬ ರನ್ನು ಒಂದು ಕಟ್ಟೆಯಲ್ಲಿ ಕಕ್ಷಿಗಾರರ ಪಕ್ಷ ಹಿಡಿದು ವಾದಿಸುವವರೆಂದು- ಅವನು ಒಡೆಯರ ಪಕ್ಷದಿಂದ ನಾನು ಅಸೆಂಬ್ಲಿಯ ಪಕ್ಷದಿಂದ ಎಂದು ಬಗೆದಿ ರುವ ಹಾಗೆ ಇತ್ತು. ಆದುದರಿಂದ ಕೆಲವೊಮ್ಮೆ ಕುಟಿಲವಾದ ವಿಷಯಗಳ ಬಗ್ಗೆ ಗೆಳೆತನದ ರೀತಿಯಲ್ಲಿ ನನ್ನ ಕೂಡ ಸಲಹೆ ಪಡೆಯಲು ನನ್ನನ್ನು ಕರೆ ಯಿಸಿಕೊಳ್ಳುತ್ತಿದ್ದನು. ಅಂತೇ ಆಗಾಗ ಅಲ್ಲದಿದ್ದರೂ ಕೆಲವೊಮ್ಮೆ ನನ್ನ ಸಲಹೆಯನ್ನು ಪಡೆಯುತ್ತಿದ್ದನು.

ಮೊದಲು ನಿರ್ಣಯಿಸಿದ ಯೋಜನೆಯಂತೆ ಬ್ರೆಡ್ಡೋಕನ ಸೈನ್ಯಕ್ಕೆ ಆಹಾರ ಸಾಮುಗ್ರಿಗಳನ್ನು ಒದಗಿಸಿಕೊಡುವ ಹಾಗೆ ನಾವು ನಡೆದು ಕೊಂಡೆವು; ಮತ್ತು ಮರ್ಮಘಾತವಾಗುವಂಥ ಅವನ ಸೋಲಿನ ಸುದ್ದಿಯು ತಲುಪಿದೊಡನೆ, ತನ್ನೊಡನೆ ಹಿಂದಿನ ಪರಗಣೆಗಳು ಕೈಬಿಟ್ಟು ಹೋಗದಂತೆ ತೆಗೆದುಕೊಳ್ಳುವ ಕ್ರಮಗಳನ್ನು ಸಮಾಲೋಚಿಸಲು ಗವರ್ನರನು ಆತುರ ದಿಂದ ನನ್ನನ್ನು ಕರೆಯಲಿಕ್ಕೆ ಕಳುಹಿಸಿದನು. ನಾನು ಕೊಟ್ಟ ಸಲಹೆಯು ನನಗೆ ಈಗ ಮರೆತು ಹೋಗಿದೆ. ಆದರೆ ಅದು ಹೀಗೆಂದು ನನಗೆನಿಸು ತ್ತದೆ: ಡನ್‌ಬಾರನಿಗೆ ಸಾಧ್ಯವಾದಲ್ಲಿ ಗಡಿನಾಡಿನಲ್ಲಿ ಅವನ ಸೈನ್ಯಗಳನ್ನು ಅವರ ರಕ್ಷಣೆಯ ಸಲುವಾಗಿ ಇರಿಸಲು ಬರೆಯತಕ್ಕದ್ದು ಮತ್ತು ಅಧಿಕಾರ ವನ್ನು ಕೊಡತಕ್ಕದ್ದು. ದಾಳಿ ಮಾಡಲು, ವಸಾಹತುಗಳಿಂದ ಕಡ್ಡಾಯ ಸೈನ್ಯ ಕೂಡಿಸಿಕೊಂಡು ಹೋಗಲಿಕ್ಕೆ ಅವನಿಗೆ ಸಾಧ್ಯವಾಗುವ ತನಕ ಅಲ್ಲಿ ಸೈನ್ಯವಿಡತಕ್ಕದ್ದು. ಮತ್ತು ಗಡಿನಾಡಿನಿಂದ ನಾನು ಮರಳಿದ ಮೇಲೆ, ಪ್ರಾಂತಿಕ ಸೈನ್ಯಗಳ ಜೊತೆಗೆ ಅವನು ಅಂಥ ಧಾಳಿಯನ್ನು ನಡೆಸಲು, ಡ್ಯೂಕ್ವೆನ್‌ಕೋಟೆಯನ್ನು ವಶಪಡಿಸಿಕೊಳ್ಳಲು ನನ್ನನ್ನು ತೆಗೆದುಕೊಳ್ಳ ಬಹುದು. ಡನ್‌ಬಾರ್ ಮತ್ತು ಅವನ ಜನರು ಬೇರೆ ರೀತಿಯಲ್ಲಿ ಕೆಲಸ ನಡೆಸುತ್ತಿರಬಹುದು. ಅಂತೇ ನನಗೆ ಜನರಲನೆಂದು ಅಧಿಕಾರ ಕೊಡಲು ಅವನು ನಿರ್ಣಯಿಸಿದನು. ಅವನು ತಿಳಿದುಕೊಂಡಷ್ಟು ರೀತಿಯಲ್ಲಿ ನನ್ನ ಮಿಲಿಟರಿ ಸಾಮರ್ಥ್ಯಗಳ ಬಗ್ಗೆ ನನ್ನಲ್ಲಿ ಅಂಥ ಒಳ್ಳೆಯ ಅಭಿಪ್ರಾಯವಿರ

ಲಿಲ್ಲ. ಅವನ ಪ್ರಕಟನೆಗಳು ಅವನ ನೈಜವಾದ ಭಾವನೆಗಳನ್ನು ಹೆಚ್ಚಿಸುತ್ತಿದ್ದವೆಂದು ನನಗನಿಸುತ್ತದೆ. ಆದರೆ, ಬಹುಶಃ ನನ್ನ ಖ್ಯಾತಿಯು ಜನರನ್ನು ಕೂಡಿಸುವುದರಲ್ಲಿ ಉಪಯೋಗವಾದೀತೆಂದು ಅವನು ತಿಳಿದುಕೊಂಡ ಹಾಗಿತ್ತು ಮತ್ತು ಅಸೆಂಬ್ಲಿಯಲ್ಲಿನ ನನ್ನ ವರ್ಚಸ್ಸಿನಿಂದ ಅವರಿಗೆ ಕೊಡತಕ್ಕ ಹಣವು ಬಹುಶಃ ಒಡೆಯರ ಆಸ್ತಿಗಳನ್ನು ಕರವಿಮುಕ್ತ ಮಾಡಿ ದೊರೆಯಬಹುದೆಂದು ನಂಬಿದಂತೆ ಇತ್ತು. ಅವನು ಅಪೇಕ್ಷಿಸಿದಷ್ಟು ಮುಂದುವರಿದು ಕೆಲಸಕ್ಕಿಳಿಯದಿರುವ ನನ್ನನ್ನು ಕಂಡು, ಯೋಜನೆಯು ರದ್ದು ಮಾಡಲ್ಪಟ್ಟಿತು, ಮತ್ತು ಅವನು ಕ್ಯಾಪ್ಟನ್ ಡೆನ್ನಿಯಿಂದ ಪದಚ್ಯುತನಾಗಿ ಆ ಕೂಡಲೆ ಸರಕಾರವನ್ನು ಬಿಟ್ಟು ಹೋದನು.

ಈ ಹೊಸ ಗವರ್ನರನ ಆಡಳಿತೆಯ ಕೈಕೆಳಗೆ ಸಾರ್ವಜನಿಕ ಜೀವನದಲ್ಲಿ ನಾನು ವಹಿಸಿಕೊಂಡ ಪಾತ್ರದ ವಿಷಯವನ್ನು ಹೇಳಲು ಮುಂದುವರಿಯುವ ಮೊದಲು ಇಲ್ಲಿ ನನ್ನ ತಾತ್ವಿಕ ಯಶಸ್ಸಿನ ಹುಟ್ಟು ಹಾಗೂ ಪ್ರಗತಿಯ ಕೆಲ ವೃತ್ತಾಂತವನ್ನು ಕೊಡುವುದು ತಪ್ಪಾಗಲಾರದೆನ್ನಬಹುದು.

೧೭೪೬ ರಲ್ಲಿ ಬೋಸ್ಟನಿನಲ್ಲಿದ್ದ ಕಾರಣ ನಾನು ಡಾ। ಸ್ಪೆನ್ಸನನ್ನು ಕಂಡೆನು. ಅವನು ಇತ್ತೀಚೆಗೆ ಸ್ಕಾಟ್‌ಲೆಂಡಿನಿಂದ ಬಂದಿದ್ದನಷ್ಟೆ. ಅಂತೇ ನನಗೆ ಕೆಲವು ವಿದ್ಯುತ್ ಪ್ರಯೋಗಗಳನ್ನು ತೋರಿಸಿದನು. ಅವನು ಅದರಲ್ಲಿ ಅಷ್ಟೊಂದು ವಿದ್ವಾಂಸನಲ್ಲದುದರಿಂದ ಅವುಗಳು ತಪ್ಪಾಗಿ ಪ್ರಯೋಗಿಸಲ್ಪಟ್ಟಿದ್ದುವು. ಆದರೆ ಅವುಗಳು ನನಗೆ ತೀರ ಹೊಸತಾದುದರಿಂದ ನನ್ನನ್ನು ಸಾಕಷ್ಟು ಅಚ್ಚರಿಗೊಳಿಸಿದವು ಮತ್ತು ಸಂತಸಪಡಿಸಿದ್ದು ಆಯಿತು. ನಾನು ಫಿಲಡೆಲ್ಫಿಯಾಕ್ಕೆ ತಲಪಿದ ತರುಣದಲ್ಲೇ, ನಮ್ಮ ವಾಚನಾಲಯದ ಕಂಪನಿಯವರಿಗೆ, ಅಂಥ ಪ್ರಯೋಗಗಳನ್ನು ಮಾಡುವುದರಲ್ಲಿ ಉಪಯೋಗವಿರುವ ಒಂದು ಗಾಜಿನ ನಳಿಕೆಯು ಅವುಗಳನ್ನು ಪ್ರಯೋಗಿಸುವ ಕೆಲ ವೃತ್ತಾಂತದೊಂದಿಗೆ, ಮಿಸ್ಟರ್ ಪಿ. ಕೊಲಿನ್ಸನ್ ಎಂಬ ಫೆಲೋ ಆಫ್ ದಿ ರಾಯಲ್ ಸೊಸೈಟಿ, ಲಂಡನ್‌ವರಿಂದ (Fellow of the Royal Society of London) ಬಹುಮಾನವಾಗಿ ಕೊಡಲ್ಪಟ್ಟಿತು. ನಾನು ಬಹಳ ಕುತೂಹಲದಿಂದ ಬೋಸ್ಟನಿನಲ್ಲಿ ಏನನ್ನು ನೋಡಿದ್ದೆನೋ ಅದನ್ನು ಪುನಃ ಪ್ರಯೋಗಿಸುವ ಸಂಧಿಯನ್ನು ಸಾಧಿಸಿಕೊಂಡೆನು ; ಮತ್ತು ಬಹಳ ಹೆಚ್ಚು ಅಭ್ಯಾಸ ಮಾಡಿ, ಅವುಗಳ ಪ್ರಯೋಗದಲ್ಲಿ ಸಾಕಷ್ಟು ಪರಿಪೂರ್ಣತೆಯನ್ನು– ಇಂಗ್ಲೆಂಡಿನಿಂದ ನಾವು ಪಡೆದ ಅದರ ವೃತ್ತಾಂತದಿಂದ ಕೆಲವೊಂದು ಹೊಸವನ್ನು ಸೇರಿಸಿ–ಹೊಂದಿದೆನು. ಹೆಚ್ಚಿನ ಅಭ್ಯಾಸದಿಂದ–ಎಂದು ನಾನು

ಯಾಕೆ ಹೇಳುತ್ತೇನೆಂದರೆ ನನ್ನ ಮನೆಯು, ಕೆಲಕಾಲ, ಈ ಹೊಸ ಅಚ್ಚರಿ ಅದ್ಭುತಗಳನ್ನು ನೋಡಲು ಬರುವ ಜನರಿಂದ ಸತತ ತುಂಬಿರುತ್ತಿತ್ತು. ಈ ಭಾರವನ್ನು ತುಸು ನನ್ನ ಗೆಳೆಯರಲ್ಲಿ ವಿಭಾಗ ಮಾಡುವುದಕ್ಕಾಗಿ ನಮ್ಮ ಪ್ರಯೋಗ ಶಾಲೆಯಲ್ಲಿ (glass-house) ಇದೇ ಬಗೆಯ ಕೆಲವೊಂದು ನಳಿಕೆಗಳನ್ನು ತಯಾರಿಸುವಂತೆ ಮಾಡಿದೆನು; ಅವುಗಳನ್ನು ಅವರು ತಮ್ಮ ಷ್ಟಕ್ಕೆ ಒದಗಿಸಿಕೊಂಡರು, ಹೀಗಾಗಿ ಕೊನೆಗೆ ನಮ್ಮಲ್ಲಿ ಅನೇಕ ಪ್ರಯೋಗ ಕಾರರು (Performers) ಆದರು. ಇವರಲ್ಲಿ ಪ್ರಮುಖನಾದವನೆಂದರೆ ಮಿಸ್ಟರ್ ಕಿನ್ನರ್ಸ್ಲೇ ಎಂಬೊಬ್ಬ ಚತುರ ನೆರೆಹೊರೆಯವನಾಗಿದ್ದನು. ಅವನು ವೃತ್ತಿಹೀನನಾದುದರಿಂದ ಪ್ರಯೋಗಗಳನ್ನು ಹಣಪಡೆದು ನಡೆ ಸಲು ನಾನು ಅವನಿಗೆ ಪ್ರೋತ್ಸಾಹ ನೀಡಿದೆನು. ಅಂತೇ ಅವನಿಗೆ ಎರಡು ವ್ಯಾಖ್ಯಾನಗಳನ್ನು ಬರೆದು ಕೊಟ್ಟೆನು. ಆದರಲ್ಲಿ ಅಂಥ ಕ್ರಮದಲ್ಲಿ ಪ್ರಯೋಗಗಳನ್ನು ಹೊಂದಿಸಲಾಗಿತ್ತು ಮತ್ತು ಅಂಥ ವಿವರಣೆಯೊಡನೆ, ಅಂಥ ಪದ್ಧತಿಯಲ್ಲಿ ಬರೆಯಲಾಗಿತ್ತು—ಕೈಯಲ್ಲಿರುವ ಪ್ರಯೋಗವು ಮುಂದಿನ ಪ್ರಯೋಗವನ್ನು ಸುಲಭವಾಗಿ ಗ್ರಹಿಸಲು ಈ ಕೆಲಸಕ್ಕೆ ಅವನು ಒಂದು ಉಚ್ಚಸಲಕರಣೆ (apparatus) ಯನ್ನು ದೊರಕಿಸಿದನು. ಅದರಲ್ಲಿ ನಾನು ಕ್ರೂರವಾಗಿ ನನ್ನ ಸಲುವಾಗಿ ತಯಾರಿಸಿದಂಥ ಎಲ್ಲಾ ಚಿಕ್ಕ-ಪುಟ್ಟ ಯಂತ್ರಗಳನ್ನು ಸಲಕರಣೆಗಳನ್ನು ತಯಾರಿಸುವವರಿಂದ (instrument–makers) ಅಚ್ಚು-ಕಟ್ಟಾಗಿ ಮಾಡಿಸಿ ಇಡಲಾಯಿತು. ಅವನ ವ್ಯಾಖ್ಯಾನಗಳನ್ನು ತುಂಬ ಜನರು ಕೇಳುತ್ತಿದ್ದರು. ಅಂತೇ ಅವು ಹೆಚ್ಚಿನ ತೃಪ್ತಿಯನ್ನು ಕೊಡುತ್ತಿದ್ದವು. ಕೆಲ ಸಮಯದ ನಂತರ ಅವನು ವಸಾಹತುಗಳಲ್ಲೆಲ್ಲ ಹೋಗಿ ಪ್ರತಿಯೊಂದು ಮುಖ್ಯ ಪೇಟೆಯಲ್ಲಿ ಅವುಗಳನ್ನು ಪ್ರಯೋಗಿಸುತ್ತ ಹೋಗಿ ಒಂದಿಷ್ಟು ಹಣ ಸಂಪಾದಿಸಿದನು. ಅದಲ್ಲದೆ, ವೆಸ್ಟ ಇಂಡಿಯಾ ದ್ವೀಪದಲ್ಲಿ, ಸಾಮಾನ್ಯವಾಗಿದ್ದ ಹವೆಯ ಆರ್ದ್ರತೆಯ ಮೂಲಕ ಬಹಳ ಕಷ್ಟದಿಂದ ಪ್ರಯೋಗಗಳನ್ನು ಮಾಡಬೇಕಾಗಿ ಬಂದಿತು.

ಮಿಸ್ಟರ್ ಕೋಲಿನ್ಸನನಿಗೆ ಅವನ ನಳಿಕೆ (tube) ಮೊದಲಾದವು ಗಳ ಬಹುಮಾನದ ಬಗ್ಗೆ ನಾವು ಋಣಿಯಾಗಿದ್ದುದರಿಂದ ಅದರ ಉಪ ಯೋಗದಲ್ಲಿ ನಮ್ಮ ಯಶಸ್ಸಿನ ಬಗ್ಗೆ ಅವನಿಗೆ ತಿಳಿಸುವುದು ಸರಿಯೆಂದು ನನಗೆ ಕಂಡುಬಂದಿತು. ಕಾರಣ, ನಮ್ಮ ಪ್ರಯೋಗಗಳ ವೃತ್ತಾಂತದ ಕುರಿತಾಗಿ ಅವನಿಗೆ ಅನೇಕ ಪತ್ರಗಳನ್ನು ಬರೆದೆನು. ಅವನು ಅವುಗಳನ್ನು ರಾಯಲ್ ಸೊಸೈಟಿಯಲ್ಲಿ ಓದಿಸಿದನು. ಅಲ್ಲಿ ಮೊದಲಿಗೆ ಅವುಗಳು

ಅವರ ಕಾರ್ಯ ನಿರ್ವಹಣೆಗೆ ಅಷ್ಟೊಂದು ಮಹತ್ವದವುಗಳಲ್ಲದ್ದರಿಂದ ಯೋಗ್ಯವಾಗಿಲ್ಲವೆಂದು ನಿರ್ಣಯಿಸಲ್ಪಟ್ಟವು. ವಿದ್ಯುತ್ ಮತ್ತು ಮಿಂಚು ಇವುಗಳ ಸಾಮ್ಯತೆಯ ಬಗ್ಗೆ, ಮಿಸ್ಟರ್ ಕಿನ್ನರ್ಸ್ಲೇಯನಿಗಾಗಿ ಬರೆದ ಒಂದು ಪ್ರಬಂಧವನ್ನು, ನನ್ನ ಮಿತ್ರ ಮತ್ತು ಆ ಸಂಸ್ಥೆಯ ಒಬ್ಬ ಸದಸ್ಯನೂ ಆಗಿದ್ದ ಡಾಕ್ಟರ್ ಮಿಚ್ಚೆಲ್ ಎಂಬವನಿಗೆ ಕಳುಹಿಸಿ ಕೊಟ್ಟೆನು. ಅದನ್ನು ಓದಲಾಯಿತೆಂದು, ಆದರೆ ಅದು ಪರೀಕ್ಷಕರ ಹಾಸ್ಯಕ್ಕೆ ಗುರಿಯಾಯಿತೆಂದು ಅವನು ನನಗೆ ಬರೆದನು. ಆದರೂ ಕೂಡ, ಪ್ರಬಂಧಗಳನ್ನು ಡಾಕ್ಟರ್ ಫ್ರೋದರ್‌ಜಿಲ್ಲನಿಗೆ ತೋರಿಸಲಾಯಿತು. ಅವನು ಮಾತ್ರ ಅವುಗಳಿಗೆ ತುಂಬಾ ಬೆಲೆಯುಂಟೆಂದು ತಿಳಿದು ಅವುಗಳನ್ನು ಅಲ್ಲಗಳೆಯಬಾರದೆಂದು ಅವುಗಳನ್ನು ಮುದ್ರಿಸಲು ಸಲಹೆ ಕೊಟ್ಟನು. ಆಮೇಲೆ ಮಿಸ್ಟರ್ ಕೋಲಿನ್ಸನನು ಅವುಗಳನ್ನು ಕೇವ್‌ನಿಗೆ ಅವನ "ಜಂಟಲಮೇನ್ಸ ಮೆಗಝಿನ್' ದಲ್ಲಿ ಪ್ರಕಟಿಸಲಿಕ್ಕೆ ಕೊಟ್ಟನು; ಆದರೆ ಅವುಗಳನ್ನು ಪ್ರತ್ಯೇಕವಾಗಿ ಪುಸ್ತಿಕೆಗಳ ರೂಪದಲ್ಲಿ ಪ್ರಕಟಿಸಲು ಅವನು ಆಲೋಚನೆ ಮಾಡಿದನು. ಅಲ್ಲದೆ ಡಾ। ಫ್ರೋದರ್‌ಜಿಲ್ಲನು ಅದಕ್ಕೊಂದು ಮುನ್ನುಡಿ ಬರೆದನು. ಕೇವ್‌ನು ತನ್ನ ಲಾಭದ ಬಗ್ಗೆ ಯೋಗ್ಯವಾಗಿ ತರ್ಕಿಸಿದನೆಂದು ಕಾಣುತ್ತದೆ. ಯಾಕಂದರೆ–ಆನಂತರ ಅವುಗಳಿಗೆ ಕೂಡಿಸಲ್ಪಟ್ಟ ನಂತರದ ಸಂಕಲನಗಳಿಂದ ಅವುಗಳು ಕ್ವಾರ್ಟೊ ಗ್ರಂಥದವರೆಗೂ (Quarto Volume) ಉಬ್ಬಿಕೊಂಡಾಯಿತು. ಅದು ಐದು ಮುದ್ರಣಗಳನ್ನು ಪಡೆಯಿತು. ಮತ್ತು ಅವನಿಗೆ ಏನೂ ನಕಲು–ಹಣ (Copy-Money) ದ ವೆಚ್ಚ ಬೀಳಲಿಲ್ಲ.

ಹೀಗಿದ್ದರೂ ಸಹ, ಕೆಲ ಕಾಲದ ಮೊದಲೇ ಇಂಗ್ಲೆಂಡಿನಲ್ಲಿ ಆ ಪ್ರಬಂಧಗಳ ಬಗ್ಗೆ ಹೆಚ್ಚಿನ ಲಕ್ಷ್ಯ ತೆಗೆದುಕೊಳ್ಳಲಾಗಿತ್ತು. ಅವುಗಳ ಒಂದು ಪ್ರತಿಯು, ಫ್ರಾನ್ಸಿನಲ್ಲಿ ಬಹು ದೊಡ್ಡ ಖ್ಯಾತಿಯನ್ನು ಯೋಗ್ಯವಾಗಿ ಗಳಿಸಿದ ತತ್ವಜ್ಞಾನಿ-ಕೌಂಟ್ ಡಿ ಬಫನ್‌ನ ಕೈಗೆ ಬಂತು. ಅಲ್ಲದೆ ಯುರೋಪಿನ ಆದ್ಯಂತವೆಲ್ಲ ಅದು ಸಂಚರಿಸಿತ್ತು. ಇತ್ತ ಅವನು ಅವುಗಳನ್ನು ಫ್ರೆಂಚಿನಲ್ಲಿ ಅನುವಾದಿಸಲು ಎಂ. ಡೆಲಿಬಾರ್ಡನಿಗೆ ಆಜ್ಞೆ ಮಾಡಿದನು. ಅಂತೇ ಅವುಗಳು ಪ್ಯಾರಿಸ್ಸಿನಲ್ಲಿ ಮುದ್ರಿಸಲ್ಪಟ್ಟವು. ಈ ಪ್ರಕಟನೆಯು ಆಬೆ ನೋಲೆಟ್ (Abbe Nollet) ನನ್ನು ರೇಗಿಸಿತು. ಇವನು ರಾಜ್ಯವಂಶದವರಿಗೆ ನ್ಯಾಚುರಲ್ ಫಿಲಾಸೊಫಿ (Natural Philosophy) ಯ ಅಧ್ಯಾಪಕನಾಗಿದ್ದನು ಮತ್ತು ಒಬ್ಬ ಸಮರ್ಥ ಪ್ರಯೋಗಕಾರನಾಗಿದ್ದು,

ವಿದ್ಯುತ್ತಿನ ಒಂದು ತತ್ವವನ್ನು ರೂಪಿಸಿ ಪ್ರಕಟಿಸಿದ್ದನು. ಅದು ಆಗ ಸಾಮಾನ್ಯವಾಗಿ ರೂಢಿಯಲ್ಲಿತ್ತು. ಮೊಟ್ಟ ಮೊದಲಲ್ಲಿ ಅಂಥ ಕೃತಿಯು ಅಮೇರಿಕಾದಿಂದ ಬಂದಿತೆಂಬುದನ್ನು ನಂಬಲು ಅವನಿಂದ ಸಾಧ್ಯವಿದ್ದಿಲ್ಲ ಮತ್ತು ತನ್ನ ಪದ್ಧತಿಯನ್ನು ನಿಂದಿಸುವುದಕ್ಕಾಗಿ ಪ್ಯಾರಿಸಿನಲ್ಲಿ ಯಾರೋ ವೈರಿಗಳು ಅದನ್ನು ಬನಾವಣೆಯಿಂದ ರಚಿಸಿರಲೇಬೇಕೆಂದು ಹೇಳಿದನು. ಅನಂತರ ಫಿಲಡೆಲ್ಫಿಯಾದಲ್ಲಿ ಫ್ರ್ಯಾಂಕ್ಲಿನ್ ಎಂಬ ಮನುಷ್ಯನು ಜೀವಿಸಿದ್ದಾನೆಂಬುದು ನೈಜವಾಗಿ ಅವನಿಗೆ ಖಾತ್ರಿಯಾದೊಡನೆ.—ಆ ಬಗ್ಗೆ ಅವನು ಸಂಶಯಪಟ್ಟಿದ್ದನು,—ಅವನು ಒಂದು ಗ್ರಂಥದಷ್ಟು ಪತ್ರಗಳನ್ನು ಪ್ರಕಟಿಸಿದನು. ಅವುಗಳು ಮುಖ್ಯವಾಗಿ ನನಗೆ ಹೇಳಲಾಗಿದ್ದು, ತನ್ನ ತತ್ವವನ್ನು ಮಂಡಿಸಿ ಮತ್ತು ನನ್ನ ಪ್ರಯೋಗಗಳ ನೈಜತೆಯನ್ನು ನಿರಾಕರಿಸಿ ಹಾಗೂ ಅವುಗಳಿಂದ ಊಹಿಸಲಾದ ಸ್ಥಿತಿಗಳನ್ನೂ ಖಂಡಿಸಿ ಬರೆಯಲಾಗಿದ್ದವು.

ನಾನು ಒಮ್ಮೆ ಅಬೆ (abbe)ನಿಗೆ ಉತ್ತರಿಸಬೇಕೆಂದು ನಿರ್ಣಯಿಸಿದೆನು, ಮತ್ತು ವಸ್ತುತಃ ಉತ್ತರ ಬರೆಯಲಿಕ್ಕೆ ಪ್ರಾರಂಭಿಸಿದ್ದೂ ಆಯಿತು ಆದರೆ ನನ್ನ ಬರವಣಿಗೆಯಲ್ಲಿ ಪ್ರಯೋಗಗಳ ವಿವರಣೆಯಿರುವ ಮೂಲಕ, ಅವುಗಳನ್ನು ಯಾರಾದರೂ ಕೂಡ ಪುನಃ ಪ್ರಯೋಗಿಸಿ ದೃಢಪಡಿಸಿಕೊಳ್ಳಬಹುದು, ಮತ್ತು ಒಂದುವೇಳೆ ದೃಢಪಡಿಸಿಕೊಳ್ಳದಿದ್ದರೆ ಖಂಡಿಸಲಿಕ್ಕೆ ಸಾಧ್ಯವಿರಲಿಲ್ಲ; ಅಲ್ಲದೆ ಮುಂದಿಟ್ಟ ಊಹೆಗಳೂ ಕೂಡ ಕಂಡುಕೊಂಡ ಅಭಿಪ್ರಾಯಗಳಾಗಿದ್ದವು ಮತ್ತು ಹಠದಿಂದ ಹೇಳಿದವುಗಳಾಗಿರಲಿಲ್ಲ. ಆದುದರಿಂದ ಅವುಗಳನ್ನು ಸಮರ್ಥಿಸಿಕೊಳ್ಳುವ ಯಾವ ನಿರ್ಬಂಧಕ್ಕೂ ನಾನು ಒಳಪಡಬೇಕಾಗಿರಲಿಲ್ಲ. ಅಂತೇ ವಿವಿಧ ಭಾಷೆಗಳಲ್ಲಿ ಬರೆಯುವಂಥ ಇಬ್ಬರು ಮನುಷ್ಯರ ನಡುವಿನ ವಿವಾದವು ತಪ್ಪು ಅನುವಾದದ ಮೂಲಕ ತುಂಬ ವರ್ಧಿಸಬಹುದೆಂಬುದನ್ನು ಗಣನೆಗೆ ತಂದುಕೊಂಡು ಇದರಿಂದ ಪರಸ್ಪರರ ಅರ್ಥಗಳ ತಪ್ಪು ಅಭಿಪ್ರಾಯಗಳುಂಟಾಗುವುದರಿಂದ, ನನ್ನ ಪ್ರಬಂಧಗಳು ಹಾಗೇ ಮುಂದುವರಿಯಲೆಂದು ನಾನು ನಿರ್ಣಯಿಸಿದೆನು. ಅಬಾನ ಪತ್ರಗಳಲ್ಲಿ ಒಂದು ಅನುವಾದದ ತಪ್ಪಿನಿಂದುಂಟಾದ ವಿಷಯದ ಮೇಲೆ ಬಹಳ ಆಧರಿಸಿದ್ದಾಗಿತ್ತು. ಹೀಗಾಗಿ ಸಾರ್ವಜನಿಕ ವ್ಯವಹಾರದ ಹೊರತು ನನಗೆ ದೊರೆಯುವ ಸಮಯವನ್ನು ಈಗಾಗಲೆ ನಡೆಸಿದ ಪ್ರಯೋಗಗಳ ಬಗೆಗೆ ವಿವಾದ ನಡೆಸುವುದರಲ್ಲಿ ಕಳೆಯದೆ, ಹೊಸ ಪ್ರಯೋಗಗಳಲ್ಲಿ ಅದನ್ನು ವಿನಿಯೋಗಿಸುವುದು ಒಳ್ಳೆಯದೆಂದು ನಿರ್ಣಯಿಸಿದೆನು. ಆದುದರಿಂದ ಎಂ. ನೋಲೆಟ್‌ನಿಗೆ ನಾನೆಂದೂ ಉತ್ತರಕೊಡಲಿಲ್ಲ. ಅಂತೇ

ಮುಂದಿನ ಪ್ರಸಂಗದಿಂದ ನನ್ನ ಮೌನಕ್ಕೆ ವಿಷಾದಪಡುವ ಕಾರಣವೇ ಬರಲಿಲ್ಲ. ಯಾಕಂದರೆ ರಾಯಲ್ ಅಕೆಡೆಮಿ ಆಫ್ ಸಾಯನ್ಸೆಸ್‌ದ ಎಂ. ಲೆ ರೋಯ್ ಎಂಬ ನನ್ನ ಗೆಳೆಯನು ನನ್ನ ಪಕ್ಷವನ್ನು ವಹಿಸಿ ಅವನನ್ನು ಖಂಡಿಸಿದನು. ನನ್ನ ಪುಸ್ತಕವು ಇಟಾಲಿಯನ್, ಜರ್ಮನ್ ಮತ್ತು ಲ್ಯಾಟಿನ್ ಭಾಷೆಗಳಲ್ಲಿ ಅನುವಾದಿಸಲ್ಪಟ್ಟಿತು. ಅದರಲ್ಲಿ ವ್ಯಕ್ತಗೊಂಡ ತತ್ವವನ್ನು ಸಾರ್ವತ್ರಿಕವಾಗಿ ಕ್ರಮೇಣ ಯುರೋಪಿನ ಆದ್ಯಂತ್ಯವೆಲ್ಲ ತತ್ವಜ್ಞಾನಿಗಳು ಆಬಾ (abbe)ನ ತತ್ವಕ್ಕಿಂತ ಉತ್ತಮವಾದುದೆಂದು ಒಪ್ಪಿಕೊಂಡರು. ಹೀಗಾಗಿ ಅವನ ಇಲೆವ್ (eleve) ಹಾಗೂ ಪಟ್ಟದ ಶಿಷ್ಯನಾದ ಪ್ಯಾರಿಸ್ಸಿನ ಮೊನ್ಸ್ಯುರ್ ಬಿ—ಯ ಹೊರತಾಗಿ, ಅವನೇ ತನ್ನ ತತ್ವದ ಕೊನೆಯನ್ನು ನೋಡಲು ಬದುಕಿದಂತಾಯಿತು.

ನನ್ನ ಪುಸ್ತಕಕ್ಕೆ ಅತ್ಯಂತ ತೀವ್ರ ಹಾಗೂ ಸಾರ್ವತ್ರಿಕ ಖ್ಯಾತಿಯನ್ನು ತಂದೊಡ್ಡಿದುದು ಏನೆಂದರ ಅದರಲ್ಲಿ ಪ್ರಸ್ತಾಪಿಸಿದ ಪ್ರಯೋಗಗಳಲ್ಲಿ ಒಂದಾಗಿದ್ದ, ಮೋಡಗಳಿಂದ ವಿದ್ಯುತ್ತನ್ನು (lightning) ಸೆಳೆಯುವ ಪ್ರಯೋಗವನ್ನು ಮೆಸರ್ಸ ಡೆಲಿವಾರ್ಡ ಮತ್ತು ಡಿ ಲೊರ್ ಎಂಬುವರು ಮಾರ್ಲಿಯಲ್ಲಿ ನಡೆಸಿ ಯಶಸ್ಸು ಗಳಿಸಿದುದಾಗಿತ್ತು. ಇದರಿಂದ ಎಲ್ಲೆಡೆಯಲ್ಲೂ ಸಾರ್ವಜನಿಕರ ಲಕ್ಷ್ಯವನ್ನು ಎಳೆಯಲಾಯಿತು. ಪ್ರಾಯೋಗಿಕ ತತ್ವಶಾಸ್ತ್ರ (experimental philosophy)ದ ಒಂದು ಸಲಕರಣೆಯುಳ್ಳಂಥ ಹಾಗೂ ವಿಜ್ಞಾನದ ಆ ವಿಭಾಗದಲ್ಲಿ ವ್ಯಾಖ್ಯಾನ ಮಾಡುತ್ತಿದ್ದ ಎಂ.ಡಿ. ಲೊರ್‌ನು 'ಫಿಲಡೆಲ್ಫಿಯಾ ಎಕ್ಸಪರಿಮೆಂಟ್ಸ್'(Philadelphia Experiments)ಎಂದು ಅವನು ಕರೆಯುತ್ತಿದ್ದ ಪ್ರಯೋಗಗಳನ್ನು ಪುನರಾವರ್ತಿಸಲು ತೊಡಗಿದನು; ಮತ್ತು ಅವುಗಳನ್ನು ರಾಜನ ಹಾಗೂ ನ್ಯಾಯಸ್ಥಾನದ ಮುಂದೆ ಪ್ರಯೋಗ ಮಾಡಿ ತೋರಿಸಿದ ನಂತರ, ಪ್ಯಾರಿಸಿನ ಎಲ್ಲಾ ಉತ್ಸಾಹಶಾಲಿಗಳು ಅವುಗಳನ್ನು ನೋಡಲು ಕಿಕ್ಕಿರಿದು ತುಂಬಿದರು. ಆ ಅದ್ಭುತ ಪ್ರಯೋಗದ ವೃತ್ತಾಂತ ಕೊಟ್ಟು, ಆದಲ್ಲದೆ ಅಂಥದೇ ಒಂದನ್ನು ಆ ಕೂಡಲೆ ನಾನು ಫಿಲಡೆಲ್ಫಿಯಾದಲ್ಲಿ ಗಾಳಿಪಟದ (Kite) ಮೂಲಕ ನೆರವೇರಿಸಿದಾಗ ಅದರ ಯಶಸ್ಸಿಂದ ನನಗುಂಟಾದ ಅಪರಿಮಿತ ಆನಂದವನ್ನು ಕೂಡಾ ವ್ಯಕ್ತಗೊಳಿಸಿ – ಈ ಕಥಾನಕವನ್ನು ಉಬ್ಬಿಸುವುದಿಲ್ಲ. ಯಾಕಂದರೆ ವಿದ್ಯುತ್ತಿನ ಇತಿಹಾಸಗಳಲ್ಲಿ ಅವೆರಡೂ ಕಾಣಲಿಕ್ಕೆ ಸಿಗುತ್ತವೆ.

ಡಾಕ್ಟರ್ ರೈಟ್‌ನೆಂಬೊಬ್ಬ ಇಂಗ್ಲೀಷ ವೈದ್ಯನು, ಪ್ಯಾರಿಸಿನಲ್ಲಿದ್ದಾಗ

ರೋಯಲ್ ಸೊಸ್ಯಾಟಿಯ ಮಿತ್ರನಿಗೆ–ನನ್ನ ಪ್ರಯೋಗಗಳ ಬಗ್ಗೆ ದೂರದ ವಿದ್ವಾಂಸರಲ್ಲಿ ಹಬ್ಬಿದ ಖ್ಯಾತಿಯ ವಿಷಯವನ್ನು ಕುರಿತು, ಹಾಗೂ ಇಂಗ್ಲೆಂಡಿನಲ್ಲಿ ನನ್ನ ಬರವಣಿಗೆಯು ಅಷ್ಟೊಂದು ಅಲ್ಪ ಅವಗಾಹನೆಗೆ ಗುರಿಯಾದುದಕ್ಕೆ ಅವರು ವ್ಯಕ್ತಪಡಿಸಿದ ಆಶ್ಚರ್ಯವನ್ನು ವಿವರಿಸಿ, ಪತ್ರ ಬರೆದನು. ಇದರಿಂದ ಅವರಿಗೆ ಓದಿ ಹೇಳಲಾದ ನನ್ನ ಪತ್ರಗಳನ್ನು ಸಂಸ್ಥೆಯು ಪುನಃ ಅವಗಾಹನೆಗೆ ತೆಗೆದುಕೊಳ್ಳಲು ಆರಂಭಿಸಿತು. ಅಂತೇ ಸುಪ್ರಸಿದ್ಧನಾದ ಡಾ| ವಾಟ್‌ಸನ್‌ನು ಅವುಗಳ ಹಾಗೂ ಆ ವಿಷಯದ ಬಗ್ಗೆ ಅನಂತರ ಇಂಗ್ಲೆಂಡಿಗೆ ಕಳುಹಿಸಿದ ಎಲ್ಲವುಗಳ ಸಾರಾಂಶದ ವೃತ್ತಾಂತವನ್ನು ತಯಾರಿಸಿದನು. ಅದರಲ್ಲಿ ಲೇಖಕನ ಪ್ರಶಂಸೆಯನ್ನೂ ತುಸು ಕೂಡಿಸಿದನು. ಅವರ ಪ್ರಕಟಣೆಗಳಲ್ಲಿ ಆ ಮೇಲೆ ಈ ಸಾರಾಂಶವು ಪ್ರಕಟವಾಯಿತು. ಲಂಡನಿನಲ್ಲಿ ಸಂಸ್ಥೆಯ ಕೆಲವು ಸದಸ್ಯರು, ಮುಖ್ಯವಾಗಿ ಘನ ವಿದ್ವಾಂಸನಾದ ಮಿಸ್ಟರ್ ಕ್ಯಾಂಟನನು—ಚೂಪಾದ ಸಲಾಕೆಯ ಮೂಲಕ ಮೋಡಗಳಿಂದ ವಿದ್ಯುತ್ತನ್ನು ಪಡೆಯುವ ಪ್ರಯೋಗವನ್ನು ಸತ್ಯವೆಂದು ಕಂಡುಕೊಂಡ ಮೇಲೆ ಮತ್ತು ಅವರಿಗೆಲ್ಲ ಅದರ ಯಶಸ್ಸನ್ನು ತಿಳಿಯಪಡಿಸಿದುದರಿಂದ, ಅವರೆಲ್ಲ ಆ ಕೂಡಲೆ, ಈ ಹಿಂದೆ ನನ್ನನ್ನು ಅಲ್ಲಗಳೆದುದರಿಂದುಂಟಾದ ಹೆಚ್ಚಿನ ನಷ್ಟಭರತಿಯನ್ನು ನನಗೆ ಮಾಡಿಕೊಟ್ಟರು. ಆ ಗೌರವಕ್ಕೆ ನಾನು ಯಾವ ಅರಿಕೆಯನ್ನು ಮಾಡಿಕೊಳ್ಳದಿದ್ದರೂ ಕೂಡ, ಅವರು ನನ್ನನ್ನು ಸದಸ್ಯನೆಂದು ಆರಿಸಿಕೊಂಡರು, ಮತ್ತು ವಾರ್ಷಿಕೆಯ ಕರವನ್ನು ನನ್ನ ಮಟ್ಟಿಗೆ ಮಾಫಿ ಮಾಡಲಾಗಬೇಕೆಂದು ಮತವಿತ್ತರು. ಅದು ಇಪ್ಪತ್ತೈದು ಗಿನಿಗಳಷ್ಟಾಗಬಹುದಾಗಿತ್ತು. ಅಂತೇ ಅಂದಿನಿಂದ ಯಾವಾಗಲೂ ಅವರ ಪ್ರಕಟಣೆಯನ್ನು ಧರ್ಮಕ್ಕೆ ಕಾಣಿಕೆಯಾಗಿ ನನಗೆ ಕಳುಹಿಸುತ್ತಿದ್ದರು. 1753 ನೇ ವರುಷದ ಸರ್ ಗೊಡ್ಫ್ರೇ ಕೊಪ್ಲೆಯ ಚಿನ್ನದ ಪದಕವನ್ನು ಕೂಡ ಅವರು ನನಗೆ ಬಹುಮಾನವಾಗಿ ನೀಡಿದರು. ಅದರ ವಿತರಣಾಸಮಾರಂಭವು ಅಧ್ಯಕ್ಷ ಲಾರ್ಡ ಮಕ್ಲೆಸ್‌ಫೀಲ್ಡನ ಮನೋವೇಧಕವಾದ ಭಾಷಣದಿಂದ ಕೂಡಿಕೊಂಡಿತ್ತು. ಅದರಲ್ಲಿ ನನ್ನನ್ನು ಉನ್ನತವಾಗಿ ಗೌರವಿಸಲಾಗಿತ್ತು.

ನಮ್ಮ ಹೊಸ ಗವರ್ನರ್ ಕ್ಯಾಪ್ಟನ್ ಡೆನ್ನಿಯು ಈ ಮೇಲೆ ನಮೂದಿಸಲಾದ ಪದಕವನ್ನು ರಾಯಲ್ ಸೊಸೈಟಿಯಿಂದ ನನಗಾಗಿ ತೆಗೆದುಕೊಂಡು ಬಂದಿದ್ದನು. ಅದನ್ನು ಅವನು ಪಟ್ಟಣದವರು ಅವನಿಗೆ ನೀಡಲಾದ ಒಂದು ಮನೋರಂಜನೆಯ ಕಾರ್ಯಕ್ರಮದಲ್ಲಿ ನನಗೆ ಅರ್ಪಿಸಿದನು. ಅವನು ಅದನ್ನು ಕೊಡುತ್ತಾ ನನ್ನ ಬಗ್ಗೆ ಅವನಿಗಿದ್ದ ಗೌರವವನ್ನು

ಸಭ್ಯಮಾತುಗಳಿಂದ ವ್ಯಕ್ತಪಡಿಸಿದನು. ಬಹಳ ದೀರ್ಘಕಾಲದಿಂದ ನನ್ನ ಗುಣದ ಬಗ್ಗೆ ತಿಳಿದುಕೊಂಡಿದ್ದೇನೆಂದು ಕೂಡ ಅವನು ಹೇಳಿದ್ದನು. ಮೇಜವಾನಿಯ ನಂತರ, ಆ ಕಾಲದಲ್ಲಿ ರೂಢಿಯಲ್ಲಿದ್ದಂತೆ, ಮಂಡಳಿಯವರೆಲ್ಲ ಕುಡಿತದಲ್ಲಿ ಮಗ್ನರಾದಾಗ, ಅವನು ನನ್ನನ್ನು ಕರೆದುಕೊಂಡು ಬದಿಯಲ್ಲಿರುವ ಒಂದು ಕೋಣೆಗೆ ಹೋದನು; ಮತ್ತು ಇಂಗ್ಲೆಂಡಿನಲ್ಲಿ ಅವನ ಗೆಳೆಯರು ನನ್ನ ಗೆಳೆತನವನ್ನು ಕಟ್ಟಿಕೊಳ್ಳಬೇಕೆಂದು ಸಲಹೆ ನೀಡಿರುವುದಾಗಿ ಹೇಳಿದನು. ಯಾಕೆಂದರೆ ಅತ್ಯುತ್ತಮ ಸಲಹೆ ನೀಡುವವನು ನಾನೆಂದು ಮತ್ತು ಅವನ ಆಡಳಿತೆಯನ್ನು ಸುಲಭಗೊಳಿಸಲು ಅತ್ಯಂತ ಪರಿಣಾಮಕಾರಿಯಾಗಿ ಸಹಕರಿಸುವವನೆಂದು ಹೇಳಿದ್ದರಂತೆ. ಆದುದರಿಂದ ಎಲ್ಲ ವಿಷಯಗಳಿಗಿಂತ ಅವನು ನನ್ನೊಡನೆ ಯೋಗ್ಯ ಸಖ್ಯ ಬೆಳೆಸಲು ಅಪೇಕ್ಷಿಸಿದ್ದನು. ಅಂತೇ ತನ್ನ ಅಧಿಕಾರದಿಂದ ಸಾಧ್ಯವಿರುವ ಯಾವಸೇವೆಯನ್ನಾದರೂ, ಎಲ್ಲಾ ಪ್ರಸಂಗಗಳಲ್ಲಿಯೂ ನನಗೆ ನೀಡಲು ಸಿದ್ಧನಿದ್ದೇನೆಂಬುದನ್ನೂ ನನಗೆ ಖಾತ್ರಿಮಾಡಿಕೊಂಡಿರಲು ಕೇಳಿಕೊಂಡನು. ಅಲ್ಲದ ಪ್ರಾಂತದ ಬಗ್ಗೆ ಒಡೆಯರ ಉತ್ತಮ ಮನೋಧರ್ಮದ ಕುರಿತಾಗಿ ತುಂಬಾ ಹೇಳಿದನು ಮತ್ತು ಅದರಿಂದ ನಮಗೆಲ್ಲರಿಗೂ ಆಗುವ ಅನುಕೂಲತೆಯನ್ನು ನನಗೆ ಹೇಳಿದನು. ಅಂತೇ ಮುಖ್ಯವಾಗಿ, ಅವನ ಕ್ರಮಗಳಿಗೆ ಇಷ್ಟೊಂದು ದೀರ್ಘ ಕಾಲದಿಂದ ಕಟ್ಟಿಕೊಂಡು ಬಂದ ವಿರೋಧವನ್ನು ಬಿಟ್ಟಲ್ಲಿ ನನಗೆ ಹೆಚ್ಚಿನ ಲಾಭವುಂಟೆಂದೂ ಜನರ ಹಾಗೂ ಅವನ ನಡುವೆ ವಿಶ್ವಾಸ ಹುಟ್ಟುವುದೆಂದೂ ಹೇಳಿದನು. ಈ ಕ್ರಮವನ್ನು ಪರಿಣಾಮಕಾರಿಯಾಗುವಂತೆ ಕಾರ್ಯಗತ ಮಾಡುವುದರಲ್ಲಿ ನನ್ನಷ್ಟು ಬೇರೆ ಯಾರೂ ಉಪಯೋಗಕ್ಕೆ ಬೀಳಲಾರರೆಂದು ತಿಳಿಸಿದನು. ಈ ಬಗ್ಗೆ ನಾನು ಯೋಗ್ಯ ಪ್ರತಿಫಲ ಹಾಗೂ ಲಾಭ ಮೊದಲಾದವುಗಳನ್ನು ದೊರಕಿಸಬಹುದೆಂದೂ ಗೊತ್ತುಮಾಡಿಕೊಟ್ಟನು. ಆವರ ಟೇಬಲಿನತ್ತ ನಾವು ಬೇಗನೆ ಮರಳದಿರುವುದನ್ನು ಕಂಡು, ನಮಗೊಂದು "ಮದೀರಾ" (Madeira) ಸೆರೆಯ ಸೀಸೆಯನ್ನು ಕಳುಹಿಸಿದರು. ಗವರ್ನರನು ಇದರ ಉಪಯೋಗವನ್ನು ಪರಿಪೂರ್ಣ ಮಾಡಿಕೊಂಡನು. ಅದಕ್ಕೆ ತಕ್ಕುದಾದ ಪ್ರಮಾಣದಲ್ಲಿ ಅವನು ವಚನ ಹಾಗೂ ಆಶ್ವಾಸನಗಳಲ್ಲಿ ಹೆಚ್ಚು ಧಾರಾಳಿಯಾದನು.

ನನ್ನ ಉತ್ತರಗಳು ಈ ಉದ್ದೇಶಕ್ಕಾಗಿ ಇದ್ದವು : ನಾನು ಒಡೆಯರ ದಯಾಳುತನಕ್ಕೆ ಎರವಾಗದಂತೆ ನನ್ನ ಸ್ಥಿತಿಗತಿಗಳಿದ್ದುದಕ್ಕಾಗಿ ನಾನು ದೇವರಿಗೆ ಋಣಿಯಾಗಿದ್ದೇನೆ. ಮತ್ತು ಅಸೆಂಬ್ಲಿಯ ಸದಸ್ಯನಾದುದರಿಂದ

ಬಹುಶಃ ನಾನು ಆದಾವುದನ್ನೂ ಅಪೇಕ್ಷಿಸುವಂತಿರಲಿಲ್ಲ. ಖಾಸಗಿ ಆಸ್ತಿವಂತರ ಬಗ್ಗೆ ನನಗೆ ಯಾವ ವೈಯಕ್ತಿಕ ದ್ವೇಷವೂ ಇರಲಿಲ್ಲ. ಯಾವಾಗಲಾದರೂ ಸಾರ್ವಜನಿಕ ಮಸೂದೆಗಳನ್ನು ಪ್ರಸ್ತಾಪಿಸಿದ್ದಾದರೆ, ಅವುಗಳು ಜನತೆಯ ಒಳ್ಳಿತಿಗಾಗಿವೆಯೆಂದು ನನಗೆ ಕಂಡೊಡನೆ, ಅವುಗಳನ್ನು ನನ್ನ ಹಾಗೆ ಯಾರೂ ಮುಂದೆ ಹೋಗಿ ಹೆಚ್ಚು ಉತ್ಸಾಹದಿಂದ ಸಮರ್ಥಿಸಲಿಕ್ಕಿಲ್ಲ. ಯಾಕೆಂದರೆ—ಮುಂದೆ ಮಾಡಿದ ಮಸೂದೆಗಳೆಲ್ಲವು ಪ್ರತ್ಯಕ್ಷವಾಗಿ ಒಡೆಯರ ಹಿತರಕ್ಷಣೆಯನ್ನು—ಜನತೆಗೆ ವಿಪರೀತ ಪಕ್ಷಪಾತವನ್ನು ಬಗೆದು—ಸಾಧಿಸಿರುತ್ತವೆಯೆಂಬುದರ ಮೇಲೆ ನನ್ನ ಹಿಂದಿನ ಖಂಡನೆಯು ನೆಲೆಸಿತ್ತು. ಹೀಗಾಗಿ ನನ್ನಲ್ಲಿರುವ ವಿಶ್ವಾಸವನ್ನು ಪ್ರಕಟಿಸಿದ ಅವನ ಕೆಲಸಗಳಿಂದಾಗಿ ನಾನು ಅವನಿಗೆ (ಗವರ್ನರನಿಗೆ) ತುಂಬಾ ಋಣಿಯಾಗಿದ್ದೇನೆ. ಅಂತೇ ಅವನ ಆಡಳಿತೆಯನ್ನು ಸಾಧ್ಯವಿದ್ದಷ್ಟು ಸುಲಭಗೊಳಿಸಲು ನನ್ನ ಅಧಿಕಾರದಲ್ಲಿದ್ದುದನ್ನೆಲ್ಲ ನಾನು ಮಾಡುತ್ತೇನೆಂದು ಅವನು ನಂಬಬಹುದಾಗಿತ್ತು. ಅದೇ ಕಾಲಕ್ಕೆ ಅವನು ತನ್ನ ಸಂಗಡ ಅವನ ಪೂರ್ವಾಧಿಕಾರಿಯು ತೊಡಕಿಗೀಡು ಮಾಡಿಕೊಂಡು ಅವೇ ಆಜ್ಞೆಗಳನ್ನು ತಂದಿಲ್ಲವೆಂಬುದನ್ನು ಆಶಿಸಿದ್ದೆನು.

ಈ ಬಗ್ಗೆ ಅವನೇನು ಆಗ ತನ್ನ ಅಭಿಪ್ರಾಯವನ್ನು ವಿವರಿಸಲಿಲ್ಲ. ಆದರೆ ಆನಂತರ ಆಸೆಂಬ್ಲಿಯೊಡನೆ ಅವನು ವ್ಯವಹರಿಸಬೇಕಾಗಿ ಬಂದಾಗ, ಅವರು ಪುನಃ ಕಾಣಿಸಿಕೊಂಡರು, ವಿವಾದಗಳು ಮರಳಿ ಚಿಗುರಿದವು. ಅವುಗಳನ್ನು ಎದುರಿಸುವುದರಲ್ಲಿ ನಾನು ಎಂದಿನಂತೆ ಚಟುವಟಿಕೆಯನ್ನು ವಹಿಸಿದ್ದೆನು. ಮೊದಲೇ ನಾನು ಬರೆಹಗಾರನಾದುದರಿಂದ, ಆಜ್ಞೆಗಳ ಪತ್ರವ್ಯವಹಾರವನ್ನು ಮಾಡಲು ವಿನಂತಿಸಲಾಯಿತು ಮತ್ತು ಅವುಗಳ ಮೇಲಿನ ಟೀಕೆ-ಟಿಪ್ಪಣಿಯನ್ನು ಆ ಮೇಲೆ ನಿರ್ವಹಿಸಲು ಕೇಳಿಕೊಂಡದ್ದಾಯಿತು. ಆ ಕಾಲದ ಮತಗಳ ಯಾದಿಯಲ್ಲಿ ಮತ್ತು ಆನಂತರ ನಾನು ಪ್ರಕಟಿಸಿದ ಹಿಸ್ಟಾರಿಕಲ್ ರಿವ್ಯೂ (Historical Review) ನಲ್ಲಿ ಅವುಗಳು ಕಾಣಲಿಕ್ಕೆ ಸಿಗಬಹುದು. ಆದರೆ ವೈಯಕ್ತಿಕವಾಗಿ ನಮ್ಮಿಬ್ಬರಲ್ಲಿ ವೈರತ್ವವೇನು ಉದ್ಭವಿಸಿರಲಿಲ್ಲ. ನಾವು ಆಗಾಗ ಒಟ್ಟಿಗಿರುತ್ತಿದ್ದೆವು. ಅವನು ತಿಳುವಳಿಕೆಯುಳ್ಳ ಮನುಷ್ಯನಾಗಿದ್ದನು. ಅಂತೇ ಸಂಭಾಷಣೆಯಲ್ಲಿ ಚತುರನಾಗಿದ್ದು ಮನೋರಂಜನೆಯನ್ನು ಒದಗಿಸುತ್ತಿದ್ದನು. ನನ್ನ ಹಳೆಯ ಗೆಳೆಯ ಜೋಸೆಫ್ ರಾಲ್ಫ್‌ನು ಇನ್ನೂ ಜೀವಂತವಾಗಿದ್ದಾನೆ, ಇಂಗ್ಲೆಂಡಿನಲ್ಲಿ ಅವನನ್ನು ಒಬ್ಬ ಅತ್ಯುತ್ತಮ ರಾಜಕೀಯ ಲೇಖಕನೆಂದು ಪರಿಗಣಿಸಲಾಗುತ್ತಿದೆ.

ಅರಸ ಹಾಗೂ ಪ್ರಿನ್ಸ್ ಫ್ರೆಡ್ರಿಕರ ನಡುವಿನ ವಿವಾದದಲ್ಲಿ ವ್ಯವಹರಿಸಿದ್ದ ನೆಂದು ಮತ್ತು ಒಂದು ವರುಷಕ್ಕೆ ಮುನ್ನೂರು ಪೌಂಡುಗಳ ನಿವೃತ್ತನಿಧಿ ಯನ್ನು ಪಡೆಯುತ್ತಿದ್ದಾನೆಂದು ಅವನು ಮೊದಲಿಗೆ ನನಗೆ ಸುದ್ದಿ ಮುಟ್ಟಿ ಸಿದ್ದನು. ಅಂತೇ ಕವಿಯೆಂದು ಅವನ ಖ್ಯಾತಿಯು ತೀರ ಅಲ್ಪವಾಗಿದೆ, ಯಾಕಂದರೆ ಪೋಪನು ಅವನ ಕವಿತೆಗಳನ್ನು ಡನ್ಸಿಯಡ್‌ನಲ್ಲಿ ಖಂಡಿಸಿ ದ್ದಾನೆ, ಆದರೆ ಅವನ ಗದ್ಯ ಮಾತ್ರ ಸಾಕಷ್ಟು ಉತ್ತಮವಾಗಿದೆಯೆಂದು ಪರಿಗಣಿಸಲಾಗುತ್ತಿದೆಯೆಂಬದನ್ನೂ ಅವನು ತಿಳಿಸಿದ್ದನು.

ಕೊನೆಗೆ ಅಸೆಂಬ್ಲಿಯವರು,* ತಮ್ಮ ಪ್ರತಿನಿಧಿಗಳನ್ನು ಜನತೆಯ ಹಕ್ಕುಗಳಿಗೆ ವ್ಯತಿರಿಕ್ತವಾದ ಮಾತ್ರವಲ್ಲದೆ ಅರಸನ ಸೇವೆಯನ್ನು ಪರಿಗಣಿಸ ದಂಥ ಆಜ್ಞೆಗಳ ಮೂಲಕ, ಖಾಸಗಿ ಒಡೆಯರು ಬಂಧಿಸುವುದನ್ನು ಕಂಡು ಕೊಂಡು, ಅವರ ವಿರುದ್ಧವಾಗಿ ಅರಸನಿಗೆ ಅರ್ಜಿ ಹಾಕಲು ನಿರ್ಧರಿಸಿದರು, ಮತ್ತು ಅವರ ಏಜಂಟನಾಗಿ ಇಂಗ್ಲೆಂಡಿಗೆ ಹೋಗಿ ಅರ್ಜಿಯನ್ನು ಮುಂದೆ ಮಾಡಿ ಸಮರ್ಥಿಸಲು ನನ್ನನ್ನು ನೇಮಕ ಮಾಡಿದರು. ಅರಸನ ಉಪ ಯೋಗಕ್ಕಾಗಿ ಅರವತ್ತು ಸಾವಿರ ಪೌಂಡುಗಳನ್ನು ಮಾನ್ಯಮಾಡಿ (ಅದರಲ್ಲಿ ಹತ್ತು ಸಾವಿರ ಪೌಂಡುಗಳು ಆಗ ಜನರಲನಾಗಿದ್ದ ಲಾರ್ಡ್ ಲಾಡೇನನ ಆಜ್ಞೆಗೆ ಒಳಪಟ್ಟು ಮಾನ್ಯವಾಗಬೇಕಾಗಿತ್ತು) ಒಂದು ಮಸೂದೆಯನ್ನು ಸೌಧದವರು (House) ಗವರ್ನರನಿಗೆ ಕಳುಹಿಸಿದ್ದರು. ಇದನ್ನು ಆಜ್ಞೆ ಗಳಿಗೆ ಅನುಸಾರವಾಗಿ, ಗವರ್ನರನು ಮಾನ್ಯಮಾಡಲು ಸಂಪೂರ್ಣ ನಿರಾಕರಿಸಿದನು.

ನ್ಯೂಯೋರ್ಕಿನಲ್ಲಿಯ ಒಂದು ನಿಯಮಿತ ಹಡಗಿನ ಕ್ಯಾಪ್ಟನ್ ಮೋರಿಸ್‌ನೊಡನೆ ನನ್ನ ಪ್ರಯಾಣದ ಬಗ್ಗೆ ಕರಾರು ಮಾಡಿಕೊಂಡಿದ್ದೆನು. ನನ್ನ ಸಾಹಿತ್ಯ-ಸಾಮುಗ್ರಿಗಳು ಹಡಗಿನ ಬೋರ್ಡಿನ ಮೇಲೆ ಹಾಕಲ್ಪಟ್ಟಿ ದ್ದವು; ಆಗ ಲಾರ್ಡ ಲಾಡೇನನು ಫಿಲಡೆಲ್ಫಿಯಾಕ್ಕೆ ಬಂದು ತಲಪಿ ದನು. ಗವರ್ನರ್ ಹಾಗೂ ಅಸೆಂಬ್ಲಿಯ ನಡುವೆ ಒಪ್ಪಂದವನ್ನು ಮಾಡಲು ಪ್ರಯತ್ನಿಸಬೇಕೆಂದು ಅವನು ನನಗೆ ಮನಸ್ಸು ಬಿಚ್ಚಿ ಹೇಳಿದನು. ಅಂತೇ ಅವರ ಜಗಳಗಳಿಂದ ಘನ ಅರಸನ ಸೇವೆಗೇನು ಅಡೆತಡೆಯುಂಟಾಗಲಾರ

---

* ಅಸೆಂಬ್ಲಿಯ ಅನೇಕ ಬಹುಮತದ ನಿರ್ಣಯುಗಳು — ಯಾವ ತಾರೀಕು? —[ ಪಕ್ಕದ ಟಿಪ್ಪಣಿ ]

ದೆಂದೂ ಹೇಳಿದನು. ಅದೇ ಪ್ರಕಾರ, ನಾನು ಮತ್ತು ಗವರ್ನರನು ಅವ ನನ್ನು ಭೇಟಿಯಾಗಬೇಕೆಂದು ಅಪೇಕ್ಷಿಸಿದನು. ಇದರಿಂದ ಅವನು ಎರಡೂ ಪಕ್ಷದವರು ಏನು ಹೇಳುತ್ತಾರೆಂಬುದನ್ನು ತಿಳಿಯಲಿಚ್ಛಿಸಿದನು. ನಾವು ಭೇಟಿಯಾಗಿ ವ್ಯವಹಾರವನ್ನು ಚರ್ಚಿಸಿದ್ದಾಯಿತು; ಅಸೆಂಬ್ಲಿಯ ಪರ ವಾಗಿ, ಆ ಕಾಲದ ಸಾರ್ವಜನಿಕ ಪತ್ರಿಕೆಗಳಲ್ಲಿ ಪ್ರಕಟಗೊಂಡ ನನ್ನ ಬರೆ ವಣಿಗೆಗಳಾದ ಹಾಗೂ ಅಸೆಂಬ್ಲಿಯಲ್ಲಿ ನಡೆದ ಸಂಗತಿಯ ಕಾಗದ ಪತ್ರ ಗಳಲ್ಲಿ ಮುದ್ರಣಗೊಂಡ ಎಲ್ಲಾ ವಿವಿಧ ವಾದಗಳನ್ನೂ ನಾನು ಮುಂದೆಯಿಟ್ಟು ಮಾತನಾಡಿದೆನು. ಗವರ್ನರನು ತನ್ನ ಆಜ್ಞೆಗಳನ್ನು ಸಾಧಿಸಿದನು. ಅವು ಗಳನ್ನು ಪಾಲಿಸುವೆನೆಂದು ಅವನು ಕೊಟ್ಟ ಕರಾರು ಪತ್ರ(bond)ವನ್ನೂ ಅದಕ್ಕೆ ವ್ಯತಿರಿಕ್ತವಾಗಿ ನಡೆದರೆ ಅವನ ಸರ್ವನಾಶವಾಗುವುದನ್ನೂ ತಿಳಿಯ ಪಡಿಸಿದರೂ ಕೂಡ, ಲಾರ್ಡ್ ಲಾಡೇನನು ಸಲಹೆಕೊಟ್ಟರೆಅದರಂತೆ ನಡೆ ಯಲು ಮನಸಿದ್ದವನಂತೆ ಕಂಡನು. ತನ್ನನ್ನು ಸಂಕಟಕ್ಕೀಡು ಮಾಡಿ ಕೊಂಡರೂ ಇದನ್ನು ಮಾತ್ರ ಆ ಘನಮಹಾಶಯನು ನೆರವೇರಿಸಲು ಮನಸ್ಸು ಮಾಡಲಿಲ್ಲ. ಆದರೂ ಕೂಡ ಅವನು ಅದನ್ನು ಮಾಡಲು ತಯಾ ರಾದವನಂತೆ ನಾನು ಅವನ ಮನವೊಲಿಸಿದ್ದೇನೆಂದು ನನಗೆ ಅನಿಸಿತ್ತು. ಆದರೆ ಕಟ್ಟಕಡೆಗೆ ಅವನಾದರೂ ಕೂಡ ಅಸೆಂಬ್ಲಿಯು ಅವನೊಡನೆ ಹೊಂದಿ ಕೊಳ್ಳುವುದನ್ನೆ ಮುಂದೆಯಿಟ್ಟನು. ಅಂತೇ ಆ ಉದ್ದೇಶಕ್ಕಾಗಿ ನನ್ನ ಪ್ರಯತ್ನಗಳನ್ನೆಲ್ಲ ಮಾಡಲು ಅವನು ನನಗೆ ವಿನಂತಿಸಿದನು. ಅಲ್ಲದೆ ನಮ್ಮ ಗಡಿನಾಡುಗಳ ರಕ್ಷಣೆಗಾಗಿ ಅರಸನ ಯಾವ ಸೈನ್ಯವನ್ನೂ ತನ್ನಿಂದ ಇಡಲಾಗುವುದಿಲ್ಲ ಮತ್ತು ಒಂದುವೇಳೆ ಆ ರಕ್ಷಣೆಯನ್ನು ನಾವೇ ಮಾಡಲು ಸಜ್ಜಾಗಿರದಿದ್ದಲ್ಲಿ-ಅವರು ವೈರಿಗಳ ಬಾಯಿಗೆ ಸಿಗಲೇ ಬೇಕಾಗುವುದೆಂದೂ ಸಾರಿದನು.

ಸೌಧ (House)ದವರಿಗೆ ನಡೆದುದೆಲ್ಲವನ್ನು ತಿಳಿಯಪಡಿಸಿದೆನು. ಮತ್ತು ನಾನು ಸಿದ್ಧಗೊಳಿಸಿದ ಕೆಲವೊಂದು ನಿರ್ಣಯಗಳಲ್ಲಿ ಅವುಗಳನ್ನು ಮುಂದೆಮಾಡಿದೆನು. ನಮ್ಮ ಹಕ್ಕುಗಳನ್ನು ಸಾರಿ ಹೇಳಿದೆವು ಮತ್ತು ನಾವು ಆ ಹಕ್ಕುಗಳನ್ನು ಬಿಟ್ಟುಕೊಡಲಿಕ್ಕೆ ಕೇಳಲಿಲ್ಲ. ಆದರೆ ಅವುಗಳ ಉಪ ಯೋಗವು ಈ ಪ್ರಸಂಗದಲ್ಲಿ ಕೇವಲ ಬಲಾತ್ಕಾರದಿಂದ ಮಾತ್ರ ನಿಂತು ಹೋಗಿತ್ತು. ಅದರ ವಿರುದ್ಧ ನಾವು ಹೋರಾಡಿದೆವು. ಕಟ್ಟಕಡೆಗೆ ಅವರು ಆ ಮಸೂದೆಯನ್ನುರದ್ದು ಮಾಡುತ್ತೇವೆಂದೂ ಮತ್ತು ಖಾಸಗಿ ಒಡೆಯರಿಗೂ ಸಂಬಂಧ ಪಡುವಂಥ ಇನ್ನೊಂದನ್ನು ರೂಪಿಸುತ್ತೇವೆಂದೂ ಒಪ್ಪಿದರು.

ಹಾಗೆಂದು ಇದನ್ನು ಮಾತ್ರ ಗವರ್ನರನು ಜಾರಿ ಮಾಡಿದನು. ಹೀಗೆ ಆನಂತರ ನಾನು ನನ್ನ ಸಮುದ್ರಪ್ರಯಾಣ ಮುಂದುವರಿಸಲು ಸ್ವತಂತ್ರನಾದೆನು, ಆದರೆ, ಇದೇ ಕಾಲಕ್ಕೆ ಸಾರಿಗೆಯ ಹಡಗು ಮಾತ್ರ ನನ್ನ ಸಮುದ್ರ-ಸಾಹಿತ್ಯ (sea-stores)ಗಳೊಡನೆ ಮುಂದುವರಿದಿತ್ತು. ಅದು ನನಗೊಂದಿಷ್ಟು ನಷ್ಟವನ್ನುಂಟುಮಾಡಿತು. ಇತ್ತ ನನಗುಂಟಾದ ನಷ್ಟಭರತಿಯೆಂದರೆ ನನ್ನ ಸೇವೆಗಾಗಿ ಘನ ಮಹಾಶಯನು ನನಗೆ ಸಲ್ಲಿಸಿದ ಉಪಕಾರ ಸ್ಮರಣೆಗಳು ಮತ್ತು ಜಾಗವನ್ನು ದೊರಕಿಸುವಂಥ ಎಲ್ಲಾ ಪ್ರತಿಷ್ಠೆಯೂ ಅವನ ಪಾಲಿಗೆ ಬಿದ್ದದ್ದು ಮಾತ್ರವಾಗಿತ್ತು.

ನನಗಿಂತ ಮೊದಲು ಅವನು ನ್ಯೂಯೋರ್ಕಿಗೆ ಹೊರಟನು; ಮತ್ತು ಪ್ರಯಾಣದ-ದೋಣಿಗಳನ್ನು ಹೊರಡಿಸುವುದು ಅವನ ಅನುಕೂಲಕ್ಕೆ ತಕ್ಕಂತೆ ಇದ್ದುದರಿಂದ, ಮತ್ತು ಆಗ ಅಲ್ಲಿ ಎರಡು ಉಳಿದಿರುವುದರಿಂದ, ಅವುಗಳಲ್ಲಿ ಒಂದು ಬೇಗನೆ ಯಾನಮಾಡುವುದೆಂದು ಅವನು ಹೇಳಿದನು. ಕ್ಲುಪ್ತವಾದ ಸಮಯವನ್ನು ತಿಳಿಸಲು ನಾನು ಕೇಳಿಕೊಂಡೆನು. ಯಾಕಂದರೆ,ಯಾವುದಾದರೂ ರೀತಿಯಿಂದ ತಡವಾದರೆ ಅದನ್ನು ತಪ್ಪಿಸಿಕೊಳ್ಳಬಾರದೆಂದು ನಾನು ಎಣಿಸಿದ್ದೆನು. "ಅದು ಮುಂದಿನ ಶನಿವಾರ ಯಾನಮಾಡಬೇಕೆಂದು ನಾನು ಹೇಳಿಕೊಟ್ಟಾಗಿದೆ; ಆದರೆ ನಮ್ಮೊಳಗಿರಲಿ-ನಾನು ನಿನಗೆ ಅದನ್ನು ತಿಳಿಸುತ್ತೇನೆ-ನೀನು ಅಲ್ಲಿ ಸೋಮವಾರ ಬೆಳಗಿನೊಳಗೆ ಇದ್ದರೆ ಸಮಯಕ್ಕೆ ಸರಿಯಾಗಿ ಬಂದಂತಾಗುವುದು. ಆದರೆ ಅದಕ್ಕಿಂತ ಹೆಚ್ಚು ತಡಮಾಡಬೇಡ." ಎಂಬುದು ಅವನು ನನಗೆ ಕೊಟ್ಟ ಉತ್ತರವಾಗಿತ್ತು. ಒಂದೆಡೆ ನದಿ ದಾಟುವಾಗ ಆಕಸ್ಮಿಕ ಅಡೆತಡೆಯುಂಟಾಗಿ ನಾನು ಅಲ್ಲಿಗೆ ಸೋಮವಾರ ಮಧ್ಯಾಹ್ನದ ಮೊದಲು ತಲಪಿದ್ದಾಯಿತು. ಹವೆಯು ಉತ್ತಮವಾಗಿದ್ದುದರಿಂದ ಅದು ಯಾನ ಮಾಡಿರಬಹುದೆಂದು ನಾನು ಭಯಪಟ್ಟಿದ್ದೆನು. ಆದರೆ ಅದು ಇನ್ನೂ ಬಂದರದಲ್ಲಿಯೇ ಇದೆಯೆಂಬ ಮತ್ತು ನಾಳೆಯವರೆಗೆ ಯಾನ ಮಾಡುವುದಿಲ್ಲವೆಂಬ ಸುದ್ದಿಯಿಂದ ನಾನು ಬೇಗನೆ ಸಂತೋಷಿತನಾದೆನು. ಈಗ ನಾನು ಯುರೋಪಿಗೆ ಹೊರಡಲಿಕ್ಕೆ ಬಹಳ ಸಮಯವಿಲ್ಲೆಂದು ಯಾರಾದರೂ ಕೂಡ ಯೋಚಿಸಬಹುದು. ನಾನೂ ಹಾಗೆ ತಿಳಿದುಕೊಂಡಿದ್ದೆ. ಆದರೆ ಆಗ ಇನ್ನೂ ನಾನು ಘನ ಮಹಾಶಯನಾದ ಗವರ್ನರನ ಸ್ವಭಾವದ ಬಗ್ಗೆ ಏನನ್ನೂ ತಿಳಿದುಕೊಂಡಿರಲಿಲ್ಲ; ಅನಿರ್ಧಾರವು ಅದರ ಬಲವಾದ ಅಂಶಗಳಲ್ಲಿ ಒಂದಾಗಿತ್ತು. ನಾನು ಕೆಲವು ಉದಾಹರಣೆಗಳನ್ನು ಕೊಡುತ್ತೇನೆ. ಏಪ್ರಿಲ್ ತಿಂಗಳ ಪ್ರಾರಂಭದಲ್ಲಿ

ನಾನು ನ್ಯೂಯಾರ್ಕಿಗೆ ಬಂದದ್ದು; ಆದರೆನಾವು ಜೂನಿನ ಕೊನೆಗೆ ಸ್ವಲ್ಪ ಮೊದಲು ಸಮುದ್ರಯಾನ ಮಾಡಿದೆವೆಂದು ನನಗೆನಿಸುತ್ತದೆ. ಆಗ ಅಲ್ಲಿ ಎರಡು ಸಾರಿಗೆಯ ದೋಣಿಗಳಿದ್ದವು (paquet-boats). ಅವುಗಳು ಬಹಳ ದೀರ್ಘ ಕಾಲದಿಂದ ಬಂದರದಲ್ಲಿದ್ದವು. ಆದರೆ ಜನರಲ (general)ನ ಪತ್ರಗಳಿಗಾಗಿ ವಿಳಂಬಿಸಲ್ಪಟ್ಟಿದ್ದವು. ಅವುಗಳು ಮಾತ್ರ ಯಾವಾಗಲೂ ನಾಳೆಗೆ ಸಿದ್ಧವಾಗಿರತಕ್ಕಂಥವುಗಳು! ಮತ್ತೊಂದು ಸಾರಿಗೆ ಹಡಗು ಬಂದು ತಂಗಿತು; ಅದನ್ನು ಕೂಡ ವಿಳಂಬ ಮಾಡಲಾಯಿತು; ಮತ್ತು ನಾವು ಸಮುದ್ರಯಾನ ಮಾಡುವ ಮೊದಲು ನಾಲ್ಕನೆಯದೊಂದು ಬರುತ್ತದೆಂಬ ನಿರೀಕ್ಷೆಯಿತ್ತು. ಅಲ್ಲಿ ಬಹಳ ಕಾಲದಿಂದ ಇದ್ದ ಮೂಲಕ ನಮ್ಮದು ಮೊದಲಿಗೆ ಹೊರಡತಕ್ಕದ್ದಾಗಿತ್ತು. ಎಲ್ಲವುಗಳಲ್ಲಿ ಪ್ರವಾಸಿಕರು ಸಿದ್ಧರಾಗಿದ್ದರು. ಕೆಲವರು ಹೋಗುವುದಕ್ಕೆ ತೀರಾ ಆತುರಗೊಂಡಿದ್ದರು. ತಮ್ಮ ಪತ್ರಗಳ ಬಗ್ಗೆ ಮತ್ತು ನಾಶವಾಗುವ ಸಾಮಾನುಗಳ (fall-goods) ಇನ್ಸೂರಿಗಾಗಿ (ಅದು ಯುದ್ಧ ಕಾಲವಾದ ಮೂಲಕ) ಆರ್ಡರು ಮಾಡಿದುದಕ್ಕಾಗಿ ವ್ಯಾಪಾರಸ್ಥರು ಚಿಂತಿಸುತ್ತಿದ್ದರು. ಅವರ ಚಿಂತೆಯಿಂದ ಏನೂ ಪ್ರಯೋಜನವಾಗಲಿಲ್ಲ. ಘನ ಮಹಾಶಯನ ಪತ್ರಗಳು ಸಿದ್ಧವಾಗಿರಲಿಲ್ಲ. ಅಂತೇ ಇನ್ನೂ ಕೂಡ, ಯಾರು ಅವನನ್ನು ನೋಡಿದರೂ ಸಹ-ಅವನು ಡೆಸ್ಕಿನಲ್ಲಿ ಪೆನ್ನು ಕೈಯಲ್ಲಿ ಹಿಡಿದುಕೊಂಡೇ ಕುಳಿತಿರುತ್ತಿದ್ದನು. ಮತ್ತು .ಅವನಿಗೆ ಇನ್ನೂ ಬಹಳ ಹೆಚ್ಚು ಬರೆಯಬೇಕಾದ್ದಿದೆಯೆಂದೂ ಯಾರಾದರೂ ನಿರ್ಣಯಿಸಬೇಕಾಗಿತ್ತು.

ನನ್ನ ಗೌರವವನ್ನು ಸಲ್ಲಿಸುವುದಕ್ಕಾಗಿ ಒಂದು ದಿನ ಬೆಳಿಗ್ಗೆ ನಾನು ಅವನಲ್ಲಿಗೆ ಹೋದಾಗ, ಅವನ ಎದುರಿನ ಕೋಣೆಯಲ್ಲಿ ಫಿಲಡೆಲ್ಫಿಯಾದಿಂದ ಬಂದಿದ್ದ ಇನ್ನಿಸ್ ಎಂಬೊಬ್ಬ ಸುದ್ದಿಗಾರನನ್ನು ಕಂಡೆನು. ಅವನು ಅಲ್ಲಿಂದ ಒಂದು ಸಾರಿಗೆಯ ಹಡಗಿನಲ್ಲಿ ಗವರ್ನರ್ ಡೆನ್ನಿಯಿಂದ ಜನರಲ್‌ನಿಗೆ ಸುದ್ದಿ ತೆಗೆದುಕೊಂಡು ಬಂದಿದ್ದನು. ಅಲ್ಲಿನ ಕೆಲವು ಮಿತ್ರರ ಪತ್ರಗಳನ್ನು ಅವನು ನನಗೆ ಕೊಟ್ಟನು. ಇದರಿಂದ, ಅವನು ಯಾವಾಗ ಹಿಂದಿರುಗಿ ಹೋಗುತ್ತಾನೆಂಬುದನ್ನು ಕೇಳುವ ಮತ್ತು ಅವನು ಎಲ್ಲಿ ಬೀಡು ಬಿಟ್ಟಿದಾನೆ, ಹಾಗೂ ಅವನ ಜೊತೆಗೆ ಕೆಲವು ಪತ್ರಗಳನ್ನ ಕಳುಹಿಸಬಹುದೆಂಬ ಮಾತನ್ನು ಕೇಳುವ ಪ್ರಸಂಗ ದೊರೆಯಿತು. ನಾಳೆ ಒಂಬತ್ತು ಗಂಟೆಗೆ ಜನರಲನು ಗವರ್ನರನಿಗೆ ಕೊಡುವ ಉತ್ತರವನ್ನು ಒಯ್ಯಲು ಅವನಿಗೆ ಆಜ್ಞಾವಿಧಿಸಿರುವುದಾಗಿ ಅವನು ಹೇಳಿದನು, ಮತ್ತು ಆ ಕೂಡಲೆ ಹೊರಡ

ಬಹುದೆಂದೂ ತಿಳಿಸಿದನು. ನಾನು ಅದೇ ದಿವಸ ಅವನ ಕೈಯಲ್ಲಿ ನನ್ನ ಪತ್ರಗಳನ್ನು ಕೊಟ್ಟೆನು. ಹದಿನೈದು ದಿವಸಗಳು ದಾಟಿದ ನಂತರ ಮತ್ತೊಮ್ಮೆ ನಾನು ಅವನನ್ನು ಅದೇ ಸ್ಥಳದಲ್ಲಿ ಕಂಡೆನು. "ಹಾಗಾದರೆ, ನೀನು ಬಹಳ ಬೇಗನೆ ಮರಳಿ ಬಂದೆಯಲ್ಲಾ ಇನಿಸ್?" "ಮರಳಿ ಬರುವುದು! ಇಲ್ಲ, ನಾನು ಇನ್ನೂ ಹೋಗಲೇ ಇಲ್ಲ, ನಾನು ಇನ್ನೂ ಹೋಗಲೇ ಇಲ್ಲ." "ಅದೇನು ಹಾಗೆ?" "ಈಗ ಎರಡು ವಾರಗಳಿಂದ ಪ್ರತಿ ದಿನ ಬೆಳಿಗ್ಗೆ ಘನ ಮಹಾಶಯನ ಪತ್ರಕ್ಕಾಗಿ ಇಲ್ಲಿಗೆ ಬರಲು ನನಗೆ ಆಜ್ಞೆಯಾಗುತ್ತದೆ, ಮತ್ತು ಪತ್ರ ಮಾತ್ರ ಇನ್ನೂ ಸಿದ್ಧವಾಗಿಲ್ಲ." "ಅದು ಹೇಗೆ ಸಾಧ್ಯ, ಅವನು ಎಷ್ಟು ದೊಡ್ಡ ಬರಹಗಾರನಾಗಿದ್ದಾನೆ? ಯಾಕಂದರೆ-ಸದಾ ಅವನನ್ನು ನಾನು ಬರವಣಿಗೆಯ ಡೆಸ್ಕಿನ ಮೇಲೆ ಇರುವುದನ್ನು ಕಾಣುತ್ತೇನೆ." "ಹೌದು, ಆದರೆ ಅವನು ಸಂಕೇತಗಳಲ್ಲಿ ಇರುವ ಸೈಂಟ್ ಜಾರ್ಜನ ಹಾಗಿದ್ದಾನೆ, ಯಾವಾಗಲೂ ಕುದರೆಯ ಬೆನ್ನ ಮೇಲೆ ಇರುವುದು ಹೊರತು, ಎಂದೂ ಸವಾರಿ ಮಾಡಲಿಕ್ಕಿಲ್ಲ." ಎಂದು ಇನ್ನಿಸ್ ಹೇಳಿದನು. ಸುದ್ದಿಗಾರನ ನಿರೀಕ್ಷೆಯು ಯೋಗ್ಯವಾಗಿದ್ದಂತೆ ಕಾಣುತ್ತದೆ. ಯಾಕಂದರೆ, ಈ ಜನರಲನನ್ನು ತೆಗೆದು ಹಾಕಲಿಕ್ಕೆ ಮಿಸ್ಟರ್ ಪಿಟ್ಟನು ಇದೇ ಒಂದು ಕಾರಣವನ್ನು ಕೊಟ್ಟಿದ್ದು ನಾನು ಇಂಗ್ಲೆಂಡಿನಲ್ಲಿದ್ದಾಗ ತಿಳಿದಿತ್ತು; ಅಮ್ಹರ್ಸ್ಟರ್ ಮತ್ತು ವೂಲ್ಫ್ ಎಂಬ ಜನರಲರನ್ನು ಕಳುಹಿಸುತ್ತ, ಅವನಿಂದ ನನಗೆ ಯಾವ ಸುದ್ದಿಯು ಬಂದಿಲ್ಲ ಮತ್ತು ಅವನು ಏನುಮಾಡುತ್ತಿದ್ದಾನೆಂದು ತನಗೆ ಗೊತ್ತಿಲ್ಲವೆಂದು ಮಂತ್ರಿ ಆಕ್ಷೇಪಿಸಿದ್ದನು.

ಸಮುದ್ರಯಾನ ಮಾಡುವ ಈ ನಿತ್ಯದ ನಿರೀಕ್ಷೆಯೂ, ಮತ್ತು ಸ್ಯಾಂಡ್ ಹೂಕದ ತನಕ ಮೂರೂ ನಾರಿಗೆಯ ಹಡಗುಗಳು ಅಲ್ಲಿಯ ಹಡಗು ಪಡೆಯನ್ನು ಸೇರಲು ಕೆಳಗೆ ಹೋಗಿರುವುದೂ, ಪ್ರಯಾಣಿಕರಿಗೆ ತಾವು ಬೋರ್ಡಿನ ಮೇಲೆ ಸಿದ್ಧನಾಗಿರುವುದು ಅತ್ಯುತ್ತಮವೆಂದೂ ಮತ್ತು ಇಲ್ಲದೆ ಹೋದಲ್ಲಿ ಎಲ್ಲಾದರೂ ಆಕಸ್ಮಿಕ ಆಜ್ಞೆಯಿಂದ ಹಡಗುಗಳು ತಮ್ಮನ್ನು ಹಿಂದೆ ಬಿಟ್ಟು ಹೊರಟುಬಿಟ್ಟಾವೆಂದು ಯೋಚಿಸುವಂತೆ ಮಾಡಿತು. ನನಗೆ ನೆನಪಿರುವಂತೆ ನಮುದ್ರ ಸಂಬಾರವನ್ನೆಲ್ಲ ತಿನ್ನುತ್ತ ಮತ್ತು ಹೆಚ್ಚಿನದನ್ನು ದೊರಕಿಸಲು ಖುಣಿಯಾಗುತ್ತಲಿ ಆರುವಾರಗಳ ತನಕ ಇದ್ದೆವು. ಕಟ್ಟಕಡೆಗೆ, ಜನರಲ್ ಮತ್ತು ಅವನ ಎಲ್ಲಾ ಸೈನಿಕರು ಬೋರ್ಡಿನ ಮೇಲಿದ್ದರು, ಹಡಗು ಪಡೆ ಮುಂದರಿಯಿತು. ಅವರೆಲ್ಲ ಲುಯಿಸಾಬರ್ಗಿಗೆ ಹೋಗುವವರಿದ್ದರು; ಕೋಟೆಯನ್ನು ದಾಳಿ ಮಾಡಿ ವಶಪಡಿಸಿಕೊಳ್ಳುವ ಉದ್ದೇಶವು ಅವರದಾ

ಗಿತ್ತು. ಕಂಪೆನಿಯ ಎಲ್ಲಾ ಸಾರಿಗೆಯ - ಬೋಟುಗಳು ಅವನ ಪತ್ರ ಗಳನ್ನು ಪಡೆಯಲು ಸಿದ್ಧವಾಗಿರಬೇಕೆಂಬ ಆಜ್ಞೆಯಂತೆ ಜನರಲನ ಹಡ ಗನ್ನು ಹಿಂಬಾಲಿಸಿದವು. ಹೊರಡುವುದಕ್ಕಿಂತ ಐದು ದಿವಸಗಳ ಮೊದಲೇ ನಾವು ಸಿದ್ಧವಾಗಿದ್ದೆವು. ಆಮೇಲೆ ನಮ್ಮ ಹಡಗವು ಪಡೆಯನ್ನು ಬಿಟ್ಟು ಕೊಟ್ಟು ಇಂಗ್ಲೆಂಡಿನತ್ತ ಸಾಗಿತು. ಮಿಕ್ಕೆರಡು ಸಾರಿಗೆಯ-ಬೋಟುಗಳನ್ನು ಅವನು ಇನ್ನೂ ತಡೆದು ಹಿಡಿದನು. ಅವುಗಳನ್ನು ತನ್ನ ಸಂಗಡ ಹೆಲಿಫಾ ಕ್ಸಿಗೆ ಒಯ್ದನು. ಅಲ್ಲಿ ಅವನು ಕೆಲವುವಾರಗಳ ತನಕ ಕಪಟ ಕೋಟೆಗಳ ಮೇಲೆ ಕಪಟದಾಳಿಯನ್ನು ಮಾಡಲು ಜನರನ್ನು ತರಬೇತು ಮಾಡುವುದಕ್ಕೋಸ್ಕರ ಉಳಿದುಕೊಂಡನು. ಆಮೇಲೆ ಮಾತ್ರ ತನ್ನ ಮನಸ್ಸನ್ನು ಲೂಯಿಸ್‌ಬರ್ಗಕೋಟೆಯನ್ನು ವಶಪಡಿಸಿಕೊಳ್ಳುವುದರ ಬಗ್ಗೆ ಬದಲಿಸಿದನು. ಅಂತೇ ತನ್ನ ಎಲ್ಲಾ ಸೈನ್ಯದೊಡನೆ, ಮೇಲೆ ನಮೂದಿ ಸಿದ ಎರಡು ಸಾರಿಗೆಯ - ಬೋಟುಗಳೊಡನೆ ಮತ್ತು ಅವುಗಳ ಎಲ್ಲಾ ಪ್ರಯಾಣಿಕರ ಜೊತೆಗೆ ಅವನು ನ್ಯೂಯಾರ್ಕಿಗೆ ಮರಳಿದನು! ಅವನ ಗೈರುಹಾಜರಿಯ ಕಾಲದಲ್ಲಿ ಫ್ರೆಂಚರು ಮತ್ತು ಗುಡ್ಡಗಾಡಿನ ಜನರು ಫೋರ್ಟ್ ಜಾರ್ಜನ್ನು ಆ ಪ್ರಾಂತದ ಗಡಿಯಲ್ಲಿದ್ದುದನ್ನು—ವಶಪಡಿಸಿಕೊಂಡಿ ದ್ದರು, ಮತ್ತು ವಶಪಡಿಸಿಕೊಂಡನಂತರ ದುರ್ಗರಕ್ಷಕರಲ್ಲಿ ಅನೇಕ ಮಂದಿ ಯನ್ನು ಗುಡ್ಡ-ಗಾಡಿನ ಜನರು ಕೊಲೆ ಮಾಡಿದ್ದರು.

ಆನಂತರ ನಾನು ಲಂಡನಿನಲ್ಲಿ ಕ್ಯಾಪ್ಟನ್ ಬೊನೆಲ್‌ನನ್ನು ಕಂಡೆನು, ಇವನು ಅವುಗಳಲ್ಲಿ ಒಂದು ಸಾರಿಗೆಯ ಹಡಗನ್ನು ನಡೆಸಿದವನಾಗಿದ್ದನು. ಒಂದು ತಿಂಗಳು ಅವನನ್ನು ವಿಳಂಬಗೊಳಿಸಿದಾಗ ಅವನು ತನ್ನ ಘನಮಹಾ ಶಯನಿಗೆ (ಜನರಲನಿಗೆ) ತನ್ನ ಹಡಗವು ಕೊಳಕಾಗಿಬಿಟ್ಟಿದೆಯೆಂದು ಮತ್ತು ಇದರಿಂದ ಅದರ ತ್ವರಿತಗತಿಯು ಅಗತ್ಯವಾಗಿಯೂ ನಾಕಷ್ಟು ಕುಂಠಿತ ಗೊಳ್ಳುವುದು, ಅಲ್ಲದೆ ಸಾರಿಗೆಯ-ದೋಣಿಯ ದೃಷ್ಟಿಯಿಂದ ಇದೊಂದು ಬಗೆಯ ಪರಿಣಾಮನ್ನು ಉಂಟು ಮಾಡುವ ವಿಷಯವಾದುದೆಂದು ಅವನಿಗೆ ಹೇಳಿ, ಹಾಗೂ ಅದನ್ನು ಸರಿಪಡಿಸಿ ಸ್ವಚ್ಛಗೊಳಿಸಿ ಅದರ ತಳವನ್ನು ಮೊದ ಲಿನಂತೆ ಸ್ವಚ್ಛಪಡಿಸಲು ಕೆಲಹೊತ್ತಿನ ಸವಲತ್ತು ನೀಡಬೇಕೆಂದು ವಿನಂತಿಸಿ ಕೊಂಡನೆಂದು ಅವನು ನನಗೆ ಹೇಳಿದ್ದನು. ಎಷ್ಟು ದೀರ್ಘಕಾಲ ಅವನಿಗೆ ಬೇಕಾಗಬಹುದೆಂದು ಅವನನ್ನ ಕೇಳಲಾಯಿತ [illegible] ರು ದಿವಸಗಳ ದ್ದೆಂದು ಅವನು ಉತ್ತರಿಸಿದನು. ಆಗ ಜನರಲನು, "ನೀನು ಅದನ್ನು ಒಂದು ದಿನದಲ್ಲಿ ಮಾಡಿದರೆ, ನಾನು ಅಪ್ಪಣೆ ಕೊಡುತ್ತೇನೆ; ಇಲ್ಲದಿದ್ದರೆ ಸಾಧ್ಯ

ವಿಲ್ಲ, ಯಾಕೆಂದರೆ ನಾಡದ್ದು ನೀನು ಸಮುದ್ರಯಾನ ತೊಡಗಲೇಬೇಕು" ಎಂದು ಉತ್ತರಿಸಿದನು. ಆದರೆ ಆನಂತರ ಪೂರ್ಣ ಮೂರು ತಿಂಗಳವರೆಗೆ ದಿನದಿಂದ ದಿನಕ್ಕೆ ವಿಳಂಬಗೊಳಿಸಲ್ಪಟ್ಟರೂ ಕೂಡ ಅವನಿಗೆ ಎಂದೂ ಅಪ್ಪಣೆಯು ಮಾತ್ರ ದೊರೆಯಲಿಲ್ಲ.

ಲಂಡನಿನಲ್ಲಿ ಬೋನೆಲನ ಪ್ರವಾಸಿಗರಲ್ಲಿ ಒಬ್ಬನನ್ನು ಕಂಡೆನು. ಅಷ್ಟು ದೀರ್ಘ ಕಾಲದವರೆಗೆ ನ್ಯೂಯಾರ್ಕಿನಲ್ಲಿ ವಿಳಂಬಿಸಲ್ಪಟ್ಟುದಕ್ಕೆ ಮತ್ತು ಆನಂತರ ಅವನನ್ನು ಪುನಃ ಹ್ಯಾಲಿಫಾಕ್ಸಿಗೆ ಕೊಂಡು ಹೋದುದಕ್ಕೆ ಅವನ ಘನ ಮಹಾಶಯನ ಜನರಲನ ಮೇಲೆ ಅತ್ಯಂತ ಸಿಟ್ಟಿಗೆದ್ದು ಅವನ ಮೇಲೆ ನಷ್ಟದ ಬಗ್ಗೆ ಖಟ್ಲೆ ಹಾಕುವುದಾಗಿ ಅವನು ಹಾಕಿದ್ದನು. ಅವನು ಖಟ್ಲೆ ಹಾಕಿದ್ದನೋ ಇಲ್ಲವೋ ಎಂಬುದು ನನಗೇನು ತಿಳಿದು ಬರಲಿಲ್ಲ; ಆದರೆ ಅವನು ತನ್ನ ಕಾರ್ಯಗಳ ಒಗ್ಗೆ ಸಂಭವಿಸಿದ ನಷ್ಟವನ್ನು ತೋರ್ಪಡಿಸಿದ್ದುದರಿಂದ ಅದು ಮಾತ್ರ ತುಂಬ ಗಣನೀಯವಾಗಿತ್ತು.

ಒಟ್ಟಿನಲ್ಲಿ ಇಂಥ ಮನುಷ್ಯನು ಅಷ್ಟೊಂದು ದೊಡ್ಡ ಸೈನ್ಯದ ಕ್ಯಾಪ್ಟನನಾಗಿ ಅದು ಹೇಗೆ ಅಷ್ಟೊಂದು ಪ್ರಮುಖ ಹುದ್ದೆಗೆ ನೇಮಿಸಲ್ಪಟ್ಟನೆಂಬುದರ ಬಗ್ಗೆ ನಾನು ಬಹಳ ಅಚ್ಚರಿಗೊಂಡಿದ್ದೆನು; ಆದರೆ, ವಿಶಾಲ ಜಗತ್ತನ್ನು ಬಹಳ ಹೆಚ್ಚು ನೋಡಿದ ನಂತರ, ಮತ್ತು ಕೆಲಸಗಳನ್ನು ಪಡೆಯುವ ಮಾರ್ಗಗಳನ್ನು ಮತ್ತು ಹುದ್ದೆಗಳನ್ನು ಕೊಡುವುದರ ಉದ್ದೇಶಗಳನ್ನು ಕಂಡುಕೊಂಡಮೇಲೆ ನನ್ನ ಅಚ್ಚರಿ ಕಡಿಮೆಯಾಯಿತು. ಬ್ರೆಡ್ಡೋಕನ ಮರಣದ ತರುವಾಯ ಸೈನ್ಯದ ಜವಾಬ್ದಾರಿಯನ್ನು ಒಪ್ಪಿಸಲಾದಂಥ ಜನರಲ್ ಶಿರ್ಲೆಯು, ಅದೇ ಹುದ್ದೆಯಲ್ಲಿ ಮುಂದುವರಿದುದಾದರೆ, ಲಾಡೇನನಿಗಿಂತ ಉತ್ತಮವಾಗಿ ೧೭೫೭ ರ ದಾಳಿಯನ್ನು ಎಸಗುತ್ತಿದ್ದನೆಂಬುದು ನನ್ನ ಮತವಾಗಿರುತ್ತದೆ. ಆ ಆಂದೋಲನವು ಮಾತ್ರ ಕ್ಷುಲ್ಲಕವಾಗಿತ್ತು; ತುಂಬ ಖರ್ಚಿನದು ಹಾಗೂ ನಮ್ಮ ರಾಷ್ಟ್ರಕ್ಕೆ ಎಣಿಸಲಸಾಧ್ಯವಾದಷ್ಟು ಅಪಮಾನದಾಯಕವಾಗಿತ್ತು. ಯಾಕೆಂದರ, ಶಿರ್ಲೆಯು ಹುಟ್ಟಾಸೈನಿಕನಾಗಿ ಬೆಳೆಯದಿದ್ದರೂ ಅವನು ವಿವೇಕಶಾಲಿ ಮತ್ತು ಚತುರನಾಗಿದ್ದನು. ಬೇರೆಯವರ ಉತ್ತಮಸಲಹೆಯತ್ತ ಗಮನವೀಯುತ್ತಿದ್ದನು ಮತ್ತು ಚಾತುರ್ಯದ ಯೋಜನೆಗಳನ್ನು ರೂಪಿಸುವುದರಲ್ಲಿ ಸಮರ್ಥನಾಗಿದ್ದನು. ಅಂತೇ ಅವುಗಳನ್ನು ಕಾರ್ಯಗತಗೊಳಿಸುವುದರಲ್ಲಿ ತೀವ್ರತೆಯಿದ್ದವನಾಗಿ ಚಟುವಟಿಕೆಯುಳ್ಳವನೂ ಆಗಿದ್ದನು. ತನ್ನ ದೊಡ್ಡದಾದ ಸೈನ್ಯದಿಂದ ವಸಾಹತುಗಳನ್ನು ರಕ್ಷಿಸುವುದರ ಬದಲು ಲೌಡೇನನು ಅವರನ್ನು ಸಂಪೂರ್ಣ ವೈರಿ

ಗಳ ಬಾಯಿಗೆ ಬಿಟ್ಟನು. ಇತ್ತ ಸೋಮಾರಿತನದಿಂದ ಹ್ಯಾಲಿಫಾಕ್ಸಿನಲ್ಲಿ ಕವಾಯತು ಮಾಡಿದನು. ಈ ಮೂರ್ಖತನದಿಂದಾಗಿ ಫೋರ್ಟ್‌ಜಾರ್ಜ್ ಕಳೆದು ಹೋಯಿತು. ಅದಲ್ಲದೆ, ನಮ್ಮ ವ್ಯವಹಾರದ ಸ್ಥಿತಿಗತಿಯನ್ನೆಲ್ಲ ಅವನು ಅಸ್ತವ್ಯಸ್ತಗೊಳಿಸಿಬಿಟ್ಟನು ಮತ್ತು ವೈರಿಗಳು ಆಹಾರ ಸಾಮಗ್ರಿಗಳನ್ನು ಪಡೆಯದಂತೆ ಮಾಡಬೇಕೆಂಬ ನೆವದಿಂದ ಅವುಗಳ ರಫ್ತು ಆಗದ ಹಾಗೆ ಹಡಗಿನ ವ್ಯಾಪಾರದ ಮೇಲೆ ದೀರ್ಘ ನಿರ್ಬಂಧವನ್ನು ಹೇರಿ ನಮ್ಮ ವ್ಯಾಪಾರವನ್ನು ಹದಗೆಡಿಸಿಬಿಟ್ಟನು. ಆದರೆ ನೈಜವಾಗಿ ಮಾತ್ರ ಈ ನಿರ್ಬಂಧವು ಗುತ್ತಿಗೆದಾರರ ಪರವಾಗಿ ಕ್ರಯವನ್ನು ಕೆಳಗೆ ಇಳಿಸುವುದಾಗಿತ್ತು. ಅವರ ಲಾಭದಲ್ಲಿ ಅವನಿಗೂ ಪಾಲು ಇತ್ತೆಂದೂ—ಬಹುಶಃ ಸಂಶಯದಿಂದ ಕೂಡಾ ಆಗಿರಬಹುದೆಂದು—ಹೇಳಲಾಗಿತ್ತು. ತರುವಾಯ ಬಹಳ ಸಮಯದ ಮೇಲೆ ಈ ಹಡಗಿನ ವ್ಯವಹಾರದ ನಿರ್ಬಂಧವನ್ನು ತೆಗೆದ ಮೇಲೆ, ಚಾರ್ಲಸ್‌ಟೌನಿಗೆ ಅದರ ಸೂಚನೆ ಕೊಡುವುದನ್ನು ಅಲಕ್ಷಿಸಿದ ತರುವಾಯ ಕರೋಲಿನಾ ಹಡಗು ಪಡೆಯು ಸುಮಾರು ಮೂರು ತಿಂಗಳವರೆಗೆ ವಿಳಂಬಿಸಲ್ಪಟ್ಟಿತು ಹೀಗಾಗಿ ಹುಳು ತಿಂದು ಅವುಗಳ ಅಡಿಗಳೆಲ್ಲ ವಿಪರೀತ ಕೆಟ್ಟು ಹೋಗಿ ಅವುಗಳಲ್ಲಿ ಹೆಚ್ಚಿನವುಗಳು ಮರಳಿ ತಾಯ್ನಾಡಿಗೆ ಹೋಗುವ ಕಾಲದಲ್ಲಿ ಮುಳುಗಿ ಹೋದುವು.

ಮಿಲಿಟರಿ ವ್ಯವಹಾರದ ಬಗ್ಗೆ ಹೆಚ್ಚಿಗೆ ತಿಳಿಯದಿದ್ದಂಥ ಮನುಷ್ಯನಿಗೆ, ಸೈನ್ಯದ ಉಸ್ತುವಾರಿಯಂಥ ಬಹು ದೊಡ್ಡ ಪ್ರಯಾಸದ ಕೆಲಸದಿಂದ ಬಿಡುಗಡೆಯಾದ ಹಾಗೆ ಆದುದರಿಂದ, ಶಿರ್ಲೆಯು ಸಂತಸ ಪಟ್ಟಿರಬೇಕೆಂದು ನಾನು ಪ್ರಾಮಾಣಿಕತನದಿಂದ ನಂಬುತ್ತೇನೆ. ಸೈನ್ಯದ ಅಧಿಕಾರವನ್ನು ಅವನು ಪಡೆದುಕೊಂಡ ಗೌರವಾರ್ಥವಾಗಿ ನ್ಯೂಯಾರ್ಕ್ ಪಟ್ಟಣದವರು ಲಾರ್ಡ ಲಾಡೇನನಿಗೆ ನೀಡಿದ ಸಂತೋಷ ಕೂಟದಲ್ಲಿ ನಾನು ಇದ್ದೆನು. ಆ ಮೂಲಕ ಶಿರ್ಲೆಯು ಪದಚ್ಯುತಗೊಳಿಸಲ್ಪಟ್ಟಿದ್ದರೂ ಕೂಡ ಅಲ್ಲಿ ಉಪಸ್ಥಿತನಾಗಿದ್ದನು. ಅಲ್ಲಿ ಆಫೀಸರುಗಳ, ನಾಗರಿಕರ ಮತ್ತು ಅಭ್ಯಾಗತರ ಬಹು ದೊಡ್ಡ ಮಂಡಳಿಯಿತ್ತು. ನೆರೆಹೊರೆಯಿಂದ ಕೆಲವು ಕುರ್ಚಿಗಳನ್ನು ಎರವಲು ತರಲಾಗಿತ್ತು. ಅವುಗಳಲ್ಲಿ ಒಂದು ಬಹಳ ತಗ್ಗಾಗಿತ್ತು. ಅದೇ ಮಿಸ್ಟರ್ ಶಿರ್ಲೆಯ ಪಾಲಿಗೆ ಬಂದಿತ್ತು. ಅದನ್ನು ತಿಳಿದುಕೊಂಡು ಅವನ ಬದಿಯಲ್ಲಿದ್ದ ನಾನು, "ಮಹಾರಾಯಾ, ನಿನಗೆ ತೀರಾ ತಗ್ಗಿನ ಜಾಗವನ್ನು ಕೊಟ್ಟಿದ್ದಾರೆ" ಎಂದು ಹೇಳಿದೆನು. "ಏನೂ ಪರವಾ ಇಲ್ಲ ಮಿಸ್ಟರ್ ಫ್ರ್ಯಾಂಕ್ಲಿನ್, ತಗ್ಗಿನ ಜಾಗ ಅತ್ಯಂತ ಸುಲಭವಾದುದೆಂದು ನನಗೆ ಕಾಣು

ತ್ತದೆ." ಎಂದು ಅವನು ಹೇಳಿದನು.

ಮೇಲೆ ಹೇಳಿದಂತೆ, ನಾನು ನ್ಯೂಯಾರ್ಕಿನಲ್ಲಿ ವಿಳಂಬಿಸಲ್ಪಟ್ಟಾಗ, ಆಹಾರ ಸಾಮಗ್ರಿ ಮೊದಲಾದವುಗಳನ್ನು ನಾನು ಬ್ರೆಡ್ಡೋಕನಿಗೆ ಒದಗಿಗಿಸಿಕೊಟ್ಟುದರ ಎಲ್ಲಾ ಲೆಕ್ಕವು ನನಗೆ ದೊರಕಿತು. ಈ ವ್ಯವಹಾರದಲ್ಲಿ ಸಹಕರಿಸಲು ನಾನು ನೇಮಿಸಿಕೊಂಡ ಕೆಲವು ಜನರಿಂದ ಬೇಗನೆ ಲೆಕ್ಕ-ಪತ್ರಗಳು ನನಗೆ ಸಿಕ್ಕಿರಲಿಲ್ಲ. ನನಗೆ ಬರತಕ್ಕ ಬಾಕಿಯನ್ನು ಪಡೆಯುವ ಅಪೇಕ್ಷೆಯಿಂದ ನಾನು ಅವುಗಳನ್ನು ಲಾರ್ಡ ಲಾಡೇನನ ಮುಂದೆ ಸಾದರ ಪಡಿಸಿದೆನು. ಯೋಗ್ಯ ಅಧಿಕಾರಿಗಳಿಂದ ಅವುಗಳನ್ನು ನಿಯಮಿತವಾಗಿ ಪರೀಕ್ಷಿಸುವಂತೆ ನೋಡಿಕೊಂಡನು ಅವರು ಪ್ರತಿಯೊಂದು ವಸ್ತುವನ್ನು ಆದರ ರಶೀದಿಯೊಡನೆ ಹೋಲಿಸಿ ನೋಡಿಕೊಂಡು ಸರಿಯಾಗಿದೆಯೆಂದು ಸಿದ್ಧಪಡಿಸಿಕೊಟ್ಟರು. ಅಂತೇ ನನಗೆ ಆ ಮೂಲಕ ಬರುವ ಬಾಕಿಯ ಬಗ್ಗೆ ಘನ ಮಹಾಶಯನು ಸಂಬಳ ಬಟವಾಡೆಯ ಅಧಿಕಾರಿಗೆ, ನನಗೆ ಕೊಡಲು ಆಜ್ಞೆ ಮಾಡುವುದಾಗಿ ವಚನ ಕೊಟ್ಟನು. ಆದರೂ ಕೂಡ, ಇದು ಸಹ ಕಾಲದಿಂದ ಕಾಲಕ್ಕೆ ಮುಂದೂಡಲ್ಪಟ್ಟಿತು. ಅಂತೇ ಅದಕ್ಕಾಗಿ ನನ್ನನ್ನು ಆಗಾಗ್ಗೆ ನಿರ್ದಿಷ್ಟ ಸಮಯಕ್ಕೆ ಕರೆಯಿಸಿಕೊಂಡರೂ ಸಹಿತ ನನಗೆ ಅದು ದೊರೆಯಲಿಲ್ಲ. ಕಟ್ಟಕಡೆಗೆ, ನಾನು ಹೊರಡುವ ಹೊತ್ತಿಗಿಂತ ಸ್ವಲ್ಪ ಮೊದಲು, ಬಹಳ ಯೋಗ್ಯವಾಗಿ ವಿಚಾರ ಮಾಡಿಕೊಂಡು, ತನ್ನ ಪೂರ್ವಾಧಿಕಾರಿಗಳ ಲೆಕ್ಕದ ಸಂಗಡ ತನ್ನ ಲೆಕ್ಕವನ್ನು ಸೇರಿಸಬಾರದೆಂದು ತಾನು ನಿರ್ಣಯಿಸಿರುವುದಾಗಿ ಅವನು ನನಗೆ ಹೇಳಿದನು. "ಮತ್ತು ನೀನು ಇಂಗ್ಲೆಂಡಿಗೆ ಹೋದಾಗ ಖಜಾನೆಯಲ್ಲಿ ನಿನ್ನ ಲೆಕ್ಕವನ್ನು ಮಾತ್ರ ತೋರಿಸಬೇಕು, ಮತ್ತು ನಿನಗೆ ಆ ಕೂಡಲೆ ಹಣಕೊಡಲಾಗುವುದು." ಎಂದೂ ಹೇಳಿದನು.

ಕೂಡಲೇ ನನಗೆ ಹಣ ಬಟವಾಡೆಯಾಗಬೇಕೆಂಬುದರ ಕಾರಣದಿಂದ ಅಷ್ಟೊಂದು ದೀರ್ಘ ಕಾಲದವರೆಗೆ ನ್ಯೂಯಾರ್ಕಿನಲ್ಲಿ ನನಗೆ ವಿಳಂಬವಾಗಿ ಆ ಮೂಲಕ ಅತ್ಯಂತ ಹೆಚ್ಚಿನ ಹಾಗೂ ಆಕಸ್ಮಿಕಖರ್ಚು—ಆಯಿತೆಂದು ನಾನು ಹೇಳಿದೆನು. ಆದರೆ ಅದರಿಂದ ಯಾವ ಪರಿಣಾಮವೂ ಒದಗಲಿಲ್ಲ. ಮತ್ತು ನನ್ನ ಸೇವೆಗಾಗಿ ನಾನು ಯಾವ ಕಮಿಷನನ್ನೂ ಹಾಕಿರದ ಮೂಲಕ ನಾನು ಮುಂಗಡ ಕೊಟ್ಟಿರುವ ಹಣವನ್ನು ಪಡೆಯುವುದಕ್ಕೆ ಇನ್ನೂ ಹೆಚ್ಚಿನ ತೊಂದರೆಗೊಳಗಾಗುವುದು ಮತ್ತು ಆ ಬಗ್ಗೆ, ನನಗೆ ವಿಳಂಬವಾಗುವುದು ಒಳಿತಲ್ಲವೆಂದು ನಾನು ಹೇಳಿದಾಗ, "ಸುಹಾ

ರಾಯೂ. ನೀನು ಲಾಭ ಪಡೆದವನಲ್ಲವೆಂಬುದನ್ನು ಎಣಿಸಲೇ ಕೂಡದು; ಆ ವ್ಯವಹಾರಗಳೆಲ್ಲ ನಮಗೆ ಚೆನ್ನಾಗಿ ಗೊತ್ತಿವೆ, ಮತ್ತು ಸೈನ್ಯಕ್ಕೆ ಸರಬರಾಯ ಒದಗಿಸುವ ಪ್ರತಿಯೊಬ್ಬನೂ ಆ ಕೆಲಸ ಮಾಡುವುದರಿಂದ ತನ್ನ ಕಿಸೆ ತುಂಬಿಸುವ ಮಾರ್ಗವನ್ನು ಮರೆಯುವುದಿಲ್ಲವೆಂದು ನಮಗೆ ತಿಳಿದಿರುತ್ತದೆ." ಎಂದು ಅವನು ಹೇಳಿದನು. ಹಾಗೆ ನನ್ನ ವಿಷಯವಿಲ್ಲವೆಂದು ನಾನು ಅವನಿಗೆ ಖಂಡಿತ ಹೇಳಿದೆನು ಮತ್ತು ನಾನು ಒಂದು ಫಾರ್ದಿಂಗ್ ಕೂಡಾ ಕಿಸೆಗೆ ಹಾಕಿಲ್ಲವೆಂದು ತಿಳಿಸಿದೆನು; ಆದರೆ ನನ್ನನ್ನು ನಂಬದವನ ಹಾಗೆ ಅವನು ಚೆನ್ನಾಗಿ ಕಾಣುತ್ತಿದ್ದನು. ಅಂತೇ, ಅಂಥ ಉದ್ಯೋಗದಿಂದ ಅಗಾಧ ಅಪಾರ ಹಣಗಳಿಸಲಾಗುತ್ತದೆಂದು ಆ ಮೇಲೆ ನನಗೆ ತಿಳಿದು ಬಂದಿತ್ತು. ಇತ್ತ ನನ್ನ ಬಾಕಿಯ ಬಗ್ಗೆ—ಈ ದಿನದವರೆಗೂ ಅದು ನನಗೆ ಸಂದಿಲ್ಲ; ಅದರ ಬಗ್ಗೆ ಇನ್ನು ಮುಂದೆ ಹೆಚ್ಚೇನೂ ಬೇಡ.

ನಾವು ಯಾನ ಹೊರಡುವ ಮೊದಲು, ನಮ್ಮ ಕ್ಯಾಪ್ಟನನು ತನ್ನ ಹಡಗಿನ ಗತಿಯ ಬಗ್ಗೆ ತುಂಬಾ ಕೊಚ್ಚಿಕೊಂಡಿದ್ದನು. ದುರ್ದೈವದಿಂದ ನಾವು ಸಮುದ್ರಕ್ಕೆ ಬಂದಾಗ, ಅವನಿಗೆ ವಿಪರೀತ ಗರ್ವಭಂಗವಾಗುವಂತೆ, ಅದು ತೊಂಬತ್ತಾರು ಯಾನಗಳಲ್ಲಿ (Sail) ತೀರ ಮಂದವಾದುದೆಂದು ಸಿದ್ಧವಾಯಿತು. ಈ ಕಾರಣದ ಬಗ್ಗೆ ಅನೇಕ ಊಹಾಪೋಹಗಳನಂತರ, ನಾವು ಹೆಚ್ಚು ಕಡಿಮೆ ನಮ್ಮದರಷ್ಟೆ ಮಂದವಾದ ಇನ್ನೊಂದು ಹಡಗಿನ ಹತ್ತಿರ ಬಂದಾಗ, ಹೀಗಿದ್ದರೂ ಕೂಡ ಅದು ನಮ್ಮನ್ನು ಗೆದ್ದುಬಿಟ್ಟಿತು; ಕ್ಯಾಪ್ಟನನು ಎಲ್ಲಾ ಜನರು ಹಡಗಿನ ಹಿಂದಕ್ಕೆ ಬಂದು ಸಾಧ್ಯವಾದಷ್ಟು ಬಾವುಟದ ನೌಕರರ ಹತ್ತಿರ ನಿಲ್ಲಲು ಆಜ್ಞೆ ಮಾಡಿದನು. ಪ್ರವಾಸಿಕರು ಸೇರಿಕೊಂಡು, ನಾವು ಸುಮಾರು ನಾಲ್ವತ್ತು ಜನರಿದ್ದೆವು. ಅಲ್ಲಿ ನಿಂತಾಗ, ಹಡಗವು ತನ್ನ ಗತಿಯನ್ನು ಸುಧಾರಿಸಿಕೊಂಡಿತು ಮತ್ತು ತನ್ನ ನೆರೆಯುದನ್ನು ಬಿಟ್ಟು ಮುಂದೆ ಸಾಗಿತು. ಇದರಿಂದ, ಅದು ಬಹಳ ಜನರಿಂದ ಭಾರವಾಗಿ ಹೋಗಿದೆಯೆಂದು ನಮ್ಮ ಕ್ಯಾಪ್ಟನನು ಸಂಶಯಪಟ್ಟಿದ್ದನ್ನು ನಿಜವೆಂದು ಸಿದ್ಧಪಡಿಸಿದಂತಾಯಿತು. ನೀರಿನ ಹೂಜಿಗಳೆಲ್ಲ ಮುಂದುಗಡೆಯಲ್ಲಿ ಇಟ್ಟ ಹಾಗೆ ಇತ್ತು. ಇವುಗಳನ್ನು ಆ ಕಾರಣದಿಂದ ಅವನು ಹಡಗಿನ ಮುಂದಿನ ಬದಿಗೆ ಒಯ್ಯಲು ಆಜ್ಞೆ ಮಾಡಿದನು. ಇದರಿಂದ ಹಡಗವು ತನ್ನ ಗುಣವನ್ನು ಮರಳಿ ಪಡೆಯಿತು ಮತ್ತು ಹಡಗು ಪಡೆಯಲ್ಲಿನ ಹಡಗೆಂದು ಸಿದ್ಧಮಾಡಿ ತೋರಿಸಿತು.

ಅದು ಒಮ್ಮೆ ಹದಿಮೂರು ನಾಟ್ಸ್ (Knots) ವೇಗದಲ್ಲಿ

ಹೋಗಿತ್ತೆಂದು ಕ್ಯಾಪ್ಟನ್ ಹೇಳಿದನು; ಅದು ಗಂಟೆಗೆ ಹದಿಮೂರು ಮೈಲುಗಳಷ್ಟಾಗುತ್ತದೆ. ನಮ್ಮ ಬೋರ್ಡಿನಲ್ಲಿ ಪ್ರವಾಸಿಕನಾಗಿ ಸೈನ್ಯದ ಕ್ಯಾಪ್ಟನ್ ಕ್ಯಾನೆಡಿಯಿದ್ದನು. ಅವನು ಅದು ಅಸಾಧ್ಯವೆಂದೂ ಮತ್ತು ಈವರೆಗೆಯಾವ ಹಡಗವೂ ಅಷ್ಟು ವೇಗವಾಗಿ ಹೋಗಿಲ್ಲ ಮತ್ತು ಲಾಗ್-ಲೈನಿನ ವಿಭಜನೆಯಲ್ಲಿ ಏನಾದರೂ ತಪ್ಪಿರಬೇಬೇಕು ಅಥವಾ ಲಾಗ್ (log)ನ್ನು ಎತ್ತುವುದರಲ್ಲಿ ಏನಾದರೂ ಹೆಚ್ಚುಕಡಿಮೆಯಾಗಿರಬೇಕೆಂದೂ ವಾದಿಸಿದನು. ತೃಪ್ತಿಕರವಾದ ಗಾಳಿಯಿದ್ದಾಗ ನಿರ್ಣಯಿಸಲು - ಇಬ್ಬರು ಕ್ಯಾಪ್ಟನುಗಳ ನಡುವೆ ಒಂದು ಪಂತ ಉದ್ಭವಿಸಿತು. ಹೀಗಾಗಿ ಕ್ಯಾನೆಡಿಯು ಬಹಳ ಪ್ರಖರವಾಗಿ ಲಾಗ್-ಲೈನನ್ನು (log-line) ಪರೀಕ್ಷಿಸಿದನು. ಅಂತೇ ಅದರಲ್ಲಿ ತೃಪ್ತನಾದ ಮೂಲಕ ಅದನ್ನು ಎಸೆಯುವುದನ್ನು ತಾನೇ ಮಾಡಬೇಕೆಂದು ನಿರ್ಧರಿಸಿದನು. ಅದೇ ಪ್ರಕಾರ ಕೆಲವು ದಿವಸಗಳ ನಂತರ ಗಾಳಿಯು ಬಹಳ ಉತ್ತಮವಾಗಿ ಸ್ವಚ್ಛವಾಗಿ ಬೀಸತೊಡಗಿದಾಗ, ಸಾರಿಗೆಯ ಹಡಗಿನ ಕ್ಯಾಪ್ಟನನಾದ ಲುಟ್ವಿಜನು - ಆಗ ಅದು ತಾಸಿಗೆ ಹದಿನೈದು ನಾಟ್ಸ (Knots) ವೇಗದಲ್ಲಿ ಚಲಿಸುತ್ತಿದೆಯೆಂದು ನನಗೆನಿಸುತ್ತದೆಯೆಂದು ಹೇಳಿದನು ಕ್ಯಾನೆಡಿಯು ಪ್ರಯೋಗ ಮಾಡಿ ನೋಡಿದನು ಮತ್ತು ಕಳೆದುಕೊಂಡ ತನ್ನ ಪಂಥವನ್ನು ದೊರಕಿಸಿಕೊಂಡನು.

ಮೇಲಿನ ಸಂಗತಿಯನ್ನು ನಾನು ಕೆಳಗಿನ ಕಣ್ಣರಿಕೆಗಾಗಿ ಇಲ್ಲಿ ಕೊಡುತ್ತೇನೆ. ಒಂದು ಹೊಸ ಹಡಗವು ಉತ್ತಮವಾಗಿ ಚಲನವಾಗುವುದೋ ಇಲ್ಲವೋ ಎಂಬುದನ್ನು, ಹಡಗು-ಕಟ್ಟುವ ಕಲೆಯ ಅಪೂರ್ಣತೆಯ ಮೂಲಕ, ಅದರ ಪ್ರಯೋಗವಾಗದ ಹೊರತು ತಿಳಿಯಲಿಕ್ಕೇ ಸಾಧ್ಯವಿಲ್ಲೆಂದು ಹೇಳಲಾಗುತ್ತದೆ. ಯಾಕಂದರ, ಹೊಸ ಹಡಗಕ್ಕೆ ಉತ್ತಮವಾಗಿ ಚಲಿಸುವ ಹಡಗಿನ ಮಾದರಿಯನ್ನು ಯೋಗ್ಯವಾಗಿ ಅವಲಂಬಿಸಿದರೂ-ಅದು ತದ್ವಿರುದ್ಧ ತೀರಾ ಮಂದಗಾಮಿಯೆಂದು ಸಿದ್ಧಗೊಳಿಸಲ್ಪಡಬಹುದು. ಇದು ಅಂಶತಃ ಹಡಗು ನಡೆಸುವುದಕ್ಕೆ ಸಂಬಂಧಪಟ್ಟ ಭಾರ ಹೇರಿಕೆಯ, ಹಗ್ಗ ಹಾಯಿಗಳ, ವಿಷಯಗಳ ವಿಧಾನದ ಬಗ್ಗೆ ನಾವಿಕರ ತರತರಹದ ಅಭಿಪ್ರಾಯಗಳನ್ನು ಅವಲಂಬಿಸಿರುತ್ತದೆಯೆಂದು ನನಗನಿಸುತ್ತದೆ. ಪ್ರತಿಯೊಬ್ಬನಿಗೂ ತನ್ನದಾದ್ದೊಂದು ಪದ್ಧತಿಯಿರುತ್ತದೆ. ಅಂತೇ ಒಂದೇ ಹಡಗವು ಒಬ್ಬ ಕ್ಯಾಪ್ಟನ್ನನ ಅಭಿಪ್ರಾಯ ಮತ್ತು ಆಜ್ಞೆಯಂತೆ ಭಾರ ಹೇರಿಸಲ್ಪಟ್ಟದ್ದು ಮತ್ತೊಬ್ಬನ ಆಜ್ಞೆಯಂತೆ ಉತ್ತಮ ಅಥವಾ ನಿಕೃಷ್ಟವಾಗಿ ಚಲಿಸಬಹುದು. ಅದಲ್ಲದೆ ಒಂದು ಹಡಗವನ್ನು ಒಬ್ಬನೇ ಮನುಷ್ಯ ಸಮುದ್ರಕ್ಕೆ ಯೋಗ್ಯ

ವಾಗುವಂತೆ ಕಟ್ಟುವುದೂ ಚಲಿಸುವುದೂ ತೀರಾ ವಿರಳವಾಗಿರುತ್ತದೆ. ಒಬ್ಬ ಮನುಷ್ಯನು ನಾವೆಯ ಹೊರಮೈ (Hull) ಯನ್ನು ಕಟ್ಟುತ್ತಾನೆ, ಮತ್ತೊಬ್ಬನು ಅದರ ಹಾಯಿ-ಹಗ್ಗಗಳನ್ನು ಕಟ್ಟುತ್ತಾನೆ, ಮಗದೊಬ್ಬನು ಅದನ್ನು ಜನ-ಸಾಮಾನುಗಳಿಂದ ತುಂಬಿಸಿ ನಡೆಸುತ್ತಾನೆ. ಇವರಲ್ಲಿ ಯಾವನಿಗೂ ಮತ್ತೊಬ್ಬನ ಅಭಿಪ್ರಾಯ–ಅನುಭವಗಳನ್ನೆಲ್ಲ ತಿಳಿಯುವ ಅನುಕೂಲವಿರುವುದಿಲ್ಲ. ಆದುದರಿಂದ, ಇವೆಲ್ಲವುಗಳ ಹೊಂದಿಕೆಯಿಂದ ಯೋಗ್ಯವಾದ ನಿರ್ಣಯವನ್ನು ಯಾವನಿಂದಲೂ ಮಾಡಲಿಕ್ಕೆ ಸಾಧ್ಯವಿಲ್ಲ.

ಸಮುದ್ರದಲ್ಲಿ ಚಲಿಸುತ್ತಿರುವ ಸಾದಾ ಕಾರ್ಯದಲ್ಲಿ ಕೂಡ, ಗಾಳಿಯು ಸಮನಾಗಿದ್ದರೂ ಸಹ, ಕ್ರಮಾಗತ ಕಾವಲನ್ನು ನಡೆಸುವ ಆಫೀಸರರು ವಿವಿಧ ಅಭಿಪ್ರಾಯ ವ್ಯಕ್ತಪಡಿಸುವುದನ್ನು ನಾನು ಕಂಡಿದ್ದೇನೆ. ಒಬ್ಬನು ಹಡಗಿನ ಹಾಯಿಯನ್ನು ಸೆಳೆದು ಗಿಡ್ಡಮಾಡುತ್ತಿದ್ದನು ಅಥವಾ ಮತ್ತೊಬ್ಬನಿಗಿಂತ ಉದ್ದಬಿಡುತ್ತಿದ್ದನು. ಹೀಗಾಗಿ ಅವರಿಗೆ ಕಾರ್ಯಾಚರಣೆ ಮಾಡಲು ನಿರ್ದಿಷ್ಟವಾದ ಒಂದು ನಿಯಮವಿದ್ದಂತೆ ಕಾಣುತ್ತಿರಲಿಲ್ಲ. ಆದರೂ ಕೂಡ ಪ್ರಥಮದಲ್ಲಿ, ಸರಾಗವಾಗಿ ಚಲನೆಯಾಗುವುದಕ್ಕೆ ಕೆಲವೊಂದು ನಿರ್ದಿಷ್ಟ ಪ್ರಯೋಗಗಳನ್ನು-ಯೋಗ್ಯವಾದ ನಾವೆಯ ಹೊರಮೈಯ ಆಕಾರವನ್ನು ನಿರ್ಧರಿಸಲು-ಮಾಡಬಹುದೆಂದು ನನಗನಿಸುತ್ತದೆ. ತರುವಾಯ ಕೂವೆ ಮರಗಳ ಉತ್ತಮವಾದ ಉದ್ದಳತೆಯನ್ನೂ ಯೋಗ್ಯ ಸ್ಥಳವನ್ನೂ ನಿರ್ಧರಿಸಬಹುದು. ಆಮೇಲೆ, ಹಾಯಿಗಳ ಆಕಾರ ಮತ್ತು ಸಂಖ್ಯೆಯನ್ನು ಗಾಳಿಯಿದ್ದ ಹಾಗೆ ಗೊತ್ತು ಮಾಡಬಹುದು. ಕಟ್ಟಕಡೆಗೆ ಜನರನ್ನು ಹಾಗೂ ಸಾಮಾನುಗಳನ್ನು ಹೇರುವ ಏರ್ಪಾಡುಗೊಳಿಸಬಹುದೆಂದೂ ನನಗೆನಿಸುತ್ತದೆ. ಇದೊಂದು ಪ್ರಯೋಗಗಳ ಕಾಲ. ಅಂತೇ ಕೆಲವೊಂದು ನಿರ್ದಿಷ್ಟ ಸಂಖ್ಯೆಯಲ್ಲಿ ಸೂಕ್ಷ್ಮವಾಗಿ ಸರಿಯಾಗಿ ನೆರವೇರಿಸಿದ ಪ್ರಯೋಗಗಳ ಹೊಂದಿಕೆಯು ಬಹಳ ಉಪಯುಕ್ತವಾಗಬಹುದೆಂದು ನಾನು ನಂಬಿದ್ದೇನೆ ಆದುದರಿಂದ. ಕೆಲ ಕಾಲದಲ್ಲೇ ಯಾವನಾದರೊಬ್ಬ ಚತುರ ತತ್ವಜ್ಞಾನಿಯು ಆದನ್ನು ಕೈಕೊಳ್ಳುತ್ತಾನೆಂದು ನನಗೆ ಸಮಾಧಾನವೆನಿಸುತ್ತದೆ ಮತ್ತು ನಾನು ಅವನಿಗೆ ಯಶಸ್ಸು ಕೋರುತ್ತೇನೆ.

ನಮ್ಮ ಗಮನದಲ್ಲಿ ಅನೇಕ ಸಲ ನಾವು ತಡೆಗಟ್ಟಲ್ಪಟ್ಟೆವು, ಆದರೆ ಎಲ್ಲವನ್ನೂ ದಾಟಿಕೊಂಡು ಹೋದೆವು ಮತ್ತು ಮೂವತ್ತು ದಿವಸಗಳಲ್ಲಿ ನೀರು ದೊರಕಿದ್ದಾಯಿತು. ನಮ್ಮಲ್ಲಿ ಒಳ್ಳೆಯ ನಿರೀಕ್ಷೆಯಿತ್ತು. ಅಂತೇ ಫಾಲ್‌ಮೌಥ ಬಂದರದ ಬಹಳ ಹತ್ತಿರವಿರುವುದರಿಂದ ರಾತ್ರಿ

ಯಲ್ಲಿ ಚೆನ್ನಾಗಿ ಓಡಿಕೊಂಡು ಸಾಗಿದ್ದಾದರೆ ನಾವು ಬಂದರದ ಮುಖವನ್ನು ಬೆಳಿಗ್ಗೆ ದಾಟ ಬಹುದೆಂದು ಕ್ಯಾಪ್ಟನ್ನನು ತರ್ಕಮಾಡಿದನು. ಅಂತೇ ಹಾಗೆ ರಾತ್ರಿ ಓಡಿ ಚಲನೆ ಮಾಡಿದರೆ ನಾವು ವೈರಿಗಳ ಖಾಸಗಿ ಯುದ್ಧದ ಹಡಗುಗಳನ್ನು ತಪ್ಪಿಸಬಹುದೆಂದು ಹೇಳಿದನು. ಅವರು ಆಗಾಗ ಜಲ ಮಾರ್ಗವನ್ನು ಪ್ರವೇಶಿಸುವಲ್ಲಿ ಅಡಗಿಕೊಂಡಿರುತ್ತಾರೆಂದೂ ತಿಳಿಸಿದನು. ಅದೇ ಪ್ರಕಾರ, ನಮಗೆ ಸಾಧ್ಯವಿದ್ದುದನ್ನೆಲ್ಲ ಮಾಡಿ ಎಲ್ಲಾ ಹಾಯಿಗಳನ್ನು ಕಟ್ಟಿದ್ದಾಯಿತು. ಗಾಳಿಯು ಉತ್ತಮ ಹಾಗೂ ಸ್ವಚ್ಛವಾಗಿದ್ದುದರಿಂದ ಅದರ ಮೊದಲೆ ಸರಿಯಾಗಿ ನಾವು ಹೋದೆವು ಮತ್ತು ಸಾಕಷ್ಟು ದಾರಿ ದಾಟಿದ್ದಾಯಿತು. ತನ್ನ ನಿರೀಕ್ಷೆಯಂತೆ ಕ್ಯಾಪ್ಟನ್ನನು ತನ್ನ ದಾರಿಯನ್ನು ಮಾಡಿಕೊಂಡನು. ಸ್ಕಿಲ್ಲೀ ದ್ವೀಪಗಳಿಂದ ಬಹು ದೂರ ಹಾದು ಹೋಗ ಬೇಕೆಂಬುದು ಅವನ ವಿಚಾರವಾಗಿತ್ತು. ಆದರೆ ಸೈಂಟ್ ಜಾರ್ಜ್ಸ ಚಾನ್ನಲ್(St. George's Channel)ನಲ್ಲಿಬಲವಾದ ಸುಳಿಗುಂಡಿಯ ಪ್ರವಾಹವು ಆಗಾಗ ಉಂಟಾಗುತ್ತಿರುತ್ತದೆಂದು ಕಂಡು ಬಂದಿರುತ್ತದೆ. ಇದು ನಾವಿಕರನ್ನು ಮೋಸಗೊಳಿಸುತ್ತದೆ ಮತ್ತು ಸರ್ ಕ್ಲಾಡಸ್ಲೆ ಶೊವೆಲನ ನೌಕಾಪಡೆನಾಶವಾಗುವುದಕ್ಕೆ ಕಾರಣವಾಯಿತು. ಸುಳಿಗುಂಡಿಯ ಪ್ರವಾಹವೇ ಬಹುಶಃ ನಮಗೆ ಬಂದ ಪರಿಸ್ಥಿತಿಯ ಕಾರಣವೂ ಆಗಿರ ಬಹುದು.

ಹಡಗಿನ ಮುಂಭಾಗದ ಪಕ್ಕದಲ್ಲಿ ಅದರ ಕಾವಲುಗಾರನನ್ನು ಕೂಡಿಸಲಾಗಿತ್ತು. ಅವನಿಗೆ ಅವರು ಆಗಾಗ, "ಅಲ್ಲಿ ಮುಂದಕ್ಕೆ ಚೆನ್ನಾಗಿ ನೋಡು," ಎಂದು ಕರೆದು ಹೇಳುತ್ತಿದ್ದರು ಮತ್ತು ಅವನು ಕೂಡಾ ಅದೇ ರೀತಿಯಲ್ಲಿ, "ಹಾಂ, ಹಾಂ," ಎಂದು ಉತ್ತರಿಸುತ್ತಿದ್ದನು. ಆದರೆ ಬಹುಶಃ ತನ್ನ ಕಣ್ಣುಗಳನ್ನು ಮಾತ್ರ ಮುಚ್ಚಿರುತ್ತಿದ್ದನೆಂದು ಕಾಣುತ್ತದೆ, ಮತ್ತು ಆ ಕಾಲದಲ್ಲಿ ಅರ್ಧ ನಿದ್ದೆಯಲ್ಲಿದ್ದಿರಬೇಕು. ಮೇಲೆ ಹೇಳಿದಂತೆ, ಅವರು ಕೆಲವೊಮ್ಮೆ ಯೋಚಿಸದೆ ಉತ್ತರಿಸುತ್ತಿದ್ದರೆಂದು ಕಾಣುತ್ತದೆ. ಯಾಕೆಂದರೆ, ನಮ್ಮ ಮುಂದುಗಡೆಯಲ್ಲಿದ್ದ ಬೆಳಕನ್ನು ಅವನು ಕಾಣಲಿಲ್ಲ. ಅದು ಊದಿಕೊಂಡ ಹಾಯಿಗಳ ಹಿಂದೆ ಹಡಗಿನ ಚುಕ್ಕಣಿಯ ಮನುಷ್ಯನಿಂದ ಅವಿತುಕೊಂಡು ಕೂತಿತ್ತು. ಅಂತೇ ಮಿಕ್ಕ ಕಾವಲುಗಾರರಿಗೂ ಅದು ಕಾಣದ ಹಾಗಿತ್ತು. ಆದರೆಹಡಗಿನ ಒಂದು ಆಕಸ್ಮಿಕ ಆಂದೋಲನದಿಂದ ಅದು ಕಂಡುಬಂದಿತು, ಮತ್ತು ಬಹು ದೊಡ್ಡ ಗಂಭೀರ ಪರಿಸ್ಥಿತಿಯನ್ನುಂಟು ಮಾಡಿತು; ಅದರ ಬಹಳ ಹತ್ತಿರದಲ್ಲಿ ನಾವು ಇದ್ದುದರಿಂದ ನನಗೆಆ ಬೆಳಕು

ಗಾಡಿಯ ದೊಡ್ಡ ಚಕ್ರದಂತೆ ಕಾಣುತ್ತಿತ್ತು. ಆಗ ಮಧ್ಯರಾತ್ರಿಯಾಗಿತ್ತು. ನಮ್ಮ ಕ್ಯಾಪ್ಟನ್ ಬಲವಾಗಿ ನಿದ್ರಿಸುತ್ತಿದ್ದನು. ಆದರೆ ಕ್ಯಾಪ್ಟನ್ ಕೆನೆಡಿಯು ಡೆಕ್ಕಿನ (deck) ಮೇಲೆ ಹಾರಿ, ಅಪಾಯವನ್ನು ನೋಡಿಕೊಂಡು, ಹಾಯಿ-ಹಗ್ಗಗಳನ್ನೆಲ್ಲ ಕುಗ್ಗಿಸಿ ಹಡಗನ್ನು ನಿಲ್ಲಿಸಲು ಆಜ್ಞೆವಿಧಿಸಿದನು. ಎಲ್ಲಾ ಹಾಯಿಗಳು ತಟಸ್ಥವಾದವು. ಈ ಕಾರ್ಯಾಚರಣೆಯು ಕೂವೆ ಮರಗಳಿಗೆ ಅಪಾಯಕಾರವಾಗಿತ್ತು. ಆದರೆ ಇದರಿಂದ ನಾವು ಪಾರಾದೆವು. ಹಡಗು ಒಡೆಯುವುದು ತಪ್ಪಿತು. ಯಾಕೆಂದರೆ, ದೀಪದ ಕೊತ್ತಳವಿದ್ದ ಕಲ್ಲುಗಳತ್ತ ನಾವು ನೇರವಾಗಿ ಧಾವಿಸುತ್ತಿದ್ದೆವು. ಈ ವಿಮೋಚನೆಯು ದೀಪಸ್ತೂಪಗಳ ಉಪಯುಕ್ತತೆಯನ್ನು ಬಲವಾಗಿ ನನ್ನ ಮನಸ್ಸಿನಲ್ಲಿ ಮೂಡಿಸಿತು, ಮತ್ತು ಅಮೇರಿಕಾದಲ್ಲಿ ಅವುಗಳನ್ನು ಹೆಚ್ಚಾಗಿ ಕಟ್ಟಿಸಲು ಪ್ರೋತ್ಸಾಹಿಸಬೇಕೆಂದು ನಾನು ನಿರ್ಧರಿಸುವಂತೆ ಮಾಡಿತು,—ನಾನು ಅಲ್ಲಿಗೆ ಮರಳಿ ಹೋಗಲು ಜೀವಂತವಾಗಿ ಉಳಿದರೆ ಮಾತ್ರ.

ಬೆಳಿಗ್ಗೆ ಸಮುದ್ರದ ಆಳ, ಶಬ್ದ ಇತ್ಯಾದಿಗಳು ತಿಳಿದವು. ಈ ಮೂಲಕ ನಾವು ಬಂದರದ ಹತ್ತಿರವಿದ್ದೇವೆಂದು ಗೊತ್ತಾಯಿತು. ಆದರೆ ಒಂದು ದಟ್ಟವಾದ ಮಂಜಿನ ತೆರೆಯು ನೆಲವನ್ನು ನಮ್ಮ ದೃಷ್ಟಿಯಿಂದ ಅಡಗಿಸಿಟ್ಟಿತ್ತು. ಸುಮಾರು ಒಂಬತ್ತು ಗಂಟೆಯ ಹೊತ್ತಿಗೆ ಮಂಜು ಮೇಲೇರಲಿಕ್ಕೆ ತೊಡಗಿತು. ಮತ್ತು ಅದರ ಒಳಗಡೆಯಲ್ಲಿ ಫಾಲ್ ಮೌತ್ ಪೇಟೆಯನ್ನು ಆದರ ಬಂದರದಲ್ಲಿರುವ ಹಡಗುಗಳನ್ನು ಮತ್ತು ಅದನ್ನು ಸುತ್ತುವರಿದ ಹೊಲಗದ್ದೆಗಳನ್ನು ತೋರಿಸುತ್ತ, ನಾಟಕಗೃಹದಲ್ಲಿನ ಪರದೆ ಏರುವ ಹಾಗೆ ನೀರಿನಿಂದ ಆ ಮಂಜಿನ ತೆರೆಯು ಮೇಲೆದ್ದಂತೆ ಕಾಣುತ್ತಿತ್ತು. ಅಷ್ಟೊಂದು ದೀರ್ಘ ಕಾಲದಿಂದ ಏಕಪ್ರಕಾರದ ಸಮುದ್ರದ ದೃಶ್ಯವಲ್ಲದೆ ಬೇರೆ ಏನೂ ಕಾಣಲಿಕ್ಕೆ ಸಿಗದಿದ್ದಂಥವರಿಗೆ ಈ ನೋಟವು ಅತ್ಯಂತ ಉಲ್ಲಾಸಕರವಾಗಿತ್ತು. ಅಂತೇ ನಾವು ಈಗ ಯುದ್ಧವು ನಮಗೆ ತಂದ ಪ್ರಸಂಗದ ಆತುರತೆಗಳಿಂದ ಸ್ವತಂತ್ರರಾಗಿರುವುದರಿಂದ ಅದು ನಮಗೆ ಹೆಚ್ಚಿನ ಸಂತೋಷವನ್ನು ನೀಡಿತು.

ನನ್ನ ಮಗನ ಜೊತೆಗೆ ನಾನು ಆ ಕೂಡಲೆ ಲಂಡನಿಗೆ ಹೊರಟೆನು. ಮತ್ತು ದಾರಿಯಲ್ಲಿ ನಾವು ಸಾಲಿಸ್‌ಬರಿ ಬಯಲಿನ (Salisbury plain) ಸ್ಟೋನ್ ಹೆಂಜ್ (Stonehenge) ದೃಶ್ಯವನ್ನು ಮತ್ತು ಕುತೂಹಲಕಾರಕವಾದ ಬಹಳ ಪುರಾತನದ ಅವಶೇಷಗಳುಳ್ಳ ಲಾರ್ಡ್ ಪೆಂಬ್ರೋಕನ ಮನೆ ಮತ್ತು ತೋಟಗಳಿದ್ದ ವಿಲ್ಟನಿನಲ್ಲಿ, ನೋಡಲು ಸ್ವಲ್ಪಹೊತ್ತು ನಿಂತಿ

ದ್ದೆವು. ನಾವು ಲಂಡನಿಗೆ ೨೭ನೆಯ ಜುಲೈ ೧೭೫೭ರಲ್ಲಿ ಹೋಗಿ ತಲುಪಿದೆವು. ಮಿಸ್ಟರ್ ಚಾರ್ಲಸನು ನನಗಾಗಿ ಸಿದ್ಧಗೊಳಿಸಿಟ್ಟಿದ್ದ ಒಂದು ವಸತಿ ಗೃಹ ದಲ್ಲಿ ಬಿಡಾರ ಬಿಟ್ಟೊಡನೆ ನಾನು ಡಾಕ್ಟರ್ ಫೋದರ್‌ಗಿಲ್ಲನನ್ನು ಕಾಣಲು ಹೋದೆನು. ಅವನನ್ನು ಕಾಣಬೇಕೆಂದು ನನಗೆ ಬಲವಾಗಿ ಶಿಫಾರಸು ಮಾಡಲಾಗಿತ್ತು ಮತ್ತು ನನ್ನ ಕಾರ್ಯಕಾರಣಗಳಿಗೆ ಅವನ ಸಲಹೆ ಪಡೆ ಯಬೇಕೆಂದು ನನಗೆ ಸೂಚನೆ ಕೊಡಲಾಗಿತ್ತು. ಆ ಕೂಡಲೆ ಸರಕಾರಕ್ಕೆ ದೂರು ಒಯ್ಯುವುದರ ವಿರುದ್ಧ ಅವನಿದ್ದನು. ಮತ್ತು ಮೊದಲಲ್ಲಿ ಖಾಸಗಿ ಒಡೆಯರನ್ನು ವೈಯಕ್ತಿಕವಾಗಿ ಕೇಳಿಕೊಳ್ಳಬೇಕೆಂದು ಆಲೋಚಿಸಿದ್ದನು. ಪ್ರೇಮದಿಂದ ವಿಷಯಗಳನ್ನು ತೀರ್ಪುಗೊಳಿಸಲು, ಅವರನ್ನು ಕಲವು ಖಾಸಗಿ ಮಿತ್ರರ ಮಧ್ಯಸ್ಥಿಕೆಯಿಂದ ಮತ್ತು ಮನವೊಲಿಸುವಿಕೆಯಿಂದ, ಒಪ್ಪಿಸ ಬಹುದೆಂದೂ ಅವನು ತಿಳಿದುಕೊಂಡಿದ್ದನು. ಆಮೇಲೆ ನಾನು ನನ್ನ ಹಳೆಯ ಗೆಳೆಯ ಹಾಗೂ ಸುದ್ದಿಗಾರನಾದ ಮಿಸ್ಟರ್ ಕೊಲಿನ್ಸನ್‌ನನ್ನು ಕಾಣಲು ಹೋದೆನು. ವರ್ಜಿನಿಯಾದ ದೊಡ್ಡ ವ್ಯಾಪಾರಿಯಾದ ಜಾನ್ ಹ್ಯಾನ್ ಬರಿ ಎಂಬಾತನು' ನಾನು ಯಾವಾಗ ಬಂದು ಮುಟ್ಟುತ್ತೇನೆಂಬುದನ್ನು ಹೇಳಲು ಕೇಳಿಕೊಂಡಿದ್ದಾನೆ ಮತ್ತು ನನ್ನನ್ನು ಅವನು ಕೌನ್ಸಿಲಿನ ಪ್ರೆಸಿ ಡೆಂಟನಾದ ಲಾರ್ಡ ಗ್ರಾನ್ವಿಲನಲ್ಲಿಗೆ ಕರೆದುಕೊಂಡು ಹೋಗಬಹುದೆಂದು ಮತ್ತು ನನ್ನನ್ನು ಆದಷ್ಟುಬೇಗನೆ ನೋಡಲು ಬಯಸಿರುತ್ತಾನೆಂದು ನನ್ನ ಮಿತ್ರ (ಕೊಲಿನ್‌ಸನ್) ಹೇಳಿದನು. ಮರುದಿನ ಬೆಳಿಗ್ಗೆ ನಾನು ಅವನನ್ನು ಕಾಣಲು ಅವನ ಜೊತೆಗೆ ಹೋಗಲು ಒಪ್ಪಿಕೊಂಡೆನು; ಅದೇ ಪ್ರಕಾರ ಮಿಸ್ಟರ್ ಹ್ಯಾನ್‌ಬರಿಯು ನನ್ನನ್ನು ಕರೆದುಕೊಂಡು ತನ್ನ ಗಾಡಿಯಲ್ಲಿ ಕುಳ್ಳಿರಿಸಿಕೊಂಡು ಆ ರಾಜಮಾನ್ಯ ಮನುಷ್ಯನಲ್ಲಿಗೆ ಹೋದನು. ಅವನು ನನ್ನನ್ನು ಬಹಳ ಆದರದಿಂದ ಬರಮಾಡಿಕೊಂಡನು. ಅಂತೇ ಸದ್ಯದ ಅಮೇರಿಕಾದಲ್ಲಿನ ಪರಿಸ್ಥಿತಿಯ ಬಗ್ಗೆ ಕೆಲವು ಪ್ರಶ್ನೆಗಳನ್ನು ಕೇಳಿಕೊಂಡು ಮತ್ತು ಆ ವಿಷಯದಮೇಲೆ ಸಂಭಾಷಣೆ ಮಾಡಿದನಂತರ ಅವನು, "ಅಮೇ ರಿಕನರಾದ ನಿಮಗೆ ನಿಮ್ಮ ರಾಜ್ಯ ಘಟನೆಯ ಬಗ್ಗೆ ತಪ್ಪು ಕಲ್ಪನೆಗಳಿವೆ; ಅರಸನು ತನ್ನ ಗವರ್ನರರಿಗೆ ಕಳುಹಿಸಿದ ಆಜ್ಞೆಗಳು ಕಾಯ್ದೆಗಳಲ್ಲವೆಂದು ನೀವು ವಾದಿಸುತ್ತೀರಿ ಮತ್ತು ಅವುಗಳನ್ನು ಮಾನ್ಯ ಮಾಡಲು ಅಥವಾ ಮಾಡ ದಿರಲು ನೀವು ಸ್ವತಂತ್ರರಿರುವಂತೆ ನಿಮ್ಮ ಮನಸ್ಸಿಗೆ ಬಂದ ಹಾಗೆ ತಿಳಿದಿರು ತ್ತೀರಿ. ಆದರೆ ಆ ಆಜ್ಞೆಗಳು ಕೆಲವು ಅಲ್ಪ ಶಿಷ್ಟಾಚಾರದ ವಿಷಯಗಳನ್ನು ನಿರ್ವಹಿಸಲು ಪರದೇಶಕ್ಕೆ ಹೋಗುವ ಮಂತ್ರಿಗೆ ಕೊಡುವ ಉಪದೇಶಗಳ

ಹಾಗೇನೂ ಅಲ್ಲ. ಅವುಗಳು ಕಾಯ್ದೆಯಲ್ಲಿ ಪರಿಣತರಾದ ನ್ಯಾಯಾಧೀಶರಿಂದ ಮೊದಲಲ್ಲಿ ಸಿದ್ಧಗೊಳಿಸಲ್ಪಟ್ಟವುಗಳು. ಆ ಮೇಲೆ ಅವುಗಳನ್ನು ಅವಲೋಕಿಸಲಾಗುವುದು, ಚರ್ಚಿಸಲಾಗುವುದು ಮತ್ತು ಕೌನ್ಸಿಲಿನಲ್ಲಿ ಬಹುಶಃ ಮಾರ್ಪಾಟು ಗೊಳಿಸಲಾಗುವುದು. ಆ ತರುವಾಯ ಅದಕ್ಕೆ ಅರಸನು ಅಂಕಿತ ಹಾಕುವನು. ಹೀಗಾಗಿ ನಿಮಗೆ ಸಂಬಂಧಪಟ್ಟ ಮಟ್ಟಿಗೆ ಅವುಗಳು ರಾಜಶಾಸನಗಳಾಗಿರುತ್ತವೆ (law of the land). ಯಾಕಂದರೆ ರಾಜನು ವಸಾಹತುಗಳ ನ್ಯಾಯಾಧಿಕಾರಿಯಾಗಿರುತ್ತಾನೆ." ಎಂದು ನನಗೆ ಹೇಳಿದನು. ಇದೊಂದು ನನಗೆ ಹೊಸ ಕಾಯ್ದೆಯೆಂದು ನಾನು ಆ ರಾಜ ಮಾನ್ಯನಿಗೆ ಹೇಳಿದೆನು. ನಮ್ಮ ಶಾಸನ (charter)ಗಳ ಮೂಲಕ ನಾನು, ನಮ್ಮ ಕಾಯ್ದೆಗಳನ್ನು ನಮ್ಮ ಅಸೆಂಬ್ಲಿಗಳೇ ರೂಪಿಸುವುವೆಂದು ಯಾವಾಗಲೂ ತಿಳಿದುಕೊಂಡಿದ್ದೆನು; ಆದರೆ ಅರಸನಿಗೆ ಅವನ ರಾಜ ಮಾನ್ಯತೆಗಾಗಿ ಸಾದರ ಪಡಿಸಬೇಕಾಗಿರುತ್ತದೆಂಬುದೇನೋ ನಿಜ. ಅಂತೇ ಅವುಗಳನ್ನು ರದ್ದು ಅಥವಾ ಮಾರ್ಪಡಿಸಲಿಕ್ಕೆ ಸಾಧ್ಯವಿರಲಿಲ್ಲ. ಹೀಗೆ ಅವನ ಸಮ್ಮತಿಯಿಲ್ಲದೆ ಅಸೆಂಬ್ಲಿಗಳು ಶಾಶ್ವತ ಕಾಯ್ದೆಗಳನ್ನು ಹೇಗೆ ಮಾಡಲಿಕ್ಕೆ ಸಾಧ್ಯವಿರಲಿಲ್ಲವೋ ಹಾಗೆ ಅವನು ಕೂಡ ಅವರ ಸಮ್ಮತಿಯಿಲ್ಲದೆಯೇ ಅವರಿಗೆ ಕಾಯ್ದೆ ಮಾಡಲಿಕ್ಕೆ ಸಾಧ್ಯವಿರಲಿಲ್ಲ. ನಾನು ಸಂಪೂರ್ಣ ತಪ್ಪು ತಿಳಿದುಕೊಂಡಿದ್ದೇನೆಂದು ಅವನು ನನಗೆ ಖಂಡಿತವಾಗಿ ಹೇಳಿದನು. ನಾನು ಹಾಗೆಂದೂ ತಿಳಿದುಕೊಂಡಿಲ್ಲ. ಆದರೂ ಕೂಡ ರಾಜಮಾನ್ಯನ ಸಂಭಾಷಣೆಯಿಂದ, ನಮಗೆ ಸಂಬಂಧಪಟ್ಟ ನ್ಯಾಯಸ್ಥಾನದ ಭಾವನೆಗಳು ಹೇಗಿರಬಹುದೆಂಬುದರ ಬಗ್ಗೆ ನಾನು ತುಸು ಗಾಬರಿಗೊಂಡೆನು. ನನ್ನ ವಸತಿಗೆ ಮರಳಿದ ಕೂಡಲೆ ನಾನದನ್ನು ಬರೆದುಬಿಟ್ಟೆನು. ಇಪ್ಪತ್ತು ವರುಷಗಳ ಹಿಂದಕ್ಕೆ ಪಾರ್ಲಿಮೆಂಟ್‌ನಲ್ಲಿ ಒಂದು ಮಸೂದೆಯೊಳಗಿನ ಒಂದು ಕಲಮನ್ನು ಮಂತ್ರಿ ಮಂಡಳಿಯವರು ತಂದು, ಅರಸನ ಆಜ್ಞೆಗಳನ್ನು ವಸಾಹತುಗಳಲ್ಲಿ ಕಾಯ್ದೆ ಮಾಡಲು ಪ್ರಸ್ತಾಪಿಸಿದ್ದನ್ನು ನಾನು ನೆನಪಿಗೆ ತಂದುಕೊಂಡೆನು. ಆದರೆ ಆ ಕಲಮನ್ನು ಸಾಮಾನ್ಯ ರಾಜ್ಯ (Commons) ಸಭೆಯು ಕಿತ್ತೆಸೆದಿತ್ತು; ಅದಕ್ಕಾಗಿ ನಾವು ಅವರನ್ನು ನಮ್ಮ ಮಿತ್ರರೆಂದು ಮತ್ತು ಸ್ವಾತಂತ್ರ್ಯದ ಮಿತ್ರರೆಂದು ಆರಾಧಿಸಿದ್ದೆವು. ೧೭೬೫ರ ಅವರ ನಮ್ಮ ಮೇಲಿನ ನೀತಿಯಿಂದ ಅವರು ಆ ಅಧಿಕಾರವನ್ನು ಅರಸನಿಗೆ ಕೊಡಬು ನಿರಾಕರಿಸಿ ಅದನ್ನು ತಮಗಾಗಿ ಮಾತ್ರ ಕಾಯ್ದಿರಿಸಿ ಕೊಂಡಿರುವರೆಂದು ತಿಳಿದೆನು.

ಕೆಲವು ದಿವಸಗಳ ನಂತರ ಡಾ। ಫೋದರ್‌ಗಿಲ್ಲನು ಒಡೆಯರ ಕೂಡ ಮಾತನಾಡಿ ಸ್ಪ್ರಿಂಗ್ ಗಾರ್ಡನಿನಲ್ಲಿಯ ಮಿಸ್ಟರ್ ಟಿ. ಪೆನ್ನನ ಮನೆಯಲ್ಲಿ ನನ್ನೊಡನೆ ಮಾತನಾಡಲು ಅವರು ಒಪ್ಪಿಕೊಂಡರು. ಮೊಟ್ಟ ಮೊದಲಲ್ಲಿ— ಸಮಂಜಸವಾದ ಯೋಜನೆಯ ವ್ಯವಸ್ಥೆಯನ್ನು ಪರಸ್ಪರರು ಪ್ರಕಟಪಡಿಸುವುದು ಮಾತುಕತೆಯಲ್ಲಿ ಅಡಕವಾಗಿತ್ತು. ಆದರೆ ಪ್ರತಿಯೊಂದು ಪಕ್ಷದವರಿಗೂ 'ಸಮಂಜಸವಾದ' ಎಂಬುದಕ್ಕೆ ತಮ್ಮದೇ ಆದ ಕಲ್ಪನೆಯಿತ್ತೆಂದು ನನಗೆನಿಸುತ್ತದೆ. ಅನಂತರ ನಾವು, ನಾನು ಮುಂದೆ ಮಾಡಿದ ತಕರಾರಿನ ಅನೇಕ ಅಂಶಗಳನ್ನು ಗಣನೆಗೆ ತೆಗೆದುಕೊಂಡೆವು. ಅವರಿಂದ ಸಾಧವಾದಷ್ಟು ತಮ್ಮ ಕಾರ್ಯಾಚರಣೆಯನ್ನು ಒಡೆಯರು ಸಮರ್ಥಿಸಿಕೊಂಡರು. ಮತ್ತು ನಾನು ಅಸೆಂಬ್ಲಿಯನ್ನು ಸಮರ್ಥಿಸಿದೆನು. ಈಗ ನಾವು ಪರಸ್ಪರ ಬಹಳ ದೂರವಾದಂತೆ ಕಂಡೆವು. ಅಂತೇ ಒಪ್ಪಂದದ ಎಲ್ಲಾ ಆಸೆಗಳನ್ನು ಬಿಡುವಷ್ಟು ವ್ಯತ್ಯಾಸ ನಮ್ಮ ಅಭಿಪ್ರಾಯಗಳಲ್ಲಿ ಕಂಡು ಬಂದಿತು. ಆದರೂ ಕೂಡ, ನಮ್ಮ ತಕರಾರುಗಳ ಮುಖ್ಯ ಸೂತ್ರಗಳನ್ನು ಅವರಿಗೆ ಬರವಣಿಗೆಯಲ್ಲಿ ನಾನು ಕೊಡುವುದೆಂದು ನಿರ್ಣಯಿಸಲಾಯಿತು. ಮತ್ತು ಅವುಗಳನ್ನು ಆಗ ಅವರು ಪರಿಗಣಿಸುವುದಾಗಿ ವಚನವಿತ್ತರು. ನಾನು ಹಾಗೆ ಬಹಳ ಬೇಗನೆ ಮಾಡಿದೆನು. ಆದರೆ ಅವರು ಕಾಗದವನ್ನು ತಮ್ಮ ಸಲಹೆಗಾರನಾದ ವಕೀಲ (Solicitor) ಫರ್ಡಿನಂಡ್ ಜಾನ್ ಪ್ಯಾರಿಸನ ಕೈಗೆ ಕೊಟ್ಟರು. ಅವನು ನೆರೆಯ ಒಡೆಯನಾದ ಮೇರಿಲ್ಯಾಂಡಿನ ಲಾರ್ಡ ಬಾಲ್ಟಿಮೋರನ ಸಂಗಡ ನಡೆದ ಬಹು ದೊಡ್ಡ ಖಟ್ಲೆಯಲ್ಲಿ ಅವರ ಎಲ್ಲಾ ಕಾಯ್ದೆಯ ವ್ಯವಹಾರವನ್ನು ನೀಗಿಸಿಕೊಂಡು ಹೋಗಿದನು; ಇದು ಎಪ್ಪತ್ತು ವರುಷಗಳ ತನಕ ನಡೆದಿತ್ತು. ಮತ್ತು ಅವರು ಅಸೆಂಬ್ಲಿಯಲ್ಲಿ ನಡೆಸಿದ ಜಗಳದಲ್ಲಿ ಅವರ ಸರ್ವ ಕಾಗದಪತ್ರ ಹಾಗೂ ಅಜ್ಞೆಗಳನ್ನು ಬರೆದವನಾಗಿದ್ದನು. ಅವನು ಹೆಮ್ಮೆಯ ಹಾಗೂ ಸಿಡುಕಿನ ಮನುಷ್ಯನಾಗಿದ್ದನು. ಮತ್ತು ಪ್ರಾಸಂಗಿಕವಾಗಿ ನಾನು ಅಸೆಂಬ್ಲಿಯ ಉತ್ತರಗಳಲ್ಲಿ ಭಾಗವಹಿಸುತ್ತಿದ್ದುದರಿಂದ ಅವನ ಕಾಗದ-ಪತ್ರಗಳನ್ನು ತುಸು ತೀಕ್ಷ್ಣವಾಗಿ ವ್ಯವಹರಿಸಿದ್ದೆನು. ಅವುಗಳು ನೈಜವಾಗಿಯೂ ವಾದದ ವಿಷಯದಲ್ಲಿ ತೀರ ದುರ್ಬಲವಾಗಿದ್ದವು ಮತ್ತು ಅಭಿವ್ಯಕ್ತಿಯಲ್ಲಿ ತೀರ ಸಿಡುಕನ್ನು ತೋರಿಸುತ್ತಿದ್ದವು. ಅವನು ನನ್ನೊಡನೆ ಆಮರಣ ವೈರತ್ವ ಸಾಧಿಸಿದ್ದನು. ತಾನಾಗಿ ನಾವಿಬ್ಬರೂ ಕೂಡಿಕೊಂಡಲ್ಲಿ ಅದು ಪ್ರಕಟವಾಗುತ್ತಿತ್ತು. ನಾನು ಮತ್ತು ಅವನು ಸೇರಿಕೊಂಡು ನಮ್ಮಿಬ್ಬರಲ್ಲೇ

ನಮ್ಮ ತಕರಾರಿನ ಮುಖ್ಯಾಂಶಗಳನ್ನು ಚರ್ಚಿಸಬೇಕೆಂಬ ಒಡೆಯರ ಪ್ರಸ್ತಾಪವನ್ನು ನಾನು ನಿರಾಕರಿಸಿದೆನು ಮತ್ತು ಅವರೊಡನೆಯೇ ಒಪ್ಪಂದ ವನ್ನು ತೀರಿಸಬೇಕೆಂದೆನು. ಅವರು ಅನಂತರ ಅವನ ಸಲಹೆಯ ಪ್ರಕಾರ ಕಾಗದ-ಪತ್ರವನ್ನು ಅಟರ್ನಿ ಮತ್ತು ಸಾಲಿಸಿಟರ್-ಜನರಲರ ಕೈಗಳಿಗೆ ಅವರ ಅಭಿಪ್ರಾಯ ಪಡೆಯಲು ಕೊಟ್ಟರು. ಅಲ್ಲಿ ಎಂಟು ದಿವಸಗಳು ಅದಕ್ಕೆ ಸಾಕಾಗಿದ್ದರೂ ಒಂದು ವರುಷದ ತನಕ ನಿರುತ್ತರವಾಗಿ ಅದು ಬಿದ್ದುಕೊಂಡಿತು. ಈ ಕಾಲದಲ್ಲಿ ನಾನು ಆಗಾಗ ಉತ್ತರ ಪಡೆಯಲು ಒಡೆಯರಿಗೆ ಸೂಚನೆ ಮಾಡುತ್ತಿದ್ದೆನು. ಆದರೆ ತಮಗೆ ಇನ್ನೂ ಅಟರ್ನಿ(Attorney) ಮತ್ತು ಸೂಲಿಸಿಟರ್ ಜನರಲ್‌ರಿಂದ ಯಾವ ಅಭಿಪ್ರಾಯವೂ ತಿಳಿದಿಲ್ಲವೆಂಬುದರ ಹೊರತಾಗಿ ನನಗೆ ಬೇರೆ ಯಾವ ಉತ್ತರವೂ ಬರುತ್ತಿರಲಿಲ್ಲ. ಅವರು ಅದನ್ನು ಪಡೆಯುವಾಗ ಏನಿತ್ತೆಂದು ನನಗೆಂದೂ ತಿಳಿದಿರಲಿಲ್ಲ. ಯಾಕೆಂದರೆ, ಅವರು ಅದನ್ನು ನನಗೆ ತಿಳಿಯ ಪಡಿಸಲಿಲ್ಲ. ಆದರೆ ಪ್ಯಾರಿಸನಿಂದ ಸಹಿ ಹಾಕಲ್ಪಟ್ಟ ಒಂದು ಪ್ರದೀರ್ಘ ವಾದ ಆಜ್ಞೆಯನ್ನು ಕಳುಹಿಸಿದ್ದರು. ಅದರಲ್ಲಿ ನನ್ನ ಕಾಗದ ಪತ್ರವನ್ನು ಪುನರಾವರ್ತನೆ ಮಾಡಲಾಗಿತ್ತು ಮತ್ತು ಅದರಲ್ಲಿ ಸಭ್ಯತೆ ಹಾಗೂ ಶಿಷ್ಟಾಚಾರವಿಲ್ಲೆಂದು ತಕರಾರು ಮಾಡಿ, ನನ್ನ ಮೇಲೆ ಅಪಾದನೆ ಹಾಕ ಲಾಗಿತ್ತು ಮತ್ತು ತಮ್ಮ ನಡತೆಯ ಬಗ್ಗೆ ಅಸ್ಪಷ್ಟ ಸಮರ್ಥನೆಯನ್ನು ಕೊಡುತ್ತ, ಅಸೆಂಬ್ಲಿಯು ಯಾವನಾದರೊಬ್ಬ ಪ್ರಾಮಾಣಿಕ ಮನುಷ್ಯ ನನ್ನು ಕಳುಹಿಸಿದರೆ ತಾವು ವಿಷಯಗಳನ್ನು ವ್ಯವಸ್ಥೆಗೊಳಿಸಲು ಸಿದ್ಧರಿದ್ದೇ ವೆಂದು ಮತ್ತು ನಾನು ಹಾಗಿರಲಿಲ್ಲವೆಂದು ಆ ಮೂಲಕ ಸೂಚಿಸಿದ್ದರು.

ಶಿಷ್ಟಾಚಾರವಿಲ್ಲದಿದ್ದದ್ದು ಅಥವಾ ಅಸಭ್ಯ ರೀತಿಯಿಂದ ವ್ಯವಹರಿ ಸಿದ್ದು ಅಂದರೆ ಬಹುಶಃ —ನಾನು ಅವರನ್ನು ಕಾಗದಪತ್ರದಲ್ಲಿ ಅವರಿಗೆ ಮಾನ್ಯವಾದ ಬಿರುದು ಬಾವಲಿಗಳಾದ "ಸತ್ಯಸಂಧರಾದ ಹಾಗೂ ಏಕಮೇವ ಪೆನ್ಸಿಲ್ವಾನಿಯಾ ಪ್ರಾಂತ್ಯದ ಒಡೆಯರು" ಎಂಬ ರೀತಿಯಲ್ಲಿ ನಮೂದಿಸದೆ ಇದ್ದದ್ದೆಂದು ಕಾಣುತ್ತದೆ. ಕಾಗದ ಪತ್ರದಲ್ಲಿ ಅದು ಅಗತ್ಯವಿಲ್ಲೆಂದು ಎಣಿಸಿ ಅದನ್ನು ರದ್ದು ಮಾಡಿದ್ದೆನು. ನಾನು ನಮ್ಮ ಮಾತುಕತೆಯಲ್ಲಿ ಮುಖತಃ ಏನನ್ನು ಹೇಳಿದ್ದೆನೋ ಅದನ್ನುಬರವಣಿಗೆಯಲ್ಲಿ ನೈಜವಾಗಿ ವ್ಯಕ್ತಪಡಿಸು ವುದುಮಾತ್ರ ಅದರ ಉದ್ದೇಶವಾಗಿತ್ತಷ್ಟೆ.

ಆದರ ಈ ಕಾಲವಿಳಂಬದ ಅವಧಿಯಲ್ಲಿ, ಅಸೆಂಬ್ಲಿಯು ಸಾಮಾನ್ಯ ಜನರ ಹಾಗೆ ಒಡೆಯರ ಭೂಮಿ-ಸೀಮೆಗಳಿಗೆ ಕರ ಹಾಕುವ ಕಾಯ್ದೆಯನ್ನು

ಜಾರಿಗೆ ತರುವಂತೆ ಗವರ್ನರ್ ಡೆನ್ನಿಗೆ ಎಡಬಿಡದೆ ಒತ್ತಾಯಗೊಳಿಸಿ ಜಯ ಹೊಂದಿದುದರಿಂದ, ಇದು ಜಗಳದಲ್ಲಿನ ಪ್ರಮುಖ ಸಂಗತಿಯಾಗಿತ್ತು. ಅವರು ಈ ಸಂದೇಶಕ್ಕೆ ಉತ್ತರ ಕೊಡುವುದನ್ನು ರದ್ದು ಮಾಡಿದ್ದರು. ಹೇಗಾದರೂ ಈ ಕಾಯ್ದೆಯು ಮೇಲಕ್ಕೆ ಬಂದಾಗ, ಪ್ಯಾರಿಸನಿಂದ ಸಲಹೆ ಪಡೆದುಕೊಂಡ ಒಡೆಯರುಗಳು ಅದು ರಾಜಮಾನ್ಯತೆ ಪಡೆಯುವುದನ್ನು ವಿರೋಧಿಸಲು ನಿರ್ಧರಿಸಿದರು. ಅದೇ ಪ್ರಕಾರ ಅವರು ಕೌನ್ಸಿಲಿನ ಅರಸನಿಗೆ ಅರ್ಜಿ ಹಾಕಿದರು. ಒಂದು ಹೀರಿಂಗ್ (Hearing) ನಡೆಯಿತು. ಕಾಯ್ದೆಯ ವಿರುದ್ಧವಾಗಿ ಅವರಿಂದ ಇದರಲ್ಲಿ ಇಬ್ಬರು ಲಾಯರುಗಳು ನೇಮಿಸಲ್ಪಟ್ಟರು ಮತ್ತು ಅದರ ಪರವಾಗಿ ಇಬ್ಬರನ್ನು ನಾನು ನೇಮಿಸಿದ್ದಾಯಿತು. ಸಾಮಾನ್ಯ ಜನರ ಹಣ ಉಳಿಸಿಕೊಳ್ಳಲು ಒಡೆಯರ ಭೂಮಿ-ಸೀಮೆಯ ಮೇಲೆ ಈ ಕಾಯ್ದೆಯಿಂದ ಕರದ ಭಾರ ಹೇರಲಾಗಿದೆ-ಎಂದು ಅವರು ನೆವ ಹೇಳಿದರು ಮತ್ತು ಇದನ್ನು ಹಾಗೆ ಮುಂದುವರಿಯಲು ಬಿಟ್ಟರೆ ಮತ್ತು ಜನಸಾಮಾನ್ಯರೊಡನೆ ದ್ವೇಷದಿಂದ ಇರುವಂಥ ಒಡೆಯರುಗಳು ಕರಗಳನ್ನು ಕೊಡುವುದಕ್ಕೆ ಅವರ ದಯೆಯನ್ನು ಅವಲಂಬಿಸಬೇಕಾಗಿ ಬರುವುದರಿಂದ-ಅವರು ಅಪರಿಹಾರ್ಯವಾಗಿ ಹಾಳಾಗಬಹುದೆಂದು ವಾದಿಸಿದರು. ಕಾಯ್ದೆಗೆ ಅಂಥ ಯಾವ ಉದ್ದೇಶವೂ ಇಲ್ಲ ಮತ್ತು ಅಂಥ ಪರಿಣಾಮವೂ ಒದಗಲಾರದೆಂದು ನಾವು ಉತ್ತರಿಸಿದೆವು. ಸಮಾನವಾಗಿ ಮತ್ತು ಯೋಗ್ಯವಾಗಿ ತೀರ್ಮಾನಿಸುವುದಾಗಿ ಆಣೆ ಮಾಡಿರುವಂಥ ಗುಣಾವಗುಣಗಳನ್ನು ನಿರ್ಧರಿಸಲು ನೇಮಿಸಲ್ಪಟ್ಟ ಅಧಿಕಾರಿಗಳು (Assessors) ಪ್ರಾಮಾಣಿಕರೂ ವಿಚಾರವಂತರೂ ಆಗಿದ್ದರು. ಮತ್ತು ತನ್ನ ಕರವನ್ನು ಕಡಿಮೆ ಮಾಡಿ ಒಡೆಯರದನ್ನು ಹೆಚ್ಚು ಮಾಡುವುದರಿಂದ ಅವರಿಬ್ಬರಲ್ಲಿ ಯಾವನೂ ಯಾವದಾದರೂ ಅನುಕೂಲವನ್ನು ಅಪೇಕ್ಷಿಸುವಂತೆ ಮಾಡಲು ಅವರು ಆದರಿಂದ ಪ್ರಮಾಣಭ್ರಷ್ಟರಾಗುವುದರಿಂದ ಅವರಿಗೆ ಅದು ತೀರ ಅಲ್ಪವಾಗಿತ್ತು. ಇವಿಷ್ಟು ಎರಡೂ ಪಕ್ಷದವರು ವಾದಿಸಿದುದರ ಸಾರಾಂಶವಾಗಿದೆ,-ನನಗೆ ನೆನಪಿದ್ದ ಮಟ್ಟಿಗೆ. ಇದರ ಹೊರತಾಗಿ-£೧೦೦,೦೦೦, ಹಣವು ರದ್ದಾಗುವುದರಿಂದ ಉಂಟಾಗುವಂಥ ಹಾನಿಕರ ಪರಿಣಾಮದ ಬಗೆಗೆ ನಾವು ಬಲವಾಗಿ ಬಿಡವೆ ಹೇಳಿದೆವು. ಅಷ್ಟೊಂದು ಹಣವನ್ನು ಮುದ್ರಿಸಿ ಅರಸನ ಉಪಯೋಗಕ್ಕೆ ಕೊಡಲಾದುದರಿಂದ, ಅವನ ಸೇವೆಯಲ್ಲಿ ವ್ಯಯಗೊಳಿಸಿದ ಮೂಲಕ ಮತ್ತು ಜನರಲ್ಲಿ ಹಂಚಿ ಹೋಗಿರುವ ಕಾರಣ. ಅದರ ರದ್ದಿಯಾತಿಯು ಅವರ ಕೈಯಲ್ಲಿ ಆ ಹಣವನ್ನು ನಿಷ್ಪ್ರಯೋ

ಜಕವಾಗಿ ಮಾಡುವುದರಿಂದ ಅನೇಕರ ನಾಶವಾಗುವುದು. ಅಂತೇ ಭಾವಿ ಗ್ರಾಂಟುಗಳ (Grants) ಬಗ್ಗೆ ಸಂಪೂರ್ಣ ನಿರಾಸೆಯನ್ನುಂಟು ಮಾಡು ವುದು ಅಂತೇ ತಮ್ಮ ಭೂಮಿ-ಸೀಮೆಗಳ ಮೇಲೆ ತೀರ ಹೆಚ್ಚಾಗಿ ಕರ ಹೇರಲ್ಪಟ್ಟಿದೆಯೆಂಬ ನಿರಾಧಾರವಾದ ಹೆದರಿಕೆಯಿಂದ ಹಾಗೂ ಅಂಥ ದುರಂತವನ್ನು ಎಬ್ಬಿಸುವುದರಿಂದ ಒಡೆಯರುಗಳ ಕೇವಲ ಸ್ವಾರ್ಥ ಕಾಣು ತ್ತಿವೆಂದು ಬಲವಾದ ಮಾತುಗಳಿಂದ ಖಂಡಿಸಿದೆವು. ಇದಕ್ಕೆ ಸದಸ್ಯರಲ್ಲಿ ಒಬ್ಬರಾದ ಲಾರ್ಡ ಮ್ಯಾನ್ಸಫೀಲ್ಡನು ಎದ್ದು, ಕೈಸನ್ನೆ ಮಾಡಿ ನನ್ನನ್ನು ಕ್ಲಾರ್ಕನ ಕೋಣೆಗೆ ಕರೆದುಕೊಂಡು ಹೋದನು. ಇತ್ತ ಲಾಯರುಗಳು ವಾದಿಸುತ್ತಿದ್ದರು. ನಿಜವಾಗಿಯೂ ಈ ಕಾಯ್ದೆಯು ಜಾರಿಯಾಗುವುದ ರಿಂದ ಖಾಸಗಿ ಒಡೆಯರ ಭೂಮಿ-ಸೀಮೆಗಳಿಗೆ ಯಾವ ಧಕ್ಕೆಯೂ ತಟ್ಟು ವುದಿಲ್ಲವೆಂಬ ಅಭಿಪ್ರಾಯದವನು ನಾನಾಗಿದ್ದೇನೆಯೋ—ಎಂದು ನನ್ನನ್ನು ಕೇಳಿದನು. ಖಂಡಿತವಾಗಿಯೂ ಹಾಗೆಂದು ನಾನು ಹೇಳಿದೆನು. "ಹಾಗಾ ದರೆ, ಆ ವಿಷಯವನ್ನು ಖಾತ್ರಿಮಾಡಿಕೊಡುವಂಥ ಕರಾರುಪತ್ರಕ್ಕೆ ಸೇರಲು ನಿನ್ನಲ್ಲಿ ಯಾವ ಆಕ್ಷೇಪವೂ ಇರದಷ್ಟೆ." ಎಂದು ಅವನು ಹೇಳಿದನು. "ಯಾವುದೂ ಇಲ್ಲ." ಎಂದು ನಾನು ಉತ್ತರಿಸಿದೆನು. ಅವನು ಆಮೇಲೆ ಪ್ಯಾರಿಸನನ್ನು ಒಳಗೆ ಕರೆದನು. ಅಂತೇ ಒಂದಿಷ್ಟು ಮಾತುಕತೆಯಾದ ನಂತರ, ಆ ರಾಜಮಾನ್ಯನ ಸೂಚನೆಯನ್ನು ಎರಡೂ ಪಕ್ಷದವರು ಒಪ್ಪಿ ಕೊಂಡರು. ಈ ವಿಷಯದ ಬಗ್ಗೆ ಒಂದು ಕಾಗದಪತ್ರವು ಕೌನ್ಸಿಲಿನ ಕ್ಲಾರ್ಕನಿಂದ ರಚಿಸಲ್ಪಟ್ಟಿತು. ಅದನ್ನೆ ನಾನು ಮಿಸ್ಟರ್ ಚಾರ್ಲಸನ ಜೊತೆಗೆ ಸಹಿ ಮಾಡಿದೆನು. ಈತನು ಸಾಮಾನ್ಯವಾದ ವಿಷಯಗಳಲ್ಲಿ ಆ ಪ್ರಾಂತದ ಬಗ್ಗೆ ಅವರ ದಲಾಲಿಯಾಗಿದ್ದನು (Agent). ಆಗ ಲಾರ್ಡ ಮೇನ್ಸಫೀಲ್ಡನು ಕೌನ್ಸಿಲು ಚೇಂಬರಿಗೆ ಮರಳಿದನು. ಸರಿ ಕೊನೆಗೆ ಕಾಯ್ದೆಯು ಜಾರಿಯಾಗುವಂತೆ ಅನುಮತಿಸಲಾಯಿತು. ಆದರೂ ಕೂಡ ಕೆಲವೊಂದು ಮಾರ್ಪಾಟುಗಳನ್ನು ಸೂಚಿಸಿದ್ದಾಯಿತು. ತತ್ಸಂಬಂಧವಾದ ಕಾಯ್ದೆಗಳ ಮೂಲಕ ಅವುಗಳನ್ನು ಮಾಡಬೇಕೆಂದು ನಾವು ಕೂಡಾ ಕರಾರು ಮಾಡಿದೆವು. ಆದರೆ ಅವುಗಳು ಅಗತ್ಯವಾದವುಗಳೆಂದು ಅಸೆಂಬ್ಲಿ ಎಣಿಸಲಿಲ್ಲ. ಯಾಕೆಂದರೆ, ಕೌನ್ಸಿಲಿನ ಆಜ್ಞೆಯು ತಲಪುವುದರ ಮೊದಲಲ್ಲೆ ಒಂದು ವರುಷದ ಕರವನ್ನು ಕಾಯ್ದೆಯು ಹೇರಿತ್ತು. ಅಸೆಸರು ಗಳ ವರದಿಯನ್ನು ಪರೀಕ್ಷಿಸಲು ಅವರು ಒಂದು ಸಮಿತಿಯನ್ನು ನೇಮಿಸಿದರು. ಅಂತೇ ಈ ಸಮಿತಿಯಲ್ಲಿ ಅವರು ಖಾಸಗಿ ಒಡೆ

ಯರ ಅನೇಕ ಮುಖ್ಯ–ಮುಖ್ಯ ಮಿತ್ರರನ್ನು ನೇಮಿಸಿದರು. ಸಂಪೂರ್ಣ ತಪಾಸಣೆ ನಡೆದ ಮೇಲೆ, ಪರಿಪೂರ್ಣ ಸಮಾನತೆಯಂತೆ ಕರವನ್ನು ಹೇರಲಾಗಿದೆಯೆಂದು ಕಂಡು ಬಂದಿರುವುದಾಗಿ ಒಂದು ವರದಿಯನ್ನು ತಯಾರಿಸಿ ಅದಕ್ಕೆ ಒಮ್ಮತವಿಂದ ರುಜು ಹಾಕಿದರು.

ಪ್ರಾಂತಕ್ಕೆ ಅತ್ಯವಶ್ಯವಾದ ಸೇವಾಕಾರ್ಯವೆಂದು ನಾನು ಕರಾರು ಪತ್ರದ ಮೊದಲ ಭಾಗದಲ್ಲಿ ಸೇರಿರುವುದನ್ನು ಅಸೆಂಬ್ಲಿಯು ನೋಡಿ ಕೊಂಡು ಅಭಿಪ್ರಾಯಪಟ್ಟಿತು. ಯಾಕಂದರೆ, ಆಗ ದೇಶದ ಆದ್ಯಂತವೆಲ್ಲ ಹಬ್ಬಿರುವಂಥ ಕಾಗದದ ಹಣ (Paper-money)ದ ಲಾಭವನ್ನು ಅದು ದೊರಕಿಸಿಕೊಂಡಿತ್ತು. ನಾನು ಮರಳಿದಾಗ ಅವರು ನನಗೆ ತಮ್ಮ ಉಪ ಕಾರಸ್ಮರಣೆಯನ್ನು ಶಿಷ್ಟಾಚಾರದಂತೆ ನೀಡಿದರು. ಆದರೆ ಕಾಯ್ದೆಯನ್ನು ಜಾರಿ ಮಾಡಿದುದಕ್ಕಾಗಿ ಗವರ್ನರ್ ಡೆನ್ನಿಯ ಮೇಲೆ ಒಡೆಯರುಗಳು ಸಿಡಿದು ಬಿದ್ದಿದ್ದರು. ಅಂತೆ ಆಜ್ಞೆಗಳನ್ನು ಮೀರಿದುದಕ್ಕೆ ಖಟ್ಲೆ ಹಾಕು ತ್ತೇವೆಂದು ಹೆದರಿಸಿ ಅವನನ್ನು ಮುಕ್ತಗೊಳಿಸಿದರು. ಆಜ್ಞೆಗಳಂತೆ ನಡೆಯುತ್ತೇನೆಂದು ಅವನು ದಸ್ತಾವೇಜು (Bond) ಬರೆದು ಕೊಟ್ಟಿದ್ದನು. ಆದರೂ ಕೂಡ ಅವನು ಅದನ್ನು ಜನರಲನ ಪ್ರೇರಣೆಯಿಂದ ಮತ್ತು ರಾಜಮಾನ್ಯರ (His Majesty's) ಸೇವಾರ್ಥವಾಗಿ ಮಾಡಿದ್ದರಿಂದ ಮತ್ತು ಕೋರ್ಟಿನಲ್ಲಿ ಕೆಲವು ಪ್ರಭಾವಶಾಲಿಯಾದ ಅವನ ಹಿತಚಿಂತಕರಿದ್ದು ದರಿಂದ ಆ ಬೆದರಿಕೆಗಳನ್ನು ಅಲಕ್ಷಿಸಿದನು, ಮತ್ತು ಅವುಗಳು ಕಾರ್ಯಾ ಚರಣೆಗೆ ಎಂದೂ ಬರಲಿಲ್ಲ............[ಅಪೂರ್ಣ].

# ಜೀವನ ಚರಿತೆಗಳು

| | ರೂ. ನಪೈ. |
|---|---|
| ಇವರು ಬಾಪು—ಆರ್. ಕೆ. ಪ್ರಭು<br>ಗಾಂಧೀಜಿಯವರನ್ನು ಕುರಿತ ೧೫೦ ಸ್ವಾರಸ್ಯವಾದ ಸಂಗತಿಗಳು | ೧—೫೦ |
| ಆರ್ಯಕೀರ್ತಿ—ಚ. ವಾಸುದೇವಯ್ಯ | ೨—೨೫ |
| ಎವರೆಸ್ಟ್ ವೀರ—ಹಿಮಾಲಯದ ಅತ್ಯುನ್ನತ ಶಿಖರವನ್ನು ಏರಿ ವಿಶ್ವಖ್ಯಾತಿಯನ್ನು ಗಳಿಸಿದ ತೆನ್‌ಸಿಂಗ್‌ನ ಆತ್ಮಕಥೆ | ೫—೦೦ |
| ಕುಣಿಗಲ ರಾಮಶಾಸ್ತ್ರಿಗಳ ಚರಿತ್ರೆ—ಎಂ. ಎಸ್. ಪುಟ್ಟಣ್ಣ | ೨—೨೫ |
| ಗೋಖಲೆ : ನನ್ನ ರಾಜಕೀಯ ಗುರು—ಗಾಂಧೀಜಿ | ೧—೨೫ |
| ನನ್ನ ಬಾಲ್ಯದ ದಿನಗಳು—ರವೀಂದ್ರನಾಥ ಠಾಕೂರ್ | ೦—೭೫ |
| ಛತ್ರಪತಿ ಶಿವಾಜಿ—ಚ. ವಾಸುದೇವಯ್ಯ | ೨—೨೫ |
| ದಾದಾಭಾಯಿ ನವರೋಜಿ—ಆರ್. ಪಿ. ಮಸಾನಿ | ೨—೫೦ |
| ಬೆಂಜಮಿನ್ ಫ್ರಾಂಕ್‌ಲಿನ್ : ಆತ್ಮಕಥೆ | |
| ಭೀಷ್ಮ ಚರಿತೆ—ಚ. ವಾಸುದೇವಯ್ಯ | ೩—೨೫ |
| ರಾಜಾ ರಾಮಮೋಹನರಾಯ್— | (ಅಚ್ಚಿನಲ್ಲಿ) |
| ರೈಟ್ ಸಹೋದರರು—ರೇನಾಲ್ಡ್ಸ | ೧—೨೫ |
| ಲೂಯಿಪ್ಯಾಶ್ಚರ್—ಎಸ್. ವಿ. ಕೃಷ್ಣಮೂರ್ತಿರಾವ್ | (ಪ್ರತಿಗಳು ಮುಗಿದಿವೆ) |
| ಶ್ರೀರಾಮಕೃಷ್ಣ ಪರಮಹಂಸ—ಕುವೆಂಪು | ೩—೭೫ |

ಕಾವ್ಯಾಲಯ * ಪ್ರಕಾಶಕರು * ಮೈಸೂರು



## ಜನಪ್ರಿಯ ಕಥೆ ಕಾದಂಬರಿಗಳು

| | |
|---|---|
| **ನೌಕಾಘಾತ**— ರವೀಂದ್ರನಾಥ ಠಾಕೂರ್ | ೧.೫೦ |
| **ವಿನೋದಿನಿ**— ರವೀಂದ್ರನಾಥ ಠಾಕೂರ್ | ೧ ೫೦ |
| **ಮನೆ-ಜಗತ್ತು**— ರವೀಂದ್ರನಾಥ ಠಾಕೂರ್ | ೧.೫೦ |
| **ಗೋರಾ**— ರವೀಂದ್ರನಾಥ ಠಾಕೂರ್ | ೨.೫೦ |
| **ಚಿನ್ನದ ದೋಣಿ**— ರವೀಂದ್ರನಾಥ ಠಾಕೂರ್ | ೧.೫೦ |
| **ಯೋಗಾಯೋಗ**—ರವೀಂದ್ರನಾಥ ಠಾಕೂರ್ | ೨.೫೦ |
| **ಶುಭದಾ**— ಶರಚ್ಚಂದ್ರ | ೧.೫೦ |
| **ಪ್ರೇಮಪ್ರಕರಣ**— ಕ. ಶಂಕರ | ೧.೫೦ |
| **ರಂಗಭೂಮಿ**— ಕ. ಶಂಕರ | ೧.೫೦ |
| **ವಿವಾಹ ವಿಚ್ಛೇದ**— ಕ. ಶಂಕರ | ೧.೫೦ |
| **ಭ್ರಮಾಧೀನ**— ಸೇವ ನಮಿರಾಜಮಲ್ಲ | ೧.೫೦ |
| **ಗಂಗಾವತಾರ**— ಜನಾರ್ದನ ಗುರ್ಕಾರ್ | ೧.೨೫ |
| **ಕಾಂತೆಯರ ಕನಸು**— ಜನಾರ್ದನ ಗುರ್ಕಾರ್ | ಅಚ್ಚಿನಲ್ಲಿ |
| **ಬೆಳದಿಂಗಳ ರಾತ್ರಿ**— ರಾಜೇಶ್ವರಿ ನರಸಿಂಹಮೂರ್ತಿ | ೧.೫೦ |
| **ಮೂಕಪ್ರೇಮ**— ವಿಶಾಲಾಕ್ಷಿ | ೧.೨೫ |
| **ಮಮತೆಯ ಸುಳಿ**—ಕೊರಟಿ ಶ್ರೀನಿವಾಸರಾವ್ | ೧.೨೫ |
| **ಚಾಲುಕ್ಯ ವಿಕ್ರಮ**— ಕೊರಟಿ ಶ್ರೀನಿವಾಸರಾವ್ | ಅಚ್ಚಿನಲ್ಲಿ |
| **ಮೂಲಾನಕ್ಷತ್ರ**—ಶೇಷನಾರಾಯಣ | ೧.೨೫ |

**ಕಾವ್ಯಾಲಯ ● ಪ್ರಕಾಶಕರು ● ಮೈಸೂರು**